# ಶಾಸನ ಮತ್ತು ಕನ್ನಡ ಸಾಹಿತ್ಯ ಕೃತಿಗಳಲ್ಲಿ ಹಂಪಿ ಪರಿಸರದ ವೀರಶೈವ ಧರ್ಮ

(ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ

ವೀರೇಶ ಎಸ್.ಎಸ್.

ಮಾರ್ಗದರ್ಶಕರು

ಡಾ.ಕಲವೀರ ಮನ್ವಾಚಾರ

ಸಹ ಪ್ರಾಧ್ಯಾಪಕರು



ಶಾಸನಶಾಸ್ತ್ರ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೧

# ಶಾಸನ ಮತ್ತು ಕನ್ನಡ ಸಾಹಿತ್ಯ ಕೃತಿಗಳಲ್ಲಿ ಹಂಪಿ ಪರಿಸರದ ವೀರಶೈವ ಧರ್ಮ

(ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ.ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕ

ವೀರೇಶ ಎನ್.ಎಸ್.

ಮಾರ್ಗದರ್ಶಕರು

ಡಾ.ಕಲವೀರ ಮನ್ವಾಚಾರ

ಸಹ ಪ್ರಾಧ್ಯಾಪಕರು





ಶಾಸನಶಾಸ್ತ್ರ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೦

# ಪ್ರಮಾಣ ಪತ್ರ

ಶಾಸನ ಮತ್ತು ಕನ್ನಡ ಸಾಹಿತ್ಯ ಕೃತಿಗಳಲ್ಲಿ ಹಂಪಿ ಪರಿಸರದ ವೀರಶೈವ ಧರ್ಮ ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಡಾ.ಕಲವೀರ ಮನ್ವಾಚಾರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(signature)

ವೀರೇಶ ಎನ್.ಎಸ್.
ಸಂಶೋಧಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 8/5/2010

# ದೃಢೀಕರಣ ಪತ್ರ

ವೀರೇಶ ಎನ್.ಎಸ್. ಅವರು ಶಾಸನ ಮತ್ತು ಕನ್ನಡ ಸಾಹಿತ್ಯ ಕೃತಿಗಳಲ್ಲಿ ಹಂಪಿ ಪರಿಸರದ ವೀರಶೈವ ಧರ್ಮ ಎಂಬ ಶೀರ್ಷಿಕೆಯ ಸಂಶೋಧನ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

6/9/10

ಡಾ. ಕಲವೀರ ಮನ್ವಾಚಾರ
ಸಹ ಪ್ರಾಧ್ಯಾಪಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ :

## ಪರಿವಿಡಿ

೧

# ಅಧ್ಯಯನದ ಉದ್ದೇಶ, ಸ್ವರೂಪ ವ್ಯಾಪ್ತಿ ಮತ್ತು ಮಹತ್ವ

ಆದಿಮಾನವನ ಕಾಲದಿಂದಲೂ 'ಹಂಪಿ' ಜನಸಾಂದ್ರತೆಯ ಪ್ರದೇಶವಾಗಿದೆ. ಇಲ್ಲಿನ ಕಲ್ಲು ಬೆಟ್ಟ ಗುಡ್ಡಗಳಲ್ಲಿರುವ ಗವಿ ಗುಹೆಗಳು ಮಾನವನ ವಾಸಕ್ಕೆ ಯೋಗ್ಯವೆನಿಸಿವೆ. ಕಲ್ಲು ಬೆಟ್ಟ ಗುಡ್ಡಗಳ ಮಧ್ಯೆ ಹರಿಯುವ ತುಂಗ-ಭದ್ರಾನದಿಯು ಮಾನವ ನಿರ್ಭಯವಾಗಿ ವಾಸಲು ಅವಕಾಶ ಕಲ್ಪಿಸಿದೆ. ಇಲ್ಲಿನ ನೆಲೆದಲ್ಲಿ ಸಿಗುವ ಗೆಡ್ಡೆ-ಗೆಣಸು, ಹಣ್ಣು-ಕಾಯಿಗಳನ್ನು ತಿಂದು, ತುಂಗಭದ್ರೆಯ ನೀರನ್ನು ಕುಡಿದು ಆದಿಮಾನವ ಗವಿ ಗುಹೆಗಳಲ್ಲಿ ವಾಸಿಸುತ್ತಿದ್ದನೆಂಬುದು ಈಗ ಇತಿಹಾಸ. ಆದಿ ಮಾನವ ಹಂಪಿಯಲ್ಲಿ ವಾಸಿಸುತ್ತಿದ್ದನೆಂಬುದಕ್ಕೆ ವಿರೂಪಾಕ್ಷ ದೇವಾಲಯದ ಹಿಂಬದಿಯ ಬಂಡೆಯ(ಸ್ವಲ್ಪದೂರದ) ಮೇಲೆ ಬಿಡಿಸಲಾದ ಆದಿ ಮಾನವನ ಗುಹಾಚಿತ್ರಗಳೇ ಸಾಕ್ಷಿಯಾಗಿವೆ. ಇಲ್ಲಿಯೇ ವಾಸವಾಗಿದ್ದ ಆದಿ ಮಾನವನಿಗೆ ಬರುಬರುತ್ತಾ ಬೌದ್ಧಿಕ ಸಾಮರ್ಥ್ಯ ಬೆಳೆಯುತ್ತಾ ಹೋದಂತೆಲ್ಲಾ ಅವನ ವಾಸ ಗವಿ ಗುಹೆಯಿಂದ ಗುಡಿಸಲಿಗೆ ವರ್ಗಾಯಿಸಲ್ಪಟ್ಟು ನದಿ ದಂಡೆಯ ಮೇಲೆ ವಾಸಿಸುವಂತಾಯಿತು. ಜೀವನಾ ಸೆರೆಯಾದ ನದಿ ನೀರನ್ನು ಪೂಜಿಸಲಾರಂಭಿಸಿ ಅದನ್ನು ದೇವರೆಂದು ಭಾವಿಸಿದ. ಹಾಗೆಯೇ ತಾನು ಗೆಡ್ಡೆ ಗೆಣಸುಗಳನ್ನು ಬಗಿಯಲು ಬಳಸಿದ ಬೆಣಚು ಕಲ್ಲು, ಪ್ರಾಣಿಗಳನ್ನು ಬೇಟೆಯಾಡಲು ಉಪಯೋಗಿಸಿದ ಚೂಪಾದ ಕಲ್ಲುಗಳನ್ನೂ ಸಹ ದೇವರೆಂದು ತಿಳಿದು ಪೂಜಿಸಿದ. ಹೀಗೆ ತಾನು ನಂಬಿದ ಈ ದೇವರನ್ನು ಅನೇಕ ಆಕರಗಳಲ್ಲಿ ರೂಪಿಸಿಕೊಂಡು ಒಂದೊಂದು ಆಕಾರಕ್ಕೆ ಒಂದೊಂದು ಹೆಸರು ನೀಡುತ್ತಾ ಹೋಗಿ ಅವುಗಳಿಗೆ ಒಂದೊಂದು ರೀತಿಯ ಪೂಜಾ ವಿಧಾನ ಕಂಡುಕೊಂಡ. ಹಾಗೆಯೇ ತನ್ನ ಬದುಕಿನ ವಿಧಾನವನ್ನು ಬದಲಾಯಿಸಿಕೊಳ್ಳುತ್ತಾ ಹೋದ. ಹೀಗೆ ಬದುಕಿನ ವಿಧಾನ ಮತ್ತು ಆರಾಧನಾ ವಿಧಾನವನ್ನು ಸೂತ್ರ ಸಿದ್ಧಾಂತಗಳ(ನೆಲೆಯಲ್ಲಿ) ಚೌಕಟ್ಟಿನಲ್ಲಿ ಬಂಧಿಸಿ ಅದನ್ನೇ ಧರ್ಮವೆಂದು ಕರೆದನೆಂದು ಗ್ರಹಿಸಬಹುದಾಗಿದೆ.

ದೇವರು ಮತ್ತು ಧರ್ಮ ಮನುಷ್ಯನಿಂದ ನಿರ್ಮಿತವಾಗಿದ್ದರೂ ಇಂದು ಅವುಗಳ ಅಡಿಯಲ್ಲಿ ಬದುಕುತ್ತಿರುವೆಂಬುದಂತೂ ಸತ್ಯ ಸಂಗತಿ. ದೇವರು ಮತ್ತು ಧರ್ಮವನ್ನು ಮನುಷ್ಯ ಬಿಟ್ಟು ಬದುಕಲಾರ.

ಅಷ್ಟೊಂದು ಮನುಷ್ಯ ಅವರೆಡರಲ್ಲಿ ಬೆರೆತಿದ್ದಾನೆ. ಅವುಗಳನ್ನು ಬಿಟ್ಟು ಮನುಷ್ಯ ಬದುಕುವ ಶಕ್ತಿ ಕಳೆದುಕೊಂಡಿದ್ದಾನೆ. ಆದರೆ ಅವುಗಳನ್ನು ಮನುಷ್ಯನ ದೌರ್ಬಲ್ಯಗಳೆಂದು ಹೇಳಲು ಬರುವುದಿಲ್ಲ. ಧರ್ಮ ಮನುಷ್ಯನ ಬದುಕಿಗೆ ಅವಶ್ಯವೆಂದೆನಿಸಿದೆ. ಮನುಷ್ಯ ಒಂದು ವೇಳೆ ದೇವರನ್ನು ಬಿಟ್ಟರೂ ಧರ್ಮವನ್ನೂ ಬಿಡಲಾರ. ಆದ್ದರಿಂದ ಮನುಷ್ಯನ ಇಡೀ ಬದುಕಿಗೆ 'ಧರ್ಮ' ಆವರಿಸಿಕೊಂಡಿದೆ ಎಂದು ಹೇಳಬಹುದಾಗಿದೆ.

'ಹಂಪಿ' ರಾಮಾಯಣದ ಕಾಲದಲ್ಲಿ ಕಿಷ್ಕಿಂಧೆ ಎಂದು ಹೆಸರು ಪಡೆದು ವಾಲೀ ಸುಗ್ರೀವರ ರಾಜಧಾನಿ ಎನಿಸಿತ್ತು. ರಾಮನ ಬಂಟ ಹನುಮನ ಹುಟ್ಟೂರು ಹಂಪಿಯಾಗಿದೆಯೆಂದು ಪುರಾಣಗಳಿಂದ ತಿಳಿದುಬರುತ್ತದೆ. ಆದರೆ ಸತ್ಯಸತ್ಯತೆ ಏನೇ ಇರಲಿ ಹಂಪಿ ಆರಂಭಿಕ ಕಾಲಘಟ್ಟದಲ್ಲಿ ಬೌದ್ಧರ ನೆಲೆಯಾಗಿತ್ತೆಂದು ಇಲ್ಲಿ ದೊರೆಯುವ ಆಕರಗಳಿಂದ ಗ್ರಹಿಸಬಹುದು. ನಂತರ ಶೈವ, ವೈಷ್ಣವ ಮತ್ತು ಧರ್ಮಗಳ ನೆಲೆಯೂ ಆಗಿತ್ತೆಂದು, ಜೈನ ಮತ್ತು ಇಸ್ಲಾಂ ಧರ್ಮಗಳು ಇಲ್ಲಿ ನೆಲೆಸಿದ್ದವೆಂದು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೆ ಸಿದ್ಧಾಂತ ರೂಪದಲ್ಲಿದ್ದ ವೀರಶೈವವು ಹಂಪಿಯಲ್ಲಿ ನೆಲೆಯೂರಿ ವೀರಶೈವ ಧರ್ಮವಾಗಿ ರೂಪಗೊಂಡದ್ದನ್ನು ಅನೇಕ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಉಕ್ತವಾಗಿದೆ.

ಹಂಪಿಯಲ್ಲಿ ಬೌದ್ಧಧರ್ಮದ ನಂತರ ಶೈವಧರ್ಮ ನೆಲೆಯೂರಿ ತನ್ನ ಅಸ್ತಿತ್ವ ಕಂಡುಕೊಂಡಿತು. ಅದು ಇಂದಿನವರೆಗೂ ತನ್ನ ಅಸ್ತಿತ್ವ ಉಳಿಸಿಕೊಂಡು ಬಂದಿದೆ. ಆದರೆ ಅದು ಸ್ವಲ್ಪ ರೂಪಾಂತರ ಹೊಂದಿದೆ. ಶೈವದ ಪ್ರಮುಖ ದೇವತೆ ವಿರೂಪಾಕ್ಷ ಹರಿಹರ ಕವಿಯಿಂದ ವೀರಶೈವವಾಗಿ ರೂಪಾಂತರ ಹೊಂದಿ ಇಡೀ ಹಂಪಿಯ ಒಡೆಯನಾದ. ತಾಂತ್ರಿಕರ ಕ್ಷೇತ್ರವಾಗಿದ್ದಿರಬಹುದಾದ ಹಂಪಿ ಮುಂದೆ ಅದು ಶೈವ ಕ್ಷೇತ್ರವಾಯಿತು. ಹಂಪಿಯ ಸಕಲ ಚರಾಚರವೆಲ್ಲವೂ ವಿರೂಪಾಕ್ಷಮಯವೆನ್ನುವಷ್ಟರಮಟ್ಟಿಗೆ ವಿರೂಪಾಕ್ಷ ಒಂದು ದೈವೀ ಸಿದ್ಧಾಂತವಾಗಿ ರೂಪಗೊಂಡನೆಂಬುದು ಇಲ್ಲಿನ ಆಕರಗಳಿಂದ ತಿಳಿದುಬರುವ ಸಂಗತಿಯಾಗಿದೆ. ಮೊದಲು ಹಂಪಿಯಲ್ಲಿ ನೆಲೆಯೂರಿದ್ದು ಪಂಪಾಂಬಿಕೆಯೇ, ಆಕೆಯ ಹೆಸರಿನಿಂದಲೇ ಪಂಪಾ ಕ್ಷೇತ್ರಕ್ಕೆ ಹಂಪಿಯೆಂದು ಹೆಸರು ಬಂದಿದೆಯಾದರೂ ಪ್ರಬುದ್ಧಮಾನವಾಗಿ ಬೆಳೆದದ್ದು ಮಾತ್ರ ವಿರೂಪಾಕ್ಷನೇ. ಹಾಗಾಗಿ ಹಂಪಿಯಲ್ಲಿ ವಿರೂಪಾಕ್ಷನ ಪರಿಕಲ್ಪನೆ ಹುಟ್ಟುವುದರ ಮೂಲಕ ಶೈವ ಧರ್ಮವು ನೆಲೆಯೂರಿತು.

ಹಂಪಿಯಲ್ಲಿ ವಿರೂಪಾಕ್ಷನ ಪ್ರಭಾವದಿಂದ ಪಂಪಾತೀರ್ಥ, ಪಂಪಾಕ್ಷೇತ್ರ, ವಿರೂಪಾಕ್ಷ ತೀರ್ಥ, ವಿರೂಪಾಕ್ಷಪುರ ನಿರ್ಮಾಣವಾದವು. ಬಾದಾಮಿ ಚಾಲುಕ್ಯರ ಕಾಲದಿಂದ ಕುರುಗೋಡು ಸಿಂಧರ ಕಾಲದವರೆಗೆ ಆಳ್ವಿಕೆ ನಡೆಸಿದ ಎಲ್ಲಾ ರಾಜರಿಗೂ ವಿರೂಪಾಕ್ಷ ಕೇವಲ ದೈವೀ ಸ್ವರೂಪನಾಗಿ

ಕಂಡುಬರುತ್ತಾನೆ. ಮುಂದೆ ಕುರುಗೋಡು ಸಿಂಧರು, ಹೊಯ್ಸಳರು ಮತ್ತು ಸ್ಥಳೀಯರೇ ಆದ ವಿಜಯನಗರದ ಅರಸರ ಕಾಲಕ್ಕೆ ವಿರೂಪಾಕ್ಷ ಹಂಪಿಯ ಒಡೆಯನಾಗಿದ್ದು, ಒಡೆಯನನ್ನಾಗಿಸಿದ್ದು ಶಾಸನ ಮತ್ತು ಕನ್ನಡ ಸಾಹಿತ್ಯ ಕೃತಿಗಳಿಂದ ತಿಳಿದುಬರುತ್ತದೆ.

ವಿರೂಪಾಕ್ಷನಷ್ಟೇ ಪ್ರಭಾವ ಹೊಂದಿದ ದೈವೆಂದರೆ ವೀರಭದ್ರ. ವಿರೂಪಾಕ್ಷ, ವೀರಭದ್ರದೈವಗಳು ಹಂಪಿಯಲ್ಲಿ ತಮ್ಮದೇ ಆದ ಪ್ರಭಾವ ಹೊಂದಿವೆ. ಹಂಪಿಯ ಹತ್ತಾರು ಕಡೆ ವೀರಭದ್ರನ ಅನೇಕ ಬಿಡಿ ಶಿಲ್ಪಗಳು, ಮೂರ್ತಿಶಿಲ್ಪಗಳು ಕಾಣಸಿಗುತ್ತವೆ. ವೀರಭದ್ರನ ಪರಿಕಲ್ಪನೆ ಹರಿಹರ ರಾಘವಾಂಕರಲ್ಲಿ ಮೊಳೆತಿದ್ದರೂ ಅದು ವ್ಯಾಪಕಗೊಂಡದ್ದು ವಿಜಯನಗರದ ಅರಸರ ಕಾಲದಲ್ಲಿಯೇ. ಮೂಲತಃ ಶೈವ ದೇವತೆಯಾದ ವೀರಭದ್ರ ಹರಿಹರ ರಾಘವಾಂಕಾದಿ ಕವಿಗಳಿಂದ ವೀರಶೈವೀಕರಣಗೊಂಡು ಈತನ ಆರಾಧನೆ ವ್ಯಾಪಕಗೊಂಡಂತೆ ತೋರುತ್ತದೆ. ಕರಸ್ಥಲದ ನಾಗಿದೇವನಂತೂ ತನ್ನ ಕಾವ್ಯದಲ್ಲಿ ವೀರಭದ್ರನನ್ನು ವೀರಶೈವರ ಧರ್ಮಗುರುವೆಂಬಂತೆ ಹಾಗೂ ವೀರಭದ್ರನೇ ಭೂಮಿಯಲ್ಲಿ ವೀರಶೈವ ಧರ್ಮವನ್ನು ಹರಡಿದಂತೆ ಚಿತ್ರಿಸಿದ್ದಾನೆ.

ಹಂಪಿಯಲ್ಲಿ ಕಾಳಾಮುಖ, ಕಾಪಾಲಿಕ, ಶುದ್ಧಶೈವ, ವೀರಶೈವ ಎಂಬ ನಾಲ್ಕು ಶೈವಧರ್ಮದ ಶಾಖೆಗಳು ನೆಲೆಯೂರಿ ಬೆಳೆದದ್ದನ್ನು ಆಕರಗಳ ಮೂಲಕ ದೃಢಪಡಿಸಿದೆ. ಕ್ರಿ.ಶ.೧೪ ೧೫ನೇ ಶತಮಾನದ ಹೊತ್ತಿಗೆ ವಿಜಯನಗರದ ಅರಸರ ಪ್ರೋತ್ಸಾಹದಿಂದ ಕಾಳಾಮುಖ, ಶುದ್ಧಶೈವಗಳನ್ನು ತನ್ನೊಳಗೆ ವಿಲೀನಗೊಳಿಸಿಕೊಂಡ ವೀರಶೈವವು(ಲಿಂಗಾಯತ) ಒಂದು ಸ್ವತಂತ್ರ ಧರ್ಮವಾಗಿ ರೂಪಗೊಂಡು ವ್ಯಾಪಕವಾಗಿ ಬೆಳೆದದ್ದನ್ನು ಮನಗಾಣಬಹುದು.

ಮಾನವ ವಿಕಾಸದ ಇತಿಹಾಸದೊಂದಿಗೆ ತಳುಕು ಹಾಕಿಕೊಂಡು ಬಂದಿರುವ ಪದವೆಂದರೆ ಧರ್ಮ. ಈ 'ಧರ್ಮ' ಎಂಬ ಪದಕ್ಕೆ ಸಂವಾದಿಯಾಗಿ 'ರಿಲಿಜನ್'(Religion) ಎನ್ನುವ ಪದವನ್ನು ಇಂಗ್ಲೀಷ್ ಭಾಷೆಯಲ್ಲಿ ಬಳಸಲಾಗುತ್ತಿದೆ. 'ಧರ್ಮ' ಎಂಬ ಪದ ಸಂಸ್ಕೃತ ಜನ್ಯವಾಗಿದ್ದು, ಇದರ ಮೂಲಧಾತು 'ಧೃ' ಆಗಿದೆ. ಸಂಸ್ಕೃತದಲ್ಲಿ 'ಧೃ' ಎಂದರೆ ಬೆಂಬಲಿಸುವ ಅಥವಾ ಎತ್ತಿ ಹಿಡಿ, ಧರಿಸು ಎನ್ನುವ ಅರ್ಥಗಳಿವೆ. ಪ್ರಕೃತಿದತ್ತ ವ್ಯತ್ಯಾಸಗಳಲ್ಲೂ ಸರ್ವಜೀವಿಗಳ ಏಳಿಗೆ ಮತ್ತು ಒಳಿತನ್ನು ಬಯಸುವ ಅರ್ಥವನ್ನು ಧರ್ಮ ಎನ್ನುವ ಪದ ಧ್ವನಿಸುತ್ತದೆ. ಕನ್ನಡದ ಸಂದರ್ಭದಲ್ಲಿ 'ಮತ-ಧರ್ಮ' ಎಂಬ ಪದಗಳು ಬಹುತೇಕ ಒಂದೇ ಅರ್ಥದಲ್ಲಿ ಬಳಕೆಯಾಗುತ್ತಿರುವಂತೆ ಕಂಡುಬರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಧರ್ಮ ಎಂಬ ಪದವನ್ನು ಆಚಾರ ನಿಯಮ, ರೀತಿಕ್ರಮ, ತತ್ತ್ವ-ಸಿದ್ಧಾಂತ ಎಂಬರ್ಥದಲ್ಲಿ ಬಳಸಲಾಗಿದೆ. ಅಂದರೆ ವೀರಶೈವ(ಲಿಂಗಾಯತ) ಆಚಾರ ನಿಯಮ ಅಥವಾ ತತ್ತ್ವ-ಸಿದ್ಧಾಂತ(ಎಂದರ್ಥ). ವೀರಶೈವ ಲಿಂಗಾಯತ ತತ್ತ್ವ-ಸಿದ್ಧಾಂತವು ಹಿಂದೂ(ವೈದಿಕ) ಧರ್ಮದ ಭಾಗವಾಗಿರದೆ, ಅದಕ್ಕಿಂತ ಭಿನ್ನವಾಗಿದ್ದು ಸ್ವತಂತ್ರ ಧರ್ಮದ ಮನೋಧೋರಣೆಯನ್ನು ಪ್ರತಿಪಾದಿಸುತ್ತದೆ. ಹಿಂದೂ ಧರ್ಮ(ವೈದಿಕ)

ದಲ್ಲಿರುವಂತೆ ಚಾತುರ್ವರ್ಣಪದ್ಧತಿ, ಜಾತಿಭೇದ, ವೀರಶೈವ(ಲಿಂಗಾಯತ) ಧರ್ಮದಲ್ಲಿ ಇಲ್ಲ. ವೀರಶೈವ ಧರ್ಮದಲ್ಲಿ ಒಳಪಂಗಡಗಳ ಭಿನ್ನತೆ ಇದ್ದರೂ ಅವರೆಲ್ಲರೂ ಇಷ್ಟಲಿಂಗಧಾರಿಗಳು ಮತ್ತು ಇಷ್ಟಲಿಂಗೋಪಾಸಕರು. ಪ್ರಬಲ ಒಳಪಂಗಡಕ್ಕೊಂದು ಜಾತಿಪೀಠ ಸೃಷ್ಟಿಯಾದರೂ ಎಲ್ಲರಿಗೂ ಬಸವಣ್ಣನೇ ಆದರ್ಶ. ಹಿಂದೂ, ಮುಸ್ಲಿಂ, ಕ್ರೈಸ್ತ, ಜೈನ, ಬೌದ್ಧ, ಸಿಖ್ ಧರ್ಮಗಳಿರುಗಿವಂತೆ ಧರ್ಮ ಗ್ರಂಥಗಳು, ಧರ್ಮಕ್ಷೇತ್ರಗಳು ವೀರಶೈವ(ಲಿಂಗಾಯತ) ಧರ್ಮಕ್ಕೂ ಇವೆ. ಇತರ ಧರ್ಮಗಳ ಅನುಯಾಯಿಗಳಂತೆ ಈ ಧರ್ಮೀಯರು ಮಾಂಸಹಾರಿಗಳಲ್ಲ. ಜೈನರಂತೆ ಶುದ್ಧ ಶಾಖಾಹಾರಿಗಳು. ಆಹಾರ ಪದ್ಧತಿ, ಧಾರ್ಮಿಕ ತತ್ತ್ವ ಸಿದ್ಧಾಂತಗಳಲ್ಲಿ ಇತರೆ ಧರ್ಮಗಳಿಗಿಂತ(ಹಿಂದೂ) ವಿಭಿನ್ನವಾಗಿರುವುದರಿಂದ ಇದು ಸಹ ಒಂದು ಸ್ವತಂತ್ರ ಧರ್ಮವಾಗಿದೆ. ಇದು ಧರ್ಮವಾಗಿ ರೂಪಗೊಂಡದ್ದು ಹಂಪಿಯಲ್ಲಿ ಎಂಬುದು ಗಮನಾರ್ಹ ಅಂಶ.

## ಅಧ್ಯಯನದ ಉದ್ದೇಶ ಮತ್ತು ಮಹತ್ವ

ಪ್ರತಿಯೊಂದು ಅಧ್ಯಯನಕ್ಕೆ ನಿರ್ದಿಷ್ಟ ಉದ್ದೇಶವಿರುವಂತೆ ಪ್ರಸ್ತುತ ಅಧ್ಯಯನಕ್ಕೂ(ಒಂದು) ಉದ್ದೇಶವಿದೆ. ಈಗಾಗಲೇ ವಿಜಯನಗರ ಕಾಲದ ಶಾಸನಗಳು, ದೇವಾಲಯಗಳು, ಸಾಹಿತ್ಯ ಕೃತಿಗಳನ್ನು ಕುರಿತು ಅಧ್ಯಯನಗಳಾಗಿವೆ. ಸಂಗಮ ಕಾಲದ ವಿಜಯನಗರ, ವಿಜಯನಗರ ಕಾಲದ ಶೈವ, ವೈಷ್ಣವ ದೇವಾಲಯಗಳು, ವಿಜಯನಗರ ಕಾಲದ ನೀರಾವರಿ ವ್ಯವಸ್ಥೆ, ವಿಜಯನಗರ ಕಾಲದ ಯುದ್ಧ ಮತ್ತು ಸೈನ್ಯ ವ್ಯವಸ್ಥೆ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ ಇನ್ನು ಮುಂತಾದ ಅಧ್ಯಯನಗಳಾಗಿವೆ. ನಾನು ಹಂಪಿಯಲ್ಲಿಯೇ ರಚನೆಯಾದ ಪ್ರಮುಖ ಕನ್ನಡ ಸಾಹಿತ್ಯ (ವೀರಶೈವ) ಕೃತಿಗಳಲ್ಲಿ ಅಭಿವ್ಯಕ್ತಗೊಂಡ ವೀರಶೈವ ಧರ್ಮದ ಸ್ವರೂಪ ಕುರಿತು ಅಧ್ಯಯನ ಮಾಡಿದ್ದೇನೆ. ೧೨ನೇ ಶತಮಾನದಲ್ಲಿ ನಡೆದ ಕಲ್ಯಾಣದ ಕ್ರಾಂತಿಯ ನಂತರ ಚದುರಿ ಹೋದ ವೀರಶೈವ (ಲಿಂಗಾಯತ) ಶಿವಶರಣರು ಮತ್ತೆ ಒಂದಾಗಿ ಲಿಂಗಾಯತ(ವೀರಶೈವ) ಸಿದ್ಧಾಂತವನ್ನು ಪುನರ್ ಪ್ರತಿಪಾದಿಸಿದ್ದು ಹಂಪಿಯಲ್ಲಿಯೇ. ಆಗಲೇ ಹರಿಹರ ರಾಘವಾಂಕರಿಂದ ಈ ಕಾರ್ಯ ಆರಂಭವಾಗಿದ್ದರೂ ಅದು ವ್ಯಾಪಕಗೊಂಡಿರಲಿಲ್ಲ. ಹರಿಹರ ರಾಘವರು ಶಿವಶರಣರ ಬದುಕನ್ನು ಕಾವ್ಯದ ವಸ್ತುವಾಗಿಸುವುದರ ಮೂಲಕ ಶೈವ ಸಿದ್ಧಾಂತ ಪ್ರತಿಪಾದಿಸಿದರೇ ವಿನಃ ಅವರ ವಚನ ಸಾಹಿತ್ಯವನ್ನು ಅದರೊಳಗಿನ ಹೂರಣವನ್ನು ಜನಸಾಮಾನ್ಯರಿಗೆ ತಲುಪಿಸಲು ಪ್ರಯತ್ನಿಸಲಿಲ್ಲ. ೧೫ನೇ ಶತಮಾನದಲ್ಲಿ ಪ್ರೌಢದೇವರಾಯನ ಪ್ರೋತ್ಸಾಹದಿಂದ ಕಲ್ಮಠದ ಪ್ರಭುದೇವ, ಮಹಾಲಿಂಗದೇವ, ಜಕ್ಕಣಾರ್ಯ, ಲಕ್ಕಣ್ಣದಂಡೇಶ, ಗುರುಬಸವ, ಕುಮಾರ ಬಂಕನಾಥ, ಶ್ರೀಗಿರೀಂದ್ರ, ಚಾಮರಸ, ಮೊಗ್ಗೆಯ ಮಾಯಿದೇವ ಮೊದಲಾದ ವೀರಶೈವ ಕವಿ, ಸಂಕಲನ, ವ್ಯಾಖ್ಯಾನಕಾರರು, ೧೨ನೇ ಶತಮಾನದ ಶಿವಶರಣರ ವಚನಗಳನ್ನು ಸಂಕಲಿಸುವ, ವ್ಯಾಖ್ಯಾನಿಸುವ, ಅವರ ಬದುಕಿನ ಸಿದ್ಧಾಂತವನ್ನು ಕಾವ್ಯದ ವಸ್ತುವಾಗಿಸುವ ಪ್ರಕ್ರಿಯೆ ಆರಂಭಿಸಿ ಜನಸಾಮಾನ್ಯರಿಗೆ ತಲುಪಿಸುವ ಕಾರ್ಯ ಮಾಡಿದರು. ಇದು ವಚನ ಸಾಹಿತ್ಯವನ್ನು

ಜನಸಾಮಾನ್ಯರಿಗೆ ತಲುಪಿಸುವ ಪ್ರಕ್ರಿಯೆಯಾಗಿದೆ. ವಚನ ಸಾಹಿತ್ಯವನ್ನು ಸಂಗ್ರಹಿಸಿ, ಷಟಸ್ಥಲ, ಷೋಡಶಸ್ಥಲ, ಏಕೋತ್ತರ ಶತಸ್ಥಲಗಳಾಗಿ ವಿಭಜಿಸಿ ಹೊಂದಿಸಿ ಅದಕ್ಕೆ ಟೀಕು ವ್ಯಾಖ್ಯಾನ ಬರೆಯುವುದರ ಮೂಲಕ ವೀರಶೈವ ಸಿದ್ಧಾಂತವನ್ನು ಧರ್ಮವಾಗಿ ರೂಪಿಸಿದ್ದನ್ನು ಕಾಣಬಹುದಾಗಿದೆ. ಈ ಪ್ರಕ್ರಿಯೆಯನ್ನು ವೀರಶೈವ ತತ್ವ ಸಿದ್ಧಾಂತವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಲ್ಲದೆ ಇದರ ಹಿಂದೆ ಇರುವ ಪ್ರೇರಣೆ ಕಾರಣಗಳನ್ನು ಪತ್ತೆಹಚ್ಚುವುದು ಅವಶ್ಯವಿತ್ತು. ಅಂದರೆ ಒಂದು ಧಾರ್ಮಿಕ ಸಿದ್ಧಾಂತ ಧರ್ಮವಾಗಿ ರೂಪಗೊಳ್ಳಲು ಕಾರಣವಾದ ಅಂಶಗಳನ್ನು ಕಂಡುಹಿಡಿಯುವುದಾಗಿತ್ತು. ಮತ್ತು ಷಟ್‌ಸ್ಥಲಗಳು ನೂರಾ ಒಂದು ಸ್ಥಲಗಳಾಗಿ ವಿಭಜನೆ ಹೊಂದಿ ರೂಪಗೊಂಡಿದ್ದರ ಹಿಂದಿರುವ ಪ್ರೇರಣೆ ಮತ್ತು ಆ ಸ್ಥಲಗಳ ಸ್ವರೂಪ ಹಾಗೂ ಮಹತ್ವ ಅರಿಯುವ ಉದ್ದೇಶವಿತ್ತು ಈ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಶೈವ ವೀರಶೈವಕ್ಕಿರುವ ಸಂಬಂಧ, ಶೈವ ವೀರಶೈವದ ಸ್ವರೂಪ ಹಾಗೂ ವೀರಶೈವ ಲಿಂಗಾಯತ ಒಂದೇ ಅರ್ಥದಲ್ಲಿ ಬಳಕೆಯಾಗುತ್ತಿದ್ದರೂ ಅವುಗಳಿಗಿರುವ ಭಿನ್ನತೆಯನ್ನು ಪ್ರಸ್ತುತ ಅಧ್ಯಯನ ಗುರುತಿಸಿದೆ. ಜೊತೆಗೆ ಹಂಪಿ ಕಾಪಾಲಿಕರ ನೆಲೆಯೂ ಆಗಿತ್ತೆಂದು ಇಲ್ಲಿ ಸಿಗುವ ಮೂರ್ತಿಶಿಲ್ಪಗಳಿಂದ ದೃಢಪಡಿಸಿದೆ.

ಅಲ್ಲದೆ ಹರಿಹರ ರಾಘವರ ಕಾಲದಲ್ಲಿದ್ದ ಶೈವಧರ್ಮದ ಶಾಖೆಗಳು ನಂತರದ ಕಾಲದಲ್ಲಿ ವೀರಶೈವದಲ್ಲಿ ವಿಲೀನವಾಗಿದ್ದರ ಬಗ್ಗೆ ಹಾಗೂ ಅವರ ಕಾಲದ ವೀರಶೈವದ ಸ್ವರೂಪ, ವೀರಶೈವದ ಪ್ರಮುಖ ದೈವಗಳಾದ ವಿರೂಪಾಕ್ಷ, ವೀರಭದ್ರರ ಸ್ವರೂಪ ಈ ದೈವಗಳಿಗೂ ವೀರಶೈವ ಧರ್ಮಕ್ಕೂ ಇರುವ ಸಂಬಂಧ ಕುರಿತು ಅಧ್ಯಯನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಪ್ರೌಢದೇವರಾಯನ ಕಾಲದಲ್ಲಿ ಅವನ ಪ್ರೋತ್ಸಾಹ ಪ್ರೇರಣೆಯಿಂದ ವೀರಶೈವ ಸಿದ್ಧಾಂತವು ಧರ್ಮವಾಗಿ ರೂಪಗೊಂಡಿದ್ದರ ಬಗ್ಗೆ ಅಧ್ಯಯನವನ್ನು ಕೇಂದ್ರೀಕರಿಸಲಾಗಿದೆ. ಈ ಪ್ರಕ್ರಿಯೆಯಲ್ಲಿ ತೊಡಗಿದ ಕಲ್ಮಠದ ಪ್ರಭುದೇವ, ಚಾಮರಸ, ಮಹಾಲಿಂಗದೇವ, ನೂರೊಂದು ವಿರಕ್ತರು, ಕರಸ್ಥಲದ ವೀರಣ್ಣೊಡೆಯ, ಕರಸ್ಥಲದ ನಾಗಿದೇವ, ಶಿವಶರಣರು ಮಠಾಧೀಶರ ವಾಸಸ್ಥಾನಗಳನ್ನು ಪ್ರಸ್ತುತ ಅಧ್ಯಯನ ಪರಿಶೀಲಿಸಿ ಗುರುತಿಸಿದೆ. ಒಂದು ಸಿದ್ಧಾಂತ ಧರ್ಮವಾಗಿ ರೂಪಗೊಂಡ ಮೇಲೆ ಅದರ ಪ್ರಚಾರವೂ ಅಷ್ಟೇ ಮುಖ್ಯ ಹಾಗಾಗಿ ಈ ಧರ್ಮ ಪ್ರಚಾರ ಮಾಡಲು ಹುಟ್ಟಿಕೊಂಡ ವೀರಶೈವ ಮಠಗಳು, ಗವಿಗಳು, ದಾರ್ಶನಿಕರು, ವಿರಕ್ತರು, ಶಿವಶರಣರು ಮುಂತಾದ ಧರ್ಮ ಪ್ರಚಾರಕರನ್ನು ಪ್ರಸ್ತುತ ಅಧ್ಯಯನ ಶೋಧಿಸಿದೆ. ವಿಜಯನಗರದ ರಾಜಗುರುಪಂರಪರೆ ಮತ್ತು ವೀರಭಿಕ್ಷಾವೃತ್ತಿಮಠ ಹಾಗೂ ವೀರಶೈವ ಧರ್ಮಕ್ಕಿರುವ ಸಂಬಂಧ ಕಂಡುಕೊಳ್ಳಲು ಪ್ರಯತ್ನಿಸಿದೆ. ಅಲ್ಲದೆ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಅಭಿವ್ಯಕ್ತಗೊಂಡ ವೀರಶೈವ ಧರ್ಮದ ತಿರುಳು ಅರಿಯುವ ಪ್ರಯತ್ನ ಇದಾಗಿದೆ.

ಪ್ರಸ್ತುತ ಅಧ್ಯಯನವು ಹಂಪಿಯಲ್ಲಿ ರೂಪುಗೊಂಡ ವೀರಶೈವ ಧರ್ಮದ ಮೂಲ, ಪರಿಕಲ್ಪನೆ, ಸ್ವರೂಪ ತಿಳಿಯಲು ಸಹಾಯಕ. ಹಾಗೆಯೇ ವೀರಭದ್ರ ಮತ್ತು ಭೈರವನ ಶಿಲ್ಪಗಳು ವೀರಶೈವ ಮಠಗಳು, ಗವಿ, ಗುಹೆಗಳ ಬಗ್ಗೆ ಮಾಹಿತಿ ಒದಗಿಸುತ್ತದೆ. ಅಲ್ಲದೆ ವೀರಶೈವ ಧರ್ಮ ಪ್ರಚಾರ ಮಾಡಲು ಅನೇಕ ಧಾರ್ಮಿಕ ಕೃತಿಗಳು ರಚನೆಯಾಗಿದ್ದನ್ನು ಗಮನಿಸಬಹುದು.

## ಅಧ್ಯಯನದ ವ್ಯಾಪ್ತಿ

ಹಂಪಿ ಸಂಶೋಧಕರಿಗೊಂದು ಆಗರ. ಅದನ್ನು ಅಧ್ಯಯನದ ದೃಷ್ಟಿಯಿಂದ ಒಂದು ಮಿತಿಗೆ ಒಳಪಡಿಸುವುದು ಕಷ್ಟವೆನಿಸಿಸುವುದಾದರೂ ಪ್ರಸ್ತುತ ಅಧ್ಯಯನವನ್ನು ಒಂದು ಮಿತಿಗೆ ಒಳಪಡಿಸುವುದು ಅನಿವಾರ್ಯವಾಗಿದೆ. ಇಲ್ಲಿ ಹಂಪಿ ಪರಿಸರವೆಂದರೆ ಹಂಪಿ ಸುತ್ತಮುತ್ತಲ(ಹಂಪಿಯನ್ನು ಒಳಗೊಂಡು) ಪ್ರದೇಶಗಳು ಎಂದರ್ಥ (ಹಂಪಿ, ಕಮಲಾಪುರ, ಕಡ್ಡಿರಾಂಪುರ, ತಳವಾರಘಟ್ಟ, ವೆಂಕಟಾಪುರದ ಕೆಲವು ಭಾಗಗಳು). ಈ ಭಾಗಗಳಲ್ಲಿ ದೊರೆಯುವ ಶಾಸನ, ಶಿಲ್ಪ, ಮಠದ ಅವಶೇಷಗಳು ಅಧ್ಯಯನ ವ್ಯಾಪ್ತಿಗೆ ಒಳಪಟ್ಟಿವೆ. ಕ್ರಿ.ಶ.೧೨೦೦ ರಿಂದ ಕ್ರಿ.ಶ.೧೫೬೫ರ ವರೆಗಿನ ಅವಧಿಯಲ್ಲಿ ಹಂಪಿಯಲ್ಲಿಯೇ ವೀರಶೈವ ಕವಿಗಳಿಂದ ವೀರಶೈವ ತತ್ತ್ವ ಸಿದ್ಧಾಂತ ಪ್ರತಿಪಾದಿಸುವ ಕಾವ್ಯಾದಿ ಪ್ರಮುಖ ಕೃತಿಗಳಿಗೆ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಇದಕ್ಕೆ ಪೂರಕವಾಗಿ ಹಂಪಿಯಲ್ಲಿ ಸಿಗುವ ಶಾಸನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

## ಅಧ್ಯಯನಕ್ಕೊಳಪಡಿಸಿದ ಕೃತಿಗಳು

೧. ಹರಿಹರ : ಕನ್ನಡ ನಾಡಿನ ಶರಣರ ರಗಳೆಗಳು, ಸಂಕೀರ್ಣ ರಗಳೆಗಳು, ಗಿರಿಜಾ ಕಲ್ಯಾಣ ಮಹಾಪ್ರಬಂಧ

೨. ರಾಘವಾಂಕ : ಹರಿಶ್ಚಂದ್ರ ಚಾರಿತ್ರ, ಸಿದ್ಧಾರಾಮ ಚಾರಿತ್ರ, ವೀರೇಶ ಚರಿತ್ರೆ

೩. ಚಂದ್ರಶೇಖರ : ಪಂಪಾಸ್ಥಾನ ವರ್ಣನಂ

೪. ಚಾಮರಸ : ಪ್ರಭುಲಿಂಗಲೀಲೆ

೫. ಲಕ್ಕಣ್ಣದಂಡೇಶ : ಶಿವತತ್ತ್ವ ಚಿಂತಾಮಣಿ

೬. ಮಹಾಲಿಂಗದೇವ : ಏಕೋತ್ತರ ಶತಸ್ಥಲ

೭. ಕಲ್ಮಠದ ಪ್ರಭುದೇವ : ಲಿಂಗಾಲೀಲಾ ವಿಲಾಸ ಚಾರಿತ್ರ

೮. ಮೊಗ್ಗೆಯ ಮಾಯಿದೇವ : ಷಟಸ್ಥಲ ಗದ್ಯ, ಏಕೋತ್ತರ ಶತಸ್ಥಲ

೯. ಕರಸ್ಥಲದ ಮಲ್ಲಿಕಾರ್ಜುನೊಡೆಯ ಬ್ರಾಹ್ಮದ್ವೈತ ಸಿದ್ಧಾಂತ ಷಟ್‌ಸ್ಥಲಾಭರಣ

೧೦. ಕರಸ್ಥಲದ ನಾಗಿದೇವ : ಏಕವಿಂಶತಿ ದೀಕ್ಷಾ ವಿಧಾನ, ಮಡಿವಾಳ ಮಾಚಯ್ಯನ ತಾರಾವಳಿ ಲಿಂಗ ನಿಜಸ್ಥಲದ ವಚನ

೧೧. ಕರಸ್ಥಲ ವೀರಣ್ಣೊಡೆಯ ಪರಮವಿರಕ್ತನ ಐಕ್ಯಸ್ಥಲ, ವಚನಗಳು

೧೨. ಡಾ.ದೇವರಕೊಂಡಾರೆಡ್ಡಿ ಮತ್ತು ಇತರರು ಕನ್ನಡ ವಿಶ್ವವಿದ್ಯಾಲಯದ ಶಾಸನಸಂಪುಟ ೩ ಹಂಪಿ ಶಾಸನಗಳು

ಅಧ್ಯಯನದ ವ್ಯಾಪ್ತಿಯು ಕ್ರಿ.ಶ.೧೨೦೦ ಕ್ರಿ.ಶ.೧೫೬೫ರ ವರೆಗೆ ಇದ್ದರೂ ಪ್ರಸ್ತುತ ಅಧ್ಯಯನವನ್ನು ಪ್ರೌಢದೇವರಾಯನ ಕಾಲದ ವೀರಶೈವ ಸಾಹಿತ್ಯಕ್ಕೆ ಕೇಂದ್ರೀಕರಿಸಿದೆ. ಹಂಪಿಯ ಸುತ್ತ ೨೦ ಕಿ.ಮೀ. ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಮಾಹಿತಿ ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

## ಅಧ್ಯಯನದ ವಿಧಾನ

ಪ್ರತಿಯೊಂದು ಅಧ್ಯಯನಕ್ಕೂ ತನ್ನದೇ ಆದ ಅಧ್ಯಯನದ ವಿಧಾನಗಳಿರುತ್ತವೆ. ಅಂದರೆ ಶೋಧಿಸಿದ ಅಥವಾ ಸಂಗ್ರಹಿಸಿದ ವಿಷಯಗಳನ್ನು ಅಧ್ಯಯನಕ್ಕೊಳಪಡಿಸಿ ವಿಶ್ಲೇಷಿಸಿದ ಬಗೆ ಯಾವುದು? ಮತ್ತು ಅಧ್ಯಯನಕ್ಕೆ ಒಳಪಡಿಸಿದ ವಿಷಯವನ್ನು ಗುರುತಿಸುವ ಪರಿಯನ್ನು ಕುರಿತು ಹೇಳುವುದು ವಿಧಾನವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಶಾಸನ ಮತ್ತು ಕನ್ನಡ ಸಾಹಿತ್ಯ ಕೃತಿಗಳಲ್ಲಿ ಹಂಪಿ ಪರಿಸರದ ವೀರಶೈವಧರ್ಮದ ಸ್ವರೂಪ ಕುರಿತು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ವೀರಶೈವ ಕವಿಗಳು ರಚಿಸಿದ ಪ್ರಮುಖ ಕಾವ್ಯಗಳು, ವಚನ ಸಂಕಲನ ಕೃತಿಗಳು ಹಾಗೂ ಹಂಪಿಯಲ್ಲಿಯೇ ಸಿಗುವ ಶಾಸನಗಳನ್ನು ಆಧರಿಸಿ ಪ್ರಸ್ತುತ ಅಧ್ಯಯನ ಮಾಡಲಾಗಿದೆ. ಇಲ್ಲಿನ ಸಾಹಿತ್ಯ ಕೃತಿಯನ್ನು ಶಾಸನಗಳನ್ನು ಕುರಿತು ನಡೆದಿರುವ ಅಧ್ಯಯನಗಳನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ.

ವೀರಶೈವ(ಲಿಂಗಾಯತ) ಧರ್ಮವು ಪ್ರತ್ಯೇಕ ಧರ್ಮವೆಂದು ನಿರೂಪಿಸಲು ಇತರ ಧರ್ಮಗಳ ಜೊತೆ ತೌಲನಿಕ ಅಧ್ಯಯನ ಮಾಡಿಲ್ಲ. ಅಂದರೆ ತೌಲನಿಕ ಅಧ್ಯಯನ ಕ್ರಮ ಅನುಸರಿಸಿಲ್ಲ. ವೀರಶೈವ ಲಿಂಗಾಯತ ಪದಗಳ ಬಗ್ಗೆ ನಡೆದಿರುವ ವಿದ್ವಾಂಸ ವಾಗ್ವಾದಗಳನ್ನು ಅಧ್ಯಯನಕ್ಕೆ ಒಳಪಡಿಸಿದೆ. ಅಂದರೆ ಅನುಸಂಧಾನ ವಿಧಾನವನ್ನೂ ಅಳವಡಿಸಿದೆ.

ವೀರಶೈವ ಧರ್ಮವನ್ನು ಪ್ರತಿಪಾದಿಸಲು ಹಂಪಿಯಲ್ಲಿ ಹುಟ್ಟಿಕೊಂಡ ಎಲ್ಲಾ ಕಾವ್ಯಗಳನ್ನು ಅಧ್ಯಯನಕ್ಕೆ ಒಳಪಡಿಸಿಲ್ಲ. ಕೆಲವು ಪ್ರಮುಖ ಕೃತಿಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕಾರಣ ಅಧ್ಯಯನದ ವ್ಯಾಪ್ತಿ ಮತ್ತು ಮಿತಿಯ ದೃಷ್ಟಿಯಿಂದ ಪ್ರಮುಖ ಕೃತಿಗಳನ್ನು ಪರಿಗಣಿಸಲಾಗಿದೆ.

ಹಾಗೆಯೇ ಇದೇ ಕೃತಿಗಳನ್ನು, ಇಲ್ಲಿನ ಶಾಸನಗಳನ್ನು ಕುರಿತು ನಡೆದಿರುವ ಚರ್ಚೆ, ಸಂಶೋಧನಾ ಲೇಖನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅಲ್ಲದೆ ಭೈರವ, ವೀರಭದ್ರನ ಶಿಲ್ಪಗಳು, ಮಠಗಳು, ಗವಿ, ಶಿವಲಿಂಗಗಳನ್ನು ಅಧ್ಯಯನ ಮಾಡಲು ಹಂಪಿ ಸುತ್ತಮುತ್ತಣ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಮಾಹಿತಿ ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ವಿದ್ವಾಂಸರಿಂದ ಪಡೆದ ಮಾಹಿತಿ ಮತ್ತು ಮಾರ್ಗದರ್ಶಕರ ನಿರೂಪಣೆಯನ್ನು ಆಕರವಾಗಿ ಬಳಸಿಕೊಳ್ಳಲಾಗಿದೆ.

**ಈವರೆಗಿನ ಅಧ್ಯಯನ ಸಮೀಕ್ಷೆ**

೧೨ನೇ ಶತಮಾನದಲ್ಲಿ ಕಲ್ಯಾಣದಲ್ಲಿ ಮೊಳಕೆಯೊಡೆದು ೧೪-೧೫ನೇ ಶತಮಾನದಲ್ಲಿ ಹಂಪಿಯಲ್ಲಿ ಧರ್ಮವಾಗಿ ರೂಪಗೊಂಡ ವೀರಶೈವ(ಲಿಂಗಾಯತ) ಧರ್ಮ ಕುರಿತು ಈಗಾಗಲೇ ಅನೇಕ ಅಧ್ಯಯನಗಳು, ಸಂಶೋಧನೆಗಳು ನಡೆದಿವೆ ಮತ್ತು ಈಗಲೂ ನಡೆಯುತ್ತಲೇ ಬಂದಿವೆ. ಕ್ರಿ.ಶ.೧೯೩೫ರಲ್ಲಿ ಲಂಡನ್ ವಿಶ್ವವಿದ್ಯಾಲಯದಿಂದ ಪಿಎಚ್.ಡಿ.ಪದವಿ ಪಡೆದ ಡಾ.ಎಸ್.ಸಿ.ನಂದೀಮಠರು 'ವೀರಶೈವ ಧರ್ಮದ ಕೈಪಿಡಿ' ಸಂಶೋಧನಾ ಗ್ರಂಥದಲ್ಲಿ ವೀರಶೈವರ ಹುಟ್ಟು ಬೆಳವಣಿಗೆ ಅದರ ಸ್ವರೂಪ ಕುರಿತು ಚರ್ಚಿಸಿ ವಿಶ್ಲೇಷಿಸಿದ್ದಾರೆ. ಪ್ರೊ.ಎಸ್.ಎಸ್.ಬಸವನಾಳ ಅವರು 'ವೀರಶೈವರ ಹುಟ್ಟು ಬೆಳವಣಿಗೆ(ಕ್ರಿ.ಶ.೧೯೫೨) ಕೃತಿಯಲ್ಲಿ ವೀರಶೈವರ ಹಿನ್ನೆಲೆ ಅದರ ಸ್ಥಾಪಕರು ಮತ್ತು ಪ್ರಾಚೀನತೆ ಕುರಿತು ಚರ್ಚಿಸಿದ್ದಾರೆ. ಡಾ.ಎಂ.ಚಿದಾನಂದಮೂರ್ತಿ ಅವರು ತಮ್ಮ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಸಂಶೋಧನಾ(೧೯೬೬) ಗ್ರಂಥದಲ್ಲಿ ಶೈವಧರ್ಮದ ಹುಟ್ಟು ಬೆಳವಣಿಗೆ ಅದರ ಪ್ರಕಾರಗಳು ಕುರಿತು ಶಾಸನಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಕ್ರಿ.ಶ.೧೯೮೧ರಲ್ಲಿ ಪ್ರಕಟವಾದಿ ಎಚ್.ಕೆ.ರಾಮಯ್ಯಂಗಾರ್ ಅವರು 'ಶೈವಧರ್ಮ ದರ್ಶನ' ಕೃತಿಯಲ್ಲಿ ಶೈವಧರ್ಮದ ಇತಿಹಾಸ ಅದರ ಪ್ರಕಾರಗಳು ಹಾಗೂ ವೀರಶೈವ ಧರ್ಮದ ಪ್ರಾಚೀನತೆ ಅದರ ತತ್ತ್ವ ಸಿದ್ಧಾಂತಗಳು ವೀರಶೈವ ಧರ್ಮಕ್ಕೆ ಬಸವಣ್ಣನವರ ಕೊಡುಗೆ ಮುಂತಾದ ಅಂಶಗಳನ್ನು ಚರ್ಚಿಸಿ ವಿಶ್ಲೇಷಿಸಿದ್ದಾರೆ. ಪ್ರೊ.ಎಸ್.ಎಸ್.ಹಿರೇಮಠ ಅವರು ತಮ್ಮ 'ಕಾಳಮುಖ ದರ್ಶನ'(೨೦೦೪) ಕೃತಿಯಲ್ಲಿ ಕಾಳಾಮುಖ ಶಾಖೆಯ ಉಗಮ ವಿಕಾಶ, ಮುಂದೆ ಅದು ಮರೆಯಾದ ಬಗೆ ಅಂದರೆ ವೀರಶೈವ ಧರ್ಮದಲ್ಲಿ ವಿಲೀನವಾದ ಬಗೆ ಕುರಿತು ಚರ್ಚಿಸಿದ್ದಾರೆ. ವಿರೂಪಾಕ್ಷ ಕುಲಕರ್ಣಿ ಅವರು ಇಂಗ್ಲಿಷ್‌ನಿಂದ(ಡೆವಿಡ್ ಎನ್.ಲಾರೆಂಜೆನ್‌ನ ಕೃತಿ) ಕನ್ನಡಕ್ಕೆ ಅನುವಾದಿಸಿದ 'ಕಾಪಾಲಿಕರು ಮತ್ತು ಕಾಳಾಮುಖರು' ಎಂಬ ಗ್ರಂಥದಲ್ಲಿ ಶೈವಮತದ ಪ್ರಮುಖ ಶಾಖೆಗಳಾದ ಕಾಪಾಲಿಕ ಮತ್ತು ಕಾಳಾಮುಖ ಪಂಥಗಳ ಸ್ವರೂಪ ಅವುಗಳ ಅಸ್ತಿತ್ವ ಅವುಗಳು ವೀರಶೈವದಲ್ಲಿ ಲೀನವಾದ ಬಗೆ ವೀರಶೈವಕ್ಕೆ ಕಾಳಾಮುಖ ಪಂಥದ ಹಿನ್ನೆಲೆ ಕುರಿತು ಚರ್ಚಿಸಿದ್ದಾರಲ್ಲದೆ, ವೀರಶೈವ ಧರ್ಮದ ಸ್ಥಾಪಕ ಬಸವಣ್ಣನೆಂದು ನಿರೂಪಿಸಲು ಪ್ರಯತ್ನಿಸಿದ್ದಾರೆ.

ಈ ಕೃತಿಗಳಲ್ಲದೆ ದೇಶದ ಮತ್ತು ವಿಶ್ವದ ನಾನಾ ವಿಶ್ವವಿದ್ಯಾಲಯಗಳಲ್ಲಿ ವೀರಶೈವಧರ್ಮ ಕುರಿತು ಸಂಶೋಧನೆಗಳಾಗಿವೆ. ಲಖನೌ ವಿಶ್ವವಿದ್ಯಾಲಯದಲ್ಲಿ ಎಸ್.ಎಂ.ಹುಣಸ್ಯಾಳ ಅವರಿಂದ ದಿ ವೀರಶೈವಿಜಂ(೧೯೫೨) ಎಂದೂ ಟೋರಿನೋ ವಿಶ್ವವಿದ್ಯಾಲಯದಲ್ಲಿ ತಿತ್ಸಿ, ಯಾನಾ ರಿಪೇರಿ ಅವರಿಂದ ಲಿಂಗಾಯತ ಧರ್ಮದ ದಶವಿದ ಪಾದೋದಕಗಳು, ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ವೀರಶೈವ ದರ್ಶನ ಔರ್ ಶಂಕರ ದರ್ಶನ ಎಂದು ಮುಂತಾಗಿ ವೀರಶೈವಧರ್ಮ ತತ್ತ್ವ ಮೀಮಾಂಸೆ, ಶೈವಧರ್ಮದ ಶಾಖೆಗಳು ಮುಂತಾದ(ಸಾಮಾನ್ಯ) ಅಧ್ಯಯನಗಳು ಈಗಾಗಲೇ ನಡೆದಿವೆ.

ಹಂಪಿ ಪರಿಸರದ ವೀರಶೈವ ಕಾವ್ಯ ಕೃತಿಗಳನ್ನೂ ಕುರಿತು ಅನೇಕ ಅಧ್ಯಯನಗಳಾಗಿವೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಸ್.ಜಿ.ವಿರಕ್ತಮಠರವರು(೧೯೭೧) 'ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ' ಎಂಬ ವಿಷಯದ ಮೇಲೆ ಸಂಶೋಧನೆ ಮಾಡಿದ್ದಾರೆ. ಇದರಲ್ಲಿ ಕ್ರಿಯಾಶಕ್ತಿ ಗುರುಪರಂಪರೆ, ಪ್ರೌಢದೇವರಾಯನು ವೀರಶೈವ ಧರ್ಮ ಸ್ವೀಕರಿಸಿದ ಬಗೆ ಲಕ್ಕಣ್ಣದಂಡೇಶ, ಜಕ್ಕಣ್ಣಾರ್ಯ, ಮಹಾಲಿಂಗದೇವ, ಕಲ್ಮಠದ ಪ್ರಭುದೇವ ಮುಂತಾದ ಕವಿ ಸಂಕಲನಕಾರರ ಕೃತಿಗಳ ವಿಶ್ಲೇಷಣೆ ಮತ್ತು ನೂರೊಂದು ವಿರಕ್ತರ ಜೀವನ ಸಾಧನೆ ಕುರಿತು ಚರ್ಚಿಸಿದ್ದಾರೆ.

ಡಾ.ಎಸ್.ಎಂ.ಹದರಗಟ್ಟಿಯವರು ತಮ್ಮ 'ಕವಿ ರಾಘವಾಂಕ ಹಾಗೂ ಅವನ ಕೃತಿಗಳು'(೧೯೮೬) ಎಂಬ ಪಿಎಚ್.ಡಿ.ಮಹಾಪ್ರಬಂಧದಲ್ಲಿ ಕವಿ ರಾಘವಾಂಕನ ಮತಧರ್ಮ, ಅವನ ಸಾಹಿತ್ಯದ ವಸ್ತು ಕುರಿತು ವಿಶ್ಲೇಷಿಸಿದ್ದಾರೆ. ಡಾ.ಡಿ.ವಿ.ಪುರಾಣಿಕ ಅವರು ತಮ್ಮ 'ಮೊಗ್ಗೆಯ ಮಾಯಿದೇವ ಒಂದು ಅಧ್ಯಯನ'(೧೯೯೨) ಎಂಬ ಪಿಎಚ್.ಡಿ.ಮಹಾಪ್ರಬಂಧದಲ್ಲಿ ಮೊಗ್ಗೆಯ ಮಾಯಿ ದೇವನ ಜೀವನ ಸಾಧನೆ, ಆತನ ಕೃತಿಗಳಲ್ಲಿ ಅಡಕವಾಗಿರುವ ವೀರಶೈವ ಧರ್ಮದ ತತ್ತ್ವ ಸಿದ್ಧಾಂತಗಳು ಅವುಗಳ ಸ್ವರೂಪಕುರಿತು ವಿಶ್ಲೇಸಿದ್ದಾರೆ. ಡಾ.ವಿ.ಜಿ.ಹಿರೇಮಠ ಅವರು 'ವೀರಭದ್ರ ದೇವರು: ಒಂದು ಸಾಂಸ್ಕೃತಿಕ ಅಧ್ಯಯನ'(೧೯೯೪) ಎಂಬ ಪಿಎಚ್.ಡಿ.ಗ್ರಂಥದಲ್ಲಿ ವೀರಭದ್ರನ ಹುಟ್ಟು ಬೆಳವಣಿಗೆ ವೀರಭದ್ರನ ಆರಾಧನೆ, ಆಚರಣೆ ಕುರಿತು ಚರ್ಚಿಸಿದ್ದಾರೆ.

ಡಾ.ಸದ್ಧಾನಂದ ಪಾಟೀಲರು ತಮ್ಮ 'ಹರಿಹರನ ರಗಳೆಗಳು: ಒಂದು ಸಾಂಸ್ಕೃತಿಕ ಅಧ್ಯಯನ' (೧೯೯೭) ಎಂಬ ಪಿಎಚ್.ಡಿ. ಗ್ರಂಥದಲ್ಲಿ ರಗಳೆಗಳಲ್ಲಿ ವ್ಯಕ್ತಗೊಂಡ ಶೈವ ಪ್ರಭೇದಗಳು ಅವುಗಳ ಸ್ವರೂಪ, ಅಂದಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ಜೀವನ ಮುಂತಾದ ಅಂಶಗಳನ್ನು ಕುರಿತು ಚರ್ಚಿಸಿದ್ದಾರೆ. ಕೆಲವು ವೀರಶೈವ ಅಂಶಗಳನ್ನೂ ವಿಶ್ಲೇಷಿಸಿದ್ದಾರೆ. ಡಾ.ಶಂಕರ ಲಮಾಣಿ ಅವರು ತಮ್ಮ 'ಸಪ್ತ ಕಾವ್ಯದ ಗುರುಬಸವ'(೨೦೦೦)ಎಂಬ ಪಿಎಚ್.ಡಿ.ಗ್ರಂಥದಲ್ಲಿ ಸಪ್ತ ಕಾವ್ಯದ ಗುರುಬಸವನ ಜೀವನ ಸಾಧನೆ, ಆತನ ಸಪ್ತ ಕೃತಿಗಳ ವಿಶ್ಲೇಷಣೆ, ಅದರಲ್ಲಿರುವ ವೀರಶೈವ ತತ್ತ್ವ ಸಿದ್ಧಾಂತದ ಕೆಲ ಅಂಶಗಳನ್ನು ಚರ್ಚಿಸಿದ್ದಾರೆ. ಡಾ.ವಿ.ಎಸ್.ಕಟಗಿಹಳ್ಳಿಮಠ ಅವರು ತಮ್ಮ 'ಬಸವೋತ್ತರಯುಗದ

ವಚನ ಸಾಹಿತ್ಯ : ಒಂದು ಅಧ್ಯಯನ'(೨೦೦೪) ಎಂಬ ಪಿಎಚ್.ಡಿ.ಗ್ರಂಥದಲ್ಲಿ ನೂರೊಂದು ವಿರಕ್ತರು, ಏಳುನೂರಾ ಒಂದು ವಿರಕ್ತರ ಜೀವನ ಸಾಧನೆ, ಅವರ ಸಾಹಿತ್ಯದಲ್ಲಿ ವ್ಯಕ್ತಗೊಂಡ ಮೌಲ್ಯಗಳು ಅವರುಗಳ ಕಾಲದ ವೀರಶೈವಧರ್ಮದ ಸ್ಥಿತಿ ಮುಂತಾದ ಅಂಶಗಳನ್ನು ವಿಶ್ಲೇಷಿಸಿದ್ದಾರೆ.

ಡಾ.ಎಸ್.ಎಸ್.ಭಗವತಿ ಅವರು 'ಹಂಪೆ ಶಾಸನಗಳು:ಒಂದು ಅಧ್ಯಯನ'(೨೦೦೫) ಎಂಬ ಪಿಎಚ್.ಡಿ.ಗ್ರಂಥದಲ್ಲಿ ಹಂಪಿಯಲ್ಲಿ ನೆಲೆಯೂರಿದ ಶೈವ ಶಾಖೆಗಳು, ಜನಸಮುದಾಯ, ಧಾರ್ಮಿಕ ಗ್ರಂಥಗಳು, ಪ್ರಧಾನ ದೈವಗಳು, ವೀರಶೈವ ಮಠಗಳು ಮುಂತಾದ ವಿಚಾರಗಳನ್ನು ಕುರಿತು ಚರ್ಚಿಸಿ ವಿಶ್ಲೇಷಿಸಿದ್ದಾರೆ. ಡಾ.ಜಿ.ಐ.ನಂದಿಕೋಲಮಠ ಅವರು 'ಕರಸ್ಥಲ ಪರಂಪರೆ: ಒಂದು ಅಧ್ಯಯನ'(೨೦೦೬) ಎಂಬ ಪಿಎಚ್.ಡಿ. ಪ್ರಬಂಧದಲ್ಲಿ ಕರಸ್ಥಲ ಪರಂಪರೆಯ ಹುಟ್ಟು, ಸ್ವರೂಪ, ಮಹತ್ವ ಕುರಿತು ಚರ್ಚಿಸಿದ್ದಾರಲ್ಲದೆ, ಕರಸ್ಥಲ ವೀರಣ್ಣೊಡೆಯ, ಕರಸ್ಥಲನಾಗಿದೇವ, ಕರಸ್ಥಲ ಮಲ್ಲಿಕಾರ್ಜುನೊಡೆಯ ಕವಿ, ಸಂಕಲನಕಾರರ ಕೃತಿಗಳಲ್ಲಿ ಅಭಿವ್ಯಕ್ತಗೊಂಡ ವೀರಶೈವ ತತ್ತ್ವ ಸಿದ್ಧಾಂತಗಳನ್ನು ಅಧ್ಯಯನ ಮಾಡಿ ವಿಶ್ಲೇಷಿಸಿದ್ದಾರೆ.

ಡಾ.ಎಸ್.ಬಿ.ರಾಥೋಡ ಅವರು 'ಚಾಮರಸನ ಪ್ರಭುಲಿಂಗಲೀಲೆ : ಒಂದು ಸಾಂಸ್ಕೃತಿಕ ಅಧ್ಯಯನ' (೨೦೦೭) ಎಂಬ ಪಿಎಚ್.ಡಿ.ಪ್ರಬಂಧದಲ್ಲಿ ಚಾಮರಸನ ಜೀವನ ಸಾಧನೆ, ಆತನ ಪರಿಸರ, ಪ್ರಭುಲಿಂಗಲೀಲೆಯಲ್ಲಿ ವ್ಯಕ್ತವಾದ ವೀರಶೈವ ತತ್ತ್ವಸಿದ್ಧಾಂತಗಳನ್ನು ಚರ್ಚಿಸಿ ವಿಶ್ಲೇಷಿಸಿದ್ದಾರೆ.

ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಹಂಪಿ ಪರಿಸರದ ವೀರಶೈವ ಸಾಹಿತ್ಯ ಕುರಿತು ಅಧ್ಯಯನಗಳಾಗಿವೆ. ಡಾ.ಕೆ.ಶ್ರೀಕಂಠಯ್ಯ ಅವರು 'ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರಣ' ಎಂಬ ಪಿಎಚ್.ಡಿ.ಗ್ರಂಥದಲ್ಲಿ ಹಂಪಿಯ ಸಾಹಿತ್ಯದಲ್ಲಿ ವ್ಯಕ್ತವಾದ ಜನರ ಧಾರ್ಮಿಕ, ರಾಜಕೀಯ, ಸಾಮಾಜಿಕ ಜೀವನ ಚಿತ್ರಣವನ್ನು ಲಕ್ಕಣದಂಡೇಶ, ಚಾಮರಸಾದಿ ಕವಿಗಳ ಕಾವ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ೧೯೮೫ರಲ್ಲಿ ಪಿಎಚ್.ಡಿ.ಪಡೆದ ಎಲ್.ಎಸ್.ಸೂರ್ಯನಾರಾಯಣ ಅವರು 'ರಾಘವಾಂಕ ಒಂದು ಅಧ್ಯಯನ' ಎಂಬ ಗ್ರಂಥದಲ್ಲಿ ರಾಘವಾಂಕ ಕವಿಯ ಜೀವನ ಸಾಧನೆ, ಆತನ ಮತ, ಕಾವ್ಯಗಳನ್ನು ಅಧ್ಯಯನಕ್ಕೆ ಒಳಪಡಿಸಿ ವಿಶ್ಲೇಷಿಸಿದ್ದಾರೆ. ಡಾ.ಎಸ್.ಟಿ.ಉಮಾದೇವಿ ಅವರು ತಮ್ಮ 'ಶಿವತತ್ತ್ವ ಚಿಂತಾಮಣಿ ಒಂದು ಅಧ್ಯಯನ'(೨೦೦೦) ಎಂಬ ಪಿಎಚ್.ಡಿ.ಗ್ರಂಥದಲ್ಲಿ ಲಕ್ಕಣದಂಡೇಶನ ಜೀವನ ಸಾಧನೆ, ಅವರ ಶಿವತತ್ತ್ವ ಚಿಂತಾಮಣಿ ಕಾವ್ಯದ ಸ್ವರೂಪ, ಅದರಲ್ಲಿ ವ್ಯಕ್ತವಾದ ಶೈವ ಸಿದ್ಧಾಂತ, ವೀರಶೈವ ತತ್ತ್ವಸಿದ್ಧಾಂತಗಳ ಅಧ್ಯಯನ ವರ್ಗೀಕರಣ, ವೀರಶೈವ ಶಿವಶರಣರು ಮಠಗಳು ಇನ್ನು ಮುಂತಾದ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಿ ಚರ್ಚಿಸಿ ವಿಶ್ಲೇಷಿಸಿದ್ದಾರೆ.

ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ.ಮಾಡಿದ ಡಾ.ನೇತ್ರಾವತಿ ಮೆಳಗೇರಿ ಅವರು ತಮ್ಮ 'ಹರಿಹರನ ರಗಳೆಗಳಲ್ಲಿ ಶಿವತತ್ವ'(೨೦೦೪) ಎಂಬ ಪಿಎಚ್.ಡಿ.ಪ್ರಬಂಧದಲ್ಲಿ ಶೈವ ಸಿದ್ಧಾಂತ, ಲಿಂಗವತ ತತ್ತ್ವ, ಸಂಪ್ರದಾಯ ಮತ್ತು ಆಚರಣೆ ಕುರಿತು ಚರ್ಚಿಸಿದ್ದಾರೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿಯು ಸಹ ಹಂಪಿ ಪರಿಸರದ ವೀರಶೈವ ಸಾಹಿತ್ಯ ಕುರಿತು ಸಂಶೋಧನೆಗಳಾಗಿವೆ. ಡಾ.ಡಿ.ಎ.ಬಾಗಲಕೋಟ ಅವರು ತಮ್ಮ 'ಪ್ರಭುಲಿಂಗಲೀಲೆ ಒಂದು ದಾರ್ಶನಿಕ ಅಧ್ಯಯನ'(೨೦೦೨) ಎಂಬ ಪಿಎಚ್.ಡಿ.ಪ್ರಬಂಧದಲ್ಲಿ ಪ್ರಭುಲಿಂಗಲೀಲೆಯಲ್ಲಿ ವ್ಯಕ್ತವಾದ ವೀರಶೈವ ತತ್ತ್ವ ಸಿದ್ಧಾಂತಗಳನ್ನು ಅಧ್ಯಯನಕ್ಕೊಳಪಡಿಸಿ ಚರ್ಚಿಸಿ, ವಿಶ್ಲೇಷಿಸಲಾಗಿದೆ. ಅಲ್ಲದೆ ಚಾಮರಸನ ಕಾಲದ ಧಾರ್ಮಿಕ ಪರಿಸರವನ್ನೂಸಹ ಚರ್ಚಿಸಲಾಗಿದೆ. ಡಾ.ಶಕುಂತಲಾ ಗೋಪಶೆಟ್ಟಿ ಅವರು ತಮ್ಮ 'ರೇವಣಸಿದ್ಧರು ಒಂದು ಅಧ್ಯಯನ'(೨೦೦೪) ಎಂಬ ಪಿಎಚ್.ಡಿ.ಪ್ರಬಂಧದಲ್ಲಿ ವೀರಶೈವ ಪಂಚಪೀಠದ ಬಾಳೆಹೊನ್ನೂರು ಸಂಸ್ಥಾನದ ಸ್ಥಾಪಕರಾದ ರೇವಣಸಿದ್ಧರ ಜೀವನ ಸಾಧನೆ ಆತನ ತತ್ತ್ವಸಿದ್ಧಾಂತ ಕುರಿತು ಹರಿಹರಾದಿ ಕವಿಗಳ ಕಾವ್ಯಗಳು ಮತ್ತು ರೇವಣ ಸಿದ್ಧರನ್ನು ಕುರಿತು ಶಾಸನಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ.

ಡಾ.ಡಿ.ಎನ್.ತಿಪ್ಪೇಸ್ವಾಮಿ ಅವರು ತಮ್ಮ 'ಹರಿಹರನ ರಗಳೆಗಳಲ್ಲಿ ಸಂಘರ್ಷದ ನೆಲೆಗಳು' (೨೦೦೭) ಎಂಬ ಪಿಎಚ್.ಡಿ.ಪ್ರಬಂಧದಲ್ಲಿ ವರ್ಗ ಸಂಘರ್ಷ, ತಮಿಳುನಾಡಿನ ಶೈವಪಂಥಗಳು, ಧಾರ್ಮಿಕ ಸಂಘರ್ಷ, ವೀರಶೈವರ ಆಚಾರಗಳು ಮುಂತಾದ ಅಂಶಗಳನ್ನು ಚರ್ಚಿಸಿ ವಿಶ್ಲೇಷಿಸಿದ್ದಾರೆ. ಡಾ.ಜೆ.ಕುಮಾರ ಅವರು ತಮ್ಮ 'ನೂರೊಂದು ವಿರಕ್ತರು ಒಂದು ಅಧ್ಯಯನ'(೨೦೦೯) ಎಂಬ ಪಿಎಚ್.ಡಿ. ಪ್ರಬಂಧದಲ್ಲಿ ನೂರೊಂದು ವಿರಕ್ತರ ಗುಣ ಲಕ್ಷಣ ಅವರ ಮೂಲ ನೆಲೆ, ಮತಧರ್ಮ ಮುಂತಾದ ಅಂಶಗಳನ್ನು ಕುರಿತು ವಿಶ್ಲೇಷಿಸಿದ್ದಾರೆ.

ಇವುಗಳಲ್ಲದೆ ಟಿ.ಎನ್.ಮಲ್ಲಪ್ಪ ಅವರ 'ವೀರಶೈವರ ಪ್ರಾಚೀನತೆ'(೧೯೬೮) ಎಂಬ ಗ್ರಂಥದಲ್ಲಿ ವೀರಶೈವರ ಹುಟ್ಟು ಬೆಳವಣಿಗೆ ಅದರ ವಿಕಾಸ ಪ್ರಾಚೀನತೆ ಕುರಿತು ಚರ್ಚಿಸಿದ್ದಾರೆ. ಎಚ್.ದೇವೀರಪ್ಪ ತಮ್ಮ 'ಲಕ್ಕಣ್ಣ ದಂಡೇಶನ ಶಿವತತ್ವಚಿಂತಾಮಣಿ'(೧೯೭೪) ಎಂಬ ವಿಮರ್ಶಾ ಕೃತಿಯಲ್ಲಿ ಲಕ್ಕಣ್ಣ ದಂಡೇಶನ ಜೀವನ ಸಾಧನೆ ಆತನ ಕೃತಿಯಲ್ಲಿ ಅಭಿವ್ಯಕ್ತವಾದ ಪ್ರೌಢದೇವರಾಯನ ವ್ಯಕ್ತಿತ್ವ, ವೀರಶೈವ ಶಿವಶರಣರು ಅವರ ನೆಲೆಗಳು ಮತ್ತು ವೀರಶೈವ ತತ್ತ್ವಸಿದ್ಧಾಂತಗಳನ್ನು ವಿಮರ್ಶಾ ನೆಲೆಯಲ್ಲಿ ಚರ್ಚಿಸಲಾಗಿದೆ. ಪ್ರೊ.ಸಂ.ಶಿ.ಭೂಸನೂರಮಠ ಅವರ 'ವಿಜಯ ಕಲ್ಯಾಣ'(೧೯೮೮) ಎಂಬ ಸಂಪದಾನಾ ಗ್ರಂಥದಲ್ಲಿ ಪ್ರೌಢದೇವರಾಯನ ಜೀವನ ಸಾಧನೆ, ವೀರಶೈವ ಧರ್ಮಕ್ಕೆ ಕೊಟ್ಟ ಪ್ರೋತ್ಸಾಹ, ಆತನ ಕಾಲದ ವೀರಶೈವ ಸಾಹಿತ್ಯದ ಸ್ವರೂಪ ಮುಂತಾದ ಅಂಶಗಳನ್ನು ಸಂಶೋಧನಾತ್ಮಕವಾಗಿ ಚರ್ಚಿಸಿ ವಿಶ್ಲೇಷಿಸಲಾಗಿದೆ.

ಶ್ರೀ ಸಿ.ಟಿ.ಎಂ.ಕೊಟ್ರಯ್ಯ ಅವರ 'ಹಂಪೆ ವೀರಶೈವ ಮಠಗಳು ಮತ್ತು ಸಾಹಿತ್ಯ ಪರಂಪರೆ' (೧೯೯೭) ಎಂಬ ಕಿರು ಗ್ರಂಥದಲ್ಲಿ ವಿಜಯನಗರ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ವೀರಶೈವ ಮಠಗಳ ಸ್ವರೂಪ, ಅದರ ಕೆಲ ಮಠಾಧಿಪತಿಗಳು, ವೀರಶೈವ ಸಾಹಿತ್ಯ ಕೃತಿಗಳನ್ನು ಕುರಿತು ಚರ್ಚಿಸಿದ್ದಾರೆ. ಡಾ.ಬಸವರಾಜ ಮಲಶೆಟ್ಟರ 'ಎನಗಿಂತ ಕಿರಿಯರಿಲ್ಲ'(೧೯೯೯) ಎಂಬ ಸಂಪಾದನಾ ಅಭಿನಂದನಾ ಗ್ರಂಥ ಗ್ರಂಥಲ್ಲಿ ಶ್ರೀ ಸಿ.ಟಿ.ಎಂ.ಕೊಟ್ರಯ್ಯನವರ ವಿಜಯನಗರ ಆರಂಭಿಕ ಇತಿಹಾಸ, ಜಂಗಮರ ಮತ ತತ್ತ್ವ ಸಂಪ್ರದಾಯಗಳು ಹಾಗೂ ಸಾಹಿತ್ಯ ಹಾಗೂ ಹಂಪೆಯಲ್ಲಿ ವೀರಶೈವ ಪ್ರಾಚೀನ ಕುರುಹುಗಳು ಎಂಬ ಸಂಶೋಧನಾ ಲೇಖನಗಳಿವೆ. ಇವುಗಳಲ್ಲಿ ವಿಜಯಗನರದ ಸಂಗಮ ವಂಶರ ರಾಜಕೀಯ ಇತಿಹಾಸ, ವಿಜಯನಗರ ಪೂರ್ವದ ಇತಿಹಾಸ, ಹರಿಹರ ರಾಘುವಾಂಕ ಕವಿಗಳ ಕಾಲದ ಹಂಪಿ, ಜಂಗಮರ ಸಂಪ್ರದಾಯಗಳು ಜಂಗಮದ ಪರಿಕಲ್ಪನೆ, ಹಂಪಿಯಲ್ಲಿನ ವೀರಶೈವರ ಕುರುಹುಗಳಾದ ಮಠಗಳು, ಗವಿಗಳು, ವೀರಭದ್ರನ ಶಿಲ್ಪಗಳು, ವಿರೂಪಾಕ್ಷ, ನಂದಿಶಿಲ್ಪಗಳನ್ನು ಕುರಿತು ಸಂಶೋಧನಾ ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಡಾ.ಕೆ.ರವೀಂದ್ರನಾಥ ಅವರ 'ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ ವಿವೇಚನೆ' (೨೦೦೫) ಎಂಬ ಸಂಶೋಧನಾ ಲೇಖನಗಳ ಸಂಕಲನ ಗ್ರಂಥದಲ್ಲಿ ಶಿವತತ್ವ ಚಿಂತಾಮಣಿ ಕಾವ್ಯವನ್ನು ವಿವಿಧ ಸಂಶೋಧಕರು ಭಾಷಿಕ ನೆಲೆ, ಧಾರ್ಮಿಕನೆಲೆ,ಚಾರಿತ್ರಿಕ ನೆಲೆ ಮತ್ತು ಸ್ಮೃತಿಕ ನೆಲೆ ಇನ್ನು ಮುಂತಾದ ನೆಲೆಗಳಲ್ಲಿ ಅಧ್ಯಯನಕ್ಕೊಳಪಡಿಸಿ ವಿಶ್ಲೇಷಿಸಿದ್ದಾರೆ.

ವಿಜಯನಗರ ಅಧ್ಯಯನ ಸಂಪುಟಗಳಲ್ಲಿ ಪ್ರಕಟವಾದ ಚನ್ನಬಸಪ್ಪ ಎಸ್.ಪಾಟೀಲರ ಶ್ರೀ ವಿರೂಪಾಕ್ಷ, ಸಿ.ಟಿ.ಎಂ.ಕೊಟ್ರಯ್ಯನವರ 'ಹಂಪೆಯಲ್ಲೊಂದು ಸಿದ್ದರಾಮೇಶ್ವರ ಪ್ರಣೀತ' ಲಿಂಗಕ್ಕೆ ಲಿಂಗವೇ ಪೀಠವಾಗಿರ್ಪ ಯೋಗಲಿಂಗ ಶಿಲ್ಪ, ಡಾ.ಬಸವರಾಜ ಮಲಶೆಟ್ಟರ 'ವಿಜಯನಗರ ಮತ್ತು ವಚನ ಸಾಹಿತ್ಯದ ಶಾಸ್ತ್ರೀಕರಣ', ಡಾ.ಮೃತ್ಯುಂಜಯ ರುಮಾಲೆಯವರ 'ಧಾರ್ಮಿಕ ಸ್ಥಿತ್ಯಂತರದ ಪ್ರಾತಿನಿಧಿಕ ಕೃತಿಯಾಗಿ ಲಿಂಗಲೀಲಾ ವಿಲಾಸ ಚಾರಿತ್ರ', ಡಾ.ದೇವರ ಕೊಂಡಾರೆಡ್ಡಿಯರ 'ಪಂಪಾತೀರ್ಥ', ಟಿ.ಎಂ.ಮಂಜುನಾಥಯ್ಯನವರ 'ಮಾತಂಗ ಪರ್ವತ ಒಂದು ಅಧ್ಯಯನ' ಮತ್ತು 'ಹಂಪೆಯ ಪರಿಸರದಲ್ಲಿ ನವಶೋಧಿತ ಶಾಸನಗಳು', 'ಹಂಪಿಯ ಶಾಸನಗಳಲ್ಲಿ ಶಿವಶರಣರು', ಎಂ.ಜಿ.ನಾಗರಾಜ್ ಅವರ 'ವಿಜಯನಗರ ಕಾಲದ ವೀರಭದ್ರ ಪರಂಪರೆ', ಡಾ.ಕೆ.ರವೀಂದ್ರನಾಥ ಅವರ 'ಹಂಪಿಯ ಶಾಸನೋಕ್ತ ಲಿಂಗಗಳು',ಎಸ್.ಎಸ್.ಭಗವತಿ, ಎಚ್.ಎಸ್.ಮೇಲಿನಮನಿಯವರ 'ಹಂಪಿ ಶಾಸನೋಕ್ತ ವೀರಶೈವ ಮಠಗಳು', ಡಾ.ಸಿ.ಎಸ್.ವಾಸುದೇವನ್ ಅವರ 'ಹಂಪಿ ಪರಿಸರದ ಪಂಚಲಿಂಗಗಳು', ಡಾ.ಬಿ.ವಿ.ಮಲ್ಲಾಪುರ ಅವರ 'ಕ್ರಿಯಾಶಕ್ತಿ ಗುರು' ಇನ್ನೂ ಮುಂತಾದ ಲೇಖನಗಳನ್ನು ಡಾ.ಎಂ.ಎಂ. ಕಲಬುರ್ಗಿ, ಡಾ.ಚಿದಾನಂದಮೂರ್ತಿ ಸಂಶೋಧನಾ ಲೇಖನಗಳನ್ನು ಅವಲೋಕಿಸಲಾಗಿದೆ. ಇವುಗಳಲ್ಲದೆ ನನ್ನ ಅಧ್ಯಯನಕ್ಕೆ ಸಂಬಂಧಿಸಿದ ವಿವಿಧ ವಿದ್ವಾಂಸರ ಲೇಖನಗಳನ್ನು ಸಹ ಅವಲೋಕಿಸಲಾಗಿದೆ.

ಈ ಮೇಲಿನ ಎಲ್ಲಾ ಸಂಶೋಧನಾ ಲೇಖನಗಳಲ್ಲಿ ವೀರಶೈವ ಧರ್ಮತತ್ವ ಸಿದ್ಧಾಂತಗಳನ್ನು ಕುರಿತು ಹೇಳಿರುವುದಿಲ್ಲ. ಹಾಗೆಯೇ ಎಲ್ಲಾ ಸಂಶೋಧನಾ ಮಹಾಪ್ರಬಂಧಗಳಲ್ಲಿ ಅಲ್ಪಮಟ್ಟಿಗೆ ವೀರಶೈವ ಧರ್ಮ ತತ್ವಸಿದ್ಧಾಂತಗಳ ಬಗ್ಗೆ ಅಧ್ಯಯನ ಮಾಡಿದ್ದರೂ ಅವು ಬಿಡಿ ಬಿಡಿ ಅಧ್ಯಯನಗಳೇ ಹೊರತು ಸಮಗ್ರ ಅಗ್ಯಯನವಲ್ಲ. ಆದ್ದರಿಂದ ಪ್ರಸ್ತುತ ಅಧ್ಯಯನವು ಹಂಪಿ ಪರಿಸರದಲ್ಲಿ ಒಡಮೂಡಿದ ಕನ್ನಡ ಕಾವ್ಯಗಳನ್ನು ಆಧರಿಸಿ ಸಮಗ್ರವಾಗಿ ವೀರಶೈವ ಧರ್ಮದ ಸ್ವರೂಪ ಕುರಿತು ಅಧ್ಯಯನ ಮಾಡಲಾಗಿದೆ.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವು ತನ್ನದೇಯಾದ ಸ್ವರೂಪ ಹೊಂದಿದೆ. ನಿಗದಿತ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನದ ಅನುಕೂಲಕ್ಕಾಗಿ ಪ್ರಸ್ತುತ ಅಧ್ಯಯನವನ್ನು ಆರು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಒಂದನೇ ಅಧ್ಯಾಯದಲ್ಲಿ ಅಧ್ಯಯನ ಕೈಗೊಳ್ಳುವ ಉದ್ದೇಶ, ವ್ಯಾಪ್ತಿ, ಮಹತ್ವ ಕುರಿತು ಚರ್ಚಿಸಲಾಗಿದೆ. ಅಧ್ಯಾಯ ಎರಡರಲ್ಲಿ ಹಂಪಿಯ ಪದನಿಷ್ಪತ್ತಿ, ಹಂಪಿಯ ಪರ್ಯಾಯ ಹೆಸರುಗಳು ಹಂಪಿಯ ರಾಜಕೀಯ ಚರಿತ್ರೆ ಕಟ್ಟುವ ನಿಟ್ಟಿನಲ್ಲಿ ಅಧ್ಯಯನ ಮಾಡಲಾಗಿದೆ. ಅಧ್ಯಾಯ ಮೂರರಲ್ಲಿ ಶೈವಧರ್ಮದ ಉಗಮ ವಿಕಾಸ, ಅದರ ಶಾಖೆಗಳನ್ನು ಕುರಿತು, ವೀರಶೈವ-ಲಿಂಗಾಯತ(ಪದಗಳ) ಧರ್ಮದ ಪ್ರಾಚೀನತೆ, ಪ್ರಾಚೀನ ದೈವಗಳ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಹಂಪಿ ಪರಿಸರದ ಕನ್ನಡ ಸಾಹಿತ್ಯದಲ್ಲಿ ವೀರಶೈವ-ಲಿಂಗಾಯತ ಪದಗಳ ಬಳಕೆ ವಿಧಾನ, ಧರ್ಮಗ ಪರಿಕಲ್ಪನೆ, ಲಿಂಗಾಯತ ಧರ್ಮಕ್ಕೆ ಪ್ರೇರಣೆ ಮತ್ತು ಕಾರಣ, ಲಿಂಗಾಯತ ಧರ್ಮದ ತತ್ತ್ವ ಸಿದ್ಧಾಂತಗಳ ಸ್ವರೂಪವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ ಐದರಲ್ಲಿ ವೀರಶೈವ(ಲಿಂಗಾಯತ)ಧರ್ಮದ ಪ್ರಚಾರಕ್ಕಾಗಿ ಹುಟ್ಟಿಕೊಂಡ ಮಠಗಳು, ಮಠಾಧಿಪತಿಗಳು, ದಾರ್ಶನಿಕರು, ಶರಣರು, ಅವರ ಕಾರ್ಯಸಾಧನೆ, ಲಿಂಗಾಯತ ಧರ್ಮವು ಸ್ಥಾವರ ಲಿಂಗಪೂಜೆಯ ಕಡೆ ವಾಲುತ್ತಿರುವುದನ್ನು ಕ್ಷೇತ್ರಕಾರ್ಯ ಅಧರಿಸಿ ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಆರರಲ್ಲಿ ಪ್ರಸ್ತುತ ಅಧ್ಯಯನದ ಒಟ್ಟು ಫಲಿತಗಳನ್ನು ಕುರಿತು ಹೇಳಲಾಗಿದೆ. ಅಲ್ಲದೆ ಅಧ್ಯಯನಕ್ಕೆ ಸಂಬಂಧಪಟ್ಟ ಛಾಯಾಚಿತ್ರಗಳು, ಆಕರಗ್ರಂಥಗಳನ್ನು ನೀಡಲಾಗಿದೆ.

ಈ ಮೇಲಿನಂತೆ ಪ್ರಸ್ತುತ ಅಧ್ಯಯನ ತನ್ನ ಸ್ವರೂಪ ಹೊಂದಿರುತ್ತದೆ.

೨

# ಐತಿಹಾಸಿಕತೆ

ಹಂಪಿ ಸಾವಿರಾರು ವರ್ಷಗಳ ಗತ ಇತಿಹಾಸವನ್ನು ತನ್ನೊಡಲ ಗರ್ಭದಲ್ಲಿ ಗರ್ಭೀಕರಿಸಿ ಕೊಂಡಿದ್ದು ಜಾಗತಿಕ ಮಹತ್ವ ಪಡೆದುಕೊಂಡಿದೆ. ದಿನೇ ದಿನೇ ಸಂಶೋಧಕರನ್ನು ಜಗತ್ತಿನ ಮೂಲೆ-ಮೂಲೆಗಳಿಂದ ಬರಮಾಡಿಕೊಂಡು ಅವರ ಕುತೂಹಲ ಕೆರಳಿಸುತ್ತಿರುವುದನ್ನು ನೋಡಿದರೆ, ಹಂಪಿ ಸಂಶೋಧಕರ ಸಮುದ್ರವೆಂದು ಭಾವಿಸಬೇಕಾಗುತ್ತದೆ. ಆದಿ ಮಾನವರ ತಾಣವಾಗಿತ್ತೆಂದು ಇಲ್ಲಿ ದೊರೆತ ಗುಹಾ ಚಿತ್ರಗಳೇ ಸಾಕ್ಷಿ. ರಾಮಾಯಣದ ಕಿಷ್ಕಿಂಧೆಯಾಗಿತ್ತೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಪ್ರಕೃತಿ ಸಹಜ ಅನೇಕ ಗುಡ್ಡ-ಬೆಟ್ಟಗಳು, ಅದರಲ್ಲಿ ಗವಿ-ಗುಹೆಗಳು ಇರುವುದನ್ನು ಕಾಣಬಹುದಾಗಿದೆ. ಆದುದರಿಂದಲೇ ಹಂಪಿ ಆದಿ ಮಾನವನ ವಾಸಸ್ಥಾನವಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಆರಂಭದಲ್ಲಿ ಹಂಪಿಯಲ್ಲಿ ಬೌದ್ಧರು ನೆಲೆಸಿದ್ದರೆಂದು ಸಂಶೋಧಕರು ಪತ್ತೆ ಹಚ್ಚಿದ್ದಾರೆ. ನಂತರದಲ್ಲಿ ಶೈವರು, ಜೈನರು, ವೈಷ್ಣವರು ಹಾಗೂ ಇಸ್ಲಾಂ ಧರ್ಮಿಯರು ಹಂಪಿಯಲ್ಲಿ ನೆಲೆಸಿದ್ದರ ಬಗ್ಗೆ ಶಾಸನಗಳು ದಾಖಲಿಸಿ ದೃಢಪಡಿಸುತ್ತವೆ. ಸಹಸ್ರಾರು ವರ್ಷಗಳಿಂದಲೂ ಹಂಪಿ ಶೈವ ಧರ್ಮವನ್ನು ಪರಿಪಾಲಿಸುತ್ತಾ ಬಂದಿರುವುದನ್ನು ಶಾಸನ ಮತ್ತು ಸಾಹಿತ್ಯ ಕೃತಿಗಳಿಂದ ತಿಳಿದುಬರುತ್ತದೆ.

ಹಂಪಿ ಪ್ರದೇಶಕ್ಕೆ ವಿರೂಪಾಕ್ಷನೇ ಚಕ್ರವರ್ತಿಯಾದುದರಿಂದ ಯಾವ ರಾಜರೂ ಈ ಪ್ರದೇಶವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿಲ್ಲದಿರುವುದನ್ನು ಶಾಸನಗಳ ಆಧಾರದಿಂದ ಗ್ರಹಿಸಬಹುದಾಗಿದೆ. ಕಲ್ಯಾಣದ ಚಾಲುಕ್ಯರು, ಕುರುಗೋಡು ಸಿಂಧರು, ಹೊಯ್ಸಳರು, ಕಮ್ಮಟದುರ್ಗದ ಪಾಳೇಗಾರರು ಇತ್ಯಾದಿಗಳು ಹಂಪಿ ಪ್ರದೇಶವನ್ನು ತಮ್ಮ ಆಳ್ವಿಕಕೆಗೆ ಒಳಪಡಿಸಿಕೊಂಡಿದ್ದರೂ ನೇರ ಹಸ್ತಕ್ಷೇಪ ಹೊಂದಿರಲಿಲ್ಲ. ಸ್ಥಳೀಯರೇ ಆದ ವಿಜಯನಗರದ ಅರಸರು ಹಂಪಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ವಿರೂಪಾಕ್ಷನೇ ಚಕ್ರವರ್ತಿ ತಾವು ಅವನ ಪ್ರತಿನಿಧಿಗಳೆಂದು ಭಾವಿಸಿ ಆಳ್ವಿಕೆ ನಡೆಸಿರುವುದನ್ನು ಕಾಣಬಹುದು.

ಪ್ರಸ್ತುತ ಅಧ್ಯಾಯದಲ್ಲಿ 'ಹಂಪಿ' ಪದನಿಷ್ಪತ್ತಿ. ಹಂಪಿಯ ನಾನಾ ಹೆಸರುಗಳು, ಅದರ ಪ್ರಾಚೀನತೆ, ಆಳ್ವಿಕೆ ನಡೆಸಿದ ರಾಜ-ಮಹಾರಾಜರ ದಾನ-ದತ್ತಿ ಶಾಸನಗಳು ಮುಂತಾದ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಿ ಹಂಪಿಯ ಐತಿಹಾಸಿಕತೆಯನ್ನು ವಿಶ್ಲೇಷಿಸಲಾಗಿದೆ.

**ಹಂಪಿ ಪದನಿಷ್ಪತ್ತಿ :** 'ಹಂಪಿ' ಎಂಬ ಪದ ವ್ಯಕ್ತಿವಾಚಕವೋ ಅಥವಾ ಪ್ರದೇಶವಾಚಕವೋ ಎಂಬುದರ ಬಗ್ಗೆ ಈಗಾಗಲೇ ಕೆಲವೊಂದು ಚರ್ಚೆ ನಡೆದಿರುವುದನ್ನು ಕಾಣಬಹುದು. 'ಪಂ' ಎಂದರೆ ಅಮೃತವೆಂದೂ, 'ಪ' ಎಂದರೆ ಸ್ವರ್ಣವೆಂದೂ ಅರ್ಥೈಸಿ ಬೇಡುವಾತನಿಗೆ ಅಮೃತರೂಪವಾದ ಮೋಕ್ಷವನ್ನು, ಸಂಪತ್ ರೂಪವಾದ ಭೋಗವನ್ನು ಕೊಟ್ಟು ರಕ್ಷಿಸುವಂತಹದ್ದಾಗಿರುವುದರಿಂದ, ಇದಕ್ಕೆ 'ಪಂಪಾ' ಎಂದು ಹೆಸರಾಯಿತೆಂದು[1] ಪಂಪಾಮಹಾತ್ಮೆ ಕೃತಿಯಲ್ಲಿ ವಿಶ್ಲೇಷಿಸಲಾಗಿದೆ. ಡಾ.ಎಂ.ಚಿದಾನಂದ ಮೂರ್ತಿಯವರು "ಪಂಪಾ" ಎಂಬುದು ದಕ್ಷಿಣ ಭಾರತದ ಒಂದು ನದಿಯಾಗಿ, ರಾಮಾಯಣ, ಮಹಾ ಭಾರತಗಳಲ್ಲಿ ಕಾಣಿಸಿಕೊಳ್ಳುವುದು. ಆ ಹೆಸರಿನ ನದಿಗಳು ಕೇರಳ ಆಂಧ್ರಗಳಲ್ಲಿ ಇವೆ ಎನ್ನುತ್ತಾ, ಪಂಪಾ(ಪಂಪ) ದ್ರಾವಿಡ ಭಾಷೆಯ ಪದವಾದರೆ ಅದರ ಮೂಲ ದಟ್ಟವಾಗಿರುವುದು, ಸಂದಣಿಸಿರು ಎಂಬರ್ಥದ ಕನ್ನಡ ಪಂಪಕ(ಪಪ್ಪಕ), ಪುಪ್ಪಕ ಆಗಿರಬಹುದು. ತಮಿಳು-ಪಂಪು, ಪಂಪಲ್ ; ತೆಲುಗು-ಪಂಬು; ಧಾತು-ಪರ(ಡು), ಹರಡು ದಟ್ಟ ಅರಣ್ಯದ ಮಧ್ಯೆ ಹರಿಯುವ ನದಿ "ಪಂಪಾ"(ಪಂಪ) ಆಗಿರಬಹುದು. 'ಪಂಪಾ' ಪದವು ಮೂಲತಃ ನದಿಯನ್ನು ಹೇಳುತ್ತದೆ. 'ಪಂಪಾ' ನದಿ ಹರಿಯುತ್ತಿದ್ದ ಪ್ರಾಚೀನ ಜನವಸತಿಯ ಹಂಪಿ ಪ್ರದೇಶದಲ್ಲಿ ಪಂಪಾಂಬಿಕೆ ದೇವತೆ ಬಂದು ಆಕೆಯ ದೇವಾಲಯ ಸುತ್ತ ಹಳ್ಳಿ ಬೆಳೆದಿದ್ದರಿಂದ ಆ ಊರಿಗೆ "ಪಂಪೆ" ಎಂದು ನಾಮಕರಣಗೊಂಡು ಬೆಳಕಿಗೆ ಬಂದಿತೆಂದು ಹೇಳುತ್ತಾರೆ.[2]

ದ್ರಾವಿಡಿಯನ್ ಎಟಿಮಲಾಜಿಕಲ್ ನಿಘಂಟುವಿನಲ್ಲೂ ಪಯಲ್, ಪಂಚು, ಪಂಪ, ಪಕು, ಪಂಕು ಮೊದಲಾದ ಪದಗಳಿಗೆ 'ವಿಂಗಡಣೆ' ಎಂಬರ್ಥವಿದೆ. ಹೀಗಾಗಿ ಈ ಭಾಗದಲ್ಲಿ ತುಂಗಭದ್ರಾ ನದಿಯನ್ನು ಹಂಪಿಹೊಳೆ, ಪಂಪಾತೀರ್ಥ ಮೊದಲಾದ ಹೆಸರುಗಳಿಂದ ಕರೆಯುವುದು ಉಚಿತವಾಗಿದೆ. ಭೌಗೋಳಿಕವಾಗಿ ಈ ನದಿ ಅಲ್ಲಲ್ಲಿ ಕವಲೊಡೆದು ಮತ್ತೆ ಕೂಡುವುದರಿಂದ ಅನೇಕ ನಡುಗಡ್ಡೆಗಳನ್ನು ಸೃಷ್ಟಿಸಿ ತುಂಗಭದ್ರೆಯು ಅನೇಕ ಕಡೆ ಟಿಸಿಲುಗಳು ಒಡೆದಿರುವುದನ್ನು ಗಮನಿಸಬಹುದು. ಹೀಗಾಗಿ ನೀರು ಶಾಖೆಗಳಾಗಿ ಹಂಚಿ ಹೋಗಿದ್ದರಿಂದ 'ಪಂಪ' ಅಂದರೆ 'ಭಾಗಗಳಾದದ್ದು' ಎಂಬರ್ಥವನ್ನು ಪಡೆದು ಈ ಭಾಗದ ಜನರ ಬಾಯಲ್ಲಿ ಹಂಪಿ ಹೊಳೆಯಾಗಿದೆ. ಹಂಪಿಯಲ್ಲಿ ಈ ನದಿ ಮುರಿದು ಎತ್ತರಕ್ಕೆ ತಿರುಗಿದ ಕಾರಣ ಪಂಪಾ ತೀರ್ಥವಾಯಿತು.[3] ಅಂದರೆ 'ಪಂಪಾ' ಹೋಗಿ ಹಂಪಿಯಾಯಿತು. ನದಿಯಿಂದಲೇ ಈ ಹೆಸರು ಬಂದಿದೆ ಎಂದು ಹೇಳಬಹುದಾಗಿದೆ.

ಇಲ್ಲಿ 'ಪಂಪಾ' ಎಂಬ ಪದ ವ್ಯಕ್ತಿವಾಚಿಯಾಗಿರದೆ, ನದಿವಾಚಿಯಾಗಿದೆ. ತುಂಗಭದ್ರ ನದಿಯಿಂದಲೇ 'ಪಂಪಾ' ಎಂಬ ಹೆಸರು ಬಂದಿದೆ. ಕಾಲಾಂತರದಲ್ಲಿ ಈ ನದಿ ದಂಡೆಯ ಮೇಲೆ ಪಾರ್ವತಿ ಎಂಬ

ಶಕ್ತಿದೇವತೆಯ ಆರಾಧನೆ ಪ್ರಾರಂಭವಾಯಿತು. ಈ ಪಾರ್ವತಿ ಪಂಪಾತೀರದಲ್ಲಿದ್ದ ಕಾರಣ ಪಂಪಾಂಬಿಕೆಯಾದಳು. ಮುಂದೆ ಜನಸಾಮಾನ್ಯರ ಬಾಯಲ್ಲಿ ಪಂಪಾದೇವಿ ಹಂಪಾದೇವಿಯಾದಳು. ಈಕೆ ನೆಲೆಸಿದ ಸ್ಥಳ ಪಂಪಾತೀರ, ಪಂಪಾಕ್ಷೇತ್ರವೆಂದು ಹೆಸರು ಪಡೆಯಿತು. ನದಿಯೂ ಸಹ ಒಂದು ಹೆಣ್ಣು. ನದಿಯ ಪೂಜೆ ಪ್ರಾರಂಭವಾದ ಕೆಲವಾರು ವರ್ಷಗಳಾದ ಮೇಲೆ ಯಾರೋ ಶೈವರು ಈ ಪಂಪಾ ನದಿಯನ್ನು ಮೂರ್ತಿ ರೂಪದಲ್ಲಿ ಪೂಜಿಸಲು ನಿರ್ಧರಿಸಿ ನದಿ ದಂಡೆಯ ಯಾವುದೋ ಮೂಲೆಯಲ್ಲಿ ಪಾರ್ವತಿಮೂರ್ತಿ ಪ್ರತಿಸ್ಥಾಪಿಸಿ ಪೂಜೆ ಆರಂಭಿಸಿರಬೇಕು. ಇಲ್ಲಿಂದಲೇ ಶಕ್ತಿ ದೇವತೆಯ ಆರಾಧನೆ ಪ್ರಾರಂಭವಾಗಿ ಪಾರ್ವತಿ-ಪಂಪಾಂಬಿಕೆ-ಪಂಪಾದೇವಿ. ಹಂಪಾದೇವಿಯಾದಳು. ಮುಂದೆ ಈ ದೇವಿ ಪ್ರಬಲವಾದಾಗ ಈಕೆಯ ಹೆಸರೇ (ಪಂಪಾತೀರಕ್ಕೆ) 'ಹಂಪಿ' ಎಂದು ಹೆಸರು ಪಡೆದು ಪ್ರಸಿದ್ಧವಾದಂತೆ ತೋರುತ್ತದೆ.

## ಹಂಪಿಯ ಪರ್ಯಾಯ ನಾಮಗಳು

ಹಂಪಿ ರಾಮಾಯಣದ ಕಾಲದಲ್ಲಿ ವಾಲಿ, ಸುಗ್ರೀವರ ರಾಜಧಾನಿ ಕಿಷ್ಕಿಂಧೆಯಾಗಿತ್ತು. ಕ್ರಿ.ಶ.೧೦ನೇ ಶತಮಾನದಿಂದೀಚೆಗೆ, ಪಂಪಾಕ್ಷೇತ್ರ, ಹಂಪಿ ಹೊಸಪಟ್ಟಣ ವಿರೂಪಾಕ್ಷ ತೀರ್ಥ, ವಿಜಯನಗರ, ವಿದ್ಯಾನಗರ ಮುಂತಾದ ಪರ್ಯಾಯ ಹೆಸರುಗಳಿಂದ ಶಾಸನಗಳಲ್ಲಿ ಕರೆಯಲ್ಪಟ್ಟಿದೆ. ಕ್ರಿ.ಶ.೧೧೯೯ರ ಇಮ್ಮಡಿ ರಾಚಮಲ್ಲನ ಶಾಸನವು 'ಪಂಪಾವರ ಕ್ಷೇತ್ರ, ಪಂಪಾತೀರ್ಥ, ವಿರೂಪಾಕ್ಷ ತೀರ್ಥ'[೫], ಎಂದೂ ವಿರೂಪಾಕ್ಷ ದೇವಾಲಯದ ಕನಕಗಿರಿ ಗೋಪುರದಲ್ಲಿನ ಹೊಯ್ಸಳ ಸೋಮೇಶ್ವರನ ಕ್ರಿ.ಶ.೧೨೩೬ರ ಶಾಸನವು "ಪಂಪಾಕ್ಷೇತ್ರ"[೬]ವೆಂದು ದಾಖಲಿಸುತ್ತದೆ. ಇದೇ ಗೋಪುರದ ಪೂರ್ವಕ್ಕಿರುವ (ಕ್ರಿ.ಶ.೧೩೭೯) ೨ನೇ ಹರಿಹರನ ಕಾಲದ ಶಾಸನವು "ಶ್ರೀಬುಕ್ಕರಾಜೋ ವಿಜಯಾಭಿದಾನಾಂ ಪುರಂಧರ ಶ್ರೀ"[೭] ಎಂದು ಉಲ್ಲೇಖಿಸುತ್ತದೆ. ಅಂದರೆ 'ವಿಜಯ' ಎಂಬ ಅಭಿದಾನದಿಂದ ಕಂಗೊಳಿಸುವ ನಗರದಲ್ಲಿ ಶ್ರೀಬುಕ್ಕರಾಯನು ಆಳ್ವಿಕೆ ಮಾಡುತ್ತಿದ್ದ ಎಂದಿದೆ. ಈ ಶಾಸನವು ಹಂಪಿಯನ್ನು 'ವಿಜಯ' ಎಂದು ಕರೆದಿದೆ. ಇದೇ ಕಾಲಕ್ಕೆ ಸೇರಿದ ನದಿ ದಂಡೆಯ ನರಸಿಂಹ ದೇವಾಲಯದ ಪೂರ್ವಕ್ಕಿರುವ ಬಂಡೆಯ ಮೇಲಿನ ಶಾಸನವು "ಪಂಪಾತೀರ"[೮] ಎಂದೂ, ಇದರ ಪಕ್ಕದ ಶಾಸನದಲ್ಲಿ "ಪಂಪಾತೀರನಿಲಯಾ"[೯] ಎಂದು ಕರೆದಿದೆ. ಇಲ್ಲಿ ವಿರೂಪಾಕ್ಷ 'ಪಂಪಾ' ಎಂಬ ಸ್ಥಳದ ಒಡೆಯ ಎಂದರ್ಥ. ಅಂದರೆ ಈ ಶಾಸನವು ಹಂಪಿಯನ್ನು 'ಪಂಪಾ' ಎಂದು ಕರೆದಿರುವುದನ್ನು ಕಾಣಬಹುದು.

ವಿಠಲ ದೇವಾಲಯ ಹತ್ತಿರದ ಹೊಂಡದ ದಂಡೆಯ ಬಂಡೆಯ ಮೇಲಿನ ಕ್ರಿ.ಶ.೧೪೦೦ಕ್ಕೆ ಸೇರುವ ಶಾಸನವು "ತುಂಗಭದ್ರಾ ತೀರ(ದ)ಲು ಭಾಸ್ಕರ ಕ್ಷೇತ್ರದಲು ಪಂಪಾ ಸರಸ್ಸಿನ"[೧೦] ಎಂದು ಹಂಪಿಯನ್ನು ತುಂಗಭದ್ರಾ ತೀರದ ಭಾಸ್ಕರ ಕ್ಷೇತ್ರ, ಪಂಪಾ ಸರಸ್ಸು ಎಂದು ಕರೆದಿದೆ. ಆನೆಸಾಲಿಯ ಹಿಂದೆ ಇರುವ

ಜೈನ ಬಸದಿಯ ಗೋಡೆಯಲ್ಲಿನ ೨ನೇ ದೇವರಾಯನ ಕ್ರಿ.ಶ.೧೪೨೪ರ ಶಾಸನದಲ್ಲಿ "...... ವಿಜಯ ನಗರಸ್ಯ....ವಿಜಯನಗರೀತಿ ತಸ್ಮಿನ್ನಗರೀ..."[೧೧] ಎಂದೂ, ಅಲ್ಲೇ ಇರುವ ಬೆಟ್ಟದ ಮೇಲಿನ ಗುಂಡಿನ ಮೇಲೆ ಇರುವ ಶಾಸನವು "ವಿಜಯನಗರ ಪಟ್ಟಣ"[೧೨] ಎಂದೂ, ಗಾಣಗಿತ್ತಿ ಬಸದಿಯ ಮುಂದಿನ ಮಾನಸ್ತಂಭದಲ್ಲಿನ ಕ್ರಿ.ಶ.೧೩೮೬ರ ಶಾಸನವು "ವಿಜಯಾಭಿದಂ| ನಗರಂ"[೧೩] ಎಂದು ಉಲ್ಲೇಖಿಸಿವೆ. ಬುಕ್ಕರಾಯ ಮತ್ತು ೨ನೇ ದೇವರಾಯನ ಕಾಲದ ಶಾಸನಗಳು ಹಂಪಿಯನ್ನು 'ವಿಜಯನಗರ ಪಟ್ಟಣ', ವಿಜಯಾಭಿದ ನಗರ, 'ವಿಜಯನಗರೀತಿ' ಎಂದು ಕರೆದಿವೆ.

ನಿಂಬಾಪುರ ಕಪಿಲಾಶ್ರಮದ ಬಳಿಯ ಪ್ರೌಢದೇವರಾಯನ ಕ್ರಿ.ಶ.೧೪೫೫ರ ಶಾಸನವು "ಶ್ರೀ ತುಂಗಭದ್ರಾ ಪರಿಲೇ ನಗರೇ.... ವಿಜಯನಗರೀ...."[೧೪] ಎಂದು ಹಂಪಿಯನ್ನು 'ತುಂಗಭದ್ರಾ ಪರಿಖೇ ನಗರ', 'ವಿಜಯನಗರಿ' ಎಂದು ದಾಖಲಿಸಿದೆ. ಕಮಲಾಪುರದ ವಾಯುವ್ಯಕ್ಕೆ ಇರುವ ಕುಂಬಾರ ಕುಂಟೆಯ ದರ್ಗಾ ಬಳಿಯ ಹೊಂಡದಲ್ಲಿರುವ ಕೃಷ್ಣದೇವರಾಯನ ಕಾಲದ ಕ್ರಿ.ಶ.೧೫೨೨ರ ಶಾಸನವು "ವಿಜಯನಾಗರಪಟಣ"[೧೫] ಎಂದೂ ಮತಂಗ ಪರ್ವತದ ಮೇಲೆ ಇರುವ ಅಚ್ಯುತ ದೇವರಾಯನ ಕ್ರಿ.ಶ.೧೫೩೨ರ ಶಾಸನವು "ವಿಜೆಯನಾಗರ"[೧೬]ವೆಂದೂ, ಚಂಡಿಕೇಶ್ವರ ದೇವಾಲಯದಲ್ಲಿ ಮುರಿದುಬಿದ್ದಿರುವ ಸದಾಶಿವರಾಯನ ಕ್ರಿ.ಶ.೧೫೪೫ರ ಶಾಸನವು "ವಿದ್ಯಾನಗರ"[೧೭] ಎಂದು ದಾಖಲಿಸಿವೆ.

ಹಾಗೆಯೇ ಕ್ರಿ.ಶ.೧೩೯೯ರ ೨ನೇ ಹರಿಹರನ ಕಾಲದ ಶಾಸನವು "ಪಂಪಾಂಬುಧಿ"[೧೮] ಎಂದೂ, ಕ್ರಿ.ಶ.೧೪೧೦ರ ಲಕ್ಷ್ಮೀಧರನ ಶಾಸನವು "ಪಂಪಾಪುರ"[೧೯]ವೆಂದೂ, ಕುರುಗೋಡು ಸಿಂಧರ ಕಲಿದೇವನ ಕ್ರಿ.ಶ.೧೧೯೯ರ ಶಾಸನವು "ಹಂಪಾತೀರ್ಥ" "ಹಂಪೆ"[೨೦] ಎಂದು ದಾಖಲಸಿವೆ. ಹೀಗೆ ಅನೇಕ ಶಾಸನಗಳು ಹಂಪಿಯನ್ನು ನಾನಾ ಹೆಸರುಗಳಿಂದ ಕರೆದಿವೆ.

ಕನ್ನಡ (ಹಂಪಿ ಪರಿಸರದ ಸಾಹಿತ್ಯ) ಕಾವ್ಯಗಳು ಸಹ ಹಂಪಿಯನ್ನು ನಾನಾ ಹೆಸರುಗಳಿಂದ ಕರೆದಿವೆ. ಮಹಾಕವಿ ಹರಿಹರ ತನ್ನ ಎಲ್ಲಾ ಕಾವ್ಯಗಳಲ್ಲಿ 'ಪಂಪಾಪುರದವಸ' 'ಹಂಪೆಯಾಳ್ದ'ನೆಂದು ವಿರೂಪಾಕ್ಷನನ್ನು ಸ್ತುತಿಸಿದ್ದಾನೆ. ಅಂದರೆ ಪಂಪಾಪುರ, ಹಂಪೆ ಎಂದು ಹಂಪಿಯನ್ನು ಕರೆದಿದ್ದಾನೆ. ರಾಘವಾಂಕ ಕವಿ ತನ್ನ ಎಲ್ಲಾ ಕಾವ್ಯಗಳಲ್ಲಿ ತನ್ನ ಬಗ್ಗೆ ಹೇಳಿಕೊಳ್ಳುವಾಗ "ಹಂಪೆಯ ಹರೀಶ್ವರನ ವರಸುತ" ಎಂದು ಹೇಳಿದ್ದಾನೆ. ಇಲ್ಲಿ ಹಂಪಿಯನ್ನು ಹಂಪಿಯೆಂದು ಕರೆದಿದ್ದಾನೆ. ಅಲ್ಲದೆ ಹರಿಶ್ಚಂದ್ರ ಕಾವ್ಯದಲ್ಲಿ ವಿರೂಪಾಕ್ಷನನ್ನು ಕುರಿತು ಹೇಳುವಾಗ 'ಪಂಪಾಪತಿ' 'ಪಂಪಾಧಿಪತಿ', 'ಹಂಪೆಯ ಮೃಡಂ'[೨೧] ಎಂದು ಹಂಪಿಯನ್ನು ಪಂಪಾ, ಹಂಪೆ ಎಂದು ಕರೆದಿದ್ದಾನೆ.

ಹಾಗೆಯೇ ಪ್ರೌಢದೇವರಾಯನ ಪ್ರಧಾನಿ ಲಕ್ಕಣ್ಣದಂಡೇಶ ತನ್ನ ಶಿವತತ್ತ್ವ ಚಿಂತಾಮಣಿ ಕಾವ್ಯದಲ್ಲಿ "ವಿಜಯ ಕಲ್ಯಾಣ", 'ವಿಜಯನಗರಿ'[೨೨], 'ವಿಜಯ ಕಲ್ಯಾಣಪುರ', 'ವಿಜಯಕಲ್ಯಾಣ

ಪಟ್ಟಣ'[೨೩], 'ಪಂಪಾಕ್ಷೇತ್ರ', 'ಪಂಪಾಪುರ'[೨೪] ಎಂಬಿತ್ಯಾದಿಯಾಗಿ ಹಂಪಿಯ ವಿವಿಧ ಹೆಸರುಗಳನ್ನು ಉಲ್ಲೇಖಿಸಿದ್ದಾನೆ. ಕಲ್ಮಠದ ಪ್ರಭುದೇವ ತನ್ನ ಲಿಂಗಲೀಲಾ ವಿಲಾಸ ಚಾರಿತ್ರ್ಯದಲ್ಲಿ 'ವಿದ್ಯಾನಗರವೆಂದೂ'[೨೫], ಚಂದ್ರಶೇಖರ ಕವಿ ತನ್ನ ಪಂಪಾಸ್ಥಾನ ವರ್ಣನಂ ಕಾವ್ಯದಲ್ಲಿ "ಪಂಪೆಯ ವಿರೂಪಾಕ್ಷಂ"[೨೬] "ಹಂಪೆಯಾಳ್ದ", "ಪಂಪಾಮಹಾಕ್ಷೇತ್ರ", 'ಪಂಪಾಕ್ಷೇತ್ರ'[೨೭] ಹಾಗೂ "ಪಂಪಾಪುರಿ"[೨೮] ಎಂದು ಕರೆದಿದ್ದಾನೆ.

ಹೀಗೆ ಹಂಪಿಯ ಶಾಸನಗಳು ಮತ್ತು ಕಾವ್ಯಗಳು ಪಂಪಾ ತೀರ್ಥ, ಪಂಪಾವರ ಕ್ಷೇತ್ರ, ವಿರೂಪಾಕ್ಷ ತೀರ್ಥ, ಪಂಪಾಕ್ಷೇತ್ರ, ವಿಜಯ, ಪಂಪಾತೀರ, ಪಂಪಾತೀರ ನಿಲಯ, ಪಂಪಾ, ಭಾಸ್ಕರ ಕ್ಷೇತ್ರ, ಪಂಪಾಸರಸ್ಸು, ವಿಜಯನಗರ, ವಿಜಯನಗರ ಪಟ್ಟಣ, ವಿಜಯಾಭಿದನಗರ, ತುಂಗಭದ್ರಾ ಪರಿಖೇ ನಗರ, ವಿಜಯನಗರಿ, ವಿಜೆಯನಾಗರಪಟ್ಟಣ, ಪಂಪಾಂಬುಧಿ, ಪಂಪಾಪುರ, ಹಂಪಾತೀರ್ಥ, ಹಂಪೆ, ವಿಜಯ ಕಲ್ಯಾಣ, ವಿಜಯ ಕಲ್ಯಾಣಪುರ, ವಿದ್ಯಾನಗರ, ಪಂಪಾಮಹಾಕ್ಷೇತ್ರ, ಪಂಪಾಪುರಿ ಎಂಬಿತ್ಯಾದಿ ಹೆಸರುಗಳಿಂದ ಕರೆದಿವೆ. ಹಂಪಿ ಇಷ್ಟು ಹೆಸರುಗಳಿಂದ ಕರೆಯಿಸಿಕೊಂಡಿದ್ದರೂ ಸಹ ತನ್ನ ಮೂಲ ಹೆಸರಾದ 'ಹಂಪಿ' ಎಂಬ ಹೆಸರಿನಿಂದಲೇ ಇಂದಿಗೂ ಕರೆಯಿಸಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ.

### ಹಂಪಿಯ ಚಾರಿತ್ರಿಕ ನೋಟ

ಹಂಪಿ ಆದಿಮಾನವರ ಕಾಲದಿಂದಲೂ ವಾಸಸ್ಥಳ ಅಥವಾ ಜನವಸತಿಯ ಸ್ಥಳವಾಗಿತ್ತೆಂದು ಕೆಲವು ಆಧಾರಗಳಿಂದ ದೃಢಪಟ್ಟಿದೆ. ಇಲ್ಲಿನ ನದಿ, ಗುಡ್ಡ, ಗುಹೆ, ಪೊಟರೆಗಳೂ ಮಾನವನ ವಾಸ್ತವ್ಯಕ್ಕೆ ಅನುಕೂಲ ಮಾಡಿಕೊಟ್ಟಿವೆ. ಹಂಪಿ ಸುತ್ತಮುತ್ತಲ ಪ್ರದೇಶ ಫಲವತ್ತಾದ ಭೂಮಿ ಹೊಂದಿದ್ದು, ಅನೇಕ ಆಹಾರ ಪದಾರ್ಥ, ಧವಸ ಧಾನ್ಯ ಬೆಳೆಯಲು ಯೋಗ್ಯವಾಗಿದೆ. ಆದುದರಿಂದಲೇ ಈ ಪ್ರದೇಶ ಆದಿ ಮಾನವನಿಂದ ಹಿಡಿದು ಇಂದಿನವರೆಗೂ ಜನವಸತಿಯ ಕೇಂದ್ರವಾಗಿಯೇ ಮುಂದುವರೆದಿದೆ.

### ೧. ಪ್ರಾಗೈತಿಹಾಸಿಕ ನೆಲೆ

ಹಂಪಿ ಆದಿಮಾನವನ ವಾಸಸ್ಥಾನವಾಗಿತ್ತೆಂಬುದಕ್ಕೆ ವಿರೂಪಾಕ್ಷ ದೇವಾಲಯದ ಹಿಂದೆ ಇರುವ ಬಂಡೆಗಲ್ಲುಗಳ ಗುಹೆಯಲ್ಲಿ ಆದಿ ಮಾನವನಿಂದ ರಚಿತವಾದ ವರ್ಣ ಚಿತ್ರಗಳೇ ಸಾಕ್ಷಿ. ಇವುಗಳು ಗೆರೆಗಳಿಂದ ರಚನೆಯಾದ ಮನುಷ್ಯನ ಚಿತ್ರಗಳಾಗಿವೆ. ಇವು ಆದಿ ಮಾನವ ಹಂಪಿಯಲ್ಲಿ ವಾಸಿಸುತ್ತಿದ್ದರೆಂಬುದಕ್ಕೆ ಆಧಾರವಾಗಿವೆ. ಪ್ರಾಗೈತಿಹಾಸ ಶಿಲಾಯುಗದ ಮಾನವನು ಸಹ ಹಂಪಿಯಲ್ಲಿ ವಾಸಿಸುತ್ತಿದ್ದನೆಂಬುದಕ್ಕೆ ಭೌಗೋಳಿಕ ಸರ್ವೇಕ್ಷಣೆ ಮತ್ತು ಪುರಾತತ್ತ್ವ ಉತ್ಖನನಗಳು ಸಮಯದಲ್ಲಿ ದೊರೆತ ಶಿಲಾಯುಧಗಳೇ ಸಾಕ್ಷಿಯಾಗಿವೆ. ಹಂಪಿಯ ಗುಡ್ಡ-ಬೆಟ್ಟ, ಕಣಿವಿ-ಕಂದರಗಳಲ್ಲಿ ದೊರೆಯುತ್ತಿದ್ದ ವಿಪುಲವಾದ ಮತ್ತು ವಿವಿಧ ಜಾತಿಯ ಸಸ್ಯ ಮತ್ತು ವನ್ಯ ಸಂಪತ್ತು, ಅವುಗಳ ಮಧ್ಯದಲ್ಲಿ ಅವ್ಯಾಹತವಾಗಿ ಹರಿಯುತ್ತಿದ್ದ ತುಂಗಭದ್ರಾನದಿ ಮತ್ತು ಅಲ್ಲಿಯೇ ಕಾಣಬರುತ್ತಿದ್ದ ಆಶ್ರಯ ರೂಪದ

ಗುಹೆ-ಗಹ್ವರಗಳು ಅವನಿಗೆ ಅನುಕೂಲವಾಗಿ ಪರಿಣಮಿಸಿದ್ದವು. ಇದಲ್ಲದೆ ಆತನಿಗೆ ಅವಶ್ಯವಾಗಿ ಬೇಕಾಗಿದ್ದ ಶಿಲಾಯುಧಗಳನ್ನು ತಯಾರಿಸಿಕೊಳ್ಳಲು ಉಪಯುಕ್ತವಾದ ಮೂಲ ಶಿಲಾಸಾಮಾಗ್ರಿಯೂ ಇಲ್ಲಿ ಹೇರಳವಾಗಿ ದೊರೆಯುತ್ತಿತ್ತು. ಈ ಎಲ್ಲಾ ಕಾರಣಗಳಿಂದಾಗಿ, ಹಂಪಿಯ ಪರಿಸರದಲ್ಲಿ ಶಿಲಾಯುಗದ ಕಾಲದಿಂದಲೇ ಮಾನವನು ವಾಸವಾಗಿದ್ದನೆಂದು ತಿಳಿಯುತ್ತದೆ.[೨೯] ಈ ಹಿನ್ನಲೆಯಲ್ಲಿ ಹಂಪಿ ಪರಿಸರ ೧೫೦೦೦ ವರ್ಷಗಳ ಹಿಂದೆಯೇ ಮಾನವನ ವಾಸಕ್ಕೆ ಯೋಗ್ಯಸ್ಥಳವಾಗಿತ್ತೆಂದು ಹೇಳಬಹುದಾಗಿದೆ.

### ೨. ಚಾರಿತ್ರಿಕ ನೆಲೆ

ಇದನ್ನು ಎರಡು ರೀತಿಯಾಗಿ ವಿಂಗಡಿಸಲಾಗಿದೆ. ಅ. ವಿಜಯನಗರಪೂರ್ವದ ಹಂಪಿ, ಆ. ವಿಜಯನಗರ ಕಾಲದ ಹಂಪಿ.

### ಅ. ವಿಜಯನಗರ ಪೂರ್ವದ ಹಂಪಿ

ಹಂಪಿಯಲ್ಲಿ ಕ್ರಿ.ಶ.೧ನೇ ಶತಮಾನದಿಂದಲೇ ಶಾಸನಗಳು ದೊರೆಯುತ್ತವೆ. ವಿಜಯನಗರ ಪೂರ್ವದ ಹಂಪಿ ಚರಿತ್ರೆಯನ್ನು ಕ್ರಿ.ಶ.೧ನೇ ಶತಮಾನದಿಂದ ಕ್ರಿ.ಶ.೧೩೩೬ರವರೆಗೆ ದೊರಕುವ ಶಾಸನಗಳ ಆಧಾರದಿಂದ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಈ ಅವಧಿಯಲ್ಲಿ ದೊರೆಯುವ ಶಾಸನಗಳು ಅಲ್ಪವಾದರೂ ಹಂಪಿ ಚರಿತ್ರೆ ರೂಪಿಸಲು ಬಹಳ ಮಹತ್ವದ ಪಾತ್ರವಹಿಸುತ್ತವೆ.

೧. ಬೌದ್ಧರ ಕಾಲ : ಕ್ರಿ.ಪೂ ಮತ್ತು ಕ್ರಿ.ಶ.ಆರಂಭದಲ್ಲಿ ಭಾರತದಲ್ಲಿ ಬಹಳ ಪ್ರಬಲವಾಗಿದ್ದ ಬೌದ್ಧ ಧರ್ಮವು ಅಥವಾ ಆ ಧರ್ಮೀಯರ ಆಡಳಿತವು ಹಂಪಿಯನ್ನು ಒಳಗೊಂಡಿತ್ತೆಂದು ಶಾಸನ ಆಧಾರವಿದೆ. ಮಹಾನವಮಿ ದಿಬ್ಬದ ಮುಂದೆ ದೊರೆತ ಶಿಲ್ಪಪಟ್ಟಿಕೆಯಲ್ಲಿರುವ ಶಾಸನವು "ತರಸ ಪುತನ.... ದಾನಂ"[೩೦] ಎಂದು ದಾಖಲಿಸುತ್ತದೆ. ಕ್ರಿ.ಶ.೧-೨ನೇ ಶತಮಾನಕ್ಕೆ ಸೇರಿದ ಈ ಶಾಸನವು ಬ್ರಾಹ್ಮಿ ಲಿಪಿ, ಪ್ರಾಕೃತ ಭಾಷೆಯಲ್ಲಿ ರಚಿತವಾಗಿದ್ದು ತರಸಪುತ್ರನ ದಾನವನ್ನು ಉಲ್ಲೇಖಿಸುತ್ತದೆ. ಅಲ್ಲದೆ ಈ ಪ್ರದೇಶದಲ್ಲಿ ಬುದ್ಧನ ಜೀವನದ ಮುಖ್ಯ ಘಟನೆಗಳನ್ನು ಚಿತ್ರಿಸಿರುವ ಶಿಲ್ಪ ಕಲಾಕೃತಿಗಳು, ಮತ್ತಿತರ ಸಮಕಾಲೀನ ವಾಸ್ತುಶಿಲ್ಪ ಅವಶೇಷಗಳು ದೊರೆತಿವೆ. ಇವು ತಿಳಿ ಹಸಿರು ಬಣ್ಣದ ಕಲ್ಲಿನಿಂದ ನಿರ್ಮಿತವಾದವುಗಳಾಗಿವೆ.[೩೧] ಕ್ರಿ.ಶ.೧-೨ನೇ ಶತಮಾನದಲ್ಲಿ ಹಂಪಿ ಬೌದ್ಧರ ನೆಲೆಯಾಗಿತ್ತೆಂದೂ, ಇದು ಅಶೋಕ ಸಾಮ್ರಾಟನ ಆಳ್ವಿಕೆಗೆ ಒಳಪಟ್ಟಿತ್ತೆಂದು ಗ್ರಹಿಸಬಹುದಾಗಿದೆ. ಏಕೆಂದರೆ ಈ ಕಾಲದ ಅಶೋಕನ ಶಾಸನಗಳು ಕೊಪ್ಪಳ, ಮಸ್ಕಿ, ಸಿದ್ದಾಪುರ, ಉದೇಗೋಳಂ ಮುಂತಾದ ಕಡೆ ದೊರೆತಿರುವುದೇ ಸಾಕ್ಷಿ.

೨. ಬನವಾಸಿ ಕದಂಬರು : ಬನವಾಸಿ ಕದಂಬರು ಹಂಪಿಯನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರ ಬಗ್ಗೆ ಹಂಪಿಯಲ್ಲಿ ಯಾವ ಶಾಸನಗಳೂ ದೊರೆಯುವುದಿಲ್ಲ. ಆದರೆ ಅವರ ವಾಸ್ತುಶೈಲಿ ಹೊಂದಿದ ಸ್ಮಾರಕಗಳು ಹಂಪಿಯಲ್ಲಿ ಸಿಗುತ್ತವೆ. ಹಂಪಿಯ ಹೇಮಕೂಟ ಬೆಟ್ಟದ ಮೇಲೆ ಇರುವ ದೇವಾಲಯಗಳು

ಮುಖ್ಯ ವೈಶಿಷ್ಟ್ಯಗಳೆಂದರೆ ಅವುಗಳನ್ನು ಸಂಪೂರ್ಣವಾಗಿ ಶಿಖರವೂ ಸೇರಿದಂತೆ ಕಲ್ಲುಗಳಿಂದಲೇ ನಿರ್ಮಿಸಿರುವುದು ಮಧ್ಯದ ರಂಗಮಂಟಪಕ್ಕೆ ಹೊಂದಿಕೊಂಡಿರುವಂತೆ ಒಂದು, ಎರಡು ಅಥವಾ ಮೂರು ಗರ್ಭಗೃಹಗಳಿಂದ ಕೂಡಿರುವುದು. ಶಿಖರವು ಕದಂಬ-ನಾಗರ ಶೈಲಿಯಲ್ಲಿ ಪಿರಮಿಡ್ ಆಕಾರದಲ್ಲಿ ಮೆಟ್ಟಿಲುಗಳ ಸರಣಿಯನ್ನು ಹೋಲುವಂತಿರುವುದು. ತುದಿಯಲ್ಲಿ ಕಾಣಬರುವ ಶಿಖರವು ಸಾಮಾನ್ಯವಾಗಿ ಚತುರಾಕಾರದಲ್ಲಿರುವುದು. ಮುಖ್ಯದ್ವಾರಕ್ಕೆ ಹೊಂದಿಕೊಂಡಂತೆ ಒಂದು ಚಿಕ್ಕ ದ್ವಾರಮಂಟಪ ಅಥವಾ ಮುಖ ಮಂಟಪವಿರುವುದು ಇವೇ ಮುಂತಾದ"[೩೨] ವಾಸ್ತುಶೈಲಿ ಹಿನ್ನಲೆಯಲ್ಲಿ ಇವು ಕದಂಬರ ಕಾಲದವುಗಳು ಎಂದು ಹೇಳಬಹುದು ಇದರಿಂದ ಹಂಪಿ ಕದಂಬರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದಾಗಿದೆ.

**೩. ಬಾದಾಮಿ ಚಾಲುಕ್ಯರು :** ಬಾದಾಮಿ ಚಾಲುಕ್ಯರು ಈ ಪ್ರದೇಶವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿ ಕೊಂಡಿದ್ದರ ಬಗ್ಗೆ ಹಂಪಿಯಲ್ಲಿ ಯಾವುದೇ ಆಧಾರಗಳು ದೊರೆಯುವುದಿಲ್ಲ. ಆದರೆ ಪಂಪಾತೀರ್ಥವನ್ನು ಉಲ್ಲೇಖಿಸುವ  ಮೊದಲ ಶಾಸನವು(ಕ್ರಿ.ಶ.೬೮೧) ಚಾಲುಕ್ಯ ಒಂದನೇ ವಿಕ್ರಮಾದಿತ್ಯನ ಕಾಲವೆಂಬುದು. ಗಮನಾರ್ಹ ಅಂಶವಾಗಿವೆ. ಚಾಲುಕ್ಯರ ಈ ಶಾಸನದಲ್ಲಿದೆ ಕೆಲವು ವಾಸ್ತು ಕುರುಹುಗಳು ಹಂಪಿ ಹೇಮಕೂಟ ಬೆಟ್ಟದಲ್ಲಿವೆ. ಮರಳುಗಲ್ಲಿನಲ್ಲಿ ಕಟ್ಟಿರುವ ದೇವಾಲಯದ ಸಮುಚ್ಚಯ ಭಾಗವೊಂದು ಈಗಿನ ವಿರೂಪಾಕ್ಷ ದೇವಾಲಯ ಸಮುಚ್ಚಯ ಮೇಲ್ಭಾಗದಲ್ಲಿದೆ.[೩೩] ಹೀಗಾಗಿ ಕ್ರಿ.ಶ.೮ನೆಯ ಶತಮಾನದವರಿಗೆ ಬಾದಾಮಿ ಚಾಲುಕ್ಯರ ಚಟುವಟಿಕೆಗಳನ್ನು ಇಲ್ಲಿ ಕಾಣಬಹುದು.

**೪. ರಾಷ್ಟ್ರಕೂಟರು :** ರಾಷ್ಟ್ರಕೂಟರ ಕಾಲದ ವಾಸ್ತುರಚನೆಗಳು ಈಗ ಹಂಪಿಯಲ್ಲಿ ಇಲ್ಲದಿದ್ದರೂ ಚಕ್ರತೀರ್ಥದ ಬಳಿ, ವಿರೂಪಾಕ್ಷ ದೇವಾಲಯ ಆವರಣ ಹಾಗೂ ಮನ್ಮುಖ ತೀರ್ಥದ ಬಳಿ ಕೆಲವು ರಚನೆಗಳಿವೆ. ಆದರೆ ಇವರ ಆಡಳಿತ ಕುರಿತು ಹಂಪಿಯಲ್ಲಿ ಶಾಸನಗಳು ದೊರೆಯುವುದಿಲ್ಲ.

**೫. ಕಲ್ಯಾಣ ಚಾಲುಕ್ಯರು ಮತ್ತು ನೊಳಂಬರು :** ಕಲ್ಯಾಣದ ಚಾಲುಕ್ಯರು ಮತ್ತು ಅವರ ಸಾಮಂತರಾಗಿದ್ದ ನೊಳಂಬರ ಶಾಸನಗಳಾವುವೂ ಹಂಪಿಯಲ್ಲಿ ದೊರೆಯದಿದ್ದರೂ, ಹಂಪಿ ಇವರ ಆಳ್ವಿಕೆಗೆ ಒಳಪಟ್ಟಿತ್ತೆಂದು ಈ ಪ್ರದೇಶಕ್ಕೆ ಹೊಂದಿಕೊಂಡ ಕೆಲವು ಶಾಸನಗಳಿಂದ ದೃಢಪಡುತ್ತದೆ. ಗೊನಹಾಳಿನ ತ್ರುಟಿತ ಶಾಸನದಲ್ಲಿ ಚಾಳುಕ್ಯರ ಮಹಾ ಮಂಡಲೇಶ್ವರನಾಗಿದ್ದ ನೊಳಂಬಾಧಿ ರಾಜನು ಪಂಪಾ(ತೀರ್ಥದ) ಮಹಾಬಲೇಶ್ವರ ದೇವರಿಗೆ ದಾನಕೊಟ್ಟ ಉಲ್ಲೇಖವಿದೆ. ಕ್ರಿ.ಶ.೧೦೧೮ರ ಚಾಳುಕ್ಯ ಜಯಸಿಂಹನ ಕಾಲದ ಬಾಗಳಿ ಶಾಸನದಲ್ಲಿ ನೊಳಂಬ ಉದಯಾದಿತ್ಯ ಪಂಪಾತೀರದ ತೀರ್ಥಕ್ಕೆ ಬಿಜಯಂಗೆಯ್ದು, ಬಾಗಳಿ ಕಲ್ಲೇಶ್ವರ ದೇವರಿಗೆ ದಾನ ನೀಡಿದ ವಿವರವಿದೆ. ಕ್ರಿ.ಶ.೧೦೫೩ರ ಒಂದನೇ ಸೋಮೇಶ್ವರನ ಪುರದ ಶಾಸನದಲ್ಲಿ 'ಪಂಪೆಯ ತೀರ್ಥದಲು' ಎಂದು ಉಲ್ಲೇಖಿಸಿದ್ದು ಪಂಪಾತೀರ್ಥವು ದೂರದವರೆಗೆ ಪ್ರಖ್ಯಾತಿ ಪಡೆದಿತ್ತೆಂದು ಇದರಿಂದ ತಿಳಿದುಬರುತ್ತದೆ. ಈ ಎಲ್ಲಾ ಶಾಸನಗಳ ಪ್ರಕಾರ ಈ ಪ್ರದೇಶವು

ನೊಳಂಬವಾಡಿ ೩೨೦೦೦ ಪ್ರಾಂತ್ಯಕ್ಕೆ ಸೇರಿತ್ತು. ಅದರ ರಾಜಧಾನಿ ಕಂಪಿಲೆಗೆ ಸಮೀಪದಲ್ಲಿತ್ತು.[೬೪] ಈ ಹಿನ್ನಲೆಯಲ್ಲಿ ಹಂಪಿ ಕಲ್ಯಾಣದ ಚಾಳುಕ್ಯರು ಮತ್ತು ನೊಳಂಬರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದಾಗಿದೆ.

**೬. ಕುರುಗೋಡು ಸಿಂಧರು :** ಹಂಪಿಗೆ ಸಮೀಪವೇ ಇರುವ ಕುರುಗೋಡು ಸಿಂಧರು ಹಂಪಿಯ ಮೇಲೆ ಹಿಡಿತ ಹೊಂದಿದ್ದರೆಂದು ಕ್ರಿ.ಶ.೧೧೪೯ರ ಕಲಿದೇವನ ಹಂಪಿಯ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನವು ವಿರೂಪಾಕ್ಷ ದೇವಾಲಯದ ಆವರಣದ ಉತ್ತರಕ್ಕಿರುವ ದುರ್ಗಾ ದೇವಾಲಯದಲ್ಲಿದೆ. ಇದರಲ್ಲಿ ವಿರೂಪಾಕ್ಷ ತೀರ್ಥವನ್ನು ರಕ್ಷಿಸಲು ಅರಸ ಮತಂಗ ಪರ್ವತದ ಬಳಿಯ ಬೀಡಿನಲ್ಲಿ ಸೈನ್ಯವನ್ನು ನೆಲೆಗೊಳಿಸಿದ್ದ ವಿವರಗಳು ದೊರೆಯುತ್ತವೆ. ಈ ರಕ್ಷೆಯ ಜವಾಬ್ದಾರಿಯನ್ನು ಸಾಮಂತ ಮಾದೆಯ ನಾಯಕವಹಿಸಿದ್ದ. ಇವರ ಕೈಕೆಳಗಿದ್ದ ಮೈದುನ ಚೌಡಯ್ಯನೆಂಬುವವನು ವಿರೂಪಾಕ್ಷ ಮತ್ತು ಹಂಪಾದೇವಿಗೆ ದಾನ ನೀಡಿದ ವಿವರ ದೊರೆಯುತ್ತದೆ.[೬೫] ಈ ಶಾಸನದ ಇಮ್ಮಡಿ ರಾಚಮಲ್ಲನ ಮಗ ಕಲಿದೇವನ ಕಾಲದ್ದಾಗಿದೆ.

**೭. ಹೊಯ್ಸಳರು :** ವಿರೂಪಾಕ್ಷ ದೇವಾಲಯದ ಕನಕಗಿರಿ ಗೋಪುರದಲ್ಲಿ ಪಶ್ಚಿಮಕ್ಕಿರುವ ಇಮ್ಮಡಿ ಸೋಮೇಶ್ವರನ ಕ್ರಿ.ಶ.೧೨೩೬ರ ಶಾಸನವು ಸೋಮೇಶ್ವರನು ಹೇಮಕೂಟದಲ್ಲಿರುವ ವಿರೂಪಾಕ್ಷನ ಪೂಜೆ ಸೇವೆಗಾಗಿ ಚಿಕ್ಕಗರಜೆ ಗ್ರಾಮ ಮತ್ತು ಅನೇಕ ದತ್ತಿಗಳನ್ನು ನೀಡಿರುವ ವಿಷಯ ತಿಳಿದುಬರುತ್ತದೆ.[೬೬] ಕೇವಲ ಇದೊಂದೇ ಶಾಸನ ಮಾತ್ರ ಹಂಪಿಯಲ್ಲಿ ದೊರೆಯುವುದು. ದೋರ ಸಮುದ್ರವು ಮುಸ್ಲೀಮರ ದಾಳಿಯಿಂದ ನಾಶವಾದ ಮೇಲೆ ೩ನೇ ಬಲ್ಲಾಳನು ಹಂಪಿಯನ್ನು ವಿರೂಪಾಕ್ಷ ಹೊಸದುರ್ಗವೆಂದು ಕರೆದು, ಕ್ರಿ.ಶ.೧೩೩೧ರಲ್ಲಿ ಹಂಪಿಯಿಂದ ಆಳುತ್ತಿದ್ದನೆಂದು ಗುಬ್ಬಿಶಾಸನದಿಂದ ತಿಳಿದುಬರುತ್ತದೆ.[೬೭] ಇದರಿಂದ ಹೊಯ್ಸಳರ ಕೊನೆಯ ರಾಜಧಾನಿ ಹಂಪಿಯಾಗಿತ್ತೆಂದು ತಿಳಿದುಬರುತ್ತದೆ.

**೮. ಕುಮ್ಮಟ ದುರ್ಗದ ಅರಸರು :** ಕುಮ್ಮಟದುರ್ಗದ ಅರಸರ ರಾಜಧಾನಿ ಹಂಪಿ ಪಕ್ಕದ ಕಂಪಿಲೆಯಾಗಿರುತ್ತದೆ. ಇದರ ಪ್ರಸಿದ್ಧ ಅರಸ ಕಂಪಿಲ(ಕುಮಾರರಾಮನ ತಂದೆ). ಈತನ ಒಂದು ಶಾಸನವು ಹಂಪಿಯಲ್ಲಿ ದೊರೆತಿದ್ದು, ಹೇಮಕೂಟದ ಉತ್ತರಕ್ಕಿರುವ ದೇವಾಲಯದ ಕಂಬದ ಮೇಲೆ ಬರೆಯಲಾಗಿದೆ. ಇದು ವೀರಕಂಪಿಲನು ತಮ್ಮ ತಾಯಿ ಮಾರನಾಕಿತಿ. ತಂದೆ ಸಿಂಗೆಯ ನಾಯಕ ಮತ್ತು ಪೆರುಡಿನಾಯಕನ ಹೆಸರಿನಲ್ಲಿ ಮೂರು ಶಿವಲಿಂಗಗಳನ್ನು ಪ್ರತಿಷ್ಠಾಪಿಸಿ ಶಿವಾಲಯ ಕಟ್ಟಿಸಿದ್ದನ್ನು ಉಲ್ಲೇಖಿಸುತ್ತದೆ.[೬೮] ಇದರಿಂದ ಹಂಪಿ ಕುಮ್ಮಟದುರ್ಗದ ಅರಸರ ಆಳ್ವಿಕೆಗೆ ಒಳಪಟ್ಟಿತ್ತೆಂದು ಗ್ರಹಿಸಬಹುದು.

**೩. ವಿಜಯನಗರ ಕಾಲದ ಹಂಪಿ**

ಹಿಂದೂ ಧರ್ಮದ ರಕ್ಷಣೆಗಾಗಿಯೇ ಕ್ರಿ.ಶ.೧೩೩೬ರಲ್ಲಿ ಹಂಪಿಯಲ್ಲಿ ಸ್ಥಾಪಿತವಾದದ್ದು ವಿಜಯನಗರ. ಆರಂಭದ ಕೆಲವು ಶಾಸನಗಳಲ್ಲಿ ವಿಜಯನಗರದ ಅರಸರು ಹಸ್ತಿನಾವತಿಯ ನೆಲೆವೀಡಿ

ನಲ್ಲಿದ್ದಂತೆ ಹೇಳಿಕೊಂಡಿದ್ದರೂ ಕ್ರಿ.ಶ.೧೩೭೫ರ ಹಂಪಿ ಶಾಸನವು "ವಿಜಯ" ಎಂಬ ಹೆಸರಿನ ಪಟ್ಟಣದಲ್ಲಿ ೧ನೆಯ ಹರಿಹರ ಮತ್ತು ಬುಕ್ಕನು ಆಳುತ್ತಿದ್ದಂತೆಯೂ ಅದು ಇಂದ್ರನ ಅಮರಾವತಿಯಂತೆ ಇತ್ತೆಂದೂ ವರ್ಣಿತವಾಗಿದೆ.[೯] ಅಂದರೆ ಹರಿಹರ ಮತ್ತು ಬುಕ್ಕರಾಯನ ರಾಜಧಾನಿಯು ಪಂಪಾಕ್ಷೇತ್ರದ ಬಳಿಯಿದ್ದ ವಿಜಯ ಎಂಬ ಪಟ್ಟಣವೆಂದಾಯಿತು. ಇದು ಹೊಸದಾಗಿ ನಿರ್ಮಿತವಾದಂತಹ ಪಟ್ಟಣವಾದ್ದರಿಂದ ಆರಂಭದ ಶಾಸನಗಳು ಹೊಸಪಟ್ಟಣವೆಂದು ಕರೆದಿರುವುದರಲ್ಲಿ ಔಚಿತ್ಯವಿದೆ. ಈ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಮೂಲ ಪ್ರೇರಣೆ ಕರ್ತರು ವಿದ್ಯಾರಣ್ಯರೋ ಅಥವಾ ಕ್ರಿಯಾಶಕ್ತಿ ಗುರುಗಳೋ ಎಂಬುದರ ಬಗ್ಗೆ ಅನೇಕ ವಾದ ವಿವಾದಗಳಿವೆ. ಆದರೆ ಹಂಪಿಗೆ ಸಮೀಪದ ಕುಕನೂರಿನ ಕ್ರಿ.ಶ.೧೩೯೭ರ ಶಾಸನದಲ್ಲಿ "ಶ್ರೀಮದ್ರಾಜಗುರು ಮಹಿಮಂಡಲಾಚಾರ್ಯ ಶ್ರೀಮದ್ವಾಣೀವಿಲಾಸ ಶ್ರೀಕ್ರಿಯಾಶಕ್ತಿ ಗುರು"[೧೦] ಎಂದು ಕರೆದಿದೆ. ಇದರ ಆಧಾರದ ಮೇಲೆ ಹೇಳುವುದಾದರೆ ಕ್ರಿಯಾಶಕ್ತಿ ಗುರುವೇ ವಿಜಯನಗರದ ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಣಾ ಕರ್ತರೆಂದು ಹೇಳಬಹುದು. ಇವರನ್ನು ಕುರಿತು ಹಂಪಿಯಲ್ಲಿ ೨ ಶಾಸನಗಳು ದೊರಕಿವೆ.

೧. **ಸಂಗಮ ವಂಶದ ಅರಸರು :** ವಿಜಯನಗರ ರಾಜ್ಯ ಸ್ಥಾಪಕರಾದ ಹಕ್ಕ-ಬುಕ್ಕರು ಸಂಗಮ ವಂಶದವರಾಗಿದ್ದಾರೆ. ಇವರ ಜಾತಿ ಮತ್ತು ಮೂಲದ ಬಗ್ಗೆ ಚರ್ಚೆ ನಡೆಯುತ್ತಲೇ ಇದೆ. ಹಂಪಿಯ ಕ್ರಿ.ಶ.೧೩೭೯ರ ಕನಕಗಿರಿ ಗೋಪುರದಲ್ಲಿ ಪೂರ್ವಕ್ಕಿರುವ ಶಾಸನ, ಕ್ರಿ.ಶ.೧೪೧೧ರ ಕಡಲೆಕಾಳು ಗಣೇಶನ ಗುಡಿಯ ಮುಂಭಾಗದ ಮಂಟಪದಲ್ಲಿ ನಿಲ್ಲಿಸಿರುವ ಶಾಸನ ಹಾಗೂ ಕ್ರಿ.ಶ.೧೪೨೬ರ ಆನೆಸಾಲಿಯ ಹಿಂದೆ ಇರುವ ಜೈನ ಬಸದಿಯ ಗೋಡೆಯಲ್ಲಿರುವ ಶಾಸನ ಸಂಗಮರು ಯದುವಂಶದವರೆಂದು ದಾಖಲಿಸುತ್ತವೆ. ಸಂಗಮವಂಶದ ಮೊದಲ ದೊರೆ ಸಂಗಮನೇ. ಇವರ ಹೆಸರಿನಿಂದಲೇ ಈ ವಂಶಕ್ಕೆ ಈ ಹೆಸರು ಬಂದಿದೆ. ಚಾಮರಾಜನಗರ ತಾಲೂಕಿನ ಹೊಮ್ಮ ಶಾಸನದ ಪ್ರಕಾರ ಇವನ ತಂದೆ ಹೆಸರು ಬುಕ್ಕಭೂಪಾಲ ಸಂಗಮನಿಗೆ ಕಾಮಾಯಿಯೆಂಬ ಹೆಂಡತಿಯಲ್ಲಿ ಐದು ಜನ ಮಕ್ಕಳು ಉದಿಸಿದರು. ಹರಿಹರ, ಕಂಪಣ, ಬುಕ್ಕ, ಮುದ್ದಪ ಮತ್ತು ಮಾರಪ ಎಂಬುವವರು. ವಿಜಯನಗರದಲ್ಲಿ ರಾಜ್ಯಭಾರ ಆರಂಭಿಸುವುದಕ್ಕೆ ಮೊದಲು ಇವರು ಯಾವ ಪ್ರದೇಶದಲ್ಲಿ ಆಳುತ್ತಿದ್ದರೆಂಬುದನ್ನು ಯಾವ ಶಾಸನದಲ್ಲಿಯೂ ತಿಳಿಸಿಲ್ಲ.[೧೧] ಈ ಸಂಗಮ ಅರಸರ ಶಾಸನಗಳು ಹಂಪಿಯಲ್ಲಿ ಸು.೨೦ ದೊರೆಯುತ್ತವೆ.

**ಒಂದನೇ ಹರಿಹರ**

ಸಂಗಮನ ಹಿರಿಯಮಗ ಹೊಯ್ಸಳರ ಮಹಾಮಂಡಳೇಶ್ವರನಾಗಿದ್ದು, ಮುಸಲ್ಮಾನರು ಕರ್ನಾಟಕಕ್ಕೆ ಧಾಳಿ ಮಾಡಿದ ಹಾಗೂ ಹೊಯ್ಸಳ ರಾಜ್ಯದ ಶಿಥಿಲ ಕಾಲದಲ್ಲಿ ತನ್ನ ತಮ್ಮಂದಿರ ಸಹಕಾರದಿಂದ ಪ್ರಭಾವಶಾಲಿಯಾಗುತ್ತಾನೆ. ಹೊಯ್ಸಳ ರಾಜ್ಯದ ಉತ್ತರ ಭಾಗದಲ್ಲಿ ಆನೆಗೊಂದಿ, ಹಂಪಿಯನ್ನು

ಕೇಂದ್ರವಾಗಿರಿಸಿಕೊಂಡು ಆಡಳಿತ ನಡೆಸುತ್ತಾನೆ. ಹಂಪಿಯಲ್ಲಿ ಇವನು ಹಾಕಿಸಿದ ಶಾಸನ ಇದುವರೆಗೆ ದೊರೆತಿಲ್ಲ.[೪೨] ಇವನು ಕ್ರಿ.ಶ.೧೩೩೬ ರಿಂದ ಕ್ರಿ.ಶ.೧೩೫೭ರವರೆಗೆ ಆಳ್ವಿಕೆ ಮಾಡುತ್ತಾನೆ.

**ಒಂದನೇ ಬುಕ್ಕರಾಯ**

೧ನೇ ಹರಿಹರನ ನಂತರ ಇವನ ತಮ್ಮ ೧ನೇ ಬುಕ್ಕ ಅಧಿಕಾರಕ್ಕೆ. ಇವನು ಪಟ್ಟಕ್ಕೆ ಬರುವ ವೇಳೆಗೆ ಇವನ ಮತ್ತೊಬ್ಬ ಅಣ್ಣ ಕಂಪಣ ಹತನಾಗಿದ್ದ. ಹರಿಹರನೊಂದಿಗೆ ಸೇರಿ ಇವನು ರಾಜ್ಯಭಾರ ಮಾಡುತ್ತಿದ್ದ. ಹಂಪಿಯಲ್ಲಿ ಈತನ ಕಾಲದ ೩ ಶಾಸನಗಳು ದೊರೆಯುತ್ತವೆ.

ಪ್ರಸನ್ನ ವಿರೂಪಾಕ್ಷ ದೇವಾಲಯದ ನೈರುತ್ಯಕ್ಕೆ ನಾಗೇಶಪ್ಪನವರ ಹೊಲದಲ್ಲಿರುವ ದೇವಾಲಯಕ್ಕೆ ಸಮೀಪದಲ್ಲಿರುವ ಕ್ರಿ.ಶ.೧೩೬೬ರ ಬುಕ್ಕರಾಯನ ಶಾಸನವು "ವೀರಬುಕ್ಕಣ್ಣ ಒಡೆಯನು ಹಸ್ತಿನಾವತಿ (ಆನೆಗೊಂದಿ)ಯಿಂದ ಆಳುತ್ತಿದ್ದಂತೆ ತಿಳಿಸುತ್ತದೆ. ಇವನ ಮಹಾ·ಪ್ರಧಾನ ಬಸವೆದಣ್ಣಾಯಕನ ಉಲ್ಲೇಖ ಮಾಡಿದೆ.[೪೩] ಕನಕಗಿರಿ ಗೋಪುರದ ಕೆಳಗೆ ಇರುವ ಕ್ರಿ.ಶ.೧೩೭೯ರ ಶಾಸನವು "ಹರಿಹರರಾಯನಿಗೆ ರಾಜ್ಯಭಾರದಲ್ಲಿ ಸಲಹೆ ನೀಡುವವನು, ದಶರಥನಿಗೆ ಸುಮಂತ್ರನಂತೆ, ಹರಿಹರನಿಗೆ ಬುಕ್ಕನಿದ್ದ ಎಂಬಂತೆ ಹೊಗಳಿದೆ. ಹರಿಹರ ಮತ್ತು ಬುಕ್ಕರು ತುಂಗಭದ್ರಾ ನದಿಗೆ ಸೇತುವೆಗಳನ್ನು ಕಟ್ಟಿ, ಕಾಲುವೆಗಳನ್ನು ತೋಡಿಸಿದಂತೆ ಹೇಳಿದೆ. ಜೊತೆಗೆ ಸಂಗಮ ವಂಶದ ವಂಶಾವಳಿ ನೀಡಿದೆ.[೪೪] ಹಾಗೆಯೇ ಮತ್ತೊಂದು ಶಾಸನವು "ವೀರಬುಕ್ಕರಾಯನ ವಿಜಯನಗರ ಪಟ್ಟಣದ ಸೋಮಯ ದೇವರ ಕೊತ್ತಳವನ್ನು ಉಲ್ಲೇಖಿಸುತ್ತದೆ.[೪೫] ೧ನೇ ಬುಕ್ಕರಾಯ ಕ್ರಿ.ಶ.೧೩೫೭ ರಿಂದ ಕ್ರಿ.ಶ.೧೩೭೯ರವರೆಗೆ ಆಡಳಿತ ನಡೆಸಿರುವನು.

**ಇಮ್ಮಡಿ ಹರಿಹರ**

ಬುಕ್ಕನ ತಮ್ಮಂದಿರಾದ ಮಾರಪ್ಪ ಮತ್ತು ಮುದ್ದಪ್ಪ ಇವರುಗಳು ವಿಜಯನಗರ ಸಿಂಹಾಸನದಿಂದ ರಾಜ್ಯಭಾರ ಮಾಡಲಿಲ್ಲ. ಬಹುಶಃ ಬುಕ್ಕನ ಮರಣಾನಂತರ ಮುದ್ದಪನು ಹಂಪೆಗೆ ಬಂದು ವಿರೂಪಾಕ್ಷ ದೇವರಿಗೆ ದಾನ ನೀಡಿದ ಉಲ್ಲೇಖವಿದೆ.[೪೬] ಬುಕ್ಕನ ನಂತರ ಆತನ ಮಗ ೨ನೇ ಹರಿಹರ ಅಥವಾ ವೀರಹರಿಹರ ಅಧಿಕಾರಕ್ಕೆ ಬರುತ್ತಾನೆ. ಈತನ ಕಾಲದ ಶಾಸನಗಳು ಹಂಪಿಯಲ್ಲಿ ೭ಕ್ಕೂ ಹೆಚ್ಚು ದೊರೆಯುತ್ತವೆ. ಕ್ರಿ.ಶ.೧೩೭೯ರಲ್ಲಿ ಹೊರಡಿಸಿದ ನದಿ ದಂಡೆಯ ಬಳಿಯ ನರಸಿಂಹದೇವಾಲಯದ ಪೂರ್ವಕ್ಕಿರುವ ಬಂಡೆಯ ಮೇಲಿರುವ ಶಾಸನ ನಲಾನು ಚಕ್ರವರ್ತಿ ನರಸಿಂಹ ದೇವಾಲಯ ಕಟ್ಟಿಸಿದಾಗ ಹರಿಹರನ ಸಂಗಡ ಚಿಕ್ಕ ಒಡೆಯ, ಸಾಯಣ ಅಯ್ಯ, ಅಕ್ಷುದನಾಥ ಒಡೆಯರು ಎಂಬ ದಣ್ಣಾಯಕರು ಇದ್ದರೆಂದು ತಿಳಿಸುತ್ತದೆ.[೪೭] ಶಾಸನ ದಾಖಲಿಸುವ ಚಿಕ್ಕ ಒಡೆಯ ಹರಿಹರನ ತಮ್ಮನಾಗಿರುವ ಸಾಧ್ಯತೆ ಇದೆ. ಬೇಟೆಗಾರರ ಹೆಬ್ಬಾಗಿಲಿನ ಬಳಿ ಇರುವ ಕ್ರಿ.ಶ.೧೩೮೦ರ ಶಾಸನವು ಹರಿಹರನ ಆಳ್ವಿಕೆಯ ಕಾಲದಲ್ಲಿ ಒರತೆಯ ಮೈಲಾರ ಪ್ರತಿಷ್ಠಾಪಿಸಿದ್ದನ್ನು ತಿಳಿಸುತ್ತದೆ.[೪೮]

ಈಗಿನ ಗಾಯತ್ರಿ ಪೀಠದ ದಕ್ಷಿಣಕ್ಕಿರುವ ದಾರಿಯ ಪಕ್ಕದಲ್ಲಿರುವ ಗುಂಡಿನ ಮೇಲೆ ಇರುವ ಕ್ರಿ.ಶ.೧೩೯೦ರ ಶಾಸನವು ಇಮ್ಮಡಿ ಹರಿಹರನನ್ನು ಉಲ್ಲೇಖಿಸದೆ ಕ್ರಿಯಾ ಒಡೆಯನನ್ನು ಉಲ್ಲೇಖಿಸುತ್ತದೆ.[೪೯] ನದಿ ದಂಡೆಯ ಹತ್ತಿರ ದೇವಾಲಯ ಬಳಿ ಇರುವ ಕ್ರಿ.ಶ.೧೩೮೬ರ ಶಾಸನವು "ಬುಕ್ಕರಾಯನ ಮಗ ವೀರಹರಿಹರನ ಆಳ್ವಿಕೆಯಲ್ಲಿ ಸಂನಂಜೆನಾಥನ ಶಿವಾಲಯ ಕಟ್ಟಿಸಿದ್ದನ್ನು ದಾಖಲಿಸುತ್ತದೆ."[೫೦] ಇದೇ ಕಾಲಕ್ಕೆ ಸೇರಿದ ಗಾಣಗಿತ್ತಿ ಬಸದಿಯ ಶಾಸನವು ಕುಂಥು ಜಿನಾಲಯವನ್ನು ಶಿಲೆಯಲ್ಲಿ ನಿರ್ಮಿಸಿದ್ದರ ಬಗ್ಗೆ ಮತ್ತು ಜೈನ ಮುನಿಗಳ ಪಟ್ಟಾವಳಿಯನ್ನು ದಾಖಲಿಸುತ್ತದೆ.[೫೧]

ಹಾಗೆಯೇ ಹೇಮಕೂಟದ ವಿರೂಪಾಕ್ಷ ದೇವಾಲಯದ ಹಿಂದೆ ಬಂಡೆಯ ಮೇಲೆ ಇರುವ ಕ್ರಿ.ಶ.೧೩೯೭ಕ್ಕೆ ಸೇರಿದ ಹರಿಹರನ ಶಾಸನವು ವೀರಹರಿಹರನ ಪತ್ನಿಬುಕ್ಕನೆ ಎಂದಿದ್ದು, ಈಕೆ ಭಾಸ್ಕರ ದೇವಯ್ಯನ ಶಿಷ್ಯಳೆಂದಿದೆ.[೫೨] ಕಾಲದ ಉಲ್ಲೇಖವಿಲ್ಲದ ಮತಂಗ ಪರ್ವದ ಶಾಸನವು" ಮತಂಗ ಪರ್ವತ ಮತ್ತ ವೀರಹರಿಹರನನ್ನು ಹೆಸರಿಸುತ್ತದೆ."[೫೩] ಇದರಂತೆ ಹಜಾರ ರಾಮ ದೇವಾಲಯದ ಹಿಂಬದಿಯ ಪಾಳು ನಿವೇಶನದಲ್ಲಿರುವ ವಿಗ್ರಹ ಪೀಠದಲ್ಲಿರುವ ಶಾಸನವು "ವೀರ ಹರಿಹರ ರಾಯನ ಮನೆಯ ಹೆಗ್ಗಡತಿ ಚೌಡಾಯಿಯನ್ನೂ,[೫೪] ಮತ್ತೊಂದು ಶಾಸನ "ಹರಿಹರ ರಾಯ ಶಿವರಾತ್ರಿ ವೀರಪ್ಪಯ್ಯನಿಗೆ ಭೂಮಿ ದಾನ ಬಿಟ್ಟದ್ದನ್ನು ತಿಳಿಸುತ್ತದೆ."[೫೫] ಹೀಗೆ ಇಮ್ಮಡಿ ಹರಿಹರನ ಶಾಸನಗಳಿಂದ ಇಷ್ಟು ಅಂಶಗಳು ತಿಳಿದುಬರುತ್ತವೆ. ಈತ ಕ್ರಿ.ಶ.೧೩೭೮ ರಿಂದ ಕ್ರಿ.ಶ.೧೪೦೪ರವರೆಗೆ ಆಳ್ವಿಕೆ ನಡೆಸಿದ್ದನ್ನು ಕಾಣಬಹುದು.

**ಒಂದನೇ ದೇವರಾಯ**

ಇಮ್ಮಡಿ ಹರಿಹರನ ನಂತರ ಈತನ ಮಗ ೧ನೇ ದೇವರಾಯ ಅಧಿಕಾರಕ್ಕೆ ಬರುತ್ತಾನೆ. ಈತನ ಆಳ್ವಿಕೆಯ ೧ ಶಾಸನ ಮಾತ್ರ ಹಂಪಿಯಲ್ಲಿ ದೊರೆಯುತ್ತದೆ. ಕಡಲೆಕಾಳು ಗಣೇಶನ ಗುಡಿಯ ಮುಂಭಾಗದ ಮಂಟಪದಲ್ಲಿ ನಿಲ್ಲಿಸಿರುವ ಕ್ರಿ.ಶ.೧೪೧೦ರ ಶಾಸನವು "ಸಂಗಮನಿಂದ ಹಿಡಿದು ದೇವರಾಯನವರೆಗೆ ವಿಜಯನಗರವನ್ನಾಳಿದ ಅರಸರ ವಂಶಾವಳಿ ನೀಡಿದೆ. ಈ ಸಂಗಮ ಅರಸರ ಮೂಲವನ್ನು ಚಂದ್ರನಿಂದ ಆರಂಭಿಸಿ ಯಯಾತಿಯವರೆಗೆ ಹೇಳಿ ಯದುವಂಶದ ಸೋಮಾನ್ವಯದಲ್ಲಿ ಸಂಗಮನೆಂಬುವವನು ಉದಿಸಿದನೆಂದು ಹೇಳಿದೆ. ಅಲ್ಲದೆ ದೇವರಾಯನನ್ನು ಯಾದವ ವಂಶ ಪ್ರದೀಪನೆಂದು ಕರೆದಿದೆ. ಈ ದೇವರಾಯನ ಮಂತ್ರಿ ಲಕ್ಷ್ಮೀಧರ. ಇವನು ಮಾಲ್ಯವಂತ ಸಹಜ ಗುಹೆಯೊಂದರಲ್ಲಿ ಮಹಾಶಕ್ತಿ ಗಣಪತಿಯನ್ನು ಸ್ಥಾಪಿಸುತ್ತಾನೆ.[೫೬] ಈ ಶಾಸನ ಹೇಳುವ ಮಾಲ್ಯವಂತ ರಜತಗಿರಿ ಪರ್ವತವಾಗಿದೆ. ನಂತರ ಇದು ರಘುನಾಥ ಬೆಟ್ಟಕ್ಕೆ ಹೋಗಿದೆ ಎಂದು ಅರಿಯಬಹುದು. ಈತನು ಕ್ರಿ.ಶ.೧೪೦೪ ರಿಂದ ಕ್ರಿ.ಶ.೧೪೨೨ರವರೆಗೆ ಆಳ್ವಿಕೆ ಮಾಡಿದ್ದಾನೆ.

## ಇಮ್ಮಡಿ ದೇವರಾಯ ಅಥವಾ ಪ್ರೌಢದೇವರಾಯ

೧ನೇ ದೇವರಾಯನ ನಂತರ ಈತನ ಮಕ್ಕಳಾದ ರಾಮಚಂದ್ರ ಮತ್ತು ವಿಜಯಬುಕ್ಕರಾಯರು ಅಲ್ಪಕಾಲ ಆಡಳಿತ ನಡೆಸಿದರೂ ಅವರ ಯಾವ ಶಾಸನವೂ ಹಂಪಿಯಲ್ಲಿ ದೊರೆತಿಲ್ಲ. ೧ನೇ ದೇವರಾಯನ ಮೊಮ್ಮಗ ವಿಜಯ ಬುಕ್ಕರಾಯನ ಮಗ ಇಮ್ಮಡಿ ದೇವರಾಯ ಅಥವಾ ಪ್ರೌಢದೇವರಾಯ ಅಧಿಕಾರದ ಚುಕ್ಕಾಣಿ ಹಿಡಿಯುತ್ತಾನೆ. ಈತ ಕ್ರಿ.ಶ.೧೪೨೪ರಿಂದ ಕ್ರಿ.ಶ.೧೪೪೬ರವರೆಗೆ ಆಡಳಿತ ನಡೆಸುತ್ತಾನೆ. ಈತನ ಕಾಲದ ೩ ಶಾಸನಗಳು ಹಂಪಿಯಲ್ಲಿ ದೊರೆಯುತ್ತವೆ.

ಗಜಶಾಲೆ ಹಿಂದೆ ಇರುವ ಜೈನ ಬಸದಿಯ ಗೋಡೆಯಲ್ಲಿರುವ ಕ್ರಿ.ಶ.೧೪೨೬ರ ಶಾಸನವು "ದೇವರಾಯನು ವಿಜಯನಗರದಲ್ಲಿ ರಾಜ್ಯವಾಳುತ್ತಿದ್ದನೆಂದು ಹೇಳಿ, ವಿಜಯನಗರ ಅರಸರ ವಂಶಾವಳಿ ನೀಡಿದೆ. ಅದು ಯಾದವಾನ್ವಯದ ಬುಕ್ಕನಿಂದ ಆರಂಭಿಸಿ ವೀರದೇವರಾಯನ (ಪ್ರೌಢದೇವರಾಯ)ವರೆಗೆ ಆಳ್ವಿಕೆ ಮಾಡಿದ ಅರಸರ ವಿವರ ನೀಡುತ್ತದೆ. ಅಲ್ಲದೆ ಪಾರ್ಶ್ವಚೈತ್ಯಾಲಯವ ನಿರ್ಮಿಸಿದ್ದನ್ನು ದಾಖಲಿಸಿದೆ.[೫೭] ಹಾಗೆಯೇ ಕ್ರಿ.ಶ.೧೪೩೯ರ ಅಹಮ್ಮದ್ ಖಾನ್ ಧರ್ಮಶಾಲೆಯ ಮುಂಭಾಗದ ತೊಲೆಯ ಮೇಲಿನ ಶಾಸನವು "ದೇವರಾಯ ಮಹಾರಾಯನ ಕಟ್ಟಿಗೆ ಸೇವೆಯ ಅಹಮ್ಮದ್ ಖಾನನು ರಾಜನಿಗೆ ಧರ್ಮವಾಗಬೇಕೆಂದು ಧರ್ಮ ಶಾಲೆ ಮತ್ತು ಬಾವಿ ಕಟ್ಟಿಸಿದ್ದನ್ನು ದಾಖಲಿಸುತ್ತದೆ.[೫೮] ಹಾಗೆಯೇ ಕಾಲದ ಉಲ್ಲೇಖವಿಲ್ಲದ ಹಜಾರರಾಮ ದೇವಾಲಯದ ಪೂರ್ವಭಾಗದ ಅಧಿಷ್ಠಾನದಲ್ಲಿರುವ ಶಾಸನವು "ಕಾಳಿಕಾದೇವಿಯು ವಿಕ್ರಮಾರ್ಕನನ್ನು ಆಶೀರ್ವದಿಸಿದಂತೆ, ಪಂಪಾದೇವಿಯು ದೇವರಾಯನನ್ನು ಆಶೀರ್ವದಿಸಲಿ ಎಂದು ದಾಖಲಿಸಿದೆ.[೫೯] ಈ ಮೂರು ಶಾಸನಗಳನ್ನು ಹೊರತುಪಡಿಸಿದರೆ ಮತ್ತಾವ ಶಾಸನಗಳೂ (ಪ್ರೌಢದೇವರಾಯನವು) ಹಂಪಿಯಲ್ಲಿ ದೊರೆತಿಲ್ಲ.

ಪ್ರೌಢದೇವರಾಯ ನಂತರ ವಿಜಯನಗರ ಸಿಂಹಾಸನವೇರಿದ ಈತನ ಮಗ ಮಲ್ಲಿಕಾರ್ಜುನ (ಕ್ರಿ.ಶ.೧೪೪೯-ಕ್ರಿ.ಶ.೧೪೬೫) ವರೆಗೆ ಆಡಳಿತ ನಡೆಸಿದರೂ, ಇವನು ಕಾಲದ ಯಾವ ಶಾಸನಗಳೂ ಹಂಪಿಯಲ್ಲಿ ದೊರೆಯುವುದಿಲ್ಲ.

## ವಿರೂಪಾಕ್ಷರಾಯ

ಮಲ್ಲಿಕಾರ್ಜುನರಾಯನ ನಂತರ ವಿಜಯನಗರ ಸಿಂಹಾಸನವನ್ನೇರಿಸಿದ ವಿರೂಪಾಕ್ಷರಾಯ ಕ್ರಿ.ಶ.೧೪೬೫ ಕ್ರಿ.ಶ.೧೪೮೫ರವರೆಗೆ ಆಡಳಿತ ನಡೆಸುತ್ತಾನೆ. ಈತನ ಕಾಲದ ಒಂದು ಶಾಸನ ಮಾತ್ರ ಹಂಪಿಯಲ್ಲಿ ದೊರೆಯುತ್ತದೆ. ಹಂಪಿಯ ತುರ್ತಾ ಕಾಲುವೆ ಆಣೆಕಟ್ಟೆನಿಂದ ೬.೨.ಕಿ.ಮೀ ದೂರದಲ್ಲಿ ಕಾಲುವೆಯ ಬಲಗುಂಡಿನ ಮೇಲೆ ಇರುವ ಕಾಲದ ಉಲ್ಲೇಖವಿಲ್ಲದ ಶಾಸನವು "ವಿರೂಪಕ್ಷರಾಯನ

ಆಜ್ಞೆಯಂತೆ ಹೆಗ್ಗಡೆ ಹಿತ್ತಲಬಾಗಿಲ ಬಸವಂಣ ಅಣ್ಣನು ವೊದೆಗುಂಡನ್ನು ಒಡೆದು ನಾಲೆಯನ್ನು ಕಟ್ಟಿಸಿದನ್ನು ದಾಖಲಿಸುತ್ತದೆ.[೬೦] ಉಳಿದಂತೆ ಈತನ ಆಡಳಿತ ಕುರಿತು ಬೇರೆ ಶಾಸನಗಳು ಸಿಗುವುದಿಲ್ಲ.

**೨. ಸಾಳುವ ವಂಶದ ಅರಸರು :** ವಿಜಯನಗರವನ್ನಾಳಿದ ೨ನೇ ರಾಜಮನೆತನ ಸಾಳುವ ವಂಶ. ಸಾಳುವ ನರಸಿಂಹ, ಸಾಳುವ ತಿಮ್ಮ, ಸಾಳುವ ವೀರನರಸಿಂಹ - ಈ ವಂಶದ ಪ್ರಮುಖ ಅರಸರಾಗಿದ್ದಾರೆ. ಇವರ ಒಟ್ಟು ಆಳ್ವಿಕೆ ಕ್ರಿ.ಶ.೧೪೮೫ - ಕ್ರಿ.ಶ.೧೫೦೫ ರವರೆಗೆ ಅಂದರೆ ಕೇವಲ ೨೦ ವರ್ಷಗಳು ಮಾತ್ರ. ಇವರ ಆಡಳಿತ ಕುರಿತು ಯಾವ ಶಾಸನಗಳು ಹಂಪಿಯಲ್ಲಿ ದೊರೆಯುವುದಿಲ್ಲ.

**೩. ತುಳುವ ವಂಶದ ಅರಸರು :** ವಿಜಯನಗರವನ್ನಾಳಿದ ೩ನೇ ರಾಜವಂಶ ತುಳುವ ವಂಶವಾಗಿದೆ. ಈ ವಂಶದ ಮೂಲದ ಬಗ್ಗೆಯೂ ಚರ್ಚೆ ನಡೆಯುತ್ತಲೇ ಇದೆ. ಈ ರಾಜವಂಶದ ಮೊದಲ ದೊರೆ ತುಳುವ ನರಸನಾಯಕ. ತುಳುವ ವಂಶದ ಆಡಳಿತ ಕ್ರಿ.ಶ.೧೫೦೫ರಿಂದ ಕ್ರಿ.ಶ.೧೫೬೫ರವರೆಗೆ ಅಂದರೆ ಕೇವಲ ೬೦ ವರ್ಷಗಳು ಮಾತ್ರ. ಈ ವಂಶದ ಪ್ರಮುಖ ಅರಸರೆಂದರೆ ನರಸನಾಯಕ, ಕೃಷ್ಣದೇವರಾಯ, ಅಚ್ಯುತರಾಯ ಮತ್ತು ಸದಾಶಿವರಾಯ.

## ನರಸನಾಯಕ

ತುಳುವ ವಂಶದ ಮೊದಲ ಅರಸನೆಂದರೆ ನರಸನಾಯಕ. ಈತನ ಕಾಲದ ೨ ಶಾಸನಗಳು ಹಂಪಿಯಲ್ಲಿ ದೊರೆಯುತ್ತವೆ. ಕಡ್ಡಿರಾಂಪುರದ ಹತ್ತಿರ ಮುಸ್ಲಿಂ ಗೋರಿಗಳ ಹತ್ತಿರದ ಗುಂಡಿನ ಮೇಲೆ ಇರುವ ಕ್ರಿ.ಶ.೧೫೦೫ರ ಶಾಸನವು "ವೀರನರಸಿಂಹರಾಯನ ಆಳ್ವಿಕೆಯ ಕಾಲದಲ್ಲಿ ಕಡೆರಾಮಪುರದಲ್ಲಿನ ಕನ್ನೆಕಟ್ಟೆ ಬಳಿ ಹರಳುತಿಪ್ಪೆ ಗುಡ್ಡದಲ್ಲಿ ಸೈದುಪೀರು ಆಲಿ ಎಂಬುವವನು ಗುಮ್ಮಟವನ್ನು ಕಟ್ಟಿಸಿದಂತೆ ದಾಖಲಿಸಿದೆ.[೬೧] ವಿರೂಪಾಕ್ಷ ದೇವಾಲಯದ ರಂಗಮಂಟಪದ ಒಳಗೆ ಪೂರ್ವಗೋಡೆಯಲ್ಲಿರುವ ಕ್ರಿ.ಶ.೧೫೧೦ರ ಶಾಸನವು "ನರಸನಾಯಕನ ತಾಯಿ ಬುಕ್ಕಾಜಿ ಅಮ್ಮನು ಹಂಪಿಯ ವಿರೂಪಾಕ್ಷ ದೇವರ ನೈವೇದ್ಯಕ್ಕಾಗಿ ಭೂದಾನ ಮಾಡಿದ್ದನ್ನು ತಿಳಿಸುತ್ತದೆ."[೬೨] ಉಳಿದಂತೆ ಯಾವ ಶಾಸನಗಳೂ ನರಸನಾಯಕನ ಆಡಳಿತ ಕುರಿತು ಹೇಳುವುದಿಲ್ಲ. ಈತನು ಕ್ರಿ.ಶ.೧೫೦೫ ರಿಂದ ಕ್ರಿ.ಶ.೧೫೦೯ರವರೆಗೆ ಆಡಳಿತ ಮಾಡಿದ್ದಾನೆ.

## ಕೃಷ್ಣದೇವರಾಯ

ತುಳುವ ವಂಶದ ಅತ್ಯಂತ ಪ್ರಬಲನೂ ಚತುರ ರಾಜನೆಂದರೆ ಕೃಷ್ಣ ದೇವರಾಯನೇ. ಇವನು ನರಸನಾಯಕನ ಮಲ ತಮ್ಮನಾಗಿದ್ದಾನೆ. ಹಂಪಿಯಲ್ಲಿ ಈತನ ಆಳ್ವಿಕೆಯ ಕಾಲದ ೨೦ಕ್ಕೂ ಹೆಚ್ಚು ಶಾಸನಗಳು ದೊರೆತಿವೆ. ವಿರೂಪಾಕ್ಷ ದೇವಾಲಯದ ರಂಗಮಂಟಪದ ಪ್ರವೇಶದ ಎಡಗಡೆಗೆ ನಿಲ್ಲಿಸಿರುವ ಕ್ರಿ.ಶ.೧೫೧೦ರ ಶಾಸನವು "ತುಳುವಂಶಾವಳಿಯನ್ನು ಪೌರಾಣಿಕ ವ್ಯಕ್ತಿ ಚಂದ್ರನಿಂದ ಆರಂಭಿಸಿ

ಕೃಷ್ಣದೇವರಾಯನವರೆಗೆ ನೀಡುತ್ತದೆ. ಅಲ್ಲದೇ ಕೃಷ್ಣದೇವರಾಯ ತನ್ನ ಪಟ್ಟಾಭಿಷೇಕದ ದಿನ ವಿರೂಪಾಕ್ಷ ದೇವರಿಗೆ ದಾನ ನೀಡಿದ್ದನ್ನು ದಾಖಲಿಸುತ್ತದೆ"[೬೩] ಇದೇ ವಿಷಯವನ್ನು ಅದೇ ದೇವಾಲಯದ ಬಿಷ್ಟಪ್ಪಯ್ಯನ ಗೋಪುರದ ಹಿಂಬದಿಯ ಶಾಸನ ಹೇಳುತ್ತದೆ. ಇದೇ ದೇವಾಲಯದ ದಕ್ಷಿಣ ಪ್ರವೇಶ ದ್ವಾರದ ೨ ಕಡೆ ಇರುವ ಕ್ರಿ.ಶ.೧೫೧೩ರ ಶಾಸನವು "ಕೃಷ್ಣದೇವರಾಯ ತನ್ನ ತಂದೆ ನರಸಣ್ಣನಾಯಕ, ತಾಯಿ ನಾಗಜಿಯವರಿಗೆ ಪುಣ್ಯವಾಗಲೆಂದು ವಿರೂಪಾಕ್ಷ ದೇವರಿಗೆ ನೈವೇದ್ಯ, ಉತ್ಸವಕ್ಕೆ ಕೆಲವು ಗ್ರಾಮಗಳನ್ನು, ಪೂಜಾಪರಿಕರಗಳನ್ನು ದಾನ ನೀಡುತ್ತಾನೆಂದು ತಿಳಿಸುತ್ತದೆ.[೬೪]

ಇದೇ ಕಾಲಕ್ಕೆ ಸೇರಿದ ಕೃಷ್ಣಸ್ವಾಮಿ ದೇವಾಲಯದ ಮುಂದಿನ ಕಲ್ಲಿನಲ್ಲಿರುವ ಶಾಸನವು "ಕೃಷ್ಣದೇವರಾಯ ಉದಯಗಿರಿಯಿಂದ ತಂದ ಬಾಲಕೃಷ್ಣದೇವರನ್ನು ಪ್ರತಿಷ್ಠೆ ಮಾಡಿಸಿ, ಆ ದೇವರಿಗೂ ಹಾಗೂ ಕೆಲವು ಬ್ರಾಹ್ಮಣರಿಗೆ ದಾನ ನೀಡಿದ ವಿಷಯ ತಿಳಿಸುತ್ತದೆ."[೬೫] ಹಾಗೆಯೇ ವಿಠಲ ದೇವಾಲಯದ ರಂಗಮಂಟಪದ ದಕ್ಷಿಣ ಪ್ರವೇಶದ್ವಾರದ ಬಲಭಾಗದಲ್ಲಿರುವ ಇದೇ ಕಾಲದ ಶಾಸನವು "ಕೃಷ್ಣದೇವರಾಯ ತನ್ನ ತಂದೆ-ತಾಯಿಗಳಿಗೆ ಪುಣ್ಯವಾಗಬೇಕೆಂದು ವಿಠಲದೇವರಿಗೆ ನೈವೇದ್ಯಕ್ಕಾಗಿ ಕೆಲವು ಗ್ರಾಮಗಳನ್ನು ದಾನ ನೀಡಿರುವ ವಿಷಯ ದಾಖಲಿಸುತ್ತದೆ.[೬೬] ಇದೇ ದೇವಾಲಯದ ಸಭಾಮಂಟಪದ ಪ್ರವೇಶದ ಬಾಗಿಲ ಬಲಕ್ಕಿರುವ ಇದೇ ಕಾಲದ ಶಾಸನವು "ಕೃಷ್ಣದೇವರಾಯ ವಿಠಲದೇವರ ಪೂಜಾ ದಿನಗಳಿಗೆ ಕೆಲವು ಗ್ರಾಮಗಳನ್ನು ದಾನ ನೀಡಿದ್ದು ಮತ್ತು ಈತನ ರಾಣಿಯರಾದ ಚಿನ್ನಾದೇವಿ ಮತ್ತ ತಿರುಮಲದೇವಿಯರು ವಿಠಲದೇವರಿಗೆ ಗೋಪುರ ಕಟ್ಟಿಸಿ, ದೇವರ ಪೂಜಾ ಪರಿಕರಗಳನ್ನು ದಾನ ನೀಡಿದ ವಿಷಯ ತಿಳಿಸುತ್ತದೆ.[೬೭] ಹಾಗೆಯೇ ವಿಠಲದೇವಾಲಯ ಪರಿಸರದ ಶಾಸನಗಳು ವಿಠಲದೇವರಿಗೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತವೆ.

ಕಡ್ಡಿರಾಮಪುರದ ನೈರುತ್ಯಕ್ಕೆ ಸು.೧/೨ ಕಿ.ಮೀ. ದೂರದಲ್ಲಿ ಶಿಥಿಲವಾದ ಅನಂತಶಯನ ದೇವಾಲಯದ ಹತ್ತಿರ ಬಂಡೆಗಲ್ಲಿನ ಮೇಲೆ ಇರುವ ಕ್ರಿ.ಶ.೧೫೧೩ರ ಶಾಸನವು" ಕೃಷ್ಣ ದೇವರಾಯನು ಪ್ರಸನ್ನ ವಿರೂಪಾಕ್ಷ ದೇವರ ಪೂಜೆ ಮತ್ತು ಉತ್ಸವಗಳಿಗೆ ಕಂನಕಿಯ ಕಟ್ಟೆ ಗ್ರಾಮವನ್ನು ದಾನ ಮಾಡಿದ ವಿಷಯ ತಿಳಿಸುತ್ತದೆ."[೬೮] ಅಲ್ಲದೆ ಹಜಾರರಾಮ ದೇವಾಲಯದ ಉತ್ಸವ ಮಂಟಪದ ದಕ್ಷಿಣಗೋಡೆಯಲ್ಲಿನ ಇದೇ ಕಾಲದ ಶಾಸನವು "ಕೃಷ್ಣದೇವರಾಯನು ರಾಮಚಂದ್ರದೇವರ ಸೇವೆಗಾಗಿ ಕೆಲವು ಗ್ರಾಮಗಳನ್ನು ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ."[೬೯]

ಕೃಷ್ಣಸ್ವಾಮಿ ದೇವಾಲಯದ ಮುಂದಿನ ಸಣ್ಣ ಮಂಟಪದ ಗೋಡೆಯಲ್ಲಿರುವ ಕ್ರಿ.ಶ.೧೫೧೫ರ ಶಾಸನವು "ಕೃಷ್ಣದೇವರಾಯ ಉದಯಗಿರಿಯಿಂದ ತಂದ ಬಾಲಕೃಷ್ಣದೇವರನ್ನು ಪ್ರತಿಷ್ಠೆ ಮಾಡಿ ಅದರ ಪಂಚಕರ್ಮಗಳಿಗೆ ಅನೇಕ ದಾನಗಳನ್ನು ನೀಡುತ್ತಾನೆ. ಅಲ್ಲದೆ ದೇವರ ಪೂಜೆಗೆ ಅನೇಕ ಗ್ರಾಮಗಳನ್ನು ಹಾಗೂ ಬ್ರಾಹ್ಮಣರಿಗೆ ನಿವೇಶನ, ಗದ್ದೆಗಳನ್ನು ದಾನ ನೀಡುತ್ತಾನೆಂದು ತಿಳಿಸುತ್ತದೆ. ಈ ಶಾಸನದಲ್ಲಿ

ಕ್ರಿ.ಶ.೧೫೧೪, ಅಲ್ಲದೆ ಕ್ರಿ.ಶ.೧೫೧೬ ಕ್ರಿ.ಶ.೧೫೧೯ ಕ್ರಿ.ಶ.೧೫೨೨ ಮತ್ತು ಕ್ರಿ.ಶ.೧೫೨೫ರ ಅವಧಿಯಲ್ಲಿ ದಾನ ಬಿಟ್ಟ ವಿಷಯವಿದೆ."[೨೦] ವಿಠಲ ದೇವಾಲಯದ ೩ ಶಾಸನಗಳು(ಕ್ರಿ.ಶ.೧೫೧೬) "ಕೃಷ್ಣದೇವರಾಯ ವಿಠಲದೇವರಿಗೆ ನೂರು ಕಂಬಗಳ ಮಂಟಪ ಕಟ್ಟಿಸಿದ್ದನ್ನು ತಿಳಿಸುತ್ತದೆ"[೨೧] ಹಜಾರರಾಮಸ್ವಾಮಿ ದೇವಾಲಯದ ದಕ್ಷಿಣ ಗೋಡೆಯಲ್ಲಿನ ಕ್ರಿ.ಶ.೧೫೨೧ರ ಶಾಸನವು "ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ಮಹಾಮಂಡಳೇಶ್ವರ ಚಿಕ್ಕ ತಿಮ್ಮದೇವನ ಮಗ ತಿಮ್ಮರಾಜನು ರಾಮಚಂದ್ರದೇವರ ಭಂಡಾರಕ್ಕೆ ಕೆಲವು ದಾನಗಳನ್ನು ನೀಡದ್ದನ್ನು ದಾಖಲಿಸುತ್ತದೆ."[೨೨] ಕಡಿರಾಂಪುರ-ಹಂಪಿ ರಸ್ತೆಯ ಪೂರ್ವಕ್ಕೆ, ತುರ್ತಾ ಕಾಲುವೆಯ ಉತ್ತರಕ್ಕಿರುವ ವೈಷ್ಣವ ದೇವಾಲಯದ ಎದುರಿನ ಕಲ್ಲಿನಲ್ಲಿರುವ ಕ್ರಿ.ಶ.೧೫೨೪ರ ಶಾಸನವು "ಹಿರಿಯ ಕಾಲುವೆಯ ರಘುನಾಥದೇವರ ನೈವೇದ್ಯಕ್ಕೆ ಕೃಷ್ಣ ದೇವರಾಯ ಕೆಲವು ದಾನ ಬಿಟ್ಟದ್ದನ್ನು ದಾಖಲಿಸುತ್ತದೆ."[೨೩]

ಕೃಷ್ಣಸ್ವಾಮಿ ದೇವಾಲಯದ ಆವರಣದಲ್ಲಿ ಇರಿಸಲಾಗಿರುವ ಕ್ರಿ.ಶ.೧೫೨೮ರ ತುಂಡು ಶಾಸನವು "ಕೃಷ್ಣರಾಯ ಮಹಾರಾಯನನ್ನು ಉಲ್ಲೇಖಿಸುತ್ತದೆ"[೨೪] ಹಾಗೆಯೇ ರಾಣಿ ಸ್ನಾನಗೃಹದ ನೈರುತ್ಯ ದಿಕ್ಕಿಗೆ ಶಿಥಲವಾದ ದೇವಾಲಯದ ಹತ್ತಿರ ಹುಣಸೆ ಮರದ ಕೆಳಗಿರುವ ಕಲ್ಲಿನ ಮೇಲಿನ ಇದೇ ಕಾಲದ (೧೫೨೮) ಶಾಸನವು "ಕೃಷ್ಣದೇವರಾಯನ ಆಳ್ವಿಕೆಯನ್ನು ದಾಖಲಿಸುತ್ತದೆ."[೨೫] ಉಗ್ರನರಸಿಂಹ ದೇವರ ಎದುರು ಎಡಕ್ಕೆ ನಿಲ್ಲಿಸಿರುವ ಕ್ರಿ.ಶ.೧೫೨೯ರ ಶಾಸನವು "ಕೃಷ್ಣದೇವರಾಯ ಕೃಷ್ಣಾಪುರದಲ್ಲಿ ಶ್ರೀಲಕ್ಷ್ಮೀ ನರಸಿಂಹ ದೇವರನ್ನು ಪ್ರತಿಷ್ಠಾಪಿಸಿ, ಆ ದೇವರ ಪೂಜೆಗೆ ಕೆಲವು ಗ್ರಾಮಗಳನ್ನು ದಾನ ಬಿಟ್ಟ ವಿಷಯ ತಿಳಿಸುತ್ತದೆ."[೨೬]

ಹೀಗೆ ಹಂಪಿಯ ಕೃಷ್ಣದೇವರಾಯ ಶಾಸನಗಳು ವಿರೂಪಾಕ್ಷ ದೇವರಿಗೆ ವಿಠಲದೇವರಿಗೆ ರಾಮಚಂದ್ರ ದೇವರಿಗೆ ನೈವೇದ್ಯಕ್ಕೆ ದಾನ ಬಿಟ್ಟದ್ದು, ಬಾಲಕೃಷ್ಣ, ಲಕ್ಷ್ಮೀ ನರಸಿಂಹ ದೇವರನ್ನು ಪ್ರತಿಷ್ಠಾಪಿಸಿ ಆ ದೇವರ ಪೂಜೆಗೆ ದಾನಬಿಟ್ಟ ವಿಷಯವನ್ನು ತಿಳಿಸುತ್ತವೆ. ಕೃಷ್ಣದೇವರಾಯ ಕ್ರಿ.ಶ.೧೫೦೯-ಕ್ರಿ.ಶ.೧೫೨೯ರವರೆಗೆ ಆಳ್ವಿಕೆ ಮಾಡಿದ್ದಾನೆ.

## ಅಚ್ಯುತ ದೇವರಾಯ

ಕೃಷ್ಣದೇವರಾಯನ ನಂತರ ಅಧಿಕಾರಕ್ಕೆ ಬಂದವನು ಅವನ ಮಲ ಸಹೋದರ ಅಚ್ಯುತದೇವರಾಯ. ಹಂಪಿಯಲ್ಲಿ ಈತನ ಶಾಸನಗಳು ೨೫ಕ್ಕೂ ಹೆಚ್ಚು ದೊರೆಯುತ್ತವೆ. ವಿಠಲ ದೇವಾಲಯದ ಗರ್ಭಗೃಹದ ದಕ್ಷಿಣ ಅಧಿಷ್ಠಾನದಲ್ಲಿರುವ ಕ್ರಿ.ಶ.೧೫೩೧ರ ಶಾಸನವು "ಅಚ್ಯುತ ದೇವರಾಯನು ವಿಠಲದೇವರ ನಿತ್ಯಕಟ್ಟಳೆಗೆ ಗ್ರಾಮವೊಂದನ್ನು ಸಮರ್ಪಿಸಿದಂತೆ ಹೇಳಿದೆ"[೨೭] ಕಾಮಲಾಪುರದಲ್ಲಿರುವ ಕೇಂದ್ರ ಪ್ರಾಚ್ಯವಸ್ತು ಸಂಗ್ರಹಾಲಯ ರಾಯನ ಆಳ್ವಿಕೆಯಲ್ಲಿ ಸಾಳುವ ದಣ್ಣಾಯಕನು ತನ್ನ ಆಡಳಿತದಲ್ಲಿದ್ದ ಕಾಮಲಾಪುರ

ಸ್ಥಳದ ಕೊಂಡಮರಸಯ್ಯ ಪಾಳೆಯದ ಭೂಮಿಯನ್ನು ನರಸಿಂಹದೇವರ ದೀಪರಾಧನೆಗೆ ದಾನ ನೀಡಿದ ವಿಷಯ ತಿಳಿಸುತ್ತದೆ.”[೭೭]

ಕೃಷ್ಣಸ್ವಾಮಿ ದೇವಾಲಯದ ದಕ್ಷಿಣ ಗೋಡೆಯಲ್ಲಿನ ಕ್ರಿ.ಶ.೧೫೩೨ರ ಶಾಸನವು “ಅಚ್ಯುತ ದೇವರಾಯನು ಬಾಲಕೃಷ್ಣದೇವರಿಗೆ ಕೃಷ್ಣಾಪುರಪೇಟೆಯ ದವಸದ ಅಂಗಡಿಗಳಿಂದ ಬರುತ್ತಿದ್ದ ಆದಾಯವನ್ನು ಸಮರ್ಪಿಸಿದ್ದನ್ನು ದಾಖಲಿಸಿದೆ.”[೭೮] ಇದೇ ಕಾಲಕ್ಕೆ ಸೇರಿದ ಮತಂಗಪರ್ವತದ ಶಾಸನವು ‘ಅಚ್ಯುತ ದೇವರಾಯನ ಆಳ್ವಿಕೆಯ ಕಾಲದಲ್ಲಿ ವಿಜಯನಗರದ ಎಲೆಯ ಮಹಾನಾಡ ಹಲವರು ಸೇರಿ ಮತಂಗ ಪರ್ವತದ ವೀರೇಶ್ವರ ದೇವರ ಪಾತ್ರ ವೈಭೋಗಕ್ಕೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.”[೭೯] ವಿಠಲ ದೇವಾಲಯದ ಗರ್ಭಗೃಹದ ಪಶ್ಚಿಮ ಅಧಿಷ್ಠಾನದಲ್ಲಿ ಇದೇ ಕಾಲಕ್ಕೆ ಸೇರಿದ ಮತ್ತೊಂದು ಶಾಸನವು “ಅಚ್ಯುತದೇವರಾಯನ ಆಳ್ವಿಕೆಯಲ್ಲಿ ತಿರುಮಲಯ್ಯನು ವಿಠಲದೇರಿಗೆ ಕೆಲವು ಗ್ರಾಮಗಳನ್ನು ದಾನ ನೀಡಿದನ್ನು ಉಲ್ಲೇಖಿಸುತ್ತದೆ.”[೮೦]

ರಾಯಗೋಪುರದ ಎಡಗೋಡೆಯ ಮೇಲೆ ಇರುವ ಕ್ರಿ.ಶ.೧೫೩೩ರ ಶಾಸನವು “ಅಚ್ಯುತ ದೇವರಾಯನ ಆಳುತ್ತಿದ್ದಾಗ ವಿಠಲೇಶ್ವರನ ಸನ್ನಿಧಿಯಲ್ಲಿ ಅವನು ಮಾಡಿದ ಸುವರ್ಣ ಮೇರುದಾನದ ಬಗ್ಗೆ ವೋದುವ ತಿರುಮಲಮ್ಮನು ಶ್ಲೋಕ ರಚಿಸಿದ್ದನ್ನು ಉಲ್ಲೇಖಿಸುತ್ತದೆ.”[೮೧] ಅಚ್ಯುತ ನಾರಾಯಣಸ್ವಾಮಿ ದೇವಾಲಯದ ಎಡಗಡೆಗೆ ಕ್ರಿ.ಶ.೧೫೩೪ರ ಶಾಸನವು “ಅಚ್ಯುತ ದೇವರಾಯ ಆಡಳಿತ ನಡೆಸುತ್ತಿದ್ದಾಗ ಅವನ ಮಂಡಳೇಶ್ವರನಾದ ಹಿರಿಯ ತಿರುಮಲ ರಾಜವೊಡೆಯನು ತುಂಗಭದ್ರಾ ತೀರದಲ್ಲಿ ತಿರುವೆಂಗಳ ನಾಥದೇವರನ್ನು ಪ್ರತಿಷ್ಠೆ ಮಾಡಿಸಿದ. ಅಚ್ಯುತದೇವರಾಯ ದೇವರಿಗೆ ಆಭರಣಗಳನ್ನು, ಪೂಜಕ್ಕೆ ಚೋರಮನೂರು ಗ್ರಾಮವನ್ನು ದಾನ ನೀಡಿದ್ದನ್ನು ದಾಖಲಿಸುತ್ತದೆ.”[೮೨] ವಿಠಲದೇವಾಲಯದ ಗರ್ಭಗೃಹದ ಉತ್ತರ ಅಧಿಷ್ಠಾನದಲ್ಲಿರುವ(ಕ್ರಿ.ಶ.೧೫೩೪ರ) ಇದೇ ಕಾಲಕ್ಕೆ ಸೇರಿದ ಶಾಸನವು “ಅಚ್ಯುತದೇವರಾಯ ಆಳುತ್ತಿದ್ದಾಗ ವಿಠಲ ದೇ:ವಾಲಯದ ಆವರಣದಲ್ಲಿ ಉತ್ತರದಿಕ್ಕಿನಲ್ಲಿ ಕಟ್ಟಿದ್ದ ನಾಲ್ಕು ಅಂಕಣದಲ್ಲಿ ಗಂಧದ ತಿಪ್ಪಿಸೆಟ್ಟಿ ೧೩ ಆಳ್ವರರ ವಿಗ್ರಹಗಳನ್ನು ಅಚ್ಯುತದೇವರಾಯನಿಗೆ ಪುಣ್ಯವಾಗಲೆಂದು ಪ್ರತಿಷ್ಠೆ ಮಾಡಿದ್ದನ್ನು ಉಲ್ಲೇಖಿಸುತ್ತದೆ.”[೮೩] ಇದೇ ಕಾಲಕ್ಕೆ ಸೇರಿದ ಇಲ್ಲೇ ಇರುವ ಇನ್ನೊಂದು ಶಾಸನವು “ಅಚ್ಯುತದೇವರಾಯ ಆಳ್ವಿಕೆಯು ಕಾಲಕ್ಕೆ ವರದಪ್ಪನಾಯಕನು ಅಚ್ಚುತದೇವರಾಯನಿಗೂ ಚಿಕ್ಕರಾಯನಿಗೂ ಪುಣ್ಯವಾಗಲೆಂದು ವಿಠಲದೇವರ ನಿತ್ಯನೈವೇದ್ಯಕ್ಕೆ ದೇವರ ಭಂಡಾರಕ್ಕೆ ೫೦ ಘಟ್ಟಿವರಹಗಳನ್ನು ದಾನ ನೀಡಿದನ್ನು ದಾಖಲಿಸಿದೆ.”[೮೪]

ವಿಠಲ ದೇವಾಲಯದ ಸಭಾಮಂಟಪದ ಪ್ರವೇಶದ ಬಲಭಾಗದಲ್ಲಿ ನಿಲ್ಲಿಸಿರುವ ಕ್ರಿ.ಶ.೧೫೩೫ರ ಶಾಸನವು “ಅಚ್ಯುತದೇವರಾಯನ ಆಳ್ವಿಕೆಯ ಕಾಲದಲ್ಲಿ ಅವನ ಮಹಾ ಮಂಡಳೇಶ್ವರ ಅಲ್ಲು

ಭೀಮರಾಜನ ಮಗ ಗೋಪರಾಜನಿಗೆ ಹಾಗೂ ತನ್ನ ತಂದೆ ತಾಯಿಗಳಿಗೆ ಪುಣ್ಯವಾಗಬೇಕೆಂದು ಚಿಕ ತಿಮ್ಮಪ್ಪನು ವಿಠಲದೇವರ ಸನ್ನಿಧಾನದಲ್ಲಿ ನಡೆಯುವ ಕೆಲಸಕ್ಕೆ ೨೦೦ ಘಟ್ಟಿ ವರಹಗಳನ್ನು ದಾನ ನೀಡಿದ್ದನ್ನು ಉಲ್ಲೇಖಿಸಿದೆ."[೮೫] ತುರ್ತಾ ಕಾಲುವೆಯ ಬಲಗಡೆ ಗಂಗಮ್ಮನ ಗುಡಿಯ ಕಂಬದ ಮೇಲೆ ಇರುವ ಕ್ರಿ.ಶ.೧೫೩೬ರ ಶಾಸನವು "ಪೆನುಗೊಂಡೆಯ ವಿರೂಪಣ್ಣನು ಅಚ್ಯುತರಾಯನಿಗೆ ಪುಣ್ಯವಾಗಲೆಂದು ವಿರೂಪಾಕ್ಷ ದೇವರ ಸೇವೆಗೆ ಭೂಮಿದಾನ ಮಾಡಿದ್ದನ್ನು ಉಲ್ಲೇಖಿಸಿದೆ."[೮೬] ಇದೇ ಕಾಲಕ್ಕೆ ಸೇರಿದ ವಿಠಲ ದೇವಾಲಯದ ಗರ್ಭಗೃಹದ ದಕ್ಷಿಣ ಅಧಿಷ್ಠಾನದಲ್ಲಿರುವ ಶಾಸನವು "ಊಳಿಗದ ಮಲ್ಲಪ್ಪನಾಯಕನು ಅಚ್ಯುತರಾಯನ ಆಳ್ವಿಕೆಯ ಕಾಲದಲ್ಲಿ ಅಚ್ಯುತರಾಯನಿಗೂ, ಚಿಕ್ಕರಾಯನಿಗೂ ಪುಣ್ಯವಾಗಬೇಕೆಂದು ವಿಠಲದೇವರ ಅವಸರದ ನೈವೇದ್ಯಕ್ಕಾಗಿ ದೇವರಭಂಡಾರಕ್ಕೆ ೨೦೦ ಘಟ್ಟಿ ವರಹಗಳನ್ನು ಸಮರ್ಪಿಸುತ್ತಾನೆ."[೮೭] ಇದೇ ಸ್ಥಳದಲ್ಲಿರುವ ಇದೇ ಕಾಲದ ಮತ್ತೊಂದು ಶಾಸನವು "ಅಚ್ಯುತದೇವರಾಯನ ಆಳ್ವಿಕೆಯನ್ನು ಸೂಚಿಸುತ್ತದೆ."[೮೮]

ಉದಯಗಿರಿ ಬಾಗಿಲಿನ ಉತ್ತರಕ್ಕೆ ಕೋಟೆಯ ಹೊರಗೆ ಹೊಲದಲ್ಲಿರುವ ಕ್ರಿ.ಶ.೧೫೩೬ರ ಶಾಸನವು "ಅಚ್ಯುತದೇವರಾಯನು ಕೃಷ್ಣದೇವರಾಯನ ಹೆಸರಿನಲ್ಲಿ ಕೊಟ್ಟ ದಾನವನ್ನು ದಾಖಲಿಸುತ್ತದೆ."[೮೯] ಹಾಗೆಯೇ ವಿಠಲದೇವಾಲಯದ ಉತ್ತರ ಗೋಪುರದಲ್ಲಿನ ಕ್ರಿ.ಶ.೧೫೩೮ರ ಶಾಸನವು "ಅಚ್ಯುತದೇವ ರಾಯನು ಆಳುತ್ತಿದ್ದಾಗ, ವಿಠಲದೇವರ ಉತ್ತರದ ಗೋಪುರಕ್ಕೆ ಚಪರದ ರಘುವಪ್ಪನಾಯಕನು ಕಳಸವನ್ನಿಡಿಸಿದ ವಿಷಯ ಹೊಂದಿದೆ.[೯೦] ಇಲ್ಲಿಯೇ ಇರುವ ಇದೇ ಕಾಲಕ್ಕೆ ಸೇರಿದ ಮತ್ತೊಂದು ಶಾಸನವು "ಇದೇ ಚಪರದ ರಘುವಪ್ಪನು ಅಚ್ಯುತದೇವರಾಯನ ಆಳ್ವಿಕೆಯ ಕಾಲದಲ್ಲಿ ಇದೇ ದೇವಾಲಯದ ಪೂರ್ವದಿಕ್ಕಿನ ಗೋಪುರಕ್ಕೆ ಸುವರ್ಣ ಕಳಸವನ್ನಿಡಿಸಿದಂತೆ ತಿಳಿಸುತ್ತದೆ."[೯೧]

ಕೃಷ್ಣಸ್ವಾಮಿ ದೇವಾಲಯ ಗೋಪುರದ ಬಲಭಾಗದಲ್ಲಿರುವ ಕ್ರಿ.ಶ.೧೫೩೯ರ ಶಾಸನವು "ಅಚ್ಯುತ ದೇವರಾಯನು ಬ್ರಾಹ್ಮಣರಿಗೆ ಆನಂದನಿಧಿ ದಾನನೀಡಿದನ್ನು ಉಲ್ಲೇಖಿಸುತ್ತದೆ."[೯೨] ಇದೇ ವಿಷಯವನ್ನು ಹಂಪಿಯ ಇನ್ನೂ ೫ ಶಾಸನಗಳು ದಾಖಲಿಸುತ್ತವೆ. ಅಚ್ಯುತನಾರಾಯಣ ಸ್ವಾಮಿ ದೇವಾಲಯದ ಉತ್ತರ ಗೋಪುರದ ಪಶ್ಚಿಮಗೋಡೆಯಲ್ಲಿನ ಕಾಲದ ಉಲ್ಲೇಖವಿಲ್ಲದ ಶಾಸನವು "ಅಚ್ಯುತೇಂದ್ರನಿಗೆ ಜಯವಾಗಲಿ ಎಂದು ಹರಸುತ್ತಿದೆ."[೯೩] ಕಾಮಲಾಪುರ ಹಂಪಿ ರಸ್ತೆಯ ಕುದುರೆಕಲ್ಲು ಗುಂಡಿನ ಎದುರಿನ ಬಾಗಿಲಲ್ಲಿ ಕಾಲದ ಉಲ್ಲೇಖವಿಲ್ಲದ ಶಾಸನವು "ಅಚ್ಯುತದೇವರಾಯನನ್ನು ಹೊಗಳಿದ್ದು, ಅವನನ್ನು ಓಬಾಂಬಿಕಾ ಮತ್ತು ನರಸನ ಮಗನೆಂದು ಹೇಳಿದೆ."[೯೪] ರಾಣಿವಾಸದ ಪಶ್ಚಿಮಕ್ಕೆ ವೈಷ್ಣವ ದೇವಾಲಯದಲ್ಲಿಯ ಮಂಟಪದ ಉತ್ತರ ಗೋಡೆಯ ಮೇಲಿರುವ ತ್ರುಟಿತ ಶಾಸನವು "ಅಚ್ಯುತದೇವ ಮಹಾರಾಯನನ್ನು ಹೆಸರಿಸಿದೆ."[೯೫]

ಕ್ರಿ.ಶ.೧೫೩೦ ರಿಂದ ಕ್ರಿ.ಶ.೧೫೪೨ರವರೆಗೆ ವಿಜಯನಗರವನ್ನಾಳಿದ ಅಚ್ಯುತದೇವರಾಯನ ಶಾಸನಗಳಲ್ಲಿ ವಿರೂಪಾಕ್ಷ ದೇವರಿಗೆ, ವಿಠಲ, ಬಾಲಕೃಷ್ಣ, ಅಚ್ಯುತನಾರಾಯಣ, ಮತಂಗದ ವೀರಭದ್ರ, ಇನ್ನು ಮುಂತಾದ ದೇವರಿಗೆ ಗ್ರಾಮಗಳನ್ನು, ಪೂಜಾ ಪರಿಕರಗಳನ್ನು ದಾನ ಬಿಟ್ಟ ವಿಷಯ ಹಾಗೂ ಬ್ರಾಹ್ಮಣರಿಗೆ ಆನಂದನಿಧಿ ದಾನ ನೀಡಿರುವುದನ್ನು ಕಾಣಬಹುದು.

**ಸದಾಶಿವರಾಯ**

ಅಚ್ಯುತದೇವರಾಯನ ನಂತರ ವಿಜಯನಗರದ ಸಿಂಹಾಸನವೇರಿದವನು ಅಚ್ಯುತದೇವರಾಯನ ಅಣ್ಣ ರಂಗನ ಮಗ ಸದಾಶಿವರಾಯ. ಈತ ಜೀವನವಿಡೀ ಬಂಧಿಯಾಗಿದ್ದು ಹೆಸರಿಗೆ ಮಾತ್ರ ರಾಜನಾಗಿದ್ದ. ಕೃಷ್ಣದೇವರಾಯನ ಅಳಿಯ ರಾಮರಾಯ ಕಾರ್ಯತಃ ಸಾರ್ವಭೌಮನಾಗಿದ್ದ. ಸದಾಶಿವರಾಯ ಕ್ರಿ.ಶ.೧೫೪೨ ರಿಂದ ಕ್ರಿ.ಶ.೧೫೭೬ರವರೆಗೆ ಆಳ್ವಿಕೆ ನಡೆಸಿದ. ಈ ಅವಧಿಯ ಶಾಸನಗಳು ಹಂಪಿಯಲ್ಲಿ ೨೦ಕ್ಕೂ ಹೆಚ್ಚು ದೊರೆಯುತ್ತವೆ.

ವಿಠಲ ದೇವಾಲಯದ ಗರ್ಭಗೃಹದ ದಕ್ಷಿಣ ಅಧಿಷ್ಠಾನದಲ್ಲಿರುವ ಕ್ರಿ.ಶ.೧೫೪೨ರ ಶಾಸನವು "ಸದಾಶಿವರಾಯನು ರಾಜ್ಯಭಾರ ಮಾಡುತ್ತಿದ್ದಾಗ ವಿಠಲದೇವರ ನೈವೇದ್ಯಕ್ಕೆ ತಿರುವೆಂಗಳಾಚಾರ್ಯರಿಗೆ ಸದಾಶಿವರಾಯನಿಂದ ಬಂದ ದಾನವನ್ನು ದೇವರಿಗೆ ಸಮರ್ಪಿಸಿದ ಎಂದು ಉಲ್ಲೇಖಿಸುತ್ತದೆ."[೯೬] ಚಂಡಿಕೇಶ್ವರ ದೇವಾಲಯದಲ್ಲಿ ಮುರಿದು ಬಿದ್ದಿರುವ ಕ್ರಿ.ಶ.೧೫೪೫ರ ಶಾಸನವು "ಸದಾಶಿವರಾಯ ವಿದ್ಯಾನಗರದಲ್ಲಿ ಆಳುತ್ತಿದ್ದಾಗ, ದಳವಾಯಿ ಜಂಗಮಯ್ಯ ಸದಾಶಿವರಾಯನಿಗೂ, ರಾಮರಾಯನಿಗೂ ಮತ್ತು ಪ್ರಧಾನಿ ಎರತಿಮ್ಮರಾಜನಿಗೂ ಪುಣ್ಯವಾಗಬೇಕೆಂದು ಕೃಷ್ಣಾಪುರಪೇಟೆಯ ಹಿರಿಯ ಕಾಲುವೆಯ ಛತ್ರದ ಬಳಿ ದೇವಾಲಯ ಕಟ್ಟಿಸಿ ದೇವರಿಗೆ ದಾನ ಬಿಟ್ಟವಿಚಾರ ತಿಳಿಸುತ್ತದೆ."[೯೭] ಉದ್ದಾನ ವೀರಭದ್ರ ದೇವಾಲಯದ ಪಶ್ಚಿಮಕ್ಕಿರುವ ಇದೇ ಕಾಲದ ೨ ಶಾಸನಗಳು "ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ದಳವಾಯಿ ಜಂಗಮಯ್ಯ ಕೃಷ್ಣಾಪುರಪೇಟೆಯ ಹಿರಿಯ ಛತ್ರದ ಬಳಿ ಮುದುವೀರಣ್ಣನನ್ನು ಪ್ರತಿಷ್ಠೆ ಮಾಡಿಸಿ, ದೇವರಿಗೆ ಆಭರಣ ಹಾಗೂ ಪೂಜಾಪರಿಕರಗಳನ್ನು ನೀಡಿರುವ ವಿಷಯ ತಿಳಿದುಬರುತ್ತದೆ".[೯೮] ವಿಠಲದೇವಾಲಯದ ಗರ್ಭಗೃಹದ ಮುಂದಿನ ಮಂಟಪದ ದಕ್ಷಿಣ ಅಧಿಷ್ಠಾನದಲ್ಲಿರು ಕ್ರಿ.ಶ.೧೫೪೫ರ ಶಾಸನವು "ಸದಾಶಿವರಾಯರು ಆಳುತ್ತಿದ್ದಾಗ, ತೋನೇಟಿ ತಿಂಮರಾಜಯನು ತನ್ನ ತಂದೆಗೆ ಪುಣ್ಯವಾಗಬೇಕೆಂದು ವಿಠಲದೇವರಿಗೆ ದಾನ ನೀಡಿದ್ದನು ಉಲ್ಲೇಖಿಸುತ್ತದೆ".[೯೯] ಇಲ್ಲೇ ಇರುವ ಇದೇ ಕಾಲದ ಮತ್ತೊಂದು ಶಾಸನವು "ಸದಾಶಿವರಾಯನ ಆಳ್ವಿಕೆ ಕಾಲದಲ್ಲಿ ಜಂಬಲದಿನ್ನೆಯ ಚಿಕ್ಕರಾಜನು ವಿಠಲ ದೇವಾಲಯದಲ್ಲಿನ ಲಕ್ಷ್ಮೀನಾರಾಯಣ ಪೆರುಮಾಳ್ ದೇವರ ಭಂಡಾರಕ್ಕೆ ದಾನ ನೀಡಿದ್ದನ್ನು ದಾಖಲಿಸುತ್ತದೆ".[೧೦೦]

ರಂಗಸ್ವಾಮಿ ದೇವಾಲಯದ ಉತ್ತರಕ್ಕಿರುವ ಕ್ರಿ.ಶ.೧೫೪೫ರ ಶಾಸನವು "ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಮಾಂಡಳಿಕ ತಿಮ್ಮರಾಜನು ದೊಡ್ಡ ಅಂಗಡಿ ಬೀದಿಯ ಪಶ್ಚಿಮಕ್ಕೆ ಇರುವ ಮಾಧವ ದೇವರಿಗೆ ೨೫ ಅಂಕಣಗಳ ರಂಗಮಂಟಪ ಕಟ್ಟಿಸಿದ್ದನ್ನು ದಾಖಲಿಸುತ್ತದೆ".[೧೦೧] ಸೋಮವಾರ ಬಾಗಿಲಿನ ಪಕ್ಕದ ಬೆಟ್ಟದ ಮೇಲಿನ ದೇವಾಲಯದ ಮುಂದೆ ನಿಲ್ಲಿಸಿರುವ ಕ್ರಿ.ಶ.೧೫೪೮ರ ಶಾಸನವು "ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಗವಿಕೇರಿ ರಘುನಾಥ ದೇವರಿಗೆ ದಾನ ಮಾಡಿದ್ದನ್ನು ತಿಳಿಸುತ್ತದೆ."[೧೦೨] ವಿಠಲಸ್ವಾಮಿ ದೇವಾಲಯದ ಹತ್ತಿರದ ವೈಷ್ಣವ ದೇವಾಲಯದ ಉತ್ತರ ಗೋಡೆಯ ಮೇಲಿನ ಕ್ರಿ.ಶ.೧೫೫೨ರ ಶಾಸನವು "ಸದಾಶಿವರಾಯನ ಆಡಳಿತದ ಕಾಲದಲ್ಲಿ ಪುಟಪರ್ತಿಯ ಲಿಂಗಾಭಟರ ಮಗ ಶಂಭು ಕಾಮದೀಕ್ಷಿತರಿಗೆ ಕ್ರಯ ಪತ್ರ ಮಾಡಿದ್ದನ್ನು ಉಲ್ಲೇಖಿಸುತ್ತದೆ."[೧೦೩] ವಿಠಲ ದೇವಾಲಯದ ಗರ್ಭಗೃಹದ ಮುಂದಿನ ಮಂಟಪದ ಉತ್ತರ ಅಧಿಷ್ಠಾನದಲ್ಲಿರುವ ಕ್ರಿ.ಶ.೧೫೫೪ರ ಶಾಸನವು "ಸದಾಶಿವರಾಯನು ಆಳುತ್ತಿದ್ದಾಗ ಉದಯಗಿರಿ ತಿಮ್ಮರಾಜಯದೇವ ಮಹಾ ಅರಸನು ತನ್ನ ತಂದೆ ಕೋನೇಟಯ್ಯರಿಗೆ ಪುಣ್ಯವಾಗಬೇಕೆಂದು ವಿವಿಧ ಉತ್ಸವಗಳನ್ನು ನಡೆಸಬೇಕೆಂದು ವಿಠಲದೇವರಿಗೆ ದಾನ ನೀಡಿದ್ದನ್ನು ದಾಖಲಿಸುತ್ತದೆ."[೧೦೪] ಇಲ್ಲೇ ಇರುವ ಇದೇ ಕಾಲದ ಇನ್ನೊಂದು ಶಾಸನವು "ಸದಾಶಿವರಾಯನ ಆಳ್ವಿಕೆ ಕಾಲದಲ್ಲಿ ಮುಸಲಿಮಡುವಿನ ವೀರರಾಮರಾಜ ತಿಮ್ಮರಾಜಯನ ಮಗನು ಉದಯಗಿರಿ ಬಾಗಿಲ ಮುಂದೆ ಇರುವ ಅನಂತಾಪುರ ಗ್ರಾಮವನು ಸದಾಶಿವದೇವರಾಯನ ಕೈಯಲ್ಲಿ ಧಾರೆಯನೆರೆಸಿ ಕೊಟ್ಟ ವಿಷಯ ತಿಳಿಸುತ್ತದೆ."[೧೦೫]

ಪಹರೆಯವರ ಕಟ್ಟಡದ ಹಿಂಭಾಗದಲ್ಲಿ ನಿಂತಿರುವ ಕಲ್ಲಿನ ಮೇಲೆ ಇರುವ ಇದೇ ಕಾಲದ ಶಾಸನವು "ಸದಾಶಿವರಾಯನ ಮಹಾಮಂಡಲೇಶ್ವರ ರಾಮರಾಜು ತಿರುಮಲ ರಾಜನ ಮಗ ರಘುನಾಥ ರಾಜನು ಕತಾಲಪಾಲ್ಯಂದಲ್ಲಿ ಅಲಮೇಲ ಮಂಗಮ್ಮನ ದೇವಾಲಯವನ್ನು ಕಟ್ಟಿಸಿ, ಆ ದೇವಾಲಯದ ದೀಪಾರಾಧನೆಗಾಗಿ ಅಂಗಡಿಗಳನ್ನು ದಾನ ಬಿಟ್ಟಿರುವ ವಿಷಯ ತಿಳಿಸುತ್ತದೆ."[೧೦೬] ಕೋದಂಡರಾಮ ದೇವಾಲಯದ ಹಿಂಬದಿಯ ವಿಷ್ಣುದೇವಾಲಯದ ಪ್ರವೇಶದ ಎರಡೂ ಕಡೆಯಲ್ಲಿನ ಕ್ರಿ.ಶ.೧೫೫೬ರ ಶಾಸನವು "ಪಾಪಿಶೆಟ್ಟಿ ಮತ್ತು ಪಾಟಮ್ಮನ ಮಗ ತಿರುಮಳ ಶೆಟ್ಟಿಯು ಸದಾಶಿವರಾಯನ ಆಳ್ವಿಕೆ ಕಾಲದಲ್ಲಿ ಮಾಡಿದ ಸೇವೆಯನ್ನು ದಾಖಲಿಸುತ್ತದೆ."[೧೦೭] ಇದೇ ಕಾಲಕ್ಕೆ ಸೇರಿದ ವಿಠಲಸ್ವಾಮಿ ದೇವಾಲಯದ ಪಶ್ಚಿಮಕ್ಕೆ ದೇವಾಲಯದ ಉತ್ತರ ಗೋಡೆಯ ಮೇಲೆ ಇರುವ ಶಾಸನವು "ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಮಹಾಮಂಡಳೇಶ್ವರ ರಾಮರಾಜ ಕೋನೇಟಯ್ಯನ ಮಗನಾದ ಅವುಗಳ ಮಹಾರಾಜನು ವಿಠಲೇಶ್ವರ ದೇವಾಲಯದ ಪ್ರಾಕಾರದ ಒಳಗೆ ವಾಯುವ್ಯದಲ್ಲಿ ತಿರುಂಮಂಗೈಯಾಳ್ವಾರರಿಗೆ ಗರ್ಭಗೃಹ, ಸುಕನಾಸಿ, ಅಂತರಾಳ, ರಂಗಮಂಟಪ ಮುಂತಾದವನ್ನು ಕಟ್ಟಿಸಿ, ಅದರ ಪೂಜೆಗಾಗಿ ಕೆಲವು ಗ್ರಾಮುಗಳನ್ನು ದಾನ ಬಿಟ್ಟಿರುವ ವಿಷಯ ತಿಳಿಸುತ್ತದೆ."[೧೦೮]

ಗಾಣಗಿತ್ತಿ ಬಸದಿಯ ಬಳಿ ಬಿದ್ದಿರುವ ಕ್ರಿ.ಶ.೧೫೫೭ರ ಶಾಸನವು "ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಮಹಾಮಂಡಳೇಶ್ವರ ರಂಗರಾಜ ರಾಮರಾಜ ಅಯ್ಯನು ಚಿಕ್ಕದೇವರ ಶಾಂತಿನಾಥ ಬಸದಿಗೆ ದೀವಟಿಗೆಗಾಗಿ ಅಂಗಡಿಯನ್ನು ದಾನವಾಗಿ ನೀಡಿದ್ದನ್ನು ದಾಖಲಿಸುತ್ತದೆ."[೧೦೯] ವಿಠಲ ದೇವಾಲಯದ ಗರ್ಭಗೃಹದ ಪಶ್ಚಿಮ ಅಧಿಷ್ಠಾನದಲ್ಲಿರುವ ಕ್ರಿ.ಶ.೧೫೫೯ರ ಶಾಸನವು "ವಿಠಲದ ನಮ್ಮಾಳ್ವಾರನು ಸದಾಶಿವರಾಯನು ವಿದ್ಯಾನಗರದಲ್ಲಿ ಆಳುತ್ತಿದ್ದಾಗ ಪರಾಂಕುಶ ಮಂಟಪದಲ್ಲಿ ವಿಠಲದೇವರ ಉತ್ಸವ ಮತ್ತು ಪೂಜಾಕಾರ್ಯಗಳಿಗಾಗಿ ಭೂದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ."[೧೧೦] ಹಸ್ತಗಿರಿ ರಂಗನಾಥ ದೇವಾಲಯದ ಎದುರು ಬಂಡೆಯ ಮೇಲೆ ಇರುವ ಕ್ರಿ.ಶ.೧೫೬೦ರ ಶಾಸನವು "ಸದಾಶಿವರಾಯನ ಆಳ್ವಿಕೆಯಲ್ಲಿ ಮೂರ್ತಿರಾಜು ವಿಠಲರಾಜು ಎಂಬುವವನು ತನ್ನ ತಾಯಿಯ ಪುಣ್ಯತಿಥಿಯ ಕಾರಣವಾಗಿ ವಿಠಲದೇವರ ನೈವೇದ್ಯಕ್ಕೆ ಬ್ರಾಹ್ಮಣರ ಭೋಜನಕ್ಕೆ ಹರಿಹರಪುರವನ್ನು ದಾನನೀಡಿರುವುದನ್ನು ದಾಖಲಿಸುತ್ತದೆ."[೧೧೧]

ವಿಠಲ ದೇವಾಲಯದ ಸಭಾಮಂಟಪದ ಪೂರ್ವದ ಗೋಡೆಯಲ್ಲಿರುವ ಕ್ರಿ.ಶ.೧೫೬೧ರ ಶಾಸನವು "ಸದಾಶಿವರಾಯನ ಆಡಳಿತದ ಕಾಲದಲ್ಲಿ ಕೋನೇಟಿ ಕೊಂಡರಾಜಯ್ಯನು ತಮ್ಮ ತಂದೆಗೆ ಪುಣ್ಯವಾಗಲೆಂದು ವಿಠಲದೇವರ ನೈವೇದ್ಯಕ್ಕೆ ಕೆಲವು ದತ್ತಿಗಳನ್ನು ಬಿಟ್ಟ ವಿಷಯ ತಿಳಿದುಬರುತ್ತದೆ."[೧೧೨]ಇದೇ ದೇವಾಲಯದ ವಾಯುವ್ಯಕ್ಕೆ ಇರುವ ದೇವಾಲಯದ ಪೂರ್ವ ಗೋಡೆಯ ಮೇಲೆ ಇರುವ ಇದೇ ಕಾಲದ ಶಾಸನವು "ಸದಾಶಿವರಾಯನು ಆಳುತ್ತಿದ್ದಾಗ ಶ್ರೀರಂಗರಾಜನು ತಿರುಮಂಗೆಯಾಳ್ವರಿಗೆ ತೋಟವನ್ನು ದಾನ ನೀಡಿದ್ದನ್ನು ತಿಳಿಸುತ್ತದೆ."[೧೧೩] ಹಂಪಾದೇವಿ ದಿಡ್ಡಿಯ ಪಶ್ಚಿಮಕ್ಕೆ ಇರುವ ಇದೇ ಕಾಲದ ಶಾಸನವು "ಸದಾಶಿವರಾಯನ ಆಡಳಿತವನ್ನು ದಾಖಲಿಸುತ್ತದೆ."[೧೧೪] ವಿಠಲದೇವಾಲಯದ ಗರ್ಭಗೃಹದ ಉತ್ತರ ಅಧಿಷ್ಠಾನದಲ್ಲಿರುವ ಕ್ರಿ.ಶ.೧೫೬೩ರ ಶಾಸನವು "ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ನಮ್ಮಾಳ್ವಾರನು ವಿಠಲದೇವರ ಭಂಡಾರಕ್ಕೆ ೬೦ ಘಟ್ಟಿವರಹಗಳನ್ನು ಸಮರ್ಪಿಸುತ್ತಾನೆಂದು ತಿಳಿಸುತ್ತದೆ."[೧೧೫]

ಇದೇ ದೇವಾಲಯದ ರಂಗಮಂಟಪದ ಪೂರ್ವದಿಕ್ಕಿನ ಗೋಡೆಯಲ್ಲಿರುವ ಕ್ರಿ.ಶ.೧೫೬೪ರ ಶಾಸನವು "ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ವಿಠಲದೇವರ ಪೂಜಾಕಾರ್ಯಕ್ಕೆ ಶ್ರೀವಾಸ ಆಚಾರ್ಯ ಅಯ್ಯ, ಅರವೀಡಿನ ಕಂದನವಳಲ ರಾಮರಾಜನ ಮೊಮ್ಮಗ ಹಾಗೂ ರಾಮದೇವರ ಉತ್ಸವಕ್ಕೆ ಜಗ್ಗರಾಜ ರಾಮರಾಜ, ಕೊಂಡರಾಜ ಕ್ರಮವಾಗಿ ಕೆಲವು ಗ್ರಾಮಗಳನ್ನು ದಾನ ಬಿಟ್ಟಿರುವುದನ್ನು ತಿಳಿಸುತ್ತದೆ."[೧೧೬] ಕೃಷ್ಣಸ್ವಾಮಿ ದೇವಾಲಯದ ಉತ್ತರ ಗೋಡೆಯಲ್ಲಿನ ಕಾಲದ ಉಲ್ಲೇಖವಿಲ್ಲದ ಶಾಸನವು "ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಪಾತ್ರದ ಬೆಂಪಾಯಿ ಎಂಬುವವಳು ಬಾಲಕೃಷ್ಣದೇವರ ನೈವೇದ್ಯಕ್ಕೆ ೩ ಕೊಳಗ ಹೊಲವನ್ನು ದಾನ ಬಿಟ್ಟಿರುವುದನ್ನು ದಾಖಲಿಸಿದೆ."[೧೧೭] ಹಾಗೆಯೇ ಸಿಂಘಾರದ

ಹೆಬ್ಬಾಗಿಲಿನ ಉತ್ತರಕ್ಕೆ ದಶಾವತಾರ ಮಂಟಪದ ಕೆಳಬಂಡೆಯ ಮೇಲೆ ಕಾಲದ ಉಲ್ಲೇಖವಿಲ್ಲದ ಶಾಸನವು "ಸದಾಶಿವರಾಯನಿಗೆ ಪುಣ್ಯವಾಗಲೆಂದು ನರಸಿಂಹ ದೇವರಿಗೆ ಭೂಮಿ ದಾನ ಮಾಡಿದ್ದನ್ನು ದಾಖಲಿಸುತ್ತದೆ."[೧೧೮] ಇದರ ಪಕ್ಕದಲ್ಲಿರುವ ಇನ್ನೊಂದು ಶಾಸನವು ಇದೇ ವಿಚಾರ ತಿಳಿಸುತ್ತದೆ.

ಹೀಗೆ ಸದಾಶಿವಗಾಯನ ಶಾಸನಗಳು ಸದಾಶಿವರಾಯ, ಮಹಾಮಂಡಳೇಶ್ವರರು, ಸಾಮಂತರು, ಸಾಮಾನ್ಯ ಜನರು, ವಿಠಲದೇವರಿಗೆ, ಕೋದಂಡರಾಮ, ಬಾಲಕೃಷ್ಣದೇವರಿಗೆ, ಮುದುವೀರಣ್ಣ, ರಾಮದೇವರಿಗೆ, ಶಾಂತಿನಾಥ ಬಸದಿಗೆ, ಇನ್ನೂ ಮುಂತಾದ ದೇವರುಗಳಿಗೆ ಪೂಜೆ, ನೈವೇದ್ಯಕ್ಕಾಗಿ ಗ್ರಾಮಗಳನ್ನು, ಹೊಲಗದ್ದೆಗಳನ್ನು, ಪೂಜಾ ಪರಿಕರಗಳನ್ನು ದಾನ ನೀಡಿದ್ದನ್ನು ತಿಳಿಸುತ್ತವೆ. ಇದಲ್ಲದೆ ಕೆಲವು ದೇವರಿಗೆ ರಂಗಮಂಟಪ ಗೋಪುರಗಳನ್ನು ಕಟ್ಟಿಸಿ ಅದಕ್ಕೆ ದಾನ ಬಿಟ್ಟಿರುವ ವಿಷಯ ತಿಳಿಸುತ್ತವೆ.

ಒಂದು ಊರು ಅಥವಾ ಪ್ರದೇಶದ ಐತಿಹಾಸಿಕತೆಯನ್ನು ಅಧ್ಯಯನ ಮಾಡಲು ಆ ಪ್ರದೇಶದ ಪುರಾತತ್ವ ನೆಲೆಗಳು, ಸ್ಮಾರಕಗಳು ಮತ್ತು ಶಾಸನಗಳು ಪ್ರಧಾನ ಆಕರಗಳಾಗಿವೆ. ಈ ಆಕರಗಳಿಲ್ಲದಿದ್ದರೆ ಆ ಪ್ರದೇಶದ ಚರಿತ್ರೆ ಅಧ್ಯಯನ ಮಾಡಲು ಅಥವಾ ಅರಿಯಲು ಸಾಧ್ಯವಾಗುವುದಿಲ್ಲ. ಇಂಥ ಆಕರಗಳಿಂದ ಒಂದು ಪ್ರದೇಶದ ಚರಿತ್ರೆ ಕಟ್ಟಲು ಸಾಧ್ಯವಾಗುತ್ತದೆ. ಈ ಹಿನ್ನಲೆಯಲ್ಲಿ ಹಂಪಿಯ ಐತಿಹಾಸಿಕತೆ ಕಟ್ಟಲು ಪ್ರಯತ್ನಿಸಲಾಗಿದೆ. ಹಂಪಿಯ ಚರಿತ್ರೆ ಆರಂಭವಾಗುವುದು ಆದಿ ಮಾನವನ ಕಾಲದಿಂದ. ಇಲ್ಲಿನ ನದಿ-ಗುಡ್ಡ-ಬೆಟ್ಟಗಳು ಮನುಷ್ಯನ ವಾಸಕ್ಕೆ ಯೋಗ್ಯ ನೆಲೆಗಳಾಗಿದೆ. ನಂತರ ಬೌದ್ಧರು ನೆಲೆಸಿದ್ದರ ಕುರುಹು ದೊರೆಯುತ್ತದೆ. ಶಾಸನಗಳಲ್ಲಿ ಪಂಪಾ ಅಥವಾ ಹಂಪಿಯ ಉಲ್ಲೇಖ ಕಂಡುಬರುವುದು ಬಾದಾಮಿ ಚಾಲುಕ್ಯರ ಕಾಲದಿಂದ ಇದಕ್ಕೂ ಮೊದಲು ಬನವಾಸಿ ಕದಂಬರ ವಾಸ್ತು ಶೈಲಿಯ ರಚನೆಗಳು ಹಂಪಿಯಲ್ಲಿ ಕಂಡುಬರುತ್ತವೆ. ಕಲ್ಯಾಣದ ಚಾಲುಕ್ಯರು, ಕುರುಗೋಡು, ಸಿಂಧರು, ಹೊಯ್ಸಳರು ಕುಮ್ಮಟದುರ್ಗದ ನಾಯಕರೂ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿರುವುದನ್ನು ಕಾಣಬಹುದಾಗಿದೆ. ನಂತರ ಸ್ಥಳೀಯರೇ ಆದ ವಿಜಯನಗರದ ಅರಸರು ವಿರೂಪಾಕ್ಷನನ್ನೇ ರಾಜನೆಂದು ಭಾವಿಸಿ ಆಡಳಿತ ಮಾಡಿರುವುದನ್ನು ಕಾಣಬಹುದಾಗಿದೆ.

ಪ್ರಸ್ತುತ ಅಧ್ಯಾಯವು ಮಹಾಪ್ರಬಂಧದ ವ್ಯಾಪ್ತಿಯ ಹಿನ್ನಲೆಯಲ್ಲಿ ಕೇವಲ (ಪ್ರಮುಖ) ರಾಜರ ಆಡಳಿತ ಅವಧಿಯಲ್ಲಿ ಹಂಪಿಯ ವಿವಿಧ ದೇವರುಗಳಿಗೆ ದಾನ-ದತ್ತಿ, ಜೀರ್ಣೋದ್ಧಾರ ಕೈಗೊಂಡ ವಿಷಯಗಳನ್ನು (ರಾಜರ ಸಾಮಂತರನ್ನೊಳಗೊಂಡು) ಶಾಸನಗಳ ಹಿನ್ನಲೆಯಲ್ಲಿ ಚರ್ಚಿಸಲಾಗಿದೆ. ರಾಜರನ್ನೇ ಪ್ರಧಾನೀಕರಿಸಿ ಐತಿಹಾಸಿಕ(ಹಂಪಿಯ)ತೆಯನ್ನು ಕಟ್ಟಲಾಗಿದೆ. ಆ ಮೂಲಕ ಹಂಪಿಯ ಚಾರಿತ್ರಿಕ ಮಹತ್ವ ಅರಿಯಲು ಪ್ರಯತ್ನಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಓಂ ಶ್ರೀ ಗುರು ಸಿದ್ಧಲಿಂಗೇಶ್ವರ ಸ್ವಾಮಿಗಳು, ಪಂಪಾಮಹಾತ್ಮೆ, ಪು.೨೯

೨. ಚಿದಾನಂದಮೂರ್ತಿ ಎಂ., ಹೊಸತು-ಹೊಸತು, ಪು.೪೫೬

೩. ಶಿವಶಂಕರ್ ಎಂ.ಎನ್. ಮತ್ತು ಪಾಟೀಲ್ ಸಿ.ಎಸ್.(ಸಂ) ವಿಜಯನಗರ ಅಧ್ಯಯನ ಸಂ.೩, ಪು.೮೯

೪. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ನಾಚಾರ, ಡಿ.ವಿ.ಪರಮಶಿವಮೂರ್ತಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾ.ಸಂ.೫೫, ಪು.೪೪-೪೫

೫. ಅದೇ, ಶಾ.ಸಂ.೫೪, ಪು.೪೦

೬. ಅದೇ, ಶಾ.ಸಂ.೫೩, ಪು.೩೪

೭. ಅದೇ, ಶಾ.ಸಂ.೧೪೫, ಪು.೧೧೬

೮. ಅದೇ, ಶಾ.ಸಂ.೧೪೬, ಪು.೧೧೭

೯. ಅದೇ, ಶಾ.ಸಂ.೫೪,ಪು.೩೯

೧೦. ಅದೇ, ಶಾ.ಸಂ.೧೫೫, ಪು.೧೨೨

೧೧. ಅದೇ, ಶಾ.ಸಂ.೩೨೭, ಪು.೨೪೧

೧೨. ಅದೇ, ಶಾ.ಸಂ.೩೨೮, ಪು.೨೪೨

೧೩. ಅದೇ, ಶಾ.ಸಂ.೩೫೦, ಪು.೨೫೫

೧೪. ಅದೇ, ಶಾ.ಸಂ.೩೯೮, ಪು.೨೮೪

೧೫. ಅದೇ, ಶಾ.ಸಂ.೩೨೧, ಪು.೨೩೨

೧೬. ಅದೇ, ಶಾ.ಸಂ.೧೧೧, ಪು.೯೫

೧೭. ಅದೇ, ಶಾ.ಸಂ.೮೩, ಪು.೮೩

೧೮. ಅದೇ, ಶಾ.ಸಂ.೫೩, ಪು.೩೪

೧೯. ಅದೇ, ಶಾ.ಸಂ.೬೯, ಪು.೬೨

೨೦. ಅದೇ, ಶಾ.ಸಂ.೫೫, ಪು.೪೭

೨೧. ವಿವೇಕ ರೈ ಬಿ.ಎ.(ಸಂ), ರಾಘವಾಂಕನ ಸಮಗ್ರಕಾವ್ಯ, ಪು.೧

೨೨. ದೇವೀರಪ್ಪ ಎಚ್.(ಸಂ), ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೩೦

೨೩. ಅದೇ, ಪು.೪೩೨

೨೪. ಅದೇ, ಪು.೪೩೫

೨೫. ಭೂಸನೂರಮಠ ಸಂ.ಶಿ.(ಸಂ) ಲಿಂಗಲೀಲಾವಿಲಾಸ ಚಾರಿತ್ರ, ಪು.೨

೨೬. ಶಿವಮೂರ್ತಿಶಾಸ್ತ್ರಿ ಬಿ.(ಸಂ), ಪಂಪಾಸ್ಥಾನ ವರ್ಣನಂ, ಪು.೧

೨೭. ಅದೇ, ಪು.೪-೫

೨೮. ಅದೇ, ಪು.೧೩

೨೯. ಬಸವರಾಜ ಮಲಶೆಟ್ಟಿ(ಸಂ), ಎನಗಿಂತ ಕಿರಿಯರಿಲ್ಲ(ಅ.ಗ್ರಂಥ), ಪು.೨೨೫-೨೨೬

೩೦. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾ.ಸಂ.೩೯೯, ಪು.೨೮೬

೩೧. ಪೂರ್ವೋಕ್ತ, ಎನಗಿಂತ ಕಿರಿಯರಿಲ್ಲ (ಅ.ಗ್ರಂಥ), ಪು.೨೨೭

೩೨. ಅದೇ, ಪು.೨೨೯

೩೩. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿ ಶಾಸನಗಳು, ಪು.XXII, ಪ್ರಸ್ತಾವನೆ

೩೪. ಅದೇ, ಪು.XXVI(ಪ್ರಸ್ತಾವನೆ)

೩೫. ಅದೇ, ಶಾ.ಸಂ.೫೫, ಪು.೪೫

೩೬. ಅದೇ, ಶಾ.ಸಂ.೫೪, ಪು.೪೦

೩೭. ಎಫಿಗ್ರಾಫಿಯಾ ಕರ್ನಾಟಿಕ XII, ಗುಬ್ಬಿ ೩೦

೩೮. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾ.ಸಂ.೫೯, ಪು.೫೦

೩೯. ಅದೇ, ಶಾ.ಸಂ.೫೩, ಸ್ಪು.೩೪

೪೦. ಅದೇ, ಪು.XXVIII(ಪ್ರಸ್ತಾವನೆ)

೪೧. ಅದೇ, ,,

೪೨. ಅದೇ, ಶಾ.ಸಂ.೨೫೧, ಪು.೧೯೩

೪೩. ಅದೇ, ಶಾ.ಸಂ.೫೩, ಪು.೩೩

೪೪. ಅದೇ, ಶಾ.ಸಂ.೩೨೮, ಪು.೨೪೨

೪೫. ಅದೇ, ಪು.XXIX(ಪ್ರಸ್ತಾವನೆ)

೪೬. ಅದೇ, ಶಾ.ಸಂ.೧೪೫, ಪು.೧೧೬

೪೭. ಅದೇ, ಶಾ.ಸಂ.೩೬೫, ಪು.೨೬೨

೪೮. ಅದೇ, ಶಾ.ಸಂ.೬೧, ಪು.೫೨

೪೯. ಅದೇ, ಶಾ.ಸಂ.೧೪೭, ಪು.೧೧೮

೫೦. ಅದೇ, ಶಾ.ಸಂ.೩೫೦, ಪು.೨೫೪-೨೫೫

೫೧. ಅದೇ, ಶಾ.ಸಂ.೫೭, ಪು.೪೯

೫೨. ಅದೇ, ಶಾ.ಸಂ.೧೧೪, ಪು.೯೭

೫೩. ಅದೇ, ಶಾ.ಸಂ.೨೭೪, ಪು.೨೦೬

೫೪. ಅದೇ, ಶಾ.ಸಂ.೨೩೪, ಪು.೧೮೩

೫೫. ಅದೇ, ಶಾ.ಸಂ.೬೯, ಪು.೫೮-೫೯

೫೬. ಅದೇ, ಶಾ.ಸಂ.೩೨೭, ಪು.೨೪೧

೫೭. ಅದೇ, ಶಾ.ಸಂ.೩೧೧, ಪು.೨೨೪-೨೨೫

೫೮. ಅದೇ, ಶಾ.ಸಂ.೨೬೧, ಪು.೨೦೧

೫೯. ಅದೇ, ಶಾ.ಸಂ.೩೦೨, ಪು.೨೨೦

೬೦. ಅದೇ, ಶಾ.ಸಂ.೨೨೮, ಪು.೧೭೮

೬೧. ಅದೇ, ಶಾ.ಸಂ.೩೨, ಪು.೧೬

೬೨. ಅದೇ, ಶಾ.ಸಂ.೩೪, ಪು.೧೯

೬೩. ಅದೇ, ಶಾ.ಸಂ.೩೩, ಪು.೧೭

೬೪. ಅದೇ, ಶಾ.ಸಂ.೭೩, ಪು.೬೬-೬೯

೬೫. ಅದೇ, ಶಾ.ಸಂ.೧೮೧, ಪು.೧೩೧-೧೩೨

೬೬. ಅದೇ, ಶಾ.ಸಂ.೧೮೨, ಪು.೧೩೩-೧೩೪

೬೭. ಅದೇ, ಶಾ.ಸಂ.೨೩೫, ಪು.೧೮೪

೬೮. ಅದೇ, ಶಾ.ಸಂ.೨೬೫, ಪು.೨೦೩

೬೯. ಅದೇ, ಶಾ.ಸಂ.೭೪, ಪು.೭೧-೭೫

೭೦. ಅದೇ, ಶಾ.ಸಂ.೨೦೬-೨೦೭, ಪು.೧೬೧-೧೬೨, ೧೭೫

೭೧. ಅದೇ, ಶಾ.ಸಂ.೨೫೭, ಪು.೧೯೮-೧೯೯

೭೨. ಅದೇ, ಶಾ.ಸಂ.೨೨೯, ಪು.೧೭೯-೧೮೦

೭೩. ಅದೇ, ಶಾ.ಸಂ.೭೯, ಪು.೭೮-೭೯

೭೪. ಅದೇ, ಶಾ.ಸಂ.೨೫೩, ಪು.೧೯೫

೭೫. ಅದೇ, ಶಾ.ಸಂ.೮೧, ಪು.೮೦-೮೧

೭೬. ಅದೇ, ಶಾ.ಸಂ.೧೯೨, ಪು.೧೪೮

೭೭. ಅದೇ, ಶಾ.ಸಂ.೩೨೨, ಪು.೨೩೪

೭೮. ಅದೇ, ಶಾ.ಸಂ.೭೭, ಪು.೭೭

೭೯. ಅದೇ, ಶಾ.ಸಂ.೧೧೧, ಪು.೯೫

೮೦. ಅದೇ, ಶಾ.ಸಂ.೧೯೦, ಪು.೧೪೪-೧೪೫

೮೧. ಅದೇ, ಶಾ.ಸಂ.೫೦, ಪು.೨೮

೮೨. ಅದೇ, ಶಾ.ಸಂ.೧೩೨, ಪು.೧೦೬-೧೦೭

೮೩. ಅದೇ, ಶಾ.ಸಂ.೧೮೯, ಪು.೧೪೩-೧೪೪

೮೪. ಅದೇ. ಶಾ.ಸಂ.೧೯೩, ಪು.೧೪೯

೮೫. ಅದೇ, ಶಾ.ಸಂ.೨೧೧, ಪು.೧೬೯

೮೬. ಅದೇ, ಶಾ.ಸಂ.೨, ಪು.೨

೮೭. ಅದೇ, ಶಾ.ಸಂ.೧೯೪, ಪು.೧೫೦

೮೮. ಅದೇ, ಶಾ.ಸಂ.೧೯೫, ಪು.೧೫೦

೮೯. ಅದೇ, ಶಾ.ಸಂ.೩೮೩, ಪು.೨೭೦

೯೦. ಅದೇ, ಶಾ.ಸಂ.೧೯೭, ಪು.೧೫೩

೯೧. ಅದೇ, ಶಾ.ಸಂ.೧೯೮, ಪು.೧೫೪

೯೨. ಅದೇ, ಶಾ.ಸಂ.೭೫, ಪು.೭೬

೯೩. ಅದೇ, ಶಾ.ಸಂ.೧೩೧, ಪು.೧೦೫

೯೪. ಅದೇ, ಶಾ.ಸಂ.೨೫೨, ಪು.೧೯೪

೯೫. ಅದೇ, ಶಾ.ಸಂ.೨೭೯, ಪು.೨೦೮

೯೬. ಅದೇ, ಶಾ.ಸಂ.೧೯೬, ಪು.೧೫೧-೧೫೨

೯೭. ಅದೇ, ಶಾ.ಸಂ.೮೩, ಪು.೮೩

೯೮. ಅದೇ, ಶಾ.ಸಂ.೮೪, ಪು.೮೪-೮೫

೯೯. ಅದೇ, ಶಾ.ಸಂ.೨೦೧, ಪು.೧೫೬

೧೦೦. ಅದೇ, ಶಾ.ಸಂ.೨೦೫, ಪು.೧೬೦

೧೦೧. ಅದೇ, ಶಾ.ಸಂ.೨೮೯, ಪು.೨೧೩

೧೦೨. ಅದೇ, ಶಾ.ಸಂ.೩೩೦, ಪು.೨೪೩-೨೪೪

೧೦೩. ಅದೇ, ಶಾ.ಸಂ.೨೧೦, ಪು.೧೬೭-೧೬೮

೧೦೪. ಅದೇ, ಶಾ.ಸಂ.೧೮೬, ಪು.೧೩೯-೧೪೦

೧೦೫. ಅದೇ, ಶಾ.ಸಂ.೧೮೭, ಪು.೧೪೧-೧೪೨

೧೦೬. ಅದೇ, ಶಾ.ಸಂ.೨೮೮, ಪು.೨೧೨

೧೦೭. ಅದೇ, ಶಾ.ಸಂ.೧೩೬, ಪು.೧೧೦-೧೧

೧೦೮. ಅದೇ, ಶಾ.ಸಂ.೨೦೯, ಪು.೧೬೫-೧೬೬

೧೦೯. ಅದೇ, ಶಾ.ಸಂ.೩೫೧. ಪು.೨೫೬

೧೧೦. ಅದೇ, ಶಾ.ಸಂ.೧೯೧, ಪು.೧೪೬-೧೪೭

೧೧೧. ಅದೇ, ಶಾ.ಸಂ.೧೩೮, ಪು.೧೧೨-೧೧೩

೧೧೨. ಅದೇ, ಶಾ.ಸಂ.೧೮೩ ಪು.೧೩೫-೧೩೬

೧೧೩. ಅದೇ, ಶಾ.ಸಂ.೨೧೪, ಪು.೧೭೧

೧೧೪. ಅದೇ, ಶಾ.ಸಂ.೨೪೧, ಪು.೧೮೭

೧೧೫. ಅದೇ, ಶಾ.ಸಂ.೧೮೫, ಪು.೧೩೮

೧೧೬. ಅದೇ, ಶಾ.ಸಂ.೨೦೪, ಪು.೧೫೮-೧೫೯

೧೧೭. ಅದೇ, ಶಾ.ಸಂ.೭೮, ಪು.೭೮

೧೧೮. ಅದೇ, ಶಾ.ಸಂ.೩೩೮, ಪು.೨೪೭

## ಅಧ್ಯಾಯ ೩

# ನೆಲೆ-ಹಿನ್ನೆಲೆ

೧. ಶೈವಮತದ ಹುಟ್ಟು ಮತ್ತು ಬೆಳವಣಿಗೆ ಹಾಗೂ ಪ್ರಕಾರಗಳು

೨. ವೀರಶೈವದ ಹುಟ್ಟು ಮತ್ತು ಬೆಳವಣಿಗೆ

೩. ದೈವಗಳು

೩

# ನೆಲೆ-ಹಿನ್ನೆಲೆ

## ಅ. ಶೈವ ಮತದ ಹುಟ್ಟು ಬೆಳವಣಿಗೆ ಮತ್ತು ಅದರ ಪ್ರಕಾರಗಳು

ಭಾರತ ಹಲವು ಮತ-ಧರ್ಮಗಳ ನೆಲೆವೀಡು. ಸಿಂಧೂ ನಾಗರೀಕತೆಯಿಂದ ಹಿಡಿದು ೧೯ನೇ ಶತಮಾನದ ಆದಿಭಾಗದವರೆಗೆ ಅನೇಕ ಧಾರ್ಮಿಕ ಪಂಥಗಳು, ಹುಟ್ಟಿ ತಮ್ಮದೇ ಆದ ಧ್ಯೇಯ-ಧೋರಣೆಗಳ ಮೂಲಕ ತಮ್ಮ-ತಮ್ಮ ಅಸ್ಥಿತ್ವ ಕಾಯ್ದುಕೊಂಡು ಮುನ್ನೆಡೆಯುತ್ತಿವೆ. ಕೆಲವು ಮತ ಪಂಥಗಳು ೧೦ನೇ ಶತಮಾನದಿಂದೀಚೆಗೆ ಅವನತಿಯತ್ತ ಸಾಗಿ, ಅಸ್ಥಿತ್ವಕ್ಕಾಗಿ ಹೋರಾಟ ಮಾಡುತ್ತಲೇ ೧೪-೧೫ನೇ ಶತಮಾನದ ಹೊತ್ತಿಗೆ ಸಂಪೂರ್ಣ ನಾಶವಾದರೂ ಅವುಗಳ ಬೇರುಗಳನ್ನು ಇಂದಿಗೂ ಕಾಣಬಹುದಾಗಿದೆ. ಇದಕ್ಕೆ ಕರ್ನಾಟಕ ಹೊರತಾಗಿಲ್ಲ. ಶೈವಧರ್ಮದ ಪ್ರಮುಖ ಶಾಖೆಗಳಾದ ಕಾಳಾಮುಖ, ಕಾಪಾಲಿಕ, ನಕುಲೀಶ, ಕಾಶ್ಮೀರಿಶೈವ, ಲಾಕುಳ ಮುಂತಾದವು ಪ್ರಾಚೀನ ಕರ್ನಾಟಕದಲ್ಲಿ ಅಸ್ಥಿತ್ವದಲ್ಲಿದ್ದು ಈಗ ನಾಶವಾಗಿರುವುದಕ್ಕೆ ಅನೇಕ ಆಧಾರಗಳಿವೆ. ಹಾಗೆಯೇ ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ಶಕ್ತಿವಿಶಿಷ್ಟಾದ್ವೈತ ಮುಂತಾದವುಗಳು ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದು, ಇಂದಿಗೂ ತಮ್ಮ ಸಿದ್ಧಾಂತಗಳನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಈ ಮೇಲಿನ ಬಹುತೇಕ ಮತ ತತ್ತ್ವ ಸಿದ್ಧಾಂತಗಳು ವಿಜಯನಗರ ಪೂರ್ವ-ವಿಜಯನಗರ ಕಾಲದಲ್ಲಿ ಹಂಪಿ ಪರಿಸರದಲ್ಲಿ ಅಸ್ಥಿತ್ವ ಹೊಂದಿ ತಮ್ಮದೇ ಆದ ಪ್ರಭಾವಬೀರಿ ಪೋಷಿಸಲ್ಪಟ್ಟಿದ್ದವು ಎಂಬುದಕ್ಕೆ ಆಧಾರಗಳಿವೆ.

ಹಂಪಿ ಪ್ರಾರಂಭದಿಂದ ವಿಜಯನಗರದ ಅರಂಭಿಕ ಅರಸುಮನೆತನದವರೆಗೆ ಶೈವ ಮಹಾಕ್ಷೇತ್ರವಾಗಿತ್ತೆಂಬುದನ್ನು ಅನೇಕ ಶಾಸನಗಳು, ದೇವಾಲಯಗಳು, ಸಾಹಿತ್ಯ ಕೃತಿಗಳು ದೃಢಪಡಿಸುತ್ತವೆ. ಪಾಶುಪತ ಅಥವಾ ಕಾಳಾಮುಖ, ಕಾಪಾಲಿಕ ಅಥವಾ ಭೈರವ ಸಂಪ್ರದಾಯ, ನಾಥಪಂಥ, ಮುಂತಾದವು ಹಂಪಿಯಲ್ಲಿ ಅಸ್ತಿತ್ವಕ್ಕೆ ಬಂದು ಮರೆಯಾಗಿರುವುದನ್ನು ಕಾಣುತ್ತೇವೆ. ಆದರೆ ವೀರಶೈವ ವಿಜಯನಗರ ಕಾಲದಲ್ಲಿ ಅಸ್ತಿತ್ವ ಪಡೆದು, ಪೋಷಿಸಲ್ಪಟ್ಟು, ಇಂದಿಗೂ ತನ್ನ ಅಸ್ಥಿತ್ವ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ನೂರಾ ಒಂದು ವಿರಕ್ತರು ಏಳುನೂರಾ ಒಂದು ವಿರಕ್ತರು ಹಂಪಿಯಲ್ಲಿ ಕೆಲವು

ವರ್ಷಗಳ ಕಾಲ ನೆಲೆಸಿ ವೀರಶೈವಕ್ಕೆ ಶಕ್ತಿ ತುಂಬಿರುವುದನ್ನು ಚರಿತ್ರೆಯಲ್ಲಿ ದಾಖಲಿಸಲಾಗಿದೆ. ವಿಜಯನಗರದ ಸಂಗಮವಂಶದ ಅರಸರುಗಳಿಗೆ ಶೈವ ಮೂಲದ ವೀರಶೈವ ಧರ್ಮಗುರುಗಳು ರಾಜಗುರುಗಳಾಗಿದ್ದನ್ನು ಅನೇಕ ಶಾಸನಗಳು ದಾಖಲಿಸಿವೆ.

ಭರತ ಖಂಡದಲ್ಲಿ ಶೈವಧರ್ಮವು ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲೊಂದು. ಶಿವೋಪಾಸನೆಯ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಹರಪ್ಪ-ಮೊಹೆಂಜೊದಾರೋಗಳ ಸೈಂಧವ ಸಂಸ್ಕೃತಿಯಲ್ಲಿ (ಕ್ರಿ.ಪೂ.ಸು.೩೨೫೦-೨೭೫೦) ಕೊಂಬುಗಳಿರುವ, ದೇವತೆಯ ಚಿತ್ರವಿರುವ ಮುದ್ರಿಕೆಗಳೂ, ಲಿಂಗಗಳೂ ದೊರತಿವೆ. ಕೊಂಬುಗಳಿರುವ ದೇವತೆಗೆ ಮೂರು ಮುಖಗಳಿವೆ. ಅವನು ಯೋಗಸಮಾಧಿಯ ಭಂಗಿಯಲ್ಲಿ ಕುಳಿತಿದ್ದಾನೆ. ಅವನ ಸುತ್ತಮುತ್ತ ಮತ್ತು ಪೀಠದ ಕೆಳಗೆ ಆನೆ, ಹುಲಿ, ಖಡ್ಗಮೃಗ, ಎಮ್ಮೆ, ಜಿಂಕೆಗಳು ಸುತ್ತುವರೆದಿವೆ. ಇದನ್ನು ಪರಿಶೀಲಿಸಿ ಆ ವಿಗ್ರಹವು ಹಿಂದೂಧರ್ಮದ ಮಹಾಯೋಗಿಯೂ, ಪಶುಪತಿಯೂ ಆದ ಶಿವನ ಪ್ರಾಚೀನ ರೂಪವನ್ನು ಸೂಚಿಸುತ್ತದೆಂದು ಸರ್. ಜಾನ್‌ಮಾರ್ಷಲ್ಲರು ಅಭಿಪ್ರಾಯಪಡುತ್ತಾರೆ.[೧] ಇದೇ ವಿದ್ವಾಂಸರು ಮೊಹೆಂಜೊದಾರೋ ಮತ್ತು ಹರಪ್ಪಗಳ ಅವಶೇಷಗಳಿಂದ ಶೈವಧರ್ಮವು ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನವಾದ ಜೀವಂತ ಧರ್ಮವೆಂದು ಭಾವಿಸಬೇಕಾಗುತ್ತದೆಯೆಂದು ಅವರು ತಮ್ಮ ಗ್ರಂಥದ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.[೨] ಅಂದರೆ ಸರ್.ಜಾನ್ ಮಾರ್ಷಲ್ಲರ ಪ್ರಕಾರ ಶೈವಧರ್ಮವು ಸಿಂಧೂನಾಗರೀಕತೆಯಷ್ಟೇ ಪ್ರಾಚೀನವಾದದ್ದು. ಸಿಂಧೂ ಸಂಸ್ಕೃತಿಯ ಜೊತೆಗೆ ಶೈವಧರ್ಮದ ಚರಿತ್ರೆಯೂ ಪ್ರಾರಂಭವಾಗುತ್ತದೆಂದು ಭಾವಿಸಬೇಕಾಗುತ್ತದೆ.

ಋಗ್ವೇದದಲ್ಲಿ ರುದ್ರನೆಂದು, ಆಗಮಗಳಲ್ಲಿ ಶಿವನೆಂದು ಕರೆಯಲಾಗಿದೆ. ಮುಂದೆ ಕಾಲಾಂತರದಲ್ಲಿ ಜನರು ಶಿವನನ್ನು ತಮ್ಮ ನೆಲೆಯಲ್ಲಿ ಕಲ್ಪಿಸಿಕೊಂಡು, ಆರಾಧಿಸಿಕೊಂಡು ಬರತೊಡಗಿದರು. ಇದರ ಫಲವೇ ಶೈವದಲ್ಲಿ ನಾಲ್ಕಾರು ಪ್ರಭೇದಗಳು ಹುಟ್ಟಿಕೊಂಡವು. ಅವುಗಳೇ ಲಕುಲೀಶ, ಪಾಶುಪತ, ಕಾಳಾಮುಖ, ಕಾಪಾಲಿಕ, ಕಾಶ್ಮೀರಶೈವ ಮುಂತಾದವಗಳು. ಶೈವಧರ್ಮದ ಗುಣಲಕ್ಷಣವನ್ನು ಸ್ವರೂಪವನ್ನು ಮೊದಲು ತಿಳಿಯಪಡಿಸುವುವು ೨೮ ಶಿವಾಗಮಗಳು. ಇವುಗಳಲ್ಲಿ ಶಿವನ ಸ್ವರೂಪ ಅವನ ಲೀಲೆಗಳು, ದೇವಸ್ಥಾನಗಳ ನಿರ್ಮಾಣ, ಪೂಜಾ ವಿಧಾನ, ವಿಗ್ರಹಾರಾಧನೆ ಯೋಗ ಮಂತ್ರಗಳ ಉಚ್ಚಾರಣಾಕ್ರಮ, ಜಪ ತಪ ಮುಂತಾದ ಅಂಶಗಳನ್ನು ವಿವರಿಸಲಾಗಿದೆ.

ಶೈವಭೇದಗಳ ವಿಷಯದಲ್ಲಿ ಬೇರೆ ಬೇರೆ ಅಭಿಪ್ರಾಯಗಳು ವ್ಯಕ್ತವಾಗಿವೆ. ಶೈವ, ಪಾಶುಪತ, ಕಾಪಾಲ, ಕಾಳಾಮುಖ ಇವು ನಾಲ್ಕು ಬಗೆಯ ಶೈವಾಗಮಗಳೆಂದು ಒಂದೆಡೆ ವ್ಯಕ್ತವಾಗಿದ್ದರೆ, ಬೇರೆ ಕಡೆಗೆ ಶೈವ, ಪಾಶುಪತ, ಸೋಮ, ಲಾಕುಳಗಳ ಉಲ್ಲೇಖ ಬರುತ್ತದೆ. ಬೇರೆ ಕೆಲವರು ಪಾಶುಪತ, ಕಾಳಾಮುಖ, ಲಾಕುಳ, ಮಾಹೇಶ್ವರ ಎಂಬ ನಾಲ್ಕು ಶೈವ ಪ್ರಭೇದಗಳನ್ನು ಹೇಳುತ್ತಾರೆ. ಕಾಪಾಲಿಕ ಅಥವಾ ಕಾಪಾಲನೇ ಸೋಮವೆಂದು ಕೆಲವರು ಭಾವಿಸಿದ್ದಾರೆ. ಪಾಶುಪತವನ್ನು ಮಾಹೇಶ್ವರವೆಂದು

ಹೇಳಬಹುದು. ಇದೊಂದು ಮುಖ್ಯವಾದ ಶೈವಪ್ರಬೇಧ. ಹೀಗೆ ಶೈವ, ಪಾಶುಪತ (ಮಹೇಶ್ವರ) ಸೋಮ(ಕಾಪಾಲಿಕ) ಕಾಳಾಮುಖ (ಲಾಕುಳ) ಇವು ನಾಲ್ಕು ಮುಖ್ಯ ಶೈವಭೇದಗಳೆಂದು ಪರಿಗಣಿಸಬಹುದು.[೧] ಈ ಹಿನ್ನೆಲೆಯಲ್ಲಿ ಡಾ.ಆರ್.ಸಿ. ಹಿರೇಮಠರು ಶಿವಾಗಮಗಳಲ್ಲಿ ಉಲ್ಲೇಖವಾಗಿರುವ ಶೈವಪ್ರಭೇದಗಳನ್ನು ಕುರಿತು ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ.

ಸರ್ವದರ್ಶನ ಸಂಗ್ರಹದ ಪ್ರಕಾರ ಶೈವರಲ್ಲಿ ಲಕುಳೀಶ ಪಾಶುಪತ, ಪ್ರತ್ಯಭಿಜ್ಞಾ ಮತ್ತು ರಸೇಶ್ವರ ಎಂಬ ಮೂರು ಪ್ರಭೇದಗಳಿವೆ. ಕಾರಣಾಗಮದಲ್ಲಿ ಶೈವ, ಪಾಶುಪತ, ಸೋಮ, ಲಾಕುಳ ಎಂಬ ನಾಲ್ಕು, ಪೂರ್ವಪುರಾಣದಲ್ಲಿ ಕಾಪಾಲ, ಲಾಕುಲ, ವಾಮ, ಭೈರವ, ಪಾಶುಪತ ಎಂಬ ಐದು, ಆನಂದಗಿರಿ ವಾಚಸ್ಪತಿಗಳ ಪ್ರಕಾರ ಶೈವ, ಪಾಶುಪತ, ಕಾರುಕ (ಕಾರುಣಿಕ) ಸಿದ್ಧಾಂತ, ಕಾಪಾಲಿಕ ಎಂಬ ನಾಲ್ಕು ಭೇದಗಳಿವೆ. ರಾಮಾನುಜಾಚಾರ್ಯರು ಶ್ರೀಭಾಷ್ಯದಲ್ಲಿ ಮಹಾಭಾರತದ ಶ್ಲೋಕಗಳನ್ನನುಸರಿಸಿ ಕಾಪಾಲಿಕರೇ ಕಾಳಾಮುಖರೆಂದು ಹೇಳಿದ್ದರೂ ಕರ್ನಾಟಕ ಶಾಸನಗಳಿಂದ ಕಾಳಾಮುಖರು ಕಪಾಲಧಾರಿಗಳಾಗಿದ್ದರೆಂದು ತಿಳಿದುಬರುವುದಿಲ್ಲ. ಕಾಪಾಲಿಕ, ಅಘೋರಪಂಥಿ, ಭೈರವ ಮುಂತಾದವರು ಲಾಕುಳ, ಕಾಳಾಮುಖರಿಗಿಂತ ಭಿನ್ನವೆಂದು[೨], ಡಾ.ಎಸ್.ಶ್ರೀಕಂಠಶಾಸ್ತ್ರಿಗಳು ವಾದಮಂಡಿಸುತ್ತಾರೆ.

ಗುಬ್ಬಿಮಲ್ಲಣಾರ್ಯನು ತನ್ನ ವೀರಶೈವಾಮೃತ ಪುರಾಣದಲ್ಲಿ ಸಪ್ತ ಶೈವ ಪ್ರಭೇದಗಳನ್ನು ಕುರಿತು

> ''ಒಂದನೆಯದೆನಿಸುವುದನಾದಿ ಶೈವವದೆರಡು
> ತಾಂದಲಾದಿಯ ಶೈವವಾ ಮೂಱನೆಯದೆನಲ
> ವಿಂದಂ ಮಹಾಶೈವವಯ್ಯ ನಾಲ್ಕನೆಯದನುಶೈವ ವೈದನೆಯದೆನಿಸಿ
> ಮುಂದೆಯಂತರ ಶೈವವಾಱನೆಯದಾ ಪ್ರವರ
> ವೆಂದೆನಿಪ ಶೈವ ವೇಳನೆಯ ದಂತ್ಯಾಖ್ಯಶೈ
> ವಂ ದಿಟಂ ಕೇಳಿವನದಾರಾರು ನಡೆಸಿದರು ತತ್ತತ್ಕ್ರಮಂಗಳಿನ್ನು''[೫]

ಎಂದು ಹೇಳಿದ್ದಾನೆ.

ಕವಿಯ ಪ್ರಕಾರ ಅನಾದಿ ಶೈವ, ಆದಿಶೈವ, ಮಹಾಶೈವ, ಅನುಶೈವ, ಅಂತರಶೈವ, ಪ್ರವರಶೈವ ಮತ್ತು ಅಂತ್ಯಶೈವ ಇವು ಏಳು ಶೈವ ಪ್ರಭೇದಗಳು. ಗುಬ್ಬಿ ಮಲ್ಲಣಾರ್ಯನ ಕಾಲದಲ್ಲಿ ಈ ಏಳು ಶೈವ ಪ್ರಬೇಧಗಳು ಜನರಲ್ಲಿ ಜೀವಿಸಿದ್ದಿರಬಹುದು. ಆದ್ದರಿಂದ ಕವಿ ತನ್ನ ಕಾಲದ ಶೈವ ಪ್ರಭೇದಗಳನ್ನು ತನ್ನ ಕಾವ್ಯದಲ್ಲಿ ಉಲ್ಲೇಖಿಸಿರುವಂತೆ ಕಂಡುಬರುತ್ತದೆ. ಆದರೆ ಸಮಕಾಲೀನ ಶಾಸನಗಳು ಈ ಶೈವಗಳನ್ನು ಕುರಿತು ದಾಖಲಿಸುವುದಿಲ್ಲ. ಕಾರಣ ಈ ಹೊತ್ತಿಗಾಗಲೇ ಈ ಏಳು ಶೈವಶಾಖೆಗಳು ವೀರಶೈವದಲ್ಲಿ ಲೀನವಾದಂತೆ ತೋರುತ್ತದೆ.

ಹಂಪಿಯಲ್ಲಿ ಮುಖ್ಯವಾಗಿ ಕಾಳಾಮುಖ, ಕಾಪಾಲಿಕ ಅಥವಾ ಭೈರವ ಪಂಥ, ವೀರಶೈವ ಶಾಖೆಗಳು ಕಂಡುಬರುತ್ತವೆ.

೧. ಕಾಳಾಮುಖ

ಶೈವಶಾಖೆಗಳಲ್ಲಿ ಪ್ರಸಿದ್ಧವಾದದ್ದು ಕಾಳಾಮುಖ. ಇವರು ಮುಖದ ಮೇಲೆ ಕರಿಯ ಗೆರೆಗಳನ್ನು ಹಚ್ಚಿಕೊಳ್ಳುತ್ತಿದ್ದುದರಿಂದ ಇವರನ್ನು ಕಾಳಾಮುಖರೆಂದು ಕರೆಯುತ್ತಿದ್ದಿರಬೇಕೆಂದು ಗೋಪಿನಾಥರಾವ್ ಅವರು ತಮ್ಮ 'Elements of Hindu Iconography' ಎಂಬ ಕೃತಿಯಲ್ಲಿ(ಪುಟ-೨೫) ಅಭಿಪ್ರಾಯ ಪಡುತ್ತಾರೆ. ಮಸಿಯನ್ನು ಹಚ್ಚಿಕೊಳ್ಳುವ ಸನ್ಯಾಸಿಗಳ ವಿಷಯವನ್ನು ಆರ್.ನರಸಿಂಹಾಚಾರ್ ತಮ್ಮ ಕರ್ನಾಟಕ ಕವಿಚರಿತೆಯಲ್ಲಿ ತಿಳಿಸಿದ್ದಾರೆ.[೬] ಇವರು ಕಾಳಾಮುಖ ರಾಗಿರಬಹುದು. ಕರ್ನಾಟಕದಲ್ಲಿ ವೀರಶೈವಧರ್ಮ ಉತ್ಕರ್ಷಕ್ಕೆ ಬರುವ ಮೊದಲು ಕಾಳಾಮುಖ ಶೈವರೇ ಅತ್ಯಂತ ಪ್ರಭಾವಶಾಲಿಗಳಾಗಿದ್ದ ರೆಂದು ಕ್ರಿ.ಶ.೭೦೦ರ ಕಿಗ್ಗಾ ಶಾಸನದಿಂದ ತಿಳಿಯಬಹುದು.[೭] ಈ ಶಾಸನದಲ್ಲಿ ಪಾಶುಪತವನ್ನು ಹೆಸರಿಸಿದೆ. ಕ್ರಿ.ಶ.೧೦೪೮ರ ಶಾಸನದಲ್ಲಿ ಪಾಶುಪತಯೋಗಾಚಾರ್ಯ ಜ್ಞಾನರಾಶಿ ವ್ಯಾಖ್ಯಾನ ದೇವರ ಹೆಸರಿದೆ.[೮] ಅಲ್ಲದೆ ಕ್ರಿ.ಶ.೧೧೪೯ರ ಶಾಸನದಲ್ಲಿ ರುದ್ರಶಕ್ತಿ ಎಂಬಾತ 'ಮಹಾ ಪಾಶುಪತ'ದಲ್ಲಿ ಪ್ರಸಿದ್ಧನಾಗಿದ್ದು ಕಾಳಾಮುಖ ಶ್ರೇಷ್ಠನಾಗಿದ್ದನೆಂದು ವರ್ಣಿಸುತ್ತದೆ.[೯] ಅಂದರೆ ಈ ಶಾಸನದ ಪ್ರಕಾರ ಪಾಶುಪತ ಮತ್ತು ಕಾಳಾಮುಖ ಎರಡೂ ಒಂದೇ ಎಂದು ಅರಿಯಬಹುದು.

ಗುಲಬರ್ಗಾ ಜಿಲ್ಲೆಯ ಕ್ರಿ.ಶ.೧೦೭೧ರ ನಗರ ಶಾಸನದಲ್ಲಿ ಅನಂತ ಶಕ್ತಿಯತಿಯನ್ನು "ಕಾಳಾಮುಖ ಮಹಾವ್ರತ ಶೈವಸಮಯ ಸಮಾನ ಪಕ್ಷಪಾತರ್"[೧೦] ಎಂದು ಕರೆಯಲಾಗಿದೆ. ಇದರಿಂದ ಕಾಳಾಮುಖ, ಮಹಾವ್ರತ, ಪಾಶುಪತ, ಶೈವಸಮಯ ಈ ನಾಲ್ಕು ಶೈವ ಶಾಖೆಗಳು ಅಸ್ತಿತ್ವದಲ್ಲಿದ್ದವೆಂದೂ, 'ಸಮಾನಪಕ್ಷಪಾತರ್' ಎಂಬ ಮಾತಿನಿಂದ, ಇವು ಒಂದೇ ಮೂಲದ ಶಾಖೆಗಳೆಂದೂ ಸ್ಪಷ್ಟವಾಗುತ್ತದೆ.[೧೧] "ಲಾಕುಳ ಸಮಯ ಸಮುದ್ಧರಣುಂ....ಕಾಳಾಮುಖ ಪ್ರತಿಬದ್ಧರುಂ...." ಎಂಬಂಥ ಶಾಸನೋಕ್ತ ಪ್ರಯೋಗಗಳು ಲಾಕುಳ ಶೈವ, ಕಾಳಾಮುಖ ಇವು ಒಂದೇ ಸಂಪ್ರದಾಯಕ್ಕೆ ಸಂಬಂಧಿಸಿದ ಪದಗಳೆಂದು ಸ್ಪಷ್ಟಪಡಿಸುತ್ತವೆ. ಕ್ರಿ.ಶ.೧೯೦೫ರ ಅರಸೀಕೆರೆ ಶಾಸನೋಕ್ತ 'ಕಾಳಾಮುಖದೀಕ್ಷೆ' ಸೊರಬ ಶಾಸನ 'ಕಾಳಾಮುಖವ್ರತ' ಎಂಬ ಉಲ್ಲೇಖಿತ ಪ್ರಯೋಗಗಳನ್ನು ಗಮನಿಸಿದರೆ ಲಾಕುಳ ಸಮಯದವರಲ್ಲಿ (ನಕುಲೀಶ ಶೈವರಲ್ಲಿ) ವಿಶೇಷದೀಕ್ಷೆ, ವ್ರತ ಧರಿಸಿದವರನ್ನು ಕಾಳಾಮುಖರೆನ್ನುತ್ತಿದ್ದರೆಂದು ಖಚಿತವಾಗುತ್ತದೆ. ಲಾಕುಳ, ಪಾಶುಪತರಿಗೆ ಕಾಳಾಮುಖರೆಂಬ ಹೆಸರೂ ಇದೆ.

ಸಂಸ್ಕೃತದಲ್ಲಿ 'ಳ'ಕಾರವಿಲ್ಲವಾಗಿ ಆ ಗ್ರಂಥಗಳಲ್ಲಿ ಕಾಳಾಮುಖವೆಂಬುದು ಸಾಮಾನ್ಯವಾಗಿ ಕಂಡುಬರುತ್ತಿದ್ದರೂ ಸ್ಕಂದಪುರಾಣ, ರಾಜಶೇಖರನ ಷಡ್ದರ್ಶನ ಸಮುಚ್ಚಯಗಳಲ್ಲಿ ಕಾಲಮುಖವೆಂಬ

ಪ್ರಯೋಗ ಸಿಗುತ್ತದೆ. ಕಾಲಮುಖ, ಕಾಲಾಮುಖ, ಕಾಳಾಮುಖಗಳಲ್ಲಿಯ ಉತ್ತರಾರ್ಧದ ಪದವನ್ನು ಬಿಟ್ಟರೆ ಕಾಲ(ಕಾಳ), ಕಾಲಾ, ಕಾಳಾ ಎಂಬ ಪ್ರಕೃತಿಗಳು ಉಳಿಯುತ್ತಿದ್ದು ಇವುಗಳಿಗೆ ತಪ್ಪು ಅರ್ಥವನ್ನು ಪರಿಭಾವಿಸಿಕೊಂಡು, ಯಶಸ್ತಿಲಕ ಚಂಪೂ ಮತ್ತು ಕೋಡುಂಬಾರು ಶಾಸನ 'ಅಸಿತವಕ್ತ್ರ' ಪರ್ಯಾಯಪದವನ್ನು ಬಳಸಿದೆ. ಈ ಪದವನ್ನು ನೋಡುತ್ತಲೇ ಕೆಲವು ವಿದ್ವಾಂಸರು ಇವರು ಹಣೆಯ ಮೇಲೆ ಕಪ್ಪುಗೆರೆ ಧರಿಸುತ್ತಿದ್ದರೆಂದು, ಇನ್ನು ಕೆಲವು ವಿದ್ವಾಂಸರು ಕಪ್ಪುಭಸ್ಮ(ಬೂದಿ) ಧರಿಸುತ್ತಿದ್ದರೆಂದು ಅರ್ಥ ಹೇಳುತ್ತಾ ಬಂದರು,[೧೨] ಎಂದು ಡಾ.ಎಂ.ಎಂ.ಕಲಬುರ್ಗಿಯವರು 'ಕಾಳಾಮುಖ' ಎಂಬ ಪದಕ್ಕೆ ಹೊಸ ಅರ್ಥ ಕಲ್ಪಿಸಲು ಪ್ರಯತ್ನಿಸಿದ್ದಾರೆ.

ಡಾ.ಕಲಬುರ್ಗಿಯವರು ಪ್ರತಿಪಾದಿಸುವಂತೆ ಕಲೆಗೆ ಸಂಬಂಧಿಸಿದ್ದುದೇ ಕಲಾಮುಖ. ಇದು ಶಿವನ ಈಶಾನ, ವಾಮ, ಸದ್ಯೋಜಾತ, ಅಘೋರ, ತತ್ಪುರುಷ ಎಂಬ ಐದು ಮುಖಗಳಿಗೆ ಸಂಬಂಧಿಸಿದುದೇ ಕಾಲಮುಖ, ಈ ಕಾಲಮುಖಗಳನ್ನು ಕುರಿತು ಉಪಾಸನೆ ಮಾಡುವವರೇ ಕಾಲಾಮುಖರು ಎಂದು ಪಂಪಾಮಹಾತ್ಮ್ಯ ಕೃತಿಯ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುತ್ತಾರೆ. ಈ ಕಾಲಾಮುಖರು ದೇವಾಲಯ ನಿರ್ಮಿಸಿ, ಶಿವನ ೫ ಕಲಾಮುಖಗಳಲ್ಲಿ ಯಾವುದಾದರೂ ಒಂದನ್ನು, ವಿಶೇಷವಾಗಿ ೫ನೆಯದಾದ ತತ್ಪುರುಷ ಮುಖವನ್ನು ಲಿಂಗರೂಪದಲ್ಲಿ ಪ್ರತಿಷ್ಠಿಸುವ ಕಾಳಾಮುಖರಿಗೆ ಈ ಅರ್ಥಸರಿಯಾಗಿ ಹೊಂದಿಕೊಳ್ಳುತ್ತದೆ[೧೩] ಎನ್ನುತ್ತಾರೆ ಡಾ.ಕಲಬುರ್ಗಿಯವರು. ''ಪಾಶುಪತರು ಉಜ್ಜಯಿನಿ ಮಹಾಕಾಳ ಪೂಜಕರಾಗಿದ್ದುದರಿಂದ ಕಾಳಾಮುಖರೆಂದೂ ಲಕುಳೇಶ್ವರ ಸಂಪ್ರದಾಯದವರಾದುದರಿಂದ ಲಾಕುಳರೆಂದೂ ಎನಿಸಿಕೊಂಡರು. ಇವರಿಗೆ ಮುನಿ, ದೇವ, ಪಂಡಿತ, ರಾಶಿ, ಶಕ್ತಿ ಮುಂತಾದ ಉಪನಾಮಗಳಿದ್ದವು.''[೧೪] ಇದನ್ನು ಪುಷ್ಟೀಕರಿಸುವಂತೆ ಅನೇಕ ಕಾಳಾಮುಖ ಯತಿಗಳು ದೇವಾಲಯಗಳನ್ನು ನಿರ್ಮಿಸಿದ್ದನ್ನು ಉಲ್ಲೇಖಿಸಬಹುದು.

ಹಂಪಿಯಲ್ಲಿ ಮೊದಲು ಪಂಪಾಂಬಿಕೆ ನಂತರ ಲಿಂಗರೂಪಿ ವಿರೂಪಾಕ್ಷ ಮತ್ತು ವೀರಭದ್ರನ ಆರಾಧನೆ ಪ್ರಾರಂಭವಾಗಿರುವುದಕ್ಕೆ ಶಾಸನಾಧಾರವಿದೆ. ಕ್ರಿ.ಶ.೧೧೬೫ರ (ಬಿಜ್ಜಳನ) ಶಾಸನವು ಹಂಪಿಯ ವಿರೂಪಾಕ್ಷನ ಸನ್ನಿದಾನದಲ್ಲಿ ಬಿಜ್ಜಳನು ಮಹಾದಾನಗಳನ್ನು ಮಾಡುತ್ತಿದ್ದ ಸಂದರ್ಭದಲ್ಲಿ ಬೆಳ್ವಲನಾಡು ಮತ್ತು ವತ್ಸೆಯನಾಡಿನ ಅಧಿಕಾರಿ ಅಮ್ಮಣಯ್ಯನು ಅರಸನ ಅನುಮತಿ ಪಡೆದು ಎಡೆಯಹಳ್ಳಿಯನ್ನು ಕುಕ್ಕನೂರು ಮಲ್ಲಿಕಾರ್ಜುನ ದೇವರಿಗೆ ದಾನವಾಗಿ ಕೊಟ್ಟನು.[೧೫] ಇದೇ ವಿರೂಪಾಕ್ಷನನ್ನು ಮೊದಲು ದಾಖಲಿಸುವ ಶಾಸನವಾಗಿದೆ. ಈ ವೇಳೆಗಾಗಲೇ ವಿರೂಪಾಕ್ಷ ದೇವಾಲಯ ನಿರ್ಮಾಣವಾಗಿ ಪ್ರಸಿದ್ಧವಾಗಿತ್ತು. ಆಗಲೇ ಹಂಪಿ ಪರಿಸರದ ತುಂಬಾ ಕಾಳಾಮುಖಮತದವರು ವಾಸಿಸುತ್ತಿದ್ದರೆಂಬುದನ್ನು ಅರಿಯಬಹುದು. ಲಿಂಗರೂಪಿ ವಿರೂಪಾಕ್ಷನ ಪೂಜಾವ್ಯವಸ್ಥೆಯನ್ನು ಇವರೇ ನಿರ್ವಹಿಸುತ್ತಿದ್ದಂತೆ ತೋರುತ್ತದೆ. ವಿರೂಪಾಕ್ಷನಲ್ಲಿ ಅಪರಿಮಿತವಾದ ಭಕ್ತಿಯನ್ನು ಹೊಂದಿ ವಿರೂಪಾಕ್ಷನನ್ನೇ ಹಂಪಿಯ ಅರಸನನ್ನಾಗಿ ಮಾಡಿ ಕಾವ್ಯ ರಚಿಸಿದ ಹರಿಹರ ವೀರಶೈವ ಕವಿಯಾದರೂ ಮೂಲದಲ್ಲಿ ಕಾಳಾಮುಖ ಶೈವನಾಗಿದ್ದನು.

ಕಾಳಾಮುಖರಿಗೆ ಮುನಿ, ದೇವ, ಪಂಡಿತ, ಶಕ್ತಿ ಮುಂತಾದ ಉಪನಾಮಗಳಿರುವುದರಿಂದ ಹರಿಹರ ಮತ್ತು ರಾಘವಾಂಕರು ಮೂಲದಲ್ಲಿ ಕಾಳಾಮುಖ ಶೈವರಾಗಿದ್ದರೆಂದು ನಿರ್ದಿಷ್ಟವಾಗಿ ಹೇಳಬಹುದು. ಹರಿಹರ ಕವಿ ತನ್ನ ಗಿರಿಜಾಕಲ್ಯಾಣ ಕಾವ್ಯದಲ್ಲಿ " ವರಗಿರಿಜಾ ಕಲ್ಯಾಣಮನೊರೆದಂ ವಿವೇಕಿ ಹರಿಹರ ದೇವಂ"[೧೬] ಎಂದು ತನ್ನನ್ನು ಹರಿಹರದೇವ ಎಂದು ಕರೆದುಕೊಂಡಿದ್ದಾನೆ. ಅಲ್ಲದೆ ತನ್ನ ಗುರುವನ್ನು "ವಸುಧಾಗುರು ಶೈವಗುರು ಶಾಂತಗುರು ಮಾಯ್ದೇವಂ"[೧೭] ಎಂದಿದ್ದಾನೆ. ಅಂದರೆ ತನ್ನ ಗುರು ಮಾಯಿದೇವರು ಶೈವಗುರುವಾಗಿದ್ದು ಆತನೇ ಶಾಂತಗುರು, ಜಗದ್ಗುರುವೂ ಆಗಿದ್ದ. ಇದರಿಂದ ಮಾಯಿದೇವನ (ಶೈವಗುರು) ಶಿಷ್ಯ ಹರಿಹರನು ಕಾಳಾಮುಖ ಶೈವನಾಗಿದ್ದನೆಂದು ಹೇಳಬಹುದಾಗಿದೆ. ಹರಿಹರನ ಶಿಷ್ಯನಾದ ರಾಘವಾಂಕನು ತನ್ನ 'ಹರಿಶ್ಚಂದ್ರ ಚಾರಿತ್ರ' ಕೃತಿಯಲ್ಲಿ

"ಚತುರ ಕವಿರಾಯ ಹಂಪೆಯ ಹರೀಶ್ವರನ ವರ
ಸುತನುಭಯ ಕವಿ ಕಮಲರವಿ ರಾಘವಾಂಕಪಂ
ಡಿತನೆಂದೊಡೀ ಕಥಾರಸದ ಲಹರಿಯನು ಬಣ್ಣಿಸದರಾರೀ ಜಗದೊಳು"[೧೮]

ಎಂದು ಉಲ್ಲೇಖಿಸಿದ್ದಾನೆ. ರಾಘವಾಂಕ ಕವಿ ತನ್ನನ್ನು ಹಂಪಿಯ ಹರೀಶ್ವರನ ವರಸುತನೆಂದು ಕರೆದು ಕೊಂಡಿದ್ದಾನೆ. ಅಲ್ಲದೆ ತಾನು ರಾಘವಾಂಕ ಪಂಡಿತನೆಂದು ಹೇಳಿಕೊಂಡಿದ್ದಾನೆ. ಆದ್ದರಿಂದ ಕವಿರಾಘವಾಂಕನೂ ಸಹ ಕಾಳಾಮುಖ ಶೈವನಾಗಿದ್ದನೆಂದೂ, ನಂತರದಲ್ಲಿ ವೀರಶೈವಕ್ಕೆ ಮತಾಂತರಗೊಂಡಿರಬಹುದೆಂದು ಹೇಳಬಹುದು.

ಕಾಳಾಮುಖ ಶೈವರ ಹೆಸರುಗಳಲ್ಲಿ 'ಪಂಡಿತ' ಎಂಬ ಉಪನಾಮ ಕರ್ನಾಟಕದ ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಉದಾ : "ಕಾಳಾಮುಖ ನಿರಂಜನಪಂಡಿತ"ರೆಂಬ ಹೆಸರಿನ ಗುರುಗಳು ಮೋರಕಂಡಿಯ ಡವಕೇಶ್ವರ ದೇವಸ್ಥಾನಕ್ಕೆ ಆಚಾರ್ಯರಾಗಿದ್ದರೆಂಬುದನ್ನು ಕ್ರಿ.ಶ.೧೦೬೮ರ ಶಾಸನದಿಂದ ತಿಳಿದುಬರುತ್ತದೆ."[೧೯] ಅಲ್ಲದೆ ಕ್ರಿ.ಶ.೧೦೮೪ರ ಒಂದು ಶಾಸನ ನ್ಯಾಯಶಕ್ತಿ ಪಂಡಿತ ದೇವನನ್ನು ಶಿವನೇ ಕಾಳಾಮುಖವಾಗಿ ಅವತರಿಸಿದವನೆಂದು ಹೊಗಳಿದೆ.[೨೦] ಈ ಹಿನ್ನಲೆಯಲ್ಲಿ ಹರಿಹರ, ರಾಘವಾಂಕ ಕವಿಗಳು ಮೊದಲು ಕಾಳಾಮುಖರಾಗಿದ್ದು ನಂತರದ ಕಾಲಘಟ್ಟದಲ್ಲಿ ಅವರು ವೀರಶೈವರಾಗಿರಬೇಕೆಂದು ತೋರುತ್ತದೆ.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಮೂಲಪ್ರೇರಣಾಕರ್ತೃ(ವಿದ್ಯಾರಣ್ಯರಷ್ಟೇ) ಶಕ್ತಿ ಉಪನಾಮದ ಕಾಳಾಮುಖಗುರು ಕ್ರಿಯಾಶಕ್ತಿಗಳು. ಮುಂದೆ ಈ ಕ್ರಿಯಾಶಕ್ತಿ ಪರಂಪರೆಯ ಕಾಳಾಮುಖ ಪಂಥದ ಗುರುಗಳೇ ಸಂಗಮವಂಶದವರಿಗೆ ರಾಜಗುರುಗಳಾಗಿರುವುದನ್ನು ಸಮಕಾಲೀನ ಶಾಸನಾಧಾರಗಳಿಂದ ತಿಳಿದು ಬರುತ್ತದೆ. ಸಂಗಮವಂಶದ ಮೊದಲ ರಾಜರಾದ ಹರಿಹರ ಬುಕ್ಕರಿಗೆ ಕಾಳಾಮುಖ ಪಂಥದ "ಕಾಶೀ ವಿಲಾಸ ಕ್ರಿಯಾಶಕ್ತಿಗಳು' ಎಂಬ ಯತಿಗಳು ರಾಜಗುರುಗಳಾಗಿದ್ದರೆಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ.[೨೧]

ಹಾಗೆಯೇ ಇಮ್ಮಡಿ ಹರಿಹರ ಮತ್ತು ಮೊದಲನೆಯ ದೇವರಾಯರಿಗೆ ಹಾಗೂ ಕುಮಾರ ಕಂಪಣ ಮಾರಪ್ಪರಿಗೆ ಕ್ರಿಯಾಶಕ್ತಿ ಎಂಬ ಕಾಳಾಮುಖ ಗುರುಗಳು ರಾಜಗುರುಗಳಾಗಿದ್ದರೆಂಬುದನ್ನು ವೀರ ಕಂಪಣರಾಯ ಚರಿತೆಯಿಂದ ತಿಳಿದುಬರುತ್ತದೆ.[೨೨] ಅಲ್ಲದೆ ಮಾಧವ ಮಂತ್ರಿಗೆ ಕ್ರಿಯಾಶಕ್ತಿ ಪಂಡಿತರು ಗುರುಗಳಾಗಿರುವುದನ್ನು ಶಾಸನವೊಂದರಿಂದ ತಿಳಿದುಬಗುತ್ತದೆ.[೨೩]

ಎರಡನೆಯ ಹರಿಹರನ ನಂತರ ವೀರಭೂಪತಿ ಕಾಲಕ್ಕೆ ಚಂದ್ರಭೂಷಣ ಕ್ರಿಯಾಶಕ್ತಿ ರಾಜಗುರುವಾಗಿದ್ದನು.[೨೪] ಪ್ರೌಢದೇವರಾಯನು ಪಟ್ಟಕ್ಕೆ ಬಂದ ಮೊದಲ ದಿನಗಳಲ್ಲಿ ಈ ಚಂದ್ರಭೂಷಣ ಕ್ರಿಯಾಶಕ್ತಿ ಗುರುಗಳೇ ರಾಜಗುರುಗಳಾಗಿದ್ದಂತೆ ಕಂಡುಬರುವುದು.[೨೫] ಪ್ರೌಢದೇವರಾಯನ ಆಸ್ಥಾನದಲ್ಲಿದ್ದ ಕವಿ ಶ್ರೀನಾಥನು ಪ್ರೌಢದೇವರಾಯನ ರಾಜಗುರು ಚಂದ್ರಭೂಷಣ ಕ್ರಿಯಾಶಕ್ತಿ ಯತಿರಾಯನ ಕೃಪೆಗೂ ಪಾತ್ರಾನಾದನೆಂದು ತಿಳಿದುಬರುತ್ತದೆ.[೨೬] ಪ್ರೌಢದೇವರಾಯನಿಗೆ ನಂತರದಲ್ಲಿ ಮಲ್ಲಿಕಾರ್ಜುನ ಕ್ರಿಯಾಶಕ್ತಿ ರಾಜಗುರು ಆಗಿದ್ದನ್ನು ಲಕ್ಕಣ್ಣದಂಡೇಶ ತನ್ನ ಕೃತಿ 'ಶಿವತತ್ವ ಚಿಂತಾಮಣಿ'ಯಲ್ಲಿ ಉಲ್ಲೇಖಿಸಿದ್ದಾನೆ. ಮಲ್ಲಿಕಾರ್ಜುನ ಕ್ರಿಯಾಶಕ್ತಿಯನ್ನು ಲಕ್ಕಣ್ಣದಂಡೇಶ 'ಗುಣಗ್ರಾಹಿ ಮಲ್ಲಿಕಾರ್ಜುನ ಕ್ರಿಯಾಶಕ್ತಿ'[೨೭] ಎಂದು ಸ್ತುತಿಸಿದ್ದಾನೆ. ಅಂದರೆ ಪ್ರೌಢದೇವರಾಯನಿಗೆ ಇಬ್ಬರು ರಾಜಗುರುಗಳಿದ್ದರು. ಚಂದ್ರಭೂಷಣ ಕ್ರಿಯಾಶಕ್ತಿ ನಿಧನ ಹೊಂದಿದ ನಂತರ ಮಲ್ಲಿಕಾರ್ಜುನ ಕ್ರಿಯಾಶಕ್ತಿ ರಾಜಗುರುವಾಗಿರಬೇಕು. ಇಲ್ಲವೆ ಪ್ರೌಢದೇವರಾಯ ವೀರಶೈವಧರ್ಮಕ್ಕೆ ಮತಾಂತರಗೊಂಡ ಮೇಲೆ ಈ ರಾಜಗುರುವನ್ನು ಬದಲಿಸಿರಬೇಕು. ತಮ್ಮ ಸಿದ್ಧಾಂತದಿಂದ ವಿಮುಖರಾಗಿ ವೀರಶೈವ ಧರ್ಮಕ್ಕೆ ಸೇರಿದ ಅದೇ ಪರಂಪರೆಯ ಮಲ್ಲಿಕಾರ್ಜುನ ಕ್ರಿಯಾಶಕ್ತಿಯನ್ನು ಪ್ರೌಢದೇವರಾಯ ತನ್ನ ರಾಜಗುರುವಾಗಿ ಸ್ವೀಕರಿಸಿರುವ ಸಾಧ್ಯತೆ ಇದೆ.

ಈ ರೀತಿಯಲ್ಲಿ ಕಾಳಾಮುಖ ಪಾಶುಪತ ರಾಜಗುರುಗಳು ಸಂಗಮವಂಶದ ದೊರೆಗಳ ಆಸ್ಥಾನದಲ್ಲಿ ತಮ್ಮ ಅಸ್ಥಿತ್ವವನ್ನು ಹೊಂದಿದ್ದರು. 'ರಾಜಗುರು' ಎಂಬ ಅಭಿದಾನವನ್ನು ಪಡೆದಿದ್ದ ಇವರು ಒಂದು ಗೌರವಯುತವಾದ ಸ್ಥಾನವನ್ನು ಪಡೆದುಕೊಂಡಿದ್ದರು.[೨೮] ರಾಜಕೀಯ ಅಸ್ಥಿರತೆ ತಲೆದೋರಿದಾಗ, ಧಾರ್ಮಿಕ ವಿಷಯದಲ್ಲಿ ಚಕ್ರವರ್ತಿಗೆ ಸಲಹೆ ನೀಡುವ ಅಧಿಕಾರ ಹೊಂದಿದ್ದರೆಂದು ಹೇಳಬಹುದು.

### ೨. ಕಾಪಾಲಿಕ ಶೈವ

'ಕಪಾಲಿನ್'(ತಲೆಬುರುಡೆ ಹಿಡಿದವನು) ಎಂಬ ಪದವು ಮೊದಲು 'ಯಾಜ್ಞವಲ್ಕ್ಯಸ್ಮೃತಿ' ಎಂಬ ಕೃತಿಯಲ್ಲಿ ಕಂಡುಬರುತ್ತದೆ. ಈ ಸೂತ್ರವು ಬ್ರಾಹ್ಮಣನನ್ನು ಕೊಂದ ಬ್ರಹ್ಮಹನ್ ನಿಗಾಗಿ ಒಂದು ಪ್ರಾಯಶ್ಚಿತ್ತವನ್ನು ವಿಧಿಸುತ್ತದೆ. ಅದು ಹೀಗಿದೆ : ಒಂದು ತಲೆಬುರುಡೆ (ಶಿರ:ಕಪಾಲಿ) ಹಾಗೂ (ಕೈಯಲ್ಲಿ) ಒಂದು ದೊಣ್ಣೆ ಹಿಡಿದುಕೊಂಡು ಭಿಕ್ಷೆಯನ್ನು ಬೇಡುತ್ತ ಬದುಕುತ್ತ(ಭಿಕ್ಷೆ ಕೇಳುವಾಗ) ತನ್ನ ದುಷ್ಕೃತ್ಯಗಳನ್ನು ಸಾರುತ್ತ ಹಾಗೂ ತೀರ ತುಸು ಅನ್ನವನ್ನು ಸೇವಿಸುತ್ತಾ ಹೋದರೆ ಒಬ್ಬ ಬ್ರಾಹ್ಮಣನ

ಕೊಲೆ ಪಾತಕಿಯು ಹನ್ನೆರಡು ವರ್ಷಗಳ ತರುವಾಯ ಶುದ್ಧನಾಗಲು ಸಾಧ್ಯ.[೨೯] ದಕ್ಷನ ಯಜ್ಞವನ್ನು ಕಿತ್ತೆಸೆದ ಮೊದಲಿಗನೆಂದರೆ ಶಿವನೇ ಅಹುದು. ಶಿವನು ಬ್ರಹ್ಮನ ಐದನೆಯ ತಲೆಯನ್ನು ತುಂಡುರಿಸಿ ಚೆಲ್ಲಿದ ತರುವಾಯ ತಾನು ಕಪಾಲನ್ ಆದ.[೩೦]

ತಲೆಬುರುಡೆಯ ಪಾತ್ರೆಯಲ್ಲಿ ಉಣ್ಣುವುದು ಹಾಗೂ ಮಧ್ಯದ ಪಾತ್ರೆಯಿಂದ ದೇವತೆಗಳನ್ನು ಪೂಜಿಸುವುದೆಲ್ಲ ಹೆಚ್ಚಾಗಿ ಕಾಪಾಲಿಕರಿಗೆ ಸಂಬಂಧಿಸಿದ ಸಂಗತಿಗಳು. ಸಂಸ್ಕೃತದ ಆಕರಗಳು ಸಾಮಾನ್ಯವಾಗಿ ಕಾಪಾಲಿಕರನ್ನು ತಲೆಬುರುಡೆಯನ್ನು ಹಿಡಿದುಕೊಂಡು ಭಿಕ್ಷೆ ಕೇಳುತ್ತಾ ಅಲೆಯುವವರು ಹಾಗೂ ಐಹಿಕ ಮತ್ತು ಧಾರ್ಮಿಕ ಆಚರಣೆಗಳಿಗಾಗಿ ಕೂಡ ಧಾರಾಳವಾಗಿ ಮಧ್ಯವನ್ನು ಸೇವಿಸುವ ಬೂಟಾಟಿಕೆಯ ಭೈರಾಗಿಗಳಾಗಿ ಚಿತ್ರಿಸುತ್ತವೆ. ಅವರು ಸತ್ತವರ ಚಿತಾಭಸ್ಮವನ್ನು ಬಳಿದು ಕೊಳ್ಳುದವರು ಆದರೆ ಅವರದನ್ನು ಸೇವಿಸುತ್ತಾರೆಂದು ಯಾವ ಆಕರಗಳೂ ಸಾಧಿಸುವುದಿಲ್ಲ.[೩೧]

ಶೈವಧರ್ಮದ ಒಂದು ಶಾಖೆಯಾದ ಕಾಪಾಲಿಕರದು ವಾಮಾಚಾರ ಪದ್ಧತಿ. ಕಾಪಾಲಿಕರನ್ ಸೋಮವೆಂದು ಕೆಲವರು ಭಾವಿಸಿದ್ದಾರೆ. ಮೈತ್ರಿ ಉಪನಿಷತ್ತಿನಲ್ಲಿ ಸೋಮ(ಕಾಪಾಲಿಕ)ದ ಉಲ್ಲೇಖವಿದೆ. ಕೃಷ್ಣಮಿತ್ರನ ಪ್ರಬೋಧ ಚಂದ್ರೋದಯವು ಕಾಪಾಲಿಕ ಅಂದರೆ ಸೋಮದ ವಿಷಯವನ್ನು ವಿವರಿಸುತ್ತದೆ. ಈ ಪಂಥದವರು ಕಪಾಲಧಾರಿಗಳು. ಆದುದರಿಂದ ಇವರನ್ನು ಕಾಪಾಲಿಕರೆಂದು ಕರೆಯಲಾಗುತ್ತದೆ. ಇವರು ಸ್ಮಶಾನವಾಸಿಗಳು, ವಿಷಯ ಲೋಲುಪರು. ಶಿವನು ಉಮೆಯೊಡನೆ ಕೂಡಿರುವಂತೆ ಇವರು ಕಾಂತಾ ಸಹಿತರಾಗಿರುವುದರಿಂದ ಇವರನ್ನು ಸೋಮ ಎಂದು ಕರೆಯಲಾಗುತ್ತದೆ.[೩೨] (ಕರ್ಣಿಕೆ, ಕುಚಕ, ಕುಂಡಲ, ಶಿಖಾಮಣಿ, ಭಸ್ಮ, ಯಜ್ಞೋಪವೀತ ಇವು ಆರು ಕಾಪಾಲಿಕರ ಮುದ್ರೆಗಳು) ಆನಂದಗಿರಿಯ ಶಂಕರ ವಿಜಯದಲ್ಲಿ ಉನ್ಮತ್ತ ಭೈರವನು ಕಾಪಾಲಿಕರ ಗುರುವೆಂದೂ, ಅವನು ಶಂಭು, ಭೈರವ ಮತ್ತು ಕಾಲೀಶರ ಸ್ಮರಣೆ ಮಾಡುತ್ತಿದ್ದನೆಂದೂ ಹೇಳಿದೆ.[೩೩] ಇವರ ಸಿದ್ಧಾಂತವನ್ನು ಸೋಮಸಿದ್ಧಾಂತವೆಂದು ಕರೆಯುತ್ತಾರೆ.

ಕಾಪಾಲಿಕರೆಂದರೆ ಭೈರವನ ಆರಾಧಕರೇ. ಕರ್ನಾಟಕದಲ್ಲಿ ಕಾಪಾಲಿಕರನ್ನು ಕುರಿತು ಶಾಸನಗಳು ಸಿಗುವುದು ಕಡಿಮೆಯೇ. ಆದರೆ ಅಲ್ಲಲ್ಲಿ ಭೈರವನ ವಿಗ್ರಹ (ಸಿಗುವುದು) ಕಂಡುಬರುತ್ತವೆ. ಭೈರವನ ಆರಾಧಕರು ಕರ್ನಾಟಕದಲ್ಲಿ ಇದ್ದುದರಿಂದಲೇ ಭೈರವನ ಮೂರ್ತಿಶಿಲ್ಪಗಳು ಕಂಡುಬರುತ್ತವೆಂದು ಗ್ರಹಿಸುವುದಾದರೆ ಕಾಪಾಲಿಕರು ಕರ್ನಾಟಕದಲ್ಲಿ ನೆಲೆಸಿದ್ದರೆಂದೇ ಅರ್ಥ. ಇದಕ್ಕೆ ಹಂಪಿ ಪರಿಸರ ಹೊರತಾಗಿಲ್ಲ. ಹಂಪಿಯಲ್ಲಿ ನಾನಾ ಕಡೆ ಭೈರವನ ನಗ್ನ ಶಿಲ್ಪಗಳು ಕಂಡುಬರುತ್ತವೆ. 'ಭೈರವ' ಎಂಬ ಶಬ್ದಕ್ಕೆ ಭಯಂಕರ ಎಂಬರ್ಥವಿದೆ. ಭೈರವನ ಹುಟ್ಟಿಗೆ ಹೇಳಲಾಗುವ ಪೌರಾಣಿಕ ಕತೆಯಲ್ಲೂ ಶೋಕದ ಪ್ರಸಂಗವಿದೆ. ಲೋಕಸೃಷ್ಟಿ ಮಾಡಿದ ಬ್ರಹ್ಮನಲ್ಲಿ ಬಹಳ ಅಹಂಕಾರ ತುಂಬಿತ್ತು. ಅವನು ಒಮ್ಮೆ ತಾನೇ

ಹೆಚ್ಚೆಂದು ತಿಳಿದು ಶಿವನಿಗೆ ಹೀನವಾಗಿ ಮಾತಾಡಲು, ಕದಲಿದ ಶಿವ ಭೈರವ ರೂಪ ತಾಳಿ ಬ್ರಹ್ಮನ ಐದು ತಲೆಗಳಲ್ಲಿ ಒಂದನ್ನು ಜಿಗುಟಿ ಹಾಕಿದ. ಇದರಿಂದ ಕೈಯಲ್ಲಿ ರಕ್ತಸಿಕ್ತ ಬ್ರಹ್ಮಕಪಾಲ ಬಂದಿತು. ಕಪಾಲದಲ್ಲಿ ರಕ್ತ ತುಂಬಿಕೊಂಡು ದೇವತೆಗಳನ್ನು ನಾಯಿ ಮಾಡಿಕೊಂಡು ಸುಟ್ಟಬೂದಿ ಬಳಿದುಕೊಂಡು ಲೋಕಸಂಚಾರ ಮಾಡುವುದು - ಎಲ್ಲಾ ಕಥೆಗಳಲ್ಲೂ ಇರುವ ಆಶಯ ಸಂಘರ್ಷದ್ದು. ಇದು ವಿಭಿನ್ನ ವರ್ಗ ಅಥವಾ ತಾತ್ವಿಕಧಾರೆಗಳು ಮೇಲುಗೈ ಪಡೆಯಲು ಮಾಡಿದ ಚಾರಿತ್ರಿಕ ಸೆಣಸಾಟವನ್ನು ಸೂಚಿಸುತ್ತವೆ.[೩೪] ಕಪಾಲ ಮಾಲೆ, ನಗ್ನಮೂರ್ತಿ, ಹಾವಿನ ಸೊಂಟಪಟ್ಟಿ ಅಥವಾ ತೋಳ ಪಟ್ಟಿ, ನಾಲ್ಕು ಕೈಗಳು, ಡಮರುಗ ತ್ರಿಶೂಲ ಖಡ್ಗ, ಪಾನಪಾತ್ರೆ ಅಥವಾ ಕಪಾಲ, ಎಡಗೈಯಲ್ಲಿ ರುಂಡ ನೆತ್ತರಿಗೆ ಬಾಯಿಬಾಚಿ ನೆಗೆಯುತ್ತಿರುವ ನಾಯಿ, ಪಕ್ಕದಲ್ಲಿ ನರ್ತನ ಮಾಡುತ್ತಿರುವ ಕಂಕಾಲಮೂರ್ತಿಗಳು. ಇವು ಭೈರವ ಶಿಲ್ಪದ ಸಾಮಾನ್ಯ ಲಕ್ಷಣಗಳು.''[೩೫]



ಹಂಪಿಯ ನಾಲ್ಕಾರು ಕಡೆಗಳಲ್ಲಿ ಭೈರವನ ವಿವಿಧ ಭಂಗಿಯ ಶಿಲ್ಪಗಳು ಕಂಡುಬರುತ್ತವೆ. ಉದ್ದಾನ ವೀರಭದ್ರ ದೇವಾಲಯದ ಆವರಣ, ಶ್ರೀ ಕೃಷ್ಣದೇವಾಲಯದಿಂದ ವಿರೂಪಾಕ್ಷ ದೇವಾಲಯಕ್ಕೆ ಹೋಗುವ ಹಳೆಯ ಹಾದಿಯ ಬಂಡೆಗಳಲ್ಲಿ ಒಂದು ಭೈರವನ ಶಿಲ್ಪ. ತುಂಗಭದ್ರಾ ನದಿಯ ದಡದಲ್ಲಿರುವ ಕೋಟಿಲಿಂಗದ ಬಳಿ ಇರುವ ದೇವಾಲಯದ ಅಕ್ಕ-ಪಕ್ಕದ ಬಂಡೆಗಲ್ಲುಗಳಲ್ಲಿ ಎರಡು ಮೂರು ಭೈರವನ ಶಿಲ್ಪಗಳು, ಕುದುರೆಲಾಯದ ಹಿಂಬದಿಯ ಬೆಟ್ಟದಲ್ಲಿ ಒಂದು, ಮಾಲ್ಯವಂತ ಪರ್ವತದ ಈಶಾನ್ಯದಿಕ್ಕಿನ ಕಲ್ಲುಬಂಡೆಯಲ್ಲಿ (ಕಂಪ್ಲಿರಸ್ತೆಯ ಎಡಭಾಗದ ಬಂಡೆಗಲ್ಲು) ಒಂದು ಭೈರವನ ಶಿಲ್ಪ ಇನ್ನು ಮುಂತಾದ ಕಡೆ ಹಂಪಿಯಲ್ಲಿ ಭೈರವನ ಮೂರ್ತಿಶಿಲ್ಪಗಳು ಕಂಡುಬರುತ್ತವೆ.

ಕಮಲಮಹಲ್ ಉತ್ತರಕ್ಕಿರುವ ಬೆಟ್ಟದಲ್ಲಿ ಅಂದರೆ ಕಮಲ ಮಹಲ್ ನಿಂದ ಮತಂಗ ಪರ್ವತಕ್ಕೆ ಹೋಗುವ ಹಾದಿಯ ಬಲಭಾಗದ ಒಂದು ಬಂಡೆಗಲ್ಲಿನ ಪಾರ್ಶ್ವದಲ್ಲಿ ಎರಡು ಕೈಗಳ ನಿಂತ ಭಂಗಿಯ ಭೈರವನ ಶಿಲ್ಪವಿದೆ ಇದಕ್ಕೆ ಮಂಟಪ ಕಟ್ಟಲಾಗಿದೆ. ಈ ಶಿಲ್ಪವು ಸವೆಯುತಲಿದೆ. ಬಲಗೈಯಲ್ಲಿ ಆಯುಧ, ಎಡಗೈಯಲ್ಲಿ ಕಪಾಲಹಿಡಿದಿದೆ. ಬಹುಶಃ ಹಂಪಿಯಲ್ಲಿಯೇ ಅತ್ಯಂತ ಪ್ರಾಚೀನ ಭೈರವನ ಶಿಲ್ಪವೆಂದು ತೋರುತ್ತದೆ. ಮತಂಗ ಪರ್ವತವನ್ನು ವಿರೂಪಾಕ್ಷಪುರದ ಕಡೆಯಿಂದ ಮೇಲೆ ಹತ್ತುವಾಗ ಶಾಸನಗಳ ಸಮೀಪದ ಬಲಭಾಗದ ಬಂಡೆಗಲ್ಲಿನಲ್ಲಿ ತುಂಬಾ ಸುಂದರವಾದ ಭೈರವನಶಿಲ್ಪವಿದೆ. ಇದು ನಾಲ್ಕು ಕೈಗಳನ್ನು ಹೊಂದಿದ್ದು ನಿಂತಭಂಗಿಯಲ್ಲಿದೆ. ಕೊರಳಲ್ಲಿ ರುಂಡಮಾಲೆ ಬಲಗೈಯಲ್ಲಿ ಖಡ್ಗ, ತ್ರಿಶೂಲ, ಎಡಗೈಯಲ್ಲಿ ಡಮರು, ರಕ್ತ ತುಂಬಿದ ಕಪಾಲ ಮತ್ತು ರುಂಡ ಹಿಂಡಿದೆ. ರಕ್ತ ಕುಡಿಯಲು ಜಿಗಿಯುತ್ತಿರುವ ನಾಯಿ ಇದೆ. ಬಲಗೈ ಕೆಳಗೆ ಸರ್ಪ, ಪಾದಗಳ ಕೆಳಗೆ ಚೇಳು ಇದೆ. ತುಂಗಭದ್ರಾನದಿಯ ಬಲದಂಡೆಯಲ್ಲಿರುವ ಕೋಟಿಲಿಂಗದ ಮುಂಭಾಗದ ದೇವಾಲಯದ ಹತ್ತಿರ ಇರುವ ಬಂಡೆಗಲ್ಲಿನ ಮೇಲೆ ಒಂದು ಚಿಕ್ಕ ಭೈರವನ ಶಿಲ್ಪವಿದೆ. ಇದು ಮಣ್ಣಲ್ಲಿ ಸ್ವಲ್ಪಹೂತಿದೆ. ಇದಕ್ಕೆ ಸ್ವಲ್ಪ ದೂರದ ಬಂಡೆಯ

ಪಾರ್ಶ್ವದಲ್ಲಿ ದೊಡ್ಡ ಭೈರವನ ಶಿಲ್ಪವಿದೆ. ಇವೆರಡೂ ಸಹ ನಿಂತ ಭಂಗಿಯಲ್ಲಿದ್ದು ನಾಲ್ಕು ಕೈಗಳನ್ನು ಹೊಂದಿದ್ದು ತ್ರಿಶೂಲ, ಡಮರು, ಖಡ್ಗ, ರಕ್ತ ತುಂಬಿದ ಕಪಾಲ ಹಿಡಿದಿದ್ದು ಬಲಪಾದದ ಬಳಿ ಸರ್ಪಹೊಂದಿವೆ. ಇವು ಚೇಳು, ಹಾವುಗಳನ್ನು ಹೊಂದಿಲ್ಲ. ಹಾಗೆಯೇ ಸಾಸಿವೆ ಕಾಳು ಗಣೇಶನ ಎದುರು ಇರುವ ಹೆಬ್ಬಂಡೆಗಳ ತಳಭಾಗದಲ್ಲಿರುವ ಮಂಟಪದಲ್ಲಿ (ಕಮಲಾಪುರದಿಂದ ವಿರೂಪಾಕ್ಷಪುರಕ್ಕೆ ಹೋಗುವ ಹಳೆದಾರಿಯಲ್ಲಿ) ಬಂಡೆಯ ಮೇಲೆ ಇರುವ ನಂದಿಶಿಲ್ಪದ ಬಳಿ ನಿಲ್ಲಿಸಿದ ಭೈರವನ ಶಿಲ್ಪವೂ ನಾಲ್ಕು ಕೈಗಳನ್ನು ಹೊಂದಿದ್ದು, ಮೇಲಿನ ಶಿಲ್ಪಗಳ ಲಕ್ಷಣ ಹೊಂದಿದೆ. ಈ ಶಿಲ್ಪದ ಬಳಿ ರಕ್ತ ಕುಡಿಯಲು ಹಾತೊರೆಯುತ್ತಿರುವ ನಾಯಿ ಇದೆ. ಹಾಗೆಯೇ ಸರ್ಪವನ್ನು ಹೊಂದಿದೆ. ಇದರಂತೆ ಉದ್ದಾನ ವೀರಭದ್ರ ದೇವಾಲಯದ ದ್ವಾರಬಾಗಿಲ ಬಳಿ ಇರುವ ನಾಲ್ಕುಕಂಬಗಳ ಕಲ್ಲು ಮಂಟಪದಲ್ಲಿರುವ ನಂದಿಶಿಲ್ಪಗಳ ಹಿಂಭಾಗದಲ್ಲಿ ನಿಲ್ಲಿಸಿರುವ ಭೈರವನ ಶಿಲ್ಪವು ಹಾವು ಚೇಳು ನಾಯಿಯನ್ನು ಹೊಂದಿಲ್ಲ ಉಳಿದಂತೆ ಎಲ್ಲಾ ಲಕ್ಷಣಹೊಂದಿದೆ. ಆದರೆ ಮಾಲ್ಯವಂತ ಪರ್ವತದಲ್ಲಿರುವ ಭೈರವನ ಶಿಲ್ಪವು ಕುಳಿತ ಭಂಗಿಯಲ್ಲಿದ್ದು ಕೈಯಲ್ಲಿ ತ್ರಿಶೂಲ, ಖಡ್ಗ, ರಕ್ತದ ಕಪಾಲ ಮತ್ತು ಮನುಷ್ಯನ ತಲೆ ಹಿಡಿದಿದೆ. ಕೋರೆಹಲ್ಲುಗಳನ್ನು ಹೊಂದಿದ್ದು ಉಗ್ರರೂಪವಾಗಿದೆ. ಇವರ ಪಾದದ ಬಳಿ ಚೇಳು, ಹಾವು ಮತ್ತು ಎಡಗೈ ಬಳಿ ರಕ್ತಕುಡಿಯಲು ಹಾತೊರೆಯುತ್ತಿರುವ ನಾಯಿಯನ್ನು ಹೊಂದಿದ್ದು ವಿಶಿಷ್ಟ ಶಿಲ್ಪವೆನಿಸಿದೆ. ಈ ಮೇಲಿನ ಎಲ್ಲಾ ಶಿಲ್ಪಗಳೂ ಭಿನ್ನಭಿನ್ನ ಸ್ವರೂಪ ಹೊಂದಿವೆ ಎಂದು ಹೇಳಬಹುದು.

ವಿರೂಪಾಕ್ಷ ದೇವಾಲಯದ ಆವರಣದ ಉತ್ತರಕ್ಕಿರುವ ದುರ್ಗಾ ದೇವಾಲಯದಲ್ಲಿರುವ ಕ್ರಿ.ಶ.೧೧೯೯ರ ಕುರುಗೋಡು ಸಿಂಧರ ಶಾಸನವು "....ಭೈರವಗೃಹಕ್ಕುದಾರಿ ಚೌಡಯ್ಯನೆಸಯೆ ಸೊತೆವಳಿಯಿಸಿದಂ..."ಎಂದೂ "ಭೈರವದೇವರ ನಿವೇಧ್ಯಕ್ಕೆ ಅಕ್ಕಿ ಮವಿ ಅನ್ತು ನಿತ್ಯಪಡಿಯ ನಿವೇದ್ಯದಕ್ಕಿ ಹತ್ತುಮಾನಕ್ಕೆಂದು ಹಂಪೆಯ ಕಟ್ಟೆಯ ಬಯಲೊಳಗೆ..."[೩೬] ಎಂದು ಭೈರವದೇವರ ಕುರಿತು ದಾಖಲಿಸುತ್ತದೆ. ಈ ಶಾಸನದ ಪ್ರಕಾರ ಮೈದುನ ಚೌಡಯ್ಯನೆಂಬುವನು ವಿರೂಪಾಕ್ಷದೇವಾಲಯದ ಹತ್ತಿರ ಇರುವ ಭೈರವನ ಗುಡಿಗೆ (ಭೈರವಗೃಹ) ಸುಣ್ಣ ಬಳಸಿ, ಭೈರವದೇವರಿಗೆ ಎರಡು ಮಹತ್ತರು ಅಕ್ಕಿ ನಿತ್ಯನೈವೇದ್ಯಕ್ಕೆ ಹತ್ತು ಮಾನ ಗದ್ದೆಯನ್ನು ದಾನ ನೀಡುತ್ತಾನೆ. ಅಂದರೆ ವಿರೂಪಾಕ್ಷ ದೇವಾಲಯ ಪಕ್ಕದಲ್ಲೇ ಕಾಪಾಲಿಕರ ದೈವ ಭೈರವನ ದೇವಾಲಯ ಇದದ್ದು ಕಂಡುಬರುತ್ತದೆ. (ಕಾಳಾಮುಖರದ್ದು ವಿರೂಪಾಕ್ಷ ದೇವಾಲಯವಾಗಿತ್ತು) ಅಲ್ಲದೆ ಭೀಮನ ಬಾಗಿಲಿನ ಈಶಾನ್ಯಕ್ಕೆ ಬೆಟ್ಟದ ಮೇಲಿನ ಬಂಡೆಯ ಮೇಲಿರುವ ಶಾಸನವು "ರೇವಣಸಿದ್ಧನ ಪಾದದರೆಯ ಗುಂಡು ಭೈರವ(ಮೂರ್ತಿ)ಯ"[೩೭] ಎಂದು ಉಲ್ಲೇಖಿಸುತ್ತದೆ. ಈ ಶಾಸನವು ರೇವಣಸಿದ್ಧನ ಪಾದದ ಗುಂಡಿನ ಹತ್ತಿರ ಇರುವ ಭೈರವಮೂರ್ತಿಯನ್ನು ದಾಖಲಿಸುತ್ತದೆ.

ಇದೇ ಕಾಲಘಟ್ಟದ ಹರಿಹರನ ರಗಳೆಗಳಲ್ಲಿ ಭೈರವ ಸಂಪ್ರದಾಯದ ಉಲ್ಲೇಖ ಬರುತ್ತದೆ. ರೇವಣಸಿದ್ದೇಶ್ವರ ರಗಳೆಯಲ್ಲಿ "ಇರೆ ಕಂಡು ಬಿಜ್ಜಳಂ ಶಿವಸಿದ್ಧನೆಂದರಿದು

"..................................................................

ಏಕೆ ಮರುಳಾದೆ ಖರ್ಪರನ ನುಡಿಗೆಲೊ ಭೂಪ
ಲೋಕದೊಳ್ಕನ್ನಿಕೆಯರಂ ಕೊಲ್ವುದತಿ ಪಾಪ
ಆವನುಂ ತರಬರ್ಪುದೇ ಸುರಗಿಯುಜ್ವಳಂ
ಸ್ತ್ರೀವಧೆಯುಮಪಕೀರ್ತಿಯುಂ ಸಾರ್ವುದಗ್ಗಳಂ
ಬಿಡುಬಿಡೆಂದಾ ಕುಮಾರಿಯರೆಲ್ಲರಂ ಬಿಡಿಸಿ"[೩೮]

ಎಂದು ಕವಿ ಉಲ್ಲೇಖಿಸಿದ್ದಾನೆ. ಖರ್ಪರನೆಂಬ ಜೋಗಿ ಸಹಸ್ರಯೋಗಿಣಿಯ ಒಡೆಯನಾಗಿದ್ದನಂತೆ. ಬಿಜ್ಜಳನು ಮಾಸನೂರಿನ ಕೆರೆಯಲ್ಲಿರುವ ಸುರಗಿಗೆ ಆಶೆಪಟ್ಟಾಗ ಅದನ್ನು ತೆಗೆಯಲೊಪ್ಪಿದ ಆ ಖರ್ಪರ ಜೋಗಿ ಹನ್ನೆರಡು ಸಾವಿರ ಕನ್ಯೆಯರನ್ನು ಕೆರೆಗೆ ಬಲಿಕೊಡುವ ವಿಷಯ ತಿಳಿಸುತ್ತಾನೆ. ಬಿಜ್ಜಳನು ಅದಕ್ಕೆ ಸಿದ್ಧನಾಗುತ್ತಾನೆ. ಈ ಸಂದರ್ಭದಲ್ಲಿ ಬಿಜ್ಜಳನಲ್ಲಿಗೆ ಬಂದ ರೇವಣಸಿದ್ಧ ಆತನಿಗೆ ಬುದ್ಧಿವಾದ ಹೇಳಿ "ಖರ್ಪರನ ಮಾತಿಗೆ ಮರುಳಾಗಬೇಡ. ಕನ್ಯೆಯರನ್ನು ಕೊಲ್ಲುವುದು ಅತೀ ಪಾಪದ ಕೆಲಸ. ಸ್ತ್ರೀವಧೆಯಿಂದ ನಿನಗೆ ಲೋಕದಲ್ಲೆಲ್ಲಾ ಅಪಕೀರ್ತಿ ಬರುತ್ತದೆ. ಆ ಸುರಗಿಯನ್ನು ನಾನು ತೋರುವೆನೆಂದಾಗ ಬಿಜ್ಜಳ ಸ್ತ್ರೀವಧೆಯನ್ನು ಬಿಡುತ್ತಾನೆ." ಸ್ತ್ರೀವಧೆ ಮಾಡುವ ಕನ್ಯಾಬಲಿ ಕೊಡಿಸುವ ಜೀವವಿರೋಧಿ ಅಂಶಗಳು ಹರಿಹರನ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿ ಇದ್ದಿರಬೇಕು. ಹಾಗೆಯೇ ಹರಿಹರ ಪ್ರಭುದೇವರ ರಗಳೆಯಲ್ಲಿ ಭೈರವ ಸಂಪ್ರದಾಯವನ್ನು ಕುರಿತು

"ಅಲ್ಲಿ ಬರುತಿದೆ ಭೈರವಂ ಕಂಡು ಕೈಮುಗಿದು
ಅಲ್ಲಮಂ ಕಾರಣಿಕವೆಂದು ಮನದೊಳಗರಿದು
ತೋರಿದಂ ಶಿವನಲ್ಲಿಗೊಯ್ವ ಸೈವಟ್ಟೆಯಂ
ಮೀರಿ ಬರುತಿರಲಲ್ಲಮಯ್ಯನತಿನಿಷ್ಠೆಯಿಂ"[೩೯]

ಎಂದು ಹೇಳಿದ್ದಾನೆ.

ವಿರಕ್ತ ಅಲ್ಲಮ ಸಂಚಾರಿಯಾಗಿ ಶಿವಲಿಂಗವೇ ತಾನೆಂಬಂತೆ ನಡೆದು ಶ್ರೀಶೈಲ ಪರ್ವತಕ್ಕೆ ಬರುವಾಗ ದಾರಿಯಲ್ಲಿ ಭೈರವನನ್ನು ಪರಿವರ್ತಿಸಿ ಬರುತ್ತಾನೆ. ಅಂದರೆ ಆತನಲ್ಲಿರುವ ದುರಾಚಾರಗಳನ್ನು ತೊಲಗಿಸಿ ಸದಾಚಾರಗಳನ್ನು ತುಂಬಿ ಬರುತ್ತಾನೆ ಎಂದು ಗ್ರಹಿಸಬಹುದು.

ಹಾಗೆಯೇ ಇದೇ ಕವಿಯ ಶಂಕರದಾಸಿಮಯ್ಯನ ರಗಳೆಯಲ್ಲಿ

"ಹಿಡಿದ ಡಮರುಗಡ ಕಡುವೊಯ್ಲು ಸಂಭ್ರಮಗಳಿಂ
ನಡೆದು ತೂಳಂ ಬಂದು ತಿರುಗುತ್ತಿರ್ಪರ್ಗಳಿಂ

ತಲೆಗೆದರಿ ಅಲಗಿನಿಂದಿರಿದು ಕೊಳುತಿರ್ಪರಿಂ
ನೆಲಕೆ ನಿಂದಿರ್ದು ಮಾಮಸಕದಿಂದ ಕುಣಿವರಿಂ
ಎಸೆದಿರ್ಪ ಭೈರವನ ನೆರವಿಯಂ ನೆರೆ ಕಂಡು"[೪೦]

ಎಂದು ಉಲ್ಲೇಖಿಸಲಾಗಿದೆ.

ಈ ಕಾವ್ಯದ ಪ್ರಕಾರ ಹೆಂಬೇರಪುರದ ಉರವಣಿಯ ಭೈರವ ಶಂಕರದಾಸಿಮಯ್ಯನಿಗೆ ಭೇಟಿಯಾದ. ಈತ ಕೈಯಲ್ಲಿ ಡಮರುಗ ಹಿಡಿದು ಸಂಭ್ರಮದಿಂದ ಕೂಗು ಹಾಕುತ್ತಾ, ಊರಲ್ಲಿ ತಿರುಗುವ ತಲೆಗೂದಲು ಕೆದರಿಕೊಂಡು ತನ್ನ ಕೈಯಲ್ಲಿರುವ ಆಯುಧದಿಂದ ತನ್ನನ್ನೇ ಇರಿದುಕೊಳ್ಳುವ, ಕೈಯಲ್ಲಿ ತ್ರಿಶೂಲ ಹಿಡಿದು ಮಹಾಮಸಕದಿಂದ ಕುಣಿದಾಡುವ ಭೈರವನ ವ್ಯಕ್ತಿಚಿತ್ರವನ್ನು ಕವಿ ಹರಿಹರ ನೀಡುತ್ತಾನೆ. ಸ್ವತಃ ಶಂಕರದಾಸಿಮಯ್ಯನನ್ನು ಕವಿ "ಕೋಪದ ಕಾಪಾಲಿ"[೪೧] ಎಂದು ಕರೆಯುತ್ತಾನೆ.

ಕವಿ ಇದೇ ಕಾವ್ಯದಲ್ಲಿ ಮುಂದುವರೆದು

"ಹೆಂಬೇರ(ಮೈಲುಗನ) ಕೊಡೆವಿಡಿಸಿದುನ್ನತಂ
ಬೆಂಬಿದ್ದ ಭೈರವನನುದ್ಧರಿಸಿದೂರ್ಜಿತಂ"[೪೨]

ಎಂದು ಹೇಳಿದ್ದಾನೆ.

ಅಂದರೆ ವಾಮಚಾರಿಯಾಗಿದ್ದ ಭೈರವನಿಗೆ ಶಿವಭಾರವನ್ನು ಹೊರಿಸಿ ಆತನ ಮನಸ್ಸನ್ನು ಪರಿವರ್ತಿಸಿ ಶಂಕರದಾಸಿಮಯ್ಯ ಉದ್ಧರಿಸಿದ ಎಂದು ಕವಿ ಹರಿಹರ ಹೇಳುತ್ತಾನೆ.

ರಾಘವಾಂಕನೂ ಸಹ ತನ್ನ ಸಿದ್ಧರಾಮಚಾರಿತ್ರದಲ್ಲಿ

"ಕೆದಱುವಲೆ ಕೆಮ್ಮೀಸೆ ರುಂಡ ಮುಂಡಾಭರಣ
ವೊದವಿರ್ದ ವೃಶ್ಚಿಕದ ಮಾಲೆ ಪೇರುರದಲ್ಲಿ
ವಿದಿತವೆನೆ ಡಮರು ಶೂಲಂ ಖಡ್ಗವರಿದ ತಲೆ ದಿಗ್ವಸನ ಪಾದುಕೆಯಲಿ
ಅದಿರದೈ ತಂದುಂಚನುನ್ಮತ್ತಕ್ರೋಧ ಚಂ
ಡದುದಾದ ಸ್ವಚ್ಛಂದ ಮೂಕರುರು ಭೈರವರು...."[೪೩]

ಎಂದು ಕವಿ ಭೈರವನ ಸ್ವರೂಪ ಕುರಿತು ಹೇಳಿದ್ದಾನೆ. ಈ ಕಾವ್ಯದ ಪ್ರಕಾರ ಭೈರವರು ಕೆದರಿದ ತಲೆ, ಕೆಮ್ಮೀಸೆ, ರುಂಡ-ಮುಂಡಾಭರಣ, ವೃಶ್ಚಿಕದ ಮಾಲೆ, ಕೈಗಳಲ್ಲಿ ಡಮರು, ಶೂಲ, ಖಡ್ಗ ಅರಿದ ತಲೆಗಳು, ಪಾದುಕೆಯಲ್ಲಿ ದಿಗ್ವಸನ ಧರಿಸಿದ ಉಂಚನ, ಉನ್ಮತ್ತ, ಕ್ರೋಧ, ಚಂಡ, ಉದಾರ ಸ್ವಚ್ಛಂದ, ಮೂಕ, ರುರು ಎಂಬ ಭೈರವರು ಸದಮಳ ಜ್ಞಾನಿಯಾದ ಸಿದ್ಧರಾಮ ಗುರುವಿಗೆ ಎರಗಿ ಕೈಮುಗಿದು ನಿಂತರು. ಇಲ್ಲಿ ಕವಿ ನಾನಾ ರೀತಿಯ ಭೈರವರನ್ನು ಹೆಸರಿಸಿದ್ದಾನೆ.

ಹಾಗೆಯೇ ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ

ಕಾಯವೆಂಬುದು ತಾನು ತಾನೇ
ಕಾಯವಾಂತು ತನ್ನಂ
ದಾಯತದ ತಿಳಿವೆಂಬುದಿರು ಕಾಪಾಲ ಮಾರ್ಗದಲಿ
ನ್ಯಾಯಧರ್ಮವು...."[೪೪]

ಎಂದು ಕಾಪಾಲ ಮಾರ್ಗ ಕುರಿತು ಕವಿ ಉಲ್ಲೇಖಿಸುತ್ತಾನೆ. ಕವಿ ಅಲ್ಲಮಪ್ರಭುವಿಗೆ ಎದುರಾದ ಗೋರಕ್ಷನಿಂದ "ದೇಹವೆಂಬುದೇ ನಾನು. ನಾನೇ ದೇಹವಾಗಿರುವೆನು. ಕಾಪಾಲಿಕರ ಧರ್ಮದಲ್ಲಿ ಇದು ನ್ಯಾಯಯುತವಾದ ಧರ್ಮವಾಗಿದೆ" ಎಂದು ಹೇಳಿಸಿದ್ದಾನೆ. ಇಲ್ಲಿ ಗೋರಕ್ಷನದು ಕಾಪಾಲಿಕ ಮತವಾಗಿದೆ ಎಂದು ಅರಿಯಬಹುದು.

ಇದೇ ಕಾವ್ಯದಲ್ಲಿ ಕವಿ ಮುಂದುವರೆದು ಅಲ್ಲಮನು ಗೋರಕ್ಷನನ್ನು ಪರಿವರ್ತಿಸುವ ಹಿನ್ನೆಲೆಯಲ್ಲಿ ಕಾಪಾಲಿಕಮತ ಕುರಿತು

"ಎಲು ತೊಗಲು ಮಲ ಮೂತ್ರ ನೆತ್ತರ
ಕೊಳಚೆಯಾಗಿಹ ಹೇಸಿಕೆಯ ತನಿ
ಗೊಳೆಯೊಡಲು ತಾನೆಂಬ ಮೂರ್ಖನು ತನ್ನನಜೆದಪನೆ
ಸಲುವುದೇ ಕಾಪಾಲಮಾರ್ಗಕೆ"[೪೫]

ಎಂದು ಹೇಳಿದ್ದಾನೆ.

ಅಂದರೆ ಎಲುಬು, ಚರ್ಮ, ಮಲ, ಮೂತ್ರ, ರಕ್ತ, ಕೊಳಚೆಯಾಗಿರುವ ದೇಹವೇ ತಾನು ಎನ್ನುವ ಮೂರ್ಖನು ತನ್ನನ್ನು ತಿಳಿಯುವನೆ? ಕಾಪಾಲಿಕರ ಪಂಥದಲ್ಲಿ ಇದು ಸಲ್ಲುವುದೆ? ಅದಕ್ಕೆ ಅಪಕೀರ್ತಿ ತರಬಹುದೇ ಎಂದು ಅಲ್ಲಮ ಗೋರಕ್ಷನಿಗೆ ಕಾಪಾಲಿಕ ಮಾರ್ಗದ ನೈಜತೆಯ ಬಗ್ಗೆ ಹೇಳುತ್ತಾನೆ. ೧೩, ೧೪ನೇ ಶತಮಾನದಲ್ಲಿ ಕಾಪಾಲಿಕರನ್ನು ವೀರಶೈವ (ಧರ್ಮ) ತತ್ವಪ್ರಚಾರಕರು ವೀರಶೈವಕ್ಕೆ ಪರಿವರ್ತಿಸುವ ಕಾರ್ಯದಲ್ಲಿ ತೊಡಗಿದ್ದರೆಂದೂ ಇದಕ್ಕೆ ಹಂಪಿ ಪರಿಸರ ಹೊರತಾಗಿಲ್ಲವೆಂದು ಹೇಳಬಹುದು.

ಹೀಗೆ ಹಂಪಿಯ ಶಾಸನಗಳು ಮತ್ತು ಸಾಹಿತ್ಯ ಕೃತಿಗಳು ಕಾಪಾಲಿಕ ಶೈವರ ಬಗ್ಗೆ, ಅವರ ಆಚರಣೆಗಳನ್ನು ಕುರಿತು ದಾಖಲಿಸಿವೆ. ಇವರನ್ನು ಕುರಿತು ಶಾಸನಗಳು ಅಲ್ಪ ಅಂಶಗಳನ್ನು ಹೇಳಿದರೆ, ಸಾಹಿತ್ಯ ಕೃತಿಗಳು ಅವರನ್ನ ಅವರ ಆಚರಣೆಗಳನ್ನು ಕುರಿತು ಹೆಚ್ಚಿನ ಅಂಶಗಳನ್ನು ಹೇಳುತ್ತವೆ.

೩. ಶುದ್ಧಶೈವ

ಶೈವ ಶಾಖೆಗಳಲ್ಲಿ ಶುದ್ಧಶೈವವೂ ಒಂದು. ಇದರ ಉಗಮ ಕಾಶ್ಮೀರ. ಇದು ಕರ್ನಾಟಕಕ್ಕೆ ಪ್ರವೇಶ ಪಡೆದಿದ್ದಿತು ಎಂಬುದನ್ನು ಗೋಕಾಕ ತಾಲೂಕಿನ ಕುರುಬೆಟ್ಟ(೧೨೪೫) ಶಾಸನದ ಮೂಲಕ ಡಾ.ಎಂ.ಎಂ. ಕಲಬುರ್ಗಿಯವರು ಗುರುತಿಸಿದ್ದಾರೆ. ಈ ಶೈವಶಾಖೆಗೆ ಶಿವಸಮಯ ಶ್ರೋತ್ರೀಯ ಶೈವ, ಶಿವಸಮಯ, ಸಿದ್ಧಾಂತಶೈವ, ಶುದ್ಧಶೈವ, ಮಾಹೇಶ್ವರ ಶೈವಗಳಲ್ಲದೆ, ಶ್ರೀಕಂಠಶೈವ, ಆರಾಧ್ಯ ಶೈವವೆಂಬ ಪರ್ಯಾಯನಾಮಗಳಿದ್ದವೆಂದು ತಿಳಿದುಬರುತ್ತದೆ.''[೪೬]

ಆಂಧ್ರ ಪ್ರದೇಶದಲ್ಲಿ ಇದು ದೂರ್ವಾಸಾನ್ವಯ, ಆರಾಧ್ಯಶೈವ 'ಅಸಂಖ್ಯಾತ ಮಾಹೇಶ್ವರ' ಎಂಬ ಹೆಸರುಗಳಿಂದ ಕರೆಯಲ್ಪಟ್ಟಿದೆ. ಸಿದ್ಧಸೋಮಾನಂದನ ಶಿವದೃಷ್ಟಿವೃತ್ತಿ ಮತ್ತು ತಂತ್ರಾಲೋಕಟೀಕೆಗಳಲ್ಲಿ ಬರುವ ಶುದ್ಧಶೈವದ ಉಗಮ ಕುರಿತು ಹೀಗೆ ಹೇಳಿದೆ. ''ಮೊದಲು ಋಷಿಮುಖದಲ್ಲಿದ್ದ ಈ ಧರ್ಮದ ತತ್ವಗಳು ಕಲಿಯುಗದಲ್ಲಿ ವಿಚ್ಛಿನ್ನವಾಗಲು, ಕೈಲಾಸದಲ್ಲಿ ಶ್ರೀಕಂಠರೂಪದಿಂದ ಸಂಚರಿಸುತ್ತಲಿದ್ದ ಶಿವನು, ಶಾಸ್ತ್ರೋಪನಿಷತ್ತುಗಳ ಸಾರಭೂತವಾದ ತ್ರಿಕಮತ(ಕಾಶ್ಮೀರ ಶೈವ, ಪ್ರತ್ಯಭಿಜ್ಞ)ವನ್ನು ಪ್ರಚಾರ ಮಾಡಲು ದೂರ್ವಾಸಮುನಿಗೆ ಆಜ್ಞಾಪಿಸಿದನು. ಅವನು ಆಮರ್ದಕ, ಶ್ರೀನಾಥ, ತ್ರ್ಯಂಬಕ ಹೆಸರಿನ ಮೂವರು ಮಾನಸ ಪುತ್ರರನ್ನು ಸೃಷ್ಟಿಸಿ, ಅವರಿಗೆ ದ್ವಯ, ದ್ವಯಾದ್ವಯ, ಅದ್ವಯ ಮತಗಳ ಪ್ರಸಾರ ಮಾಡಲು ಹೇಳಿದನು. ಇವುಗಳಲ್ಲಿ ಅದ್ವಯ ರೂಪದ ತ್ರ್ಯಂಬಕನ ಸಂಪ್ರದಾಯವೇ ತ್ರಿಕಮತವೆಂದು ಪ್ರಸಿದ್ಧಿ ಪಡೆದಿದೆ. ಈ ಮತವು ಕರ್ನಾಟಕದಲ್ಲಿ ಪ್ರಸಾರಗೊಂಡಿದ್ದಿತೆಂಬುದಕ್ಕೆ ಗೋಕಾಕ ತಾಲೂಕಿನ ಕುರುಬೆಟ್ಟ ಕ್ರಿ.ಶ.೧೨೪೫ರ ಶಾಸನ ಹಾಗೂ ಮುಂತಾದ ಶಾಸನಗಳು ನೇರ ಸಾಕ್ಷಿಯಾಗಿದೆ.''[೪೭]

ಈ ಶುದ್ಧಶೈವದ ಸ್ವರೂಪ ಅನೇಕ ಆಗಮಗಳಲ್ಲಿ ಉಲ್ಲೇಖಿತವಾಗಿದೆ ಸೂಕ್ಷ್ಮಾಗಮದ ಪುಟ ೮೧ ರಲ್ಲಿ ''ಶಿವನು ಶುದ್ಧನೆಂದು ಕರೆಯಲಾಗಿದೆ. ಶಿವನಿಂದ ಉದ್ಭವವಾದುದು ಶೈವ ಎನಿಸುತ್ತದೆ. ನಾನು ಶುದ್ಧ, ಶಿವಸಂಭೂತನೆನ್ನುವ ಭಾವವುಳ್ಳವನೇ ಶುದ್ಧಶೈವನು(೨೨). ಸತ್ಯಾದಿ ಲಕ್ಷಣ ಉಳ್ಳ ಪಾರ್ವತಿಯೊಡನಿರುವ ಶಿವನೊಬ್ಬನೇ ಮಹಾದೇವ. ಉಳಿದ ದೇವತೆಗಳು ಆತನ ಭಕ್ತರು, ಆತನಿಂದ ಹುಟ್ಟಿದವರು. ಆತನನ್ನೇ ಆಶ್ರಯಿಸಿದವರು(೨೩). ಶಿವಪೂಜಾ ಸಮಯದಲ್ಲಿ ಬೇರೆ ಬೇರೆ ದೇವತೆಗಳ ವಿಗ್ರಹಗಳು ಕಾಣುವಂತಿದ್ದರೆ ಬೇರೆ ಉಪಾಯವಿಲ್ಲದೆ, ಅವುಗಳಿಗೆ ತೆರೆ ಹಾಕಿ ಮರೆ ಮಾಡಿ ಪೂಜಿಸಬೇಕು(೨೪). ಗುರು ಕರುಣಿಸಿದ ಲಿಂಗವನ್ನು ಕರಪೀಠದಲ್ಲಿಟ್ಟು ಪೂಜಿಸಬೇಕು. ಗುರುವು ಉಪದೇಶಿಸಿದ ನಿಯಮಗಳನ್ನು ಸಾವಧಾನದಿಂದ ಆಚರಿಸಬೇಕು(೨೫). ಪ್ರಮಾದದಿಂದ ಲಿಂಗ ಕೆಳಗೆ ಬಿದ್ದರೆ, ನಷ್ಟವಾದರೆ, ಸುಟ್ಟರೆ, ಕಳ್ಳತನವಾದರೆ, ಭಿನ್ನವಾದರೆ, ಬೇರೆ ಯಾವ ಕಾರಣದಿಂದಲಾದರೋ ದೂಷಿತವಾದರೆ, ಗುರುಚರಣವನ್ನು ನೆನೆದು, ಗುರುದೇವನಾಜ್ಞೆಯಂತೆ ಅಘೋರ ಮಂತ್ರವನ್ನು ಜಪಿಸಿ, ಅದನ್ನೇ ಆಗಲಿ, ಬೇರೆ ಲಿಂಗವನ್ನಾಗಲಿ ಧರಿಸಿ ಪುನಃ ಪೂಜಿಸಬೇಕು(೨೬-೨೭) ಅಜಾಗರೂಕತೆಯಿಂದ

ನಿಯಮದಲ್ಲಿ ಲೋಪ ಉಂಟಾದರೆ, ಮೂಲ ಪಂಚಾಕ್ಷರಿ ಮಹಾ ಮಂತ್ರವನ್ನು ಜಪಿಸಬೇಕು. ಹೇ ದೇವಿ, ವ್ರತ ಆಚಾರಾದಿಗಳು ಲೋಪವಾದರೆ ಇದೇ ಪ್ರಾಯಶ್ಚಿತ್ತ. ಇದುವೇ ಶುದ್ಧಶೈವ ಮತ"[೪೮] ಎಂಬ ಅಂಶವನ್ನು ಡಾ. ಕಲಬುರ್ಗಿಯವರು ತಮ್ಮ ಸಂಪಾದನೆಯ ಶುದ್ಧಶೈವ ಮತ್ತು ಗೋಳಕಿಮಠ ಸಂಪ್ರದಾಯ ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಈ ಶುದ್ಧಶೈವದ ಉಲ್ಲೇಖ ಹರಿಹರಾದಿ ಕವಿಗಳ ಕೃತಿಗಳಲ್ಲಿ ಕಂಡುಬರುತ್ತವೆ. ಬಸವರಾಜ ದೇವರ ರಗಳೆಯಲ್ಲಿ ಬಸವಣ್ಣನನ್ನು ಶುದ್ಧಶೈವ ಸಾರೋನಿಧಿ"[೪೯] ಎಂದೂ, ರೇವಣ ಸಿದ್ದೇಶ್ವರ ರಗಳೆಯಲ್ಲಿ ರೇವಣಸಿದ್ದನನ್ನು 'ಶೈವ ಪ್ರತಾಪಸಿದ್ಧನೆಂದೂ'[೫೦] ಬಾಹೂರ ಬೊಮ್ಮಯ್ಯ, ಕೋವೂರ ಬೊಮ್ಮಿತಂದೆಯನ್ನು ಶೈವ ಸಾರೋದಯ[೫೧]ರೆಂದೂ ಹರಿಹರ ಕರೆದಿದ್ದಾನೆ. ಶೈವದ ಹಿನ್ನಲೆಯಲ್ಲಿ ಬಂದ ಶರಣರನ್ನು ಕವಿ ಶುದ್ಧಶೈವದ ಹಿನ್ನಲೆಯಲ್ಲಿ ಅರ್ಥೈಯಿಸಲು ಪ್ರಯತ್ನಿಸಿದ್ದಾನೆ.

ಹಾಗೆಯೇ ಕವಿ ಬಾಹೂರ ಬೊಮ್ಮಯ್ಯನ ರಗಳೆಯಲ್ಲಿ ಬಾಹೂರಬೊಮ್ಮಿತಂದಿಯ ಹತ್ತಿರವಿದ್ದ ಅನೇಕ ಮಾಹೇಶ್ವರರಿಗೆ[೫೨] ಧೈರ್ಯ ತುಂಬಿದಂತೆ, ಬಸವರಾಜದೇವರ ರಗಳೆಯಲ್ಲಿ ಮಂತ್ರಿಪದವಿಗೇರಿದ ಬಸವಣ್ಣನನ್ನು ಎದುರುಗೊಳ್ಳಲು ಬಂದ ಶರಣರನ್ನು ಹರಿಹರ ಕವಿಯು 'ಮಹಾಮಾಹೇಶ್ವರ ಕುಲ'[೫೩] ಎಂದು 'ಹೊಲೆಗೇರಿಯ' ಸಂಭೋಳಿ ನಾಗಿದೇವನನ್ನು ಹಿರಿಯ ಮಾಹೇಶ್ವರನೆಂದು"[೫೪] ಕರೆಯುತ್ತಾನೆ. ರಾಘವಾಂಕ ಕವಿ ತನ್ನ ಸಿದ್ಧರಾಮ ಚಾರಿತ್ರದ ಕೊನೆಯಲ್ಲಿ ತನ್ನನ್ನು ಶರಣರು ಕಾಪಾಡಲಿ ಎನ್ನುವುದಕ್ಕೆ ಕರುಣಿಸುಗೆ ಮಾಹೇಶ್ವರರು[೫೫] ಎಂದು ಶಿವಶರಣರನ್ನು ಮಾಹೇಶ್ವರರು ಎಂದು ಕರೆದಿದ್ದಾನೆ. ಬಹುಶಃ ಶರಣರು ಮೊದಲು ಶುದ್ಧಶೈವರಿದ್ದು ಆ ನಂತರ ವೀರಶೈವಕ್ಕೆ ಮತಾಂತರಗೊಂಡಿರಬಹುದು ಅಥವಾ ವೀರಶೈವರಾಗಿರಬಹುದು.

ಮುಂದುವರಿದು ರಾಘವಾಂಕ ತನ್ನ ಸೋಮನಾಥ ಚಾರಿತ್ರದಲ್ಲಿ "ತತ್ತವರನೊಡೆಗಲಸು ಶಿವಸಮಯವಂ ಗೆಲಿಸು"[೫೬] ಎಂದು ಶುದ್ಧಶೈವವನ್ನು ಕುರಿತು ಹೇಳಿದ್ದಾನೆ. ಅಲ್ಲದೆ ಇದೇ ಕಾವ್ಯದಲ್ಲಿ ಮತ್ತೊಂದು ಕಡೆ ತೊಡಿಗೆದೊಡಿಸುವೆ ಮಹಾಮಹೇಶ್ವರರಿಗರ್ಚನೆ"[೫೭] ಎಂದೂ "ಕರವೃದ್ಧರಪ್ಪ ಮಾಹೇಶ್ವರರಿವರ್ಮ ಹಾ ಪುರುಷರೆಲ್ಲಿಂದೆ ವಿಜಯಂಗೈದರೋ"[೫೮] ಎಂದು ಕವಿ ಹೇಳಿದ್ದಾನೆ. ಅಂದರೆ ಶುದ್ಧಶೈವರನ್ನು ವೀರಶೈವರನ್ನಾಗಿಸುವ ಸಾಧ್ಯತೆಯನ್ನು ಪ್ರತಿಪಾದಿಸಿದ್ದಾನೆ.

### ೪. ವೀರಶೈವ

ಶೈವಮತದ ಒಂದು ಪ್ರಭೇದ[೫೯] ಅಂದರೆ ಸಪ್ತಶೈವ ಶಾಖೆಗಳಲ್ಲಿ ಒಂದು ವೀರಶೈವ. ಶೈವಾಚಾರದಲ್ಲಿ ನಿಷ್ಠೆಯುಳ್ಳವನು, ಲಿಂಗಾಯತ ಎಂದು ಸಂಕ್ಷಿಪ್ತ ಕನ್ನಡ ನಿಘಂಟುವಿನಲ್ಲಿ ಉಲ್ಲೇಖಿಸ

ಲಾಗಿದೆ. ಈ ವೀರಶೈವದ ಕುರುಹು ಸಿಂಧೂ ಸಂಸ್ಕೃತಿಯಿಂದಲೇ ಕಂಡುಬರುತ್ತದೆ ಎಂದು ಕೆಲವು ವಿದ್ವಾಂಸರು ವಾದಿಸಿದ್ದಾರೆ. ವೇದ ಮತ್ತು ಶಿವಾಗಮಗಳಲ್ಲಿ ವೀರಶೈವದ ಕಲ್ಪನೆ ಕಂಡುಬರುತ್ತದೆಂದೂ, ಶಿವಲಿಂಗದ ಆರಾಧನೆ ಭಾರತದಲ್ಲಿ ಎಂದು ಆರಂಭವಾಯಿತೋ ಅಂದಿನಿಂದಲೇ ವೀರಶೈವ ಆರಂಭವಾಯಿತೆಂದು ಮತ್ತೆ ಕೆಲವು ವಿದ್ವಾಂಸರು ವಾದಿಸಿರುವುದುಂಟು. ಏನೇ ಆದರೂ ಈ ಕುರಿತು ಅನೇಕ ವಾದ-ವಿವಾದಗಳು ನಡೆದಿರುವುದಂತೂ ಸತ್ಯವಾದದ್ದು. ಕನ್ನಡದಲ್ಲಿ ವೀರಶೈವ ಎಂಬ ಪದ ಯಾವಾಗಿನಿಂದ ಬಳಕೆಯಾಯಿತು? ಆ ಪದದ ಹಿಂದಿನ ಸ್ವರೂಪ, ವೀರಶೈವ ಧರ್ಮದ ಪ್ರಾಚೀನತೆ, ಅದು ಬೆಳೆದು ಬಂದ ಬಗೆ ಮತ್ತು ಆ ಪದ ಒಂದು ಸಿದ್ಧಾಂತ ರೂಪದಲ್ಲಿ ನೆಲೆ ನಿಂತ ಕಾಲ ಮುಂತಾದ ಅಂಶಗಳು ಚರ್ಚಿಸಲು ಅವಶ್ಯವೆನಿಸಿದೆ. ಈ ಕುರಿತು ದೀರ್ಘ ಶೋಧನೆಯ ಅಗತ್ಯವಿದೆ.

ಅ. 'ವೀರಶೈವ' ಪದನಿಷ್ಪತ್ತಿ : 'ವೀರಶೈವ' ಎಂಬುದು ವೀರ ಮತ್ತು ಶೈವ ಎಂಬ ನಿರ್ದಿಷ್ಟ ಅರ್ಥವನ್ನು ಹೊಂದಿರುವ ಎರಡು ಶಬ್ದಗಳಿಂದ ಕೂಡಿದ ಪದವಾಗಿದೆ. ವೀರ ಮತ್ತು ಶೈವ ಎಂಬ ಪದಗಳು ಸೇರಿ ವೀರಶೈವವಾಗಿದೆ. 'ವೀರ' ಎಂದರೆ ಕಲಿ, ಶೂರ, ಪರಾಕ್ರಮಿ, ಶೌರ್ಯ ಪರಾಕ್ರಮ, ಶೌರ್ಯದಿಂದ ಕೂಡಿದ, ಶೂರನಾದ, ಶಕ್ತಿಯುತವಾದ, ಬಲಿಷ್ಠವಾದ, ಶ್ರೇಷ್ಠವಾದ ಅತ್ಯುತ್ತಮವಾದ[೧೦] ಯೋಧ ಇನ್ನು ಹಲವಾರು ರೀತಿ ಅರ್ಥೈಯಿಸಲಾಗಿದೆ. ಧೀರ, ಹೋರಾಟಗಾರ, ರಕ್ಷಕ, ಶೌರ್ಯವಂತ, ದುಷ್ಟಶಕ್ತಿಗಳ ವಿರುದ್ಧ ಹೋರಾಡುವ ಧೈರ್ಯಶಾಲಿ, ದುಷ್ಟಶಿಕ್ಷಕ-ಶಿಷ್ಟರಕ್ಷಕ, ಭ್ರಷ್ಟರನ್ನು ಮಟ್ಟ ಹಾಕಿ ಸರಿದಾರಿಗೆ ತರುವ ಮನೋಭಾವ ಹೊಂದಿದವನು. ಶೌರ್ಯ ಸಾಹಸದ ಪ್ರವೃತ್ತಿವುಳ್ಳವನು ಇನ್ನು ಅನೇಕ ರೀತಿಯಾಗಿ ಅರ್ಥೈಯಿಸಲು ಸಾಧ್ಯವಿದೆ.

'ಶೈವ' ಎಂದರೆ ಶಿವನ ಆರಾಧನೆಯನ್ನು ಪ್ರತಿಪಾದಿಸುವ ಆಗಮ, ಶಿವಾಗಮ, ಶಿವನ ಆರಾಧಕ, ಶೈವ ಮತಾವಲಂಬಿ, ಶಿವನಿಗೆ ಸಂಬಂಧಿಸಿದ[೧೧] ಎಂದು ಅರ್ಥೈಯಿಸಲಾಗಿದೆ. ಶಿವಭಕ್ತ, ಶಿವನ ಅನುಯಾಯಿ ಶಿವನನ್ನು ಆರಾಧಿಸುವವನು, ಶಿವಸಂಸ್ಕೃತಿಯನ್ನು ಒಪ್ಪಿ ಅದನ್ನು ನಿತ್ಯ ಬದುಕಿನಲ್ಲಿ ಅಳವಡಿಸಿಕೊಂಡು ಪರಿಪಾಲಿಸುವವನು. ಶಿವ ಸಿದ್ಧಾಂತ ಪ್ರತಿಪಾದಕ, ಶಿವತತ್ವ ಪರಿಪಾಲಕ, ಶಿವ ಲಾಂಛನ ಹೊಂದಿದವನು ಎಂಬಿತ್ಯಾದಿಯಾಗಿಯೂ ಅರ್ಥೈಯಿಸಬಹುದಾಗಿದೆ.

ಶಿವಸಿದ್ಧಾಂತ ರಕ್ಷಣೆಗಾಗಿ ಹೋರಾಟ ಮಾಡಿದವರು, ಶಿವ ಪಾರಮ್ಯಕ್ಕಾಗಿ ಹೋರಾಡಿದವರು, ಹೋರಾಟ ಮಾಡುವವರು, ಧೀರ ವ್ರತಾಚರಣೆ ಹೂಡುವವರು, ಶಿವದ್ವೇಷಿಗಳನ್ನು ಮಟ್ಟ ಹಾಕುವವರು ವೀರಶೈವರು ಎಂದು ಸುಲಭವಾಗಿ ಅರ್ಥೈಯಿಸಬಹುದಾದರೂ ಇದೇ ನಿರ್ದಿಷ್ಟ ಅರ್ಥವಲ್ಲ. ಶೈವಾಚಾರದಲ್ಲಿ ನಿಷ್ಠೆಯುಳ್ಳವನು, ಲಿಂಗಾಯತ, ಲಿಂಗವಂತ[೧೨] ಎಂದು ಸಾಮಾನ್ಯವಾಗಿ ಅರ್ಥೈಸಲಾಗಿದೆ. ಇಷ್ಟಲಿಂಗಧಾರಿ ಯಾಗಿದ್ದು ಶಿವಸಿದ್ಧಾಂತ (ಅಷ್ಟಾವರಣ, ಷಟ್ಸ್ಥಲ, ಪಂಚಾಚಾರ)ವನ್ನು ಪಾಲಿಸುವವನು ವೀರಶೈವನೆಂದು ಅರ್ಥೈಸಬಹುದು.

ಶಿವಸಿದ್ಧಾಂತ ರಕ್ಷಣೆಗಾಗಿ ಹೋರಾಟ ಮಾಡಿದವರು, ಶಿವ ಪಾರಮ್ಯಕ್ಕಾಗಿ ಹೋರಾಡಿದವರು ಎಂದರೆ ವೈದಿಕರ ವರ್ಣಾಶ್ರಮ ಪದ್ಧತಿ, ಯಜ್ಞ-ಯಾಗಾದಿ ಮತ್ತು ಅವುಗಳಿಗೆ ಪ್ರಾಣಿಬಲಿ ನೀಡುವುದು, ಜಾತಿಪದ್ಧತಿ ಮುಂತಾದ ದುರಾಚರಣೆಗಳನ್ನು ವಿರೋಧಿಸಿ ಹೋರಾಡಿ ಸಮಾನತೆ, ಜಾತ್ಯಾತೀತತೆ ಮತ್ತು ಅಹಿಂಸೆಯನ್ನು ಪ್ರತಿಪಾದಿಸುವರು ವೀರಶೈವರು. ಇವರು ಸದಾ ಇಷ್ಟಲಿಂಗಧಾರಿಗಳಾಗಿದ್ದು ಶಿವನಲ್ಲಿ ನಿಷ್ಠೆಯುಳ್ಳವರಾಗಿರುತ್ತಾರೆ. ವೀರಶೈವ ಎಂದರೆ ಯಾರು ಎಂಬುದನ್ನು ಪರಮೇಶ್ವರಾಗಮ

ವೀರತ್ವಂ ನಾಮದೇವೇಸಿ ಯಥಾ ವೀರೋರಣೇ ಭವಃ
ತಥಾ ಮತೇತ ಸದ್ಭಕ್ತ್ಯೈ ವೀರೋ ವೈರಾಗ್ಯತೋ ಭವೇತ್

ಅಂದರೆ ಯುದ್ಧಭೂಮಿಯಲ್ಲಿ ನಿಷ್ಠೆಯಿಂದ ಹೋರಾಡುವ ವೀರನಂತೆ, ವೀರಶೈವ ತತ್ವದಲ್ಲಿ ನಿಷ್ಠೆತ್ಯಾಗ ಗುಣವುಳ್ಳವನೇ ವೀರಶೈವನೆಂದು ತಿಳಿಸುತ್ತದೆ.[೬]

ಡಾ.ಶಂಬಾ ಜೋಶಿಯವರು ವೀರಶೈವ ಪದದ ನಿಷ್ಪತ್ತಿ ಕುರಿತು "ರುದ್ರ-ಶಿವನ ಬಗ್ಗೆ ವೀರ ಅಭಿಮಾನವುಳ್ಳವರೆಂದು ಇವರಿಗೆ ವೀರ-ಶೈವರೆಂಬ ಹೆಸರು. ಹೀಗೊಂದು ಊಹೆಯುಂಟು. ವೀ ಮತ್ತು ರ ಈ ಪವಿತ್ರ ವರ್ಣಗಳಿಗೆ ಕೆಲವೊಂದು ಗುಹ್ಯಾರ್ಥವುಂಟು. 'ವಿ' ಎಂದರೆ ವಿದ್ಯಾ 'ರ' ಎಂದರೆ ರತನಾದವನು', ಶಿವದೇವೈಕ್ಯ ವಿದ್ಯೆಯಲ್ಲಿ ರತನಾದವನೇ ವೀರಶೈವನು. ಇದು ಸಶಾಸ್ತ್ರೀಯ ವ್ಯುತ್ಪತ್ತಿಯೆಂದು ವೀರಶೈವರೂ ಹೇಳಲಾರರು. ಆದರೆ ನನಗೆ ತಿಳಿದ ಮಟ್ಟಿಗೆ ಈ ಶಬ್ದದ ಮೂಲವು ಋಗ್ವೇದದಲ್ಲಿದೆ. ರುದ್ರನು ವೃಷಭನು ಎಂದರೆ ವೀರನು. ಆದುದರಿಂದ ಆತನ ಉಪಾಸಕರೂ ವೀರರು; ಆದ್ದರಿಂದ ಈ ಹೆಸರು. ಹೀಗೆ ಬರಿ ತರ್ಕಿಸಿ ಇದನ್ನು ಎಣಿಕೆ ಹಾಕಬೇಕಾದುದೂ ಇಲ್ಲ.

ಇಮಾ ರುದ್ರಾಯ ತವಸೇ ಕಪರ್ದಿನೇ ಕ್ಷಯದ್ವೀರಾಯ ಪ್ರಭರಾಮಹೇಮತಿಃ |
ಯಥಾಶಮಸದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ನನಾತುರಮ್ ||

ಬಲಿಷ್ಠನೂ, ಜಟಾಧಾರಿಯೂ ವೀರಪುತ್ರರನ್ನುಳ್ಳವನೂ ಆದ ರುದ್ರನನ್ನು ಕೊಂಡಾಡೋಣ. ಅದರಿಂದ ಈ ಊರಲ್ಲಿ ಎರಡು ಕಾಲಿನವರ ಹಾಗೂ ನಾಲ್ಕು ಕಾಲಿನವರ ಕಲ್ಯಾಣವಾಗಿ, ಎಲ್ಲರೂ ನಿರೋಗಿಗಳು ಪುಷ್ಟರೂ ಆಗುವರು. ಇದೊಂದೇ ಋಚೆಯಲ್ಲಿ ಅಲ್ಲ; ಇದರ ಮುಂದಿನ ಮಂತ್ರದಲ್ಲಿಯೂ ಬೇರೆ ಮಂಡಲಗಳಲ್ಲಿಯೂ ರುದ್ರ-ಶಿವನು ವೀರರ ತಂದೆ, ವೀರರ ಒಡೆಯ ಎಂಬ ಮಾತು ಅಲ್ಲಲ್ಲಿ ಬಂದಿದೆ. ಶಿವ(ರುದ್ರ)ನ ಪುತ್ರರು (ಶಿವಪುತ್ರ) ಎಂದು ಗೌರವದಿಂದ ಹೇಳಿಕೊಳ್ಳುವ ಮತ್ತು ಆ ಬಗೆಯಾದ ದೃಢಶ್ರದ್ಧೆಯಿರುವ ಶಿವಭಕ್ತರಿಗೆ ಅಲ್ಲದೆ, ಬೇರೆ ಇನ್ನಾರಿಗೂ ವೀರ(ಶೈವ)ರೆಂಬ ಹೆಸರು ಸಮರ್ಪಕವಾಗಲಾರದು"[೭] ಎಂದು ಅಭಿಪ್ರಾಯಪಡುತ್ತಾರೆ. ಆದರೆ ಶಂಬಾಜೋಶಿಯವರು ಹೇಳುವಂತೆ ಶಿವಜೀವೈಕ್ಯ ವಿದ್ಯೆಯೆಂಬುದೊಂದು ಅಧ್ಯಾತ್ಮಿಕ ಪರಿಭಾಷೆ. ವೀರಶೈವ ಎನಿಸಿಕೊಂಡು ವ್ಯಕ್ತಿಗಳೆಲ್ಲರೂ ಅಧ್ಯಾತ್ಮಿಕ ಜೀವಿಗಳಾಗಿರಲು ಅಥವಾ ಅಧ್ಯಾತ್ಮಿಕ ಸಾಧನೆ ಮಾಡಿರಲು ಸಾಧ್ಯವಿಲ್ಲ. ಆದ್ದರಿಂದ ಶಂಬಾರವರ ವೀರಶೈವ ಪದನಿಷ್ಪತ್ತಿ ಸರಿಯಾದುದಲ್ಲವೆಂದು ತೋರುತ್ತದೆ.

ಡಾ.ಎಂ.ಚಿದಾನಂದ ಮೂರ್ತಿಯವರು ''ವೀರಶೈವ'' ಪದದ ನಿಷ್ಪತ್ತಿ ಕುರಿತು 'ಶೈವ' ಎಂದರೆ ಶಿವನ ಉಪಾಸಕ. ಶಿವನನ್ನು ಆರಾಧ್ಯದೈವವಾಗಿ ಉಳ್ಳವನು. ಅದಕ್ಕೆ ವಿಶೇಷಣವಾದ 'ವೀರ' ಎನ್ನುವ ಮಾತಿಗೆ ಎರಡು ಅರ್ಥಗಳು ಸಾಧ್ಯ. ಒಂದು ಶಿವನ ಬಗ್ಗೆ ಅಚಲವಾದ ಏಕೈಕವಾದ ನಿಷ್ಠೆಯನ್ನು ಅದು ಹೇಳಬಹುದು. ಎರಡು ವೀರಶೈವ ಮತವನ್ನು ಪ್ರಸಾರ ಮಾಡಲು ಹೊರಟಾಗ ಅದರ ನಾಯಕರು ಎದುರಿಸಿದ ಸಮಸ್ಯೆಗಳು, ಪ್ರತಿಬಂಧಗಳು, ಅವರ ನಿಷ್ಠೆ, ಉತ್ಸಾಹ, ಧೈರ್ಯಗಳನ್ನು ಅದು ಸೂಚಿಸಬಹುದು. 'ವೀಲಶೈವ' ಮಾತಿಗೆ ಮೊದಲ ಅರ್ಥವೇ ಗ್ರಾಹ್ಯವಾದುದು''[೬೫] ಎಂದಿದ್ದಾರೆ.

ಡಾ.ಚಿ.ಮೂ.ರವರು ವೀರ ಮತ್ತು ಶೈವ ಎಂಬ ಪದಗಳಿಗೆ 'ಶಿವನ ಉಪಾಸಕ, ಶಿವನ ಬಗ್ಗೆ ಅಚಲವಾದ ನಿಷ್ಠೆ ಹೊಂದಿದವನು' ಎಂಬ ಒಂದೇ ಅರ್ಥ ಕಲ್ಪಿಸಲು ಪ್ರಯತ್ನಿಸಿದ್ದಾರೆ. ಇದು 'ವೀರಶೈವ' ಪದದ ಸರಿಯಾದ ನಿಷ್ಪತ್ತಿ ಅಲ್ಲವೆಂದೆನಿಸುತ್ತದೆ. ಪ್ರೊ.ಬಸವನಾಳರು 'ವೀರಶೈವ' ಎಂಬ ಪದದಲ್ಲಿ ಕಾಣುವ 'ವೀರ' ಎಂಬ ಶಬ್ದಕ್ಕೆ ಶೂರ, ಬಲಿಷ್ಠ ಶ್ರೇಷ್ಠ ಎಂಬರ್ಥಗಳನ್ನು ಸಂಸ್ಕೃತ ನಿಘಂಟುಗಳು ಹೇಳುತ್ತವೆ. ಆದುದರಿಂದ ಇದಕ್ಕೆ ಲಾಕ್ಷಣಿಕವಾಗಿ 'ನಿಷ್ಠಾವಂತ' ಎಂಬರ್ಥವನ್ನು ಹೇಳ ಬಹುದಾಗಿದೆ. ಎಂದರೆ ಶಿವನಲ್ಲಿ(ಅಥವಾ ಲಿಂಗದಲ್ಲಿ) ಅತ್ಯಂತ ನಿಷ್ಠೆಯುಳ್ಳವನೆಂದು ಅರ್ಥಮಾಡ ಬಹುದು.[೬೬] ಪ್ರೊ.ಬಸವನಾಳರ ಪ್ರಕಾರ ಶಿವನಲ್ಲಿ ಅತ್ಯಂತ ನಿಷ್ಠೆಯುಳ್ಳವ ವೀರಶೈವ. ಅದರಿಂದ ವೀರಶೈವ ಪದಬಂದಿರಬಹುದೆಂದು ಊಹಿಸುತ್ತಾರೆ. ಆದರೆ ಈ ವಾದದಲ್ಲಿ ಸತ್ವವಿಲ್ಲವೆಂದೆನಿಸುತ್ತದೆ. ಕಾರಣ ಕಾಳಾಮುಖರು ಕಾಪಾಲಿಕರು, ಲಕುಲೀಶ, ಕಾಶ್ಮೀರಶೈವ ಮುಂತಾದವರೂ ಶಿವನಲ್ಲಿ ನಿಷ್ಠೆಹೊಂದಿ ದವರೇ, ಆದರೆ ಇವರಾರೂ ವೀರಶೈವರಲ್ಲ. ಡಾ.ಜಚನಿಯವರು 'ವೀರಶೈವ'ವೆಂದರೆ ವೀರಶಿವನಿಂದಾದ ಮತವೆಂದು ವೀರರಸವುಳ್ಳ ಶಿವ(ಭದ್ರ)ನಿಂದಾದ ತತ್ತ್ವವೆಂದು ಸಿದ್ಧಾಂತವೆಂದು ಅರ್ಥ. ವೀರಶಿವನೆಂದರೆ ವೀರಭದ್ರ. ಶಿವ-ಭದ್ರ ಎರಡೂ ಒಂದೇ ಅರ್ಥದ ಪರ್ಯಾಯ ಪದಗಳು 'ಭದ್ರಂ ಶಿವಂ ಮಂಗಲಂ' ಎಂದು ಅಮರಕೋಶ ಸಾರಿದೆ. ವೀರಭದ್ರನೆಂದರೂ ವೀರಶಿವನೆಂದರೂ ಒಂದೆ, ಶಿವನಿಂದಾದುದು ಶೈವಮತ, ವೀರಶಿವನಿಂದಾದುದು ವೀರಶೈವಮತ''[೬೭] ಎಂದಿದ್ದಾರೆ. ಡಾ.ಜಚನಿಯವರು 'ವೀರಶೈವ' ಪದದ ನಿರ್ದಿಷ್ಟ ನಿಷ್ಪತ್ತಿ ಹೇಳುವುದಿಲ್ಲ.

ಈ ಮೇಲಿನ ಎಲ್ಲಾ ಚಿಂತಕರ ಹೇಳಿಕೆಗಳನ್ನು ಆದರಿಸಿ ಹೇಳುವುದಾದರೆ ಬಸವಾದಿ ಶರಣರ ಅನುಯಾಯಿಗಳು ಅವರ ಸಿದ್ಧಾಂತ ಉಳುವಿಗೆ ಮತ್ತು ವೈದಿಕರ ಯಜ್ಞಾದಿ ಮೂಢಾಚರಣೆಗಳನ್ನು ವಿರೋಧಿಸಿ ಹೋರಾಟ ಮಾಡಲು ಶಿವನ ಮಗ ವೀರಭದ್ರವನ್ನು ಆದರ್ಶವಾಗಿಟ್ಟುಕೊಂಡರು. ಮುಂದೆ ಆತನನ್ನೇ ಗುರುವಾಗಿ ಸ್ವೀಕರಿಸಿದರು. ಅಂದರೆ ಏಕಕಾಲಕ್ಕೆ ಶಿವನನ್ನು ಲಿಂಗರೂಪದಲ್ಲಿ, ವೀರಭದ್ರವನ್ನು ಮೂರ್ತಿಶಿಲ್ಪ ರೂಪದಲ್ಲಿ ಆರಾಧಿಸಲು ಪ್ರಾರಂಭಿಸಿರಬೇಕು. ಶಿವಲಿಂಗ ಆರಾಧನೆಗಿಂತ, ವೀರಭದ್ರನ ಆರಾಧನೆ ವ್ಯಾಪಕಗೊಂಡಾಗ (ಈ) ಶೈವರು ವೀರಭದ್ರಶೈವರಾಗಿದ್ದಂತೆ ತೋರುತ್ತದೆ. ವೀರಭದ್ರಶೈವವೇ

ಮುಂದೇ ವೀರಶೈವವಾಗಿರಬೇಕು (ವೀರಭದ್ರಶೈವದಲ್ಲಿ 'ಭದ್ರ'ಲೋಪವಾಗಿ ವೀರಶೈವ ಆಗಿರಬೇಕು) ವೀರಭದ್ರನ ಆರಾಧನೆಯಿಂದ ವೀರಶೈವ ಆಗಿದ್ದರಿಂದ ರಾಘವಾಂಕ ಕವಿ ತನ್ನ ವೀರೇಶ ಚರಿತೆ ಕಾವ್ಯದಲ್ಲಿ ವೀರಭದ್ರವನ್ನು 'ವೀರ ಕುಲಾಧೀಶ್ವರ'[೬೮]ನೆಂದು ಕರೆದಿದ್ದಾರೆ. ವೀರಕುಲಾಧೀಶ್ವರನೆಂದರೆ ವೀರಶೈವ ಕುಲಕ್ಕೆ ಒಡೆಯ ಅಥವಾ ವೀರಶೈವ ಧರ್ಮಗುರು ಎಂದು ಅರ್ಥೈಸಬೇಕಾಗುತ್ತದೆ. ಹೀಗೆ 'ವೀರಶೈವ' ಎಂಬ ಪದವು ವೀರಭದ್ರನ ಆರಾಧನೆಯಿಂದ ಬಳಕೆಗೆ ಬಂಧಿರಬೇಕೆಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿದೆ.

### ಆ. ವೀರಶೈವ ಲಕ್ಷಣ

ವೀರಶೈವರೆಂದರೆ ಕೇವಲ ಶಿವನ ಆರಾಧಕರು, ಇಷ್ಟಲಿಂಗ ಪೂಜಕರು ಎಂದರೆ ವೀರಶೈವರಾಗುವುದಿಲ್ಲ. ಅವರು ಕೆಲವೊಂದು ಗುಣಗಳನ್ನು ಅಳವಡಿಸಿಕೊಂಡಿರಬೇಕಾಗುತ್ತದೆ. ಈ ನಿಟ್ಟಿನಲ್ಲಿ ಬಸವಣ್ಣನವರ ಒಂದು ವಚನ ನಮ್ಮ ಗಮನ ಸೆಳೆಯುತ್ತದೆ.

ವೀರವ್ರತಿ ಭಕ್ತನೆಂದು ಹೊಗಳಿಕೊಂಬಿರಿ ಹೇಳಿರಯ್ಯಾ
ವೀರನಾದರೆ ವೈರಿಗಳು ಮೆಚ್ಚಬೇಕು
ಪ್ರತಿಯಾದರೆ ಅಂಗನೆಯರು ಮೆಚ್ಚಬೇಕು
ಈಶ ಭಕ್ತನಾದರೆ ಜಂಗಮು ಮೆಚ್ಚಬೇಕು.....

ಅಂದರೆ ವೀರಶೈವನಿಗೆ ಎಂಥ ಸಂಕಷ್ಟಗಳು ಎದುರಾದರೂ ಅಂಜದೆ ಅವನ್ನು ಧೈರ್ಯದಿಂದ ವೀರತ್ವ, ವೀರವೃತ್ತಿಯಿಂದ ವೀರವ್ರತಿಯಾಗಿ ಎದುರಿಸಬೇಕು. ಶಿವಪಾರಮ್ಯವನ್ನು ನಂಬಿ ಶಿವದೇವರ ಐಕ್ಯವನ್ನು ಸಾಧಿಸುವ ಏಕಮಾತ್ರ ಜೀವನವನ್ನು ಅವಲಂಬಿಸಿ ನಿಷ್ಠೆಯಿಂದಲೂ ಸದಾಚಾರಗಳನ್ನು ಪಾಲಿಸುವ ವೀರವ್ರತದಿಂದಲೂ ನಡೆಯುವವರೇ ವೀರಶೈವರು ಎಂದು ಒಟ್ಟಿನಲ್ಲಿ ಹೇಳಬಹುದಾಗಿದೆಂದು[೬೯] ಪ್ರೊ.ಶಿ.ಶಿ.ಬಸವನಾಳರು ಅಭಿಪ್ರಾಯಪಡುತ್ತಾರೆ.

ಗುಬ್ಬಿಮಲ್ಲಣಾರ್ಯನ ವೀರಶೈವಾಮೃತ ಪುರಾಣದಲ್ಲಿ ವೀರಶೈವದ ಗುಣ ಕುರಿತು
"ವೈದಿಕಾಚಾರ ವರ್ಜಿತನು ವರ್ಣಾಶ್ರಮದ
ಹಾದಿಯಂ ಹೊದ್ದನಾ ಸಕಲ ಮಂತ್ರವನೆ ಸಂ
ಮೋದದಿಂ ಬಿಟ್ಟು ಶಿವಮಂತ್ರವಂ ಜಪಿಸುವಂ ಮಲ್ಲಿಂಗಧಾರಿಯಧಿಕ
ಭೇದಿಸುವ ಭವಿಯಳಿದು ಭಕ್ತರಂ ಕೂಡಿ
............ ಶಿವಸಂಬಂಧ ಶೈವನಾ ವೀರಶೈವಂ"[೭೦]

ಎಂದು ಹೇಳಲಾಗಿದೆ.

ವೈದಿಕಾಚಾರ, ವರ್ಣಾಶ್ರಮಗಳನ್ನು ತ್ಯಜಿಸಿದವನು, ಸಕಲ ಮಂತ್ರಗಳನ್ನು ಬಿಟ್ಟು ಶಿವಮಂತ್ರವನ್ನೇ ಜಪಿಸುವವನು; ಶಿವಲಿಂಗವನ್ನು ಧರಿಸಿದವನೇ ಅಧಿಕನು. ಭವಿಯನ್ನು ಬಿಟ್ಟು ಭಕ್ತರನ್ನು ಕೂಡಿಕೊಂಡಿರುವವನೇ ವೀರಶೈವ. ಮಲ್ಲಣಾರ್ಯನ ಪ್ರಕಾರ ವೈದಿಕಾಚರಣೆಗಳನ್ನು ವಿರೋಧಿಸಿ ದಿಟ್ಟತನದಿಂದ ಬಾಳುವವನು ವೀರಶೈವ.

ವೀರಶೈವನಾದವನು ಅಂಗದ ಮೇಲೆ ಸದಾ ಲಿಂಗ ಧರಿಸಿ ಅದನ್ನು ತ್ರಿಕಾಲದಲ್ಲಿ ಪೂಜಿಸಬೇಕು. ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡು ನಿತ್ಯವೂ ಆಚರಿಸಬೇಕು. ಅಗ್ನಿಯನ್ನು ಪೂಜಿಸುವಂತಿಲ್ಲ, ಯಜ್ಞಮಾಡುವಂತೆಯೂ ಇಲ್ಲ, ಇನ್ನೂ ಮುಂತಾದ ಧಾರ್ಮಿಕ ಆಚರಣೆಗಳು ವೀರಶೈವದಲ್ಲಿವೆ. (ವೀರಶೈವ ಧರ್ಮ ತತ್ವ-ಸಿದ್ಧಾಂತಗಳ ಬಗ್ಗೆ ಮುಂದಿನ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.)

## ಆ. ವೀರಶೈವದ ಹುಟ್ಟು ಮತ್ತು ಬೆಳವಣಿಗೆ

ಭಾರತದ ಚರಿತ್ರೆ ಪ್ರಾರಂಭವಾಗುವುದು ಸಿಂಧೂ ನಾಗರೀಕತೆಯಿಂದ. ಸಿಂಧೂ ನಾಗರೀಕತೆಯ ಜನರು ಶಿವೋಪಾಸಕರು. ಶೈವಮತಾವಲಂಬಿಗಳಾಗಿದ್ದರೆಂಬುದಕ್ಕೆ ಹರಪ್ಪಾ-ಮೊಹಂಜೆದಾರೋ ನಗರಗಳ ಉತ್ಖನನದಲ್ಲಿ ದೊರೆತ ಶಿವಲಿಂಗ ಮತ್ತು ಪಶುಪತಿಯ ಮೂರ್ತಿಶಿಲ್ಪಗಳೇ ಸಾಕ್ಷಿ. ಅಂದರೆ ಭಾರತದ ಮೂಲ ನಿವಾಸಿಗಳು ಶೈವಮತಾವಲಂಬಿಗಳು. ಭಾರತದ ಆರಂಭಿಕ ಇತಿಹಾಸವೆಂದರೆ ಶೈವಮತದವರ ಚರಿತ್ರೆಯೇ ಆಗಿದೆ. ವೇದಗಳಿಂದ ಇದು ಪ್ರಾಚೀನವಾದದ್ದು. ಪಶುಜೀವರುಗಳಿಗೆ ಒಡೆಯನಾದ 'ಪಶುಪತಿ' ಆತನೆಂಬ ಸಾಂಕೇತಿಕ ಕಲ್ಪನೆಯು ಆಗಲೇ ತಲೆದೋರಿತ್ತೆಂಬುದಕ್ಕೆ ಸಿಂಧು ಸಂಸ್ಕೃತಿಯಲ್ಲಿ ದೊರೆತ ಪಶುಪತಿ ಶಿಲ್ಪವೇ ಸಾಕ್ಷಿ. ತ್ರಿಶೂಲದ ಆಕಾರವುಳ್ಳ ರುಂಡಮಾಲೆ ಧರಿಸಿದ ಶಿವ ಎತ್ತರವಾದ ಯೋಗಮುದ್ರೆಯಲ್ಲಿ ಕುಳಿತಿದ್ದಾನೆ. ಸುತ್ತಲೂ ಕೆಲವು ಪ್ರಾಣಿಗಳಿವೆ. ಈ ಪಶುಪತಿಯ ಕಲ್ಪನೆ ಮುಂದಿನ ಶೈವಧರ್ಮದಲ್ಲಿ ಪ್ರಧಾನವಾಗಿ ಬೆಳೆದುಬಂದಿತು. ಶಿವ-ರುದ್ರ ಇವರ ಸಾಂಕೇತಿಕ ರೂಪವಾದ ಲಿಂಗ ಇವುಗಳ ಉಪಾಸನೆಯಿಂದ ಶೈವಧರ್ಮ ಬಹುಶಾಖೆಗಳನ್ನು ಚಾಚಿ ಬೆಳೆಯುತಿತ್ತು. ಶೈವಧರ್ಮದ ಬೆಳವಣಿಗೆಯಲ್ಲಿ ಪ್ರಧಾನವಾದ ಎರಡು ಶಕ್ತಿ ಪ್ರವಾಹಗಳನ್ನು ಕಾಣಬಹುದು. ಒಂದು ಆಗಮಿಕ ಶೈವ ಮತ್ತೊಂದು ಪಾಶುಪತ ಶೈವ."[೭೧]

ಸಿಂಧೂ ಸಂಸ್ಕೃತಿಯಲ್ಲಿ ಕಂಡ ಶೈವಧರ್ಮವು ಪುನರುಜ್ಜೀವನಗೊಂಡು ವೈದಿಕ ಅಥವಾ ಆಗಮಿಕ ಶೈವದ ಪ್ರಭಾವಕ್ಕೆ ಹೆಚ್ಚಾಗಿ ಸಿಕ್ಕದೆ ಸ್ವತಂತ್ರವಾಗಿ ಬೆಳೆದು ಮುಂದೆ ಪಾಶುಪತ ಶೈವವೆಂದೆನಿಸಿತು. ಮತ್ತೊಂದು ಶೈವ ಪರಂಪರೆ ವೇದೋಪನಿಷತ್ತುಗಳಿಂದ ಕುಡಿಯೊಡೆದು ಆಗಮಗಳನ್ನಾಧರಿಸಿ ಬೆಳೆದು ಆಗಮಿಕ ಶೈವ ಎಂದೆನಿಸಿತು. ಕಾಪಾಲಿಕ, ಕಾಳಾಮುಖ, ನಾಥಪಂಥ ಲಾಕುಲ, ಗೋರಖನಾಥ ಪಂಥ,

ರಸೇಶ್ವರವಾದ ಮುಂತಾದ ಶೈವಶಾಖೆಗಳಲ್ಲಿ ಪಾಶುಪತ ಮತತತ್ವಗಳು ಆಚರಣೆಯಲ್ಲಿದ್ದು ಕಾಲಾನುಕ್ರಮದಲ್ಲಿ ಅವು ಶಿಥಿಲಗೊಂಡು ಹೋದದ್ದು ನಮಗೆ ತಿಳಿಯುತ್ತದೆ. ಆಗಮಿಕ ಶೈವವು ಕಾಶ್ಮೀರಶೈವ, ತಮಿಳುಶೈವ ಮತ್ತು ವೀರಶೈವ ಎಂದೆಲ್ಲಾ ಪ್ರಭೇದಗೊಂಡು ಬೆಳೆದುಬಂದಿತು. ಪಾಶುಪತಧರ್ಮ ಕಂಡವಾಮಾಚಾರಗಳು ಶೈವಧರ್ಮದ ವಿಕಾಸದ ಮೊದಲಹಂತದ ಪ್ರತೀಕಗಳಷ್ಟೆ. ಆ ನಂತರ ಬಂದ ಆಗಮಿಕ ಶೈವದ ಪ್ರಮುಖ ಶಾಖೆಯೆನಿಸಿದ ತಮಿಳು ಶೈವಮತದಲ್ಲಿ ದೇಗುಲಗಳ ರಚನೆ, ವಿಗ್ರಹಾರಾಧನೆ, ನಾದವೇದಗಳ ನಿವೇದನೆ, ಇವುಗಳಿಗೆ ಮಹತ್ವ ಹೆಚ್ಚು. ಇದು ಧಾರ್ಮಿಕ ವಿಕಾಸದ ಎರಡನೆಯ ಹಂತ. ಇದಾದ ನಂತರ ಬಂದ ವೀರಶೈವ(ಧರ್ಮ) ಹೆಚ್ಚು ಜ್ಞಾನಪ್ರಧಾನವಾಗಿದ್ದು ನೀತಿಯೇ ಧರ್ಮದ ಜೀವಾಳ ಎಂಬ ಸಿದ್ಧಾಂತವನ್ನು ವ್ಯಾಪಕವಾಗಿ ಪ್ರಚುರಪಡಿಸಿತು. ಇದನ್ನು ಧಾರ್ಮಿಕ ವಿಕಾಸದ ಮೂರನೆಯ ಹಂತವೆಂದು ಕರೆಯಬಹುದೆಂದು"[೭೨] ಡಾ.ಎ.ಎಲ್.ಶಿವರುದ್ರಪ್ಪ ಅಭಿಪ್ರಾಯಪಡುತ್ತಾರೆ. ಇವರು ಉಲ್ಲೇಖಿಸುವ ಎಲ್ಲಾ ಶೈವಶಾಖೆಗಳಿಗೆ ಚಾರಿತ್ರಿಕ ಮಹತ್ವವಿದೆ. ಆದರೆ ವೀರಶೈವಕ್ಕೆ ಮಾತ್ರ ಶಾಸನಾಧಾರಗಳು ತೀರಾ ವಿರಳ.

ಪಾಶುಪತ ಸಿದ್ಧಾಂತವನ್ನು ಪ್ರತಿಪಾದಿಸಿದವರು 'ಶ್ರೀಕಂಠ'ನೆಂಬ ಅಂಶ ಮಹಾಭಾರತದಿಂದ ತಿಳಿದುಬರುತ್ತದೆ. ಶ್ರೀಕಂಠ ತನ್ನ 'ಮಾಂಗಲ್ಯಶಾಸ್ತ್ರ'ದಲ್ಲಿ 'ಶಕ್ತಿ' ಮತ್ತು 'ಶಕ್ತಿಮಾನ್' ಈ ಅಂಶಗಳನ್ನು ಚರ್ಚಿಸಿರುವುದಾಗಿ ತಂತ್ರಾಲೋಕ ಹೇಳುತ್ತದೆ. ಸಾಕ್ಷಾತ್ ಶಿವನೇ ಈತನೆಂದು ಅವನನ್ನು ಹೊಗಳಿರುವ ಉದಾಹರಣೆಗಳು ಸಿಗುತ್ತವೆ. ಈ ಶೈವ ಶಾಖೆಯಲ್ಲಿ ಶ್ರೀಕಂಠನಷ್ಟೇ ಪ್ರಸಿದ್ಧವಾದ ಇನ್ನೊಂದು ಹೆಸರೆಂದರೆ ಲಕುಲೀಶನದು. ತಂತ್ರಾಲೋಕವು ಶ್ರೀಕಂಠನ ಜೊತೆಯಲ್ಲಿಯೇ ಈತನನ್ನು ಹೆಸರಿಸುತ್ತದೆ. ಇವರಿಬ್ಬರಿಗೂ 'ಶಿವಶಾಸನದ' ಪ್ರತಿಪಾದನೆಗೆ ಅಧಿಕಾರಿಗಳೆನ್ನುತ್ತದೆ. ಪಾಶುಪತದಲ್ಲಿ ಪ್ರಸಿದ್ಧನಾದ ಇನ್ನೊಂದು ಶಾಖೆಯೆಂದರೆ ಕಾಪಾಲಿಕರದು. ನರಕಪಾಲವನ್ನು ಕೈಯಲ್ಲಿಧರಿಸಿ ಶಿವನನ್ನು ಮಹಾಭೈರವನ ಉಗ್ರರೂಪದಲ್ಲಿ ಪೂಜಿಸುವ ಭಯಂಕರವಾದ ಆಚರಣೆಯಿಂದ ಅವರಿಗೆ ಈ ಹೆಸರು ಬಂದಿರಬಹುದು"[೭೩] ಕಾಳಾಮುಖವೇ ಪಾಶುಪತ ಶೈವದಲ್ಲಿ ಪ್ರಧಾನವಾದದ್ದು.

ಶಿವನನ್ನು ಏಕಮಾತ್ರ ಉಪಾಸ್ಯದೇವತೆಯಾಗುಳ್ಳ ಶೈವಾಗಮಗಳಲ್ಲಿ ಕಾಮಿಕಾದಿವಾತುಲಾಂತ ಇಪ್ಪತ್ತೆಂಟು ಆಗಮಗಳು ಪ್ರಮುಖವಾದವು. ಇವುಗಳಲ್ಲಿ ಪ್ರತಿಪಾದಿತವಾದ ಮುಖ್ಯ ವಿಷಯ ಧಾರ್ಮಿಕ ಆಚರಣೆ, ಮೂರ್ತಿ ನಿರ್ಮಾಣ, ದೇವಾಲಯಗಳ ರಚನೆ ಮೊದಲಾದ ಅಂಶಗಳಿಗೆ ಸಂಬಂಧಿಸಿದುದು. ತಾತ್ವಿಕ ವಿವೇಚನೆಯೂ ಅಲ್ಪಮಟ್ಟಿಗೆ ಬರುತ್ತದೆ. ಸೃಷ್ಟಿ, ಸೃಷ್ಟಿಕರ್ತ, ಜೀವಾತ್ಮರುಗಳನ್ನು ಕುರಿತು ಆಗಮಗಳು ವಿವೇಚಿಸುತ್ತವೆ. ಶೈವಧರ್ಮದ ಬೆಳವಣಿಗೆಯಲ್ಲಿ ಪುರಾಣಗಳು ಕೊಟ್ಟ ಕೊಡುಗೆಯೂ ಗಮನಾರ್ಹ. ಇನ್ನು 'ಕಾಶ್ಮೀರ ಶೈವ' ಎಂಬುದಾಗಿಯೇ ಪ್ರಸಿದ್ಧವಾದ ಒಂದು ಶೈವ ಶಾಖೆ ಅಲ್ಲಿ ಬೆಳೆದುಬಂದಿತು. ಆಗಮಗಳ ಒಟ್ಟು ಪ್ರಾಮಾಣ್ಯವನ್ನು ಇದು ಒಪ್ಪಿಕೊಂಡಿದ್ದರೂ ಮುಖ್ಯವಾಗಿ ಇದಕ್ಕೆ

ಆಧಾರಭೂತವಾದವು. ವಸುಗುಪ್ತನು ಪ್ರಚುರಪಡಿಸಿದ ಶಿವಸೂತ್ರಗಳು. ಇದರಂತೆ ತಮಿಳುನಾಡಿನ ಶೈವಪಂಥವೂ ಪ್ರಸಿದ್ಧವಾಗಿದೆ. ಶೈವಧರ್ಮದ ಬೆಳವಣಿಗೆಯಲ್ಲಿ ಬಹುಶಃ ಪರಿಪೂರ್ಣತೆಯನ್ನು ಸಾಧಿಸಿದ ಶಾಖೆಯೆಂದರೆ ವೀರಶೈವ ಎನ್ನಬಹುದು. ಎಲ್ಲಾ ಶೈವಸಿದ್ಧಾಂತಗಳ ಒಳ್ಳೆಯ ಅಂಶಗಳನ್ನು ತನ್ನಲ್ಲಿ ಸಮಾವೇಶಗೊಳಿಸಿಕೊಂಡು ವ್ಯಾಪಕವಾದ ಒಂದು 'ತತ್ವಸಿದ್ಧಾಂತವನ್ನೂ' ಆಚರಣೆಯ ಮಾರ್ಗವನ್ನೂ ಇದು ರೂಪಿಸಿಕೊಂಡಿತು.''[೭೪] ಕರ್ನಾಟಕದಲ್ಲಿ ಕಾಳಾಮುಖ, ಕಾಪಾಲಿಕ, ಕಾಶ್ಮೀರ ಶೈವ, ಲಕುಲೀಶ, ಪಾಶುಪತ ಶೈವರಿದ್ದ ಬಗ್ಗೆ ಶಾಸನಗಳಲ್ಲಿ ಆಧಾರ ದೊರೆಯುತ್ತದೆ. ವೀರಶೈವದ ಬಗ್ಗೆ ಶಾಸನಗಳು ದಾಖಲಿಸಿಲ್ಲ.

ವೀರಶೈವ ಲಿಂಗಧಾರೀಧರ್ಮದ ಮೂಲವನ್ನು ಋಗ್ವೇದಕ್ಕಿಂತಲೂ ಸಹಸ್ರಾರು ವರ್ಷಗಳಷ್ಟು ಹಿಂದಿನದಾದ ಸಿಂಧೂ ತೀರದ ಮೊಹೆಂಜೆದಾರೋ ಹರಪ್ಪದ ದ್ರಾವಿಡ ನಾಗರಿಕದಲ್ಲಿ ಕಾಣಬಹುದೆನ್ನುವುದು ಎಷ್ಟು ಆಶ್ಚರ್ಯಕರವೋ ಅಷ್ಟೇ ನಿಜವೆನ್ನುವುದು ಸರ್.ಜಾನ್.ಮಾರ್ಷೆಲ್ಲರು ಆ ನಾಗರೀಕತೆಯ ಅವಶೇಷಗಳಿಂದ ನಿರ್ಧರಿಸಿದ ವಿಷಯಗಳಿಂದ ತಿಳಿದುಬರುವುದು.''[೭೫] ಸರ್.ಮಾರ್ಷಲ್ಲರು ಹೇಳುವಂತೆ ಶೈವಧರ್ಮವು ಶಿಲಾಯುಗದ ಆದಿಮಾನವ ಕಾಲದಿಂದಲೂ ಅಸ್ಥಿತ್ವದಲ್ಲಿದ್ದದ್ದು ಮತ್ತು ಅದು ಪ್ರಪಂಚದಲ್ಲಿನ ಎಲ್ಲ ಧರ್ಮಗಳಿಗಿಂತಲೂ ಪುರಾತನವಾದದ್ದು ಎಂದಿದ್ದಾರೆ''[೭೬] ಎಂದು ಟಿ.ಎನ್.ಮಲ್ಲಪ್ಪ ತಮ್ಮ ಲೇಖನದಲ್ಲಿ ಉಲ್ಲೇಖಿಸಿದ್ದಾರೆ. ಅವಶೇಷಗಳಲ್ಲಿ ದೊರೆತಿರುವ ಲಿಂಗ ವಿಷಯವಾಗಿ ಅವರು ಹೇಳುವಂತೆ (ಮಾರ್ಷಲ್) ವೇದಪೂರ್ವದ ಈ ದ್ರಾವಿಡ ಜನರು ಲಿಂಗಗಳನ್ನು ಪೂಜಿಸುತ್ತಿದ್ದರಲ್ಲದೆ ಅದನ್ನು ಇಂದಿನ ಶಿವಭಕ್ತರಂತೆ ದೇಹದ ಮೇಲೆ ಧರಿಸಿಕೊಳ್ಳುತ್ತಿದ್ದರೆಂದು ತಮ್ಮ ಕೃತಿಯ ೫೯ನೆಯ ಪುಟದಲ್ಲಿ ಹೇಳಿದ್ದಾರೆ. ೬೧ನೆಯ ಪುಟದ ಅಡಿಟಿಪ್ಪಣಿಯಲ್ಲಿ ಶಿವಭಕ್ತರೆಂದರೆ ವೀರಶೈವರೇ ಎಂಬುದನ್ನು ಸ್ಪಷ್ಟಪಡಿಸಿದ್ದಾರೆಂದು ಟಿ.ಎನ್.ಮಲ್ಲಪ್ಪನವರು ವಿಶ್ಲೇಷಿಸಿದ್ದಾರೆ.

ಹರಪ್ಪಾ-ಮೊಹಂಜೆದಾರೋ ಅನ್ವೇಷಣೆಯ ನಂತರ ಅವಶೇಷಗಳ ತಜ್ಞರಾದ ಅರ್ನೆಷ್ಟ್ ಮ್ಯಾಕೆಯವರು ಈ ವಿಷಯ ಕುರಿತು ಮಾಡಿದ ಭಾಷಣದ ಅನುವಾದವನ್ನು ಡಿ.ಎಲ್.ನರಸಿಂಹಾಚಾರ್ಯರು ಪ್ರಬುದ್ಧ ಕರ್ನಾಟಕದ ಭಾವಸಂವತ್ಸರದ ಕಾಮನ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ. ''ಎಂಟನೆಯ ಚಿತ್ರದಲ್ಲಿ ಪುರೋಹಿತ ತನ್ನ ಎದೆಯಲ್ಲಿ ಧರಿಸುತ್ತಿದ್ದ ಒಂದು ಬಗೆಯ ಭಾರವಾದ ಪದಕವಿದೆ. ಇದನ್ನು ಹಳದಿಯ ಬಳಪದ ಕಲ್ಲಿನಲ್ಲಿ ಕೊರೆದಿದೆ. ಅಳತೆ ಎಲ್ಲ ಕಡೆಯಲ್ಲಿಯೂ ಎರಡೂವರೆ ಅಂಗುಲ. ಮುದ್ರಿಕೆಗಳಲ್ಲಿ ಕಂಡುಬರುವ ಪ್ರಾಣಿಯ ಚಿತ್ರವೇ ಇದರಲ್ಲಿಯೂ ಇದೆ. ಈ ಪ್ರಾಣಿಯ ಎದುರುಗಡೆ ಯಾವುದೋ ಪೂಜಾವಸ್ತುವಿದೆ.... ಈ ಪದಕವನ್ನು ಬಹುಶಃ ಚಿನ್ನದ ಕರಡಿಗೆಯಲ್ಲಿಯೋ ಅಥವಾ ಇನ್ನಾವುದೋ ಲೋಹದ ಭರಣಿಯಲ್ಲಿಯೋ ಇಡುತ್ತಿದ್ದಂತೆ ಕಾಣುತ್ತದೆ.''

ಇದರಿಂದ ಪೂಜ್ಯವಸ್ತುವನ್ನು ಎದೆಯ ಮೇಲೆ ಧರಿಸಲು ಆ ಕಾಲದ ಜನರು ಚಿನ್ನದ ಅಥವಾ ಬೇರೆಯ ಲೋಹದ ಕರಡಿಗೆಯನ್ನು ಉಪಯೋಗಿಸುತ್ತಿದ್ದರೆಂಬುದು ಡಾ.ಮ್ಯಾಕೆಯವರ ವರದಿಯಿಂದ ಸ್ಪಷ್ಟವಾಗುವುದೆಂದು'' ಟಿ.ಎನ್.ಮಲ್ಲಪ್ಪನವರು ಅರ್ಥೈಸಿದ್ದಾರೆ. ಆದರೆ ಅವರ ಈ ವಾದವನ್ನು ಒಪ್ಪುವುದು ತುಂಬ ಕಷ್ಟಕರವಾದದ್ದು. ಏಕೆಂದರೆ ಸಿಂಧೂ ಸಂಸ್ಕೃತಿಯಲ್ಲಿ ಕಂಡುಬರುವುದು ಪಾಶುಪತ ಮತ. ಈ ಪಾಶುಪತರೆಲ್ಲರೂ ಲಿಂಗಧಾರಿಗಳಾಗಿದ್ದರೆ ಭರತಖಂಡವೆಲ್ಲಾ ವೀರಶೈವರಾಗಬೇಕಿತ್ತು. ಅಲ್ಲದೆ ಈ ಪಾಶುಪತದ (ಉಪಪಂಗಡಗಳಿಂದ) ಶಾಖೆಗಳಾದ ಕಾಳಾಮುಖ, ಕಾಪಾಲಿಕ, ಲಾಕುಳ, ಲಕುಲೀಶ ಮುಂತಾದ ಶೈವರು ಅಂಗದ ಮೇಲೆ ಲಿಂಗ ಧರಿಸಿದಂತೆ ನಮಗೆ ಶಾಸನಗಳಲ್ಲಿ ಆಧಾರ ದೊರೆಯುವುದಿಲ್ಲ. ಕಾಳಾಮುಖ ಶೈವದ ಕೆಲವೇ ವ್ಯಕ್ತಿಗಳು ಲಿಂಗಧರಿಸುತ್ತಿದ್ದಿರಬಹುದು.

ವೇದಗಳಲ್ಲಿ ಶಿವ ಎಂಬ ದೇವತೆಯಲ್ಲಿ ರುದ್ರನಿದ್ದಾನೆ. 'ರುದ್ರ'ನಿಗೆ ಶಿವ ಎಂಬ ವಿಶೇಷಣವನ್ನು ಹಚ್ಚಿದ್ದುಂಟು. 'ಶಿವ' ಎಂದರೆ ಕಲ್ಯಾಣ, ಮಂಗಲ, ಶಿವ-ರುದ್ರ ಅಥವಾ ರುದ್ರ-ಶಿವ ಎಂದರೆ ಕಲ್ಯಾಣಪರನಾದ ಮಂಗಲ ಸ್ವರೂಪಿಯಾದ ರುದ್ರ ಎಂದೇ ಅರ್ಥ. ಋಗ್ವೇದದಲ್ಲಿ ಸು.೭೫ ಸಾರಿ ಈತನ ಹೆಸರು ಅಲ್ಲಲ್ಲಿ ಕಾಣಿಸಿಕೊಳ್ಳುವುದು. ರುದ್ರನಿಗೆ ಒಂದು ಕೈಯಿದೆ; ಭುಜಗಳಿವೆ. ದೃಢವಾದ ಅವಯವಗಳ್ಳುವನು ಇವನು. ಇವನಿಗೆ ಅಂದವಾದ ತುಟಿಗಳುಂಟು; ಜಡೆಬಿಟ್ಟವನು; ಕೆಂಬಣ್ಣದವನು, ತಳತಳನೆ ತೊಳಗುವನು, ವಿವಿಧ ರೂಪನು, ಬಂಗಾರದಂತೆ ಹೊಳೆಯುವನು, ಸೂರ್ಯನಂತೆ ತೊಳಗುವನು. ಬಂಗಾರದ ಅಲಂಕಾರಗಳ ಸೊಬಗಿನವನು, 'ನಿಷ್ಕ'ಗಳ ಹಲವು ಸರಗಳನ್ನು ಕೊರಳಲ್ಲಿ ಹಾಕಿದವನು. ಸಹಸ್ರಾಕ್ಷನಾಗಿದ್ದಾನೆ. ಇವನಿಗೆ ಒಂದು ಹೊಟ್ಟೆ, ಮುಖ, ನಾಲಿಗೆ ಇದೆ. ಹಲ್ಲುಗಳಿವೆ. ಇವನ ಹೊಟ್ಟೆ ಕಪ್ಪು, ಬೆನ್ನು ಕೆಂಪು ನೀಲಕಂಠನು; ನೀಲಕೇಶನು; ತಾಮ್ರವರ್ಣದವನು. ಕೆಂಪು ಮೈಬಣ್ಣವುಳ್ಳವನು; ಚರ್ಮಾಂಬರಧಾರಿಗಿರಿವಾಸಿ. ಈತನು ಮೃಗ(ಸಿಂಹ)ದಂತೆ ಭೀಮ(ಭಯಂಕರ)ನೂ, ಉಗ್ರನೂ, ವಿನಾಶಕಾರಕನೂ ಆಗಿದ್ದಾನೆ. ಇದೊಂದು ವೃಷಭ(ಗೂಳಿ). ಈ ದೇವರು ಅತುಲ ಬಲಶಾಲಿ, ವೀರರ ಒಡೆಯ, ಲೋಕೈಕನಾಥ.''[೭೭]

ರುದ್ರನೂ ಕೆಂಪು; ಶಿವನೂ ಕೆಂಪು. ರುದ್ರಸಂಸ್ಕೃತ ಪದವಾದರೆ ಶಿವ ಕನ್ನಡ ಪದವಾಗಿದೆ. ಆದ್ದರಿಂದ ರುದ್ರ ಮತ್ತು ಶಿವ ಎಂದರೆ ಬೇರೆ ಬೇರೆ ಅಲ್ಲ. ರುದ್ರ ಎಂದರೆ ಶಿವ, ಶಿವ ಎಂದರೆ ರುದ್ರ ಎಂದರ್ಥ.''[೭೮] ಶಿವನು(ರುದ್ರ)ಲಿಂಗರೂಪಿಯಾಗಿದ್ದರಿಂದ ವೇದದಲ್ಲಿ ಈತನನ್ನು 'ಶಿಶ್ನೋ ದೇವಾ' ಎಂದು ಏಳನೆಯ ಹಾಗೂ ೧೦ನೆಯ ಮಂಡಲಗಳಲ್ಲಿ ಕರೆಯಲಾಗಿದೆ.[೭೯] ಆರ್ಯರು ದ್ರಾವಿಡರನ್ನು ಹೀಗೆ ಕರೆಯಲು ಕಾರಣ ಶೈವರು(ದ್ರಾವಿಡ) ಯಜ್ಞವಿರೋಧಿಗಳು. ಶಿಶ್ನ ಪುರುಷನ ಜನನೇಂದ್ರಿಯ ಅದನ್ನೇ ಲಿಂಗವೆಂದು ಕರೆಯುತ್ತಾರೆ. ಲಿಂಗ ಶಬ್ದಕ್ಕೆ ಶಿಶ್ನ ಎಂಬರ್ಥವಲ್ಲದೆ ಕುರುಹು, ಗುರುತು, ಚಿಹ್ನೆ, ಸೂಕ್ಷ್ಮರೂಪ ಎಂಬ ಸಾಧುವಾದ ಅರ್ಥಗಳೂ ಉಂಟು.[೮೦] ಮನುಷ್ಯ ಜೀವಸೃಷ್ಟಿಗೆ ಪುರುಷನ

ಜನನೇಂದ್ರಿಯ ಪ್ರಧಾನ(ಮೂಲ)ವಾಗಿರುವುದರಿಂದ ಅದರ ಪ್ರತಿರೂಪವಾದ ಸ್ಥಾವರಲಿಂಗವನ್ನು ಸೃಷ್ಟಿಸಿ ಆರಾಧಿಸಲು ಪ್ರಾರಂಭಿಸಿರಬೇಕೆನಿಸುತ್ತದೆ.

ಅ. ಆದಿರುದ್ರರು

ಋಗ್ವೇದದಲ್ಲಿ ರುದ್ರ ಶಿವನಿಗೆ 'ವೃಷಭ' ಎಂದು ಒಂದು ಕಡೆಯಲ್ಲ ಹಲವೆಡೆಗಳಲ್ಲಿ ಹೇಳಿದ್ದಾಗಿದೆ. ಸಂಸ್ಕೃತ ಭಾಷೆಯಲ್ಲಿ ಶಿವ ಶಬ್ದಕ್ಕೆ ಕನ್ನಡದಷ್ಟು ವಿಪುಲವಾದ ಅರ್ಥವು ಹೊರಡದಿದ್ದರೂ 'ವೃಷಭ' ಶಬ್ದದಲ್ಲಿರುವ ತಿರುಳು ಬೇರೆ ಯಾವ ಪ್ರತಿಶಬ್ದದಲ್ಲಿಯೂ ದೊರೆಯದು. ಶಿವನು ವೃಷಭ ಅಂದರೆ ವೀರನು. ಈತನು ವೀರದೇವರು-ಬೀರದೇವರು; ವೀರನೂ ಭದ್ರನೂ (ಭದ್ರ-ಕಲ್ಯಾಣ ಮಂಗಲ-ಶಿವ) ಆದ ದೇವರು. ಆದುದರಿಂದ ವೀರದೇವರು. ದೇವನೂ ವೃಷಭನು ಅನುಯಾಯಿಗಳು ವೃಷಭರು''[೮೧] ಅಂದರೆ ವೃಷಭವಂಶಜರು ಅಥವಾ ರುದ್ರವಂಶಜರು ಎಂದರ್ಥವಾಗುತ್ತದೆ. ಇವರೇ ಆದಿರುದ್ರರು.

ಕರ್ನಾಟಕ ಆಂಧ್ರ, ಮಹಾರಾಷ್ಟ್ರ ರಾಜ್ಯಗಳಲ್ಲಿ ರುದ್ರವಂಶ, ರುದ್ರಜಾತಿ, ರುದ್ರಕುಲ, ರುದ್ರಸಾಲಿ, ರುದ್ರಗೋತ್ರದವರು, ವೃಷಭವಂಶಜರು, ವೃಷಭಕುಲದವರು, ನೀಲಕಂಠ(ನೀಲಕಂಠಿ) ಕುಲಜರು ಎಂಬಿತ್ಯಾದಿಯಾಗಿ ಕರೆದುಕೊಳ್ಳುವ ವೀರಶೈವರ ಒಳಪಂಗಡವೊಂದಿದೆ. ಇವರು ಬಹುತೇಕ ಕುರುಹಿನಶೆಟ್ಟರೆಂದು ಗುರುತಿಸಿಕೊಳ್ಳುತ್ತಾರೆ. ಇವರ ಗುರುಪೀಠವು ಶಾಸನಾಧಾರಿತ ಪ್ರಥಮ ವೀರಶೈವ ಮಠವಾದ ಶ್ರೀಶೈಲದ ವೀರಶೈವ ಭಿಕ್ಷಾವೃತ್ತಿ ಮಠ ಅಥವಾ ವೀರಭಿಕ್ಷಾವೃತ್ತಿ ಮಠ. ಇವರ ಗೋತ್ರಗಳ ಮೂಲಪುರುಷರು ೬೬ ಆದಿ ರುದ್ರರು. ಈ ೬೬ ಆದಿ ರುದ್ರರೇ ಅನಾದಿ ವೀರಶೈವ ಮತದ ಸ್ಥಾಪಕರೆಂಬ ನಂಬಿಕೆ ಇವರಲ್ಲಿ ಪ್ರಚಲಿತವಿದೆ. ವೀರಶೈವ ಪಂಚಾಚಾರ್ಯರು ಉದ್ಭವಿಸಿದರೆನ್ನಲಾದ ಶಿವನ ಐದು ಮೂಲಗಳಾದ ಸದ್ಯೋಜಾತ, ವಾಮದೇವ, ಅಘೋರದೇವ, ತತ್ಪುರುಷ, ಈಶಾನ್ಯ ಎಂಬವು ಮತ್ತು ನಂದಿ, ವೀರಭದ್ರ, ಮುಂತಾದವರು ಇವರ ಗೋತ್ರಗಳಿಗೆ ಗಣೇಶ್ವರರು (ರಕ್ಷಕರು) ವಿರೂಪಾಕ್ಷ, ಮಹಾಬಲೇಶ್ವರ ರುದ್ರ, ಪಶುಪತಿ ರುದ್ರ, ವೃಷಭಧ್ವಜ ರುದ್ರ, ಗಂಗಾಧರ ರುದ್ರ, ವಿಶ್ವನಾಥ ರುದ್ರ, ನೀಲಕಂಠ ರುದ್ರ, ಲೋಕೇಶ ರುದ್ರ ಮುಂತಾದ ೬೬ ರುದ್ರರು ಇವರ ಗೋತ್ರಗಳ ಮೂಲ ಪುರುಷರು. ಇವರ ಕುಲ ದೇವರು ನೀಲಕಂಠ ಮಲ್ಲಿಕಾರ್ಜುನರುದ್ರ. ಇವರ ಕುಲಗುರುಗಳು ಶ್ರೀನೀಲಕಂಠ ರುದ್ರವಂಶ ಪರಂಪರಾಗತ ಶ್ರೀ ವೀರಶೈವ ಮಠ ಸ್ಥಾಪನಾಚಾರ್ಯ ಶ್ರೀನೀಲಕಂಠ ಶಿವಾಚಾರ್ಯ(ಪಟ್ಟದಾರ್ಯ) ಮಹಾಸ್ವಾಮಿಗಳು ವೀರಭಿಕ್ಷಾವೃತ್ತಿಮಠವೆಂದು ಬೆಟಗೇರಿ ಜ. ವೀರಭಿಕ್ಷಾವೃತ್ತಿ(ನೀಲಕಂಠ) ಮಠದ ಅಪ್ರಕಟಿತ ಕ್ರಿ.ಶ.೧೪೮೯ನೇ ಇಸ್ವಿಯ ತಾಮ್ರಪತ್ರದಿಂದ ತಿಳಿದುಬರುತ್ತದೆ. ಇವರ ಆಚಾರ ವೀರಶೈವಾಚಾರ, ಲಾಂಛನ ಬಿಳಿ ಎತ್ತು. ಧ್ವಜಃ ಷಟ್ಸ್ಥಲವನ್ನೊಳಗೊಂಡ ನಂದಿಧ್ವಜ. ಧಾರ್ಮಿಕ ಕ್ಷೇತ್ರ ಶ್ರೀಶೈಲ. ಕುಲದ ಉತ್ಪತ್ತಿ, ಆಚಾರ-ವಿಚಾರ ಕುರಿತು ಹೇಳುವ ಗ್ರಂಥ ಶ್ರೀನೀಲಕಂಠ ಮಲ್ಲಿಕಾರ್ಜುನ ಪುರಾಣ ಎಂಬ ಮುಂತಾದ ಅಂಶಗಳನ್ನು ಇವರು ತಮ್ಮ ಜಾತಿಗ್ರಂಥದಿಂದ ಹೇಳುತ್ತಾರೆ.

ರುದ್ರವಂಶ, ರುದ್ರಕುಲ, ರುದ್ರಸಾಲಿ, ವೃಷಭವಂಶ, ವೃಷಭಜಾತಿ, ವೃಷಭಕುಲ ಮುಂತಾದವಕ್ಕೆ ಪರ್ಯಾಯ ಪದವಾದ ಕುರುಹಿನಶೆಟ್ಟಿ ಎಂಬ ಜಾತಿಸೂಚಕ ಪದವನ್ನು (ಪದನಿಷ್ಪತ್ತಿಗೊಳಿಸಿದರೆ) ಕುರುಹು+ಇನ್‌ಶೆಟ್ಟಿ, ಕುರುಹು+ಇನ್+ಶೆಟ್ಟಿ, ಕುರುಹಿನ್+ಶೆಟ್ಟಿ ಎಂಬಿತ್ಯಾದಿಯಾಗಿ ಪದ ನಿಷ್ಪತ್ತಿಗೊಳಿಸಬಹುದು. ಕುರುಹು = ಲಿಂಗ, ಚಿಹ್ನೆ, ಗುರುತು, ಸೂಕ್ಷ್ಮರೂಪ.[೮೨] ಇನ = ಒಡೆಯ, ಗಂಡ[೮೩] ಹೊಂದಿದ, ಇನ್=ಇದುವರೆಗೆ, ಇದಲ್ಲದೆ[೮೪], ಪಡೆದ, ಶೆಟ್ಟಿ=ವ್ಯಾಪರಿ, ಶ್ರೇಷ್ಠಿ[೮೫], ಆರಾಧಕ ಎಂಬಿತ್ಯಾದಿಯಾಗಿ ಅರ್ಥೈಯಿಸಬಹುದು. ಅಂದರೆ ಕುರುಹು ಅನ್ನು ಹೊಂದಿ ಅದನ್ನು ಆರಾಧಿಸುವವ, ಸ್ಥಾವರಲಿಂಗ ಅಥವಾ ಇಷ್ಟಲಿಂಗ ಪೂಜಕನೆಂದೂ, ವೃತ್ತಿಯಲ್ಲಿ ವ್ಯಾಪಾರಿಯಾಗಿದ್ದು, ಇಷ್ಟಲಿಂಗವನ್ನು ಹೊಂದಿದವನೂ, ಅದರ ಆರಾಧಕನೆಂದು ಹೇಳಬಹುದು. ಇವರ ೬೬ ರುದ್ರರು, ತ್ರಿಷಷ್ಠಿ ಪುರಾತನರು ಒಂದೇಯಾಗಿರಬಹುದೆ? ೬೬ ರುದ್ರರಿಗೂ, ೬೩ ಪುರಾತನರಿಗೂ ಸಾಮ್ಯಇರಬಹುದೆ? ಎಂಬುದನ್ನು ಕುರಿತು ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ.

ಕುರುಹಿನಶೆಟ್ಟರು ತಮ್ಮ ಕುಲಹುಟ್ಟಿ ವಿಕಾಸ ಹೊಂದಿದ ಬಗೆಯನ್ನು ಈ ರೀತಿಯಾಗಿ ಹೇಳಿಕೊಳ್ಳುತ್ತಾರೆ. ''ದೇವ ದಾನವ ಮಾನವರುಗಳಾರಿಂದಲೂ, ಯಾವ ಶಸ್ತ್ರಾಸ್ತ್ರಗಳಿಂದಲೂ ಕೊಲ್ಲಲ್ಪಡಬಾರದೆಂದು ಪರಶಿವನಿಂದ ತಾರಕಾಸುರ ಮತ್ತು ಅವನ ಸಮಬಲ ಸೇನಾಪತಿಗಳು ವರ ಪಡೆದುಕೊಂಡು ಸಕಲ ಲೋಕಗಳಿಗೆ ತೊಂದರೆ ಕೊಡಲು ಪ್ರಾರಂಭಿಸಿದಾಗ ಅವನ ಮತ್ತು ಸೈನ್ಯವನ್ನು ಸಂಹರಿಸಲು ಅನಿವಾರ್ಯವಾಯಿತು. ಇದರಿಂದ ತುಂಬಾ ಸಂಕಷ್ಟಕ್ಕೆ ಒಳಗಾದ ದೇವತೆಗಳ, ಲೋಕದ ಜನರ ಭಿನ್ನಹ ಸ್ವೀಕರಿಸಿದ ಶಿವ ಪಾರ್ವತಿಯರು ಓಂಕಾರ ರತಿಕಲೆಯಲ್ಲಿ ಮಗ್ನರಾದಾಗ ೬೬ ಜನ ರುದ್ರರು ಅವರಿಂದ (ಅಯೋನಿಜರಾಗಿ) ಜನಿಸಿ ಬಣ್ಣ ಬಣ್ಣ ವೃಷಭರೂಪದಲ್ಲಿ ತಾರಕಾಸುರ ಮೊದಲಾದ ದಾನವರನ್ನು ಸಂಹರಿಸಿದರು. ವೃಷಭ ಇವರ ಚಿಹ್ನೆಯಾಯಿತು. ಇವರು ಕುರುಹಿನ ರುದ್ರರೂ, ವೃಷಭಪೂಜಕರೆಂದು ಕರೆಯಲ್ಪಟ್ಟರು. ಈ ಕುರುಹನ್ನು ಕೆಲಜನ ಲಿಂಗವೆಂದು ಅರ್ಥೈಸುತ್ತಾರೆ. ವೃಷಭ ಎಂದರೆ ಹೋರಿ ಅಂದರೆ ಸಂತಾನಶಕ್ತಿ ಹೊಂದಿದ ಎತ್ತು(ಈ ಸಮುದಾಯದವರು ವೃಷಭನ ಸಂತಾನ ಶಕ್ತಿಯನ್ನು ಹರಣ ಮಾಡುವುದಿಲ್ಲ). ಆದ್ದರಿಂದ ವೃಷಭರೂಪಿಗಳಾದ ಎಲ್ಲಾ ರುದ್ರರಿಗೆ ರುದ್ರಕನ್ನಿಕೆಯರೊಂದಿಗೆ ವಿವಾಹ ನೆರವೇರಿಸಲಾಯಿತು. ಶ್ರೀಶೈಲಮಲ್ಲಿಕಾರ್ಜುನ ಲಿಂಗೋದ್ಭೂತ ಹಿರಿಯವನಾದ ನೀಲಕಂಠರುದ್ರನಿಗೆ ವೀರಮಾಹೇಶ್ವರೋಪದೇಶ ಪಟ್ಟಕಟ್ಟಿ ಕುಲಗುರುವನ್ನಾಗಿ ಮಾಡಲಾಯಿತು. ಎಲ್ಲಾ ರುದ್ರರಿಗೆ ಮುಕ್ತಿಸಾಧನೆಗಾಗಿ ಅಷ್ಟಾವರಣ-ಪಂಚಾಚಾರ, ಷಟ್ಸ್ಥಲ ತತ್ವಗಳನ್ನು ನೀಲಕಂಠರುದ್ರನಿಂದ ಉಪದೇಶ ಮಾಡಿಸಿ ರುದ್ರವಂಶ ಬೆಳಗಲು ಭೂಲೋಕಕ್ಕೆ ಕಳುಹಿಸಲಾಯಿತು.[೮೬]

ಇವರ ತಾಯಿ ಪಾರ್ವತಿ; ತಂದೆ ಪರಮೇಶ್ವರ ಶ್ರೀನೀಲಕಂಠಮಲ್ಲಿಕಾರ್ಜುನನೇ ಇವರ ಪ್ರಾಣಲಿಂಗ.(ಇವರ) ಬಂಧು-ಬಳಗಗಳೇ ಅಗಣಿತ ಮಹಾಗಣಂಗಗಳು. ಮುದ್ರೆ ಬಿಳಿ ಎತ್ತು, ಬಿಳಿಯ

ಗುಡಿ, ನಂದಿಯ ಅಚ್ಚೊತ್ತಿದ ಹೊನ್ನು, ನಂದಿಯ ಪಟ, ಮಸ್ತಕಕ್ಕೆ ಲಿಂಗಧಾರಣ, ಅವರ ಕ್ರಿಯೆ ಆಚಾರವೇ ವೀರಮಹೇಶ್ವರಾಚಾರ, ಜಾತಿ ಧರ್ಮಾಚಾರ, ಮಾರ್ಗಪ್ರತಿಷ್ಠಾಚಾರ, ಪಂಚಾಚಾರ ಕುಲಾಶ್ರಮ ಶಿವಪದ ದ್ರೋಹಿಗಳಿಗೆ (ವೀರರು) ಗಂಡಭೇರುಂಡರು. ನುಡಿಯೇ ಶಿವಧರ್ಮ, ನಡೆಯೇ ಶಿವತತ್ತ್ವಧರ್ಮ ಇವುಗಳೆಲ್ಲವೂ ಅವರ ಕುರುಹು, ಇವುಗಳಲ್ಲಿ ಚಾಚೂ ತಪ್ಪದೇ ಆಚರಿಸುವವನೇ ರುದ್ರವಂಶಜ ಕುರುಹಿನಶೆಟ್ಟಿ''[೮೭] ಇವರ ಕಾಯಕ ಬಟ್ಟೆ ಉತ್ಪಾದನೆ ಅಂದರೆ ನೇಕಾರಿಕೆ ಮತ್ತು ವ್ಯಾಪಾರ. ಎತ್ತಿನ (ವೃಷಭ) ಕೊಂಬುಗಳಿಂದ ತಯಾರಿಸಲ್ಪಟ್ಟ ಲಾಳಿಗಳಿಂದ ನೇಯುವುದು ರಾಕ್ಷಸ ಸಂಹಾರ ಮಾಡಿದಂತೆ ಎಂಬ ನಂಬಿಕೆ ಇವರಲ್ಲಿ ಪ್ರಚಲಿತವಿದೆ. ಈ ಉತ್ಪಾದಿತ ಬಟ್ಟೆಗಳನ್ನು ಊರಿಂದೂರಿಗೆ ಅಲೆದು ಮಾರಾಟ(ಪ್ರಸಾರ) ಮಾಡುವುದು. ಆರೋಗ್ಯವರ್ಧಕ ಮಸಾಲೆ ಸಾಮಾಗ್ರಿ ಮತ್ತು ಮಂಗಳದ್ರವ್ಯ ಮಾರಾಟ ಮಾಡುವುದು ಇವರ ಮುಖ್ಯ ಕಾಯಕವಾಗಿದೆ[೮೮] ಎಂದು ಶ್ರೀ ನೀಲಕಂಠಪುರಾಣದಿಂದ ತಿಳಿದುಬರುತ್ತದೆ.

ಈ ಮೇಲಿನ ಅಂಶಗಳು ನಿಜವಾದರೆ ವೀರಶೈವಧರ್ಮದ ಮೂಲಪುರುಷರು ಕುರುಹಿನಶೆಟ್ಟರ ೬೬ ಆದಿ ರುದ್ರರು ಮೊದಲಿಗರಾಗುತ್ತಾರೆ. ಕುರುಹಿನಶೆಟ್ಟರ ಜಾತಿ ಹುಟ್ಟಿನ ನೆಲೆ ಪುರಾಣ ಕಲ್ಪನೆ ಏನೇ ಇರಲಿ ''ಕುರುಹಿಶೆಟ್ಟಿ'' ಪದದ ಅರ್ಥ, ಅವರುಗಳು ಹೇಳುವ ಗೋತ್ರಗಳ ಮೂಲ ಪುರುಷರ ಹೆಸರುಗಳು ರುದ್ರಪರಂಪರೆಯನ್ನು ತಿಳಿಸುತ್ತದೆ. ಕುರುಹಿನಶೆಟ್ಟರು ಮೊದಲು ಸ್ಥಾವರಲಿಂಗ ಪೂಜಕರಾಗಿದ್ದು ನಂತರ ಇಷ್ಟಲಿಂಗ ಪೂಜಕರಾಗುತ್ತಾರೆ. ಅಂದರೆ ಇವರು ಮೊದಲು ಶೈವರಾಗಿದ್ದು, ನಂತರ ಯಾವುದೋ ಕಾಲದಲ್ಲಿ(ಬಹುಶಃ ೧೨ನೇ ಶತಮಾನದಲ್ಲಿ) ವೀರಶೈವರಾಗಿರಬೇಕೆಂದು ತೋರುತ್ತದೆ. ಬೆಟಗೇರಿ ಜ.ವೀರಭಿಕ್ಷಾವೃತ್ತಿ ಮಠದ ಕ್ರಿ.ಶ.೧೪೯೯ರ ಅಪ್ರಕಟಿತ ತಾಮ್ರ ಶಾಸನವು ಇವರನ್ನು ವೀರಶೈವ ಕುರುಹಿನ ಶೆಟ್ಟರೆಂದು ಬಸವೇಶ್ವರ ಸಂಪ್ರದಾಯದವರೆಂದು ಕರೆದಿದೆ. ಇದರ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಯಾಗಬೇಕಾಗಿದೆ. ಈ ರುದ್ರ ಪರಂಪರೆ ಕುರಿತು ಕಾಕತಾಳೀಯವೆಂಬಂತೆ ಡಾ.ಜಚನಿಯವರು ''ಅನಾದಿ ವೀರಶೈವ ವೇದಗಳಿಗಿಂತ ಪೂರ್ವದ್ದು. ಅದರ ನಿರ್ಮಾಪಕ ಶ್ರೀರುದ್ರ. ಅದು ರುದ್ರಮತವೆಂದಿದ್ದಿತು. ರುದ್ರಪಂಚಾಕ್ಷರಿ ಮಂತ್ರವಾಗಿತ್ತು. 'ರುದ್ರಾಯನಮಃ' ಎಂಬುದು ವಾಮದೇವ ಮಂತ್ರದಲ್ಲಿ ಸೇರಿಕೊಂಡು ಪಠಿತವಾಗುತಿತ್ತು. ಅನಾದಿ ರುದ್ರನದೇ ಆದ ಒಂದು ಸಂಸ್ಕೃತಿಯಿದೆ. ವೀರಕ್ರಾಂತಿಯಿದೆ. ಅಂತೆಯೇ ವೀರಶೈವಧರ್ಮಕ್ಕೂ ತತ್ತ್ವಕ್ಕೂ ಅನಾದಿತ್ವವಿದೆ. ಅಖಂಡ ಮಹಾಜ್ಯೋತಿ ಪ್ರಣವದ ಕುಂಡಲಾಕಾರವಾಗಿಹ ಕಲಾಬ್ರಹ್ಮದಲ್ಲಿ ರುದ್ರನುತ್ಪತ್ಯವಾದನು''[೮೯] ಎಂದು ರುದ್ರಪರಂಪರೆ ವೇದಗಳಿಗಿಂತ ಪೂರ್ವದ್ದು ಅದು ರುದ್ರಮತವಾಗಿತ್ತು ಎಂದು ಹೇಳುತ್ತಾರೆ. ಅವರು ಮುಂದುವರೆದು ಅಥರ್ವಶಿರಸ್ಸು ಕೃತಿಯ ಹಿನ್ನಲೆಯಲ್ಲಿ

''ದೇವಾ ಹ ವೈಸ್ವರ್ಗಂ ಲೋಕಮಗಮನ್
ತೇ ದೇವಾ ರುದ್ರಮಪ್ರಚ್ಛನ್''

ಈ ಸೃಷ್ಟಿಯ ಮೊದಲ ಮಾನವ ಮತ್ತು ಏಕೈಕ ಮಾನವ ಶ್ರೀರುದ್ರದೇವ. ರುದ್ರದೇವನ ಉತ್ಪತ್ತಿ ಜ್ಯೋತಿರೂಪ ಓಂಕಾರದಿಂದ. "....ಓಂಕಾರವೇ ಜ್ಯೋತಿರೂಪ, ಓಂಕಾರವೇ ಮೂಲ ಮಂತ್ರ. ಓಂಕಾರ ಸ್ವರೂಪವೇ ಬೀಜರೂಪ. ಓಂಕಾರದಿಂದಲೇ ಅನಾದಿರುದ್ರರ ಉತ್ಪತ್ತಿ..." ಎಂದು ಪಂಚಬ್ರಹ್ಮೋದಯ ಬಿತ್ತರಿಸಿದೆಂದು[೯೦] ಡಾ.ಜಚನಿಯವರು ವಿಶ್ಲೇಷಿಸಿದ್ದಾರೆ. ಅಲ್ಲಮಪ್ರಭುದೇವರು "ಉತ್ತಮಾಂಗದಲ್ಲಿ ಲಿಂಗವ ಧರಿಸಿಕೊಂಡಾತನು ರುದ್ರನು"[೯೧] ಎಂದಿರುವರು. ಅಂದರೆ ರುದ್ರನು ಲಿಂಗಧಾರಿ. ಉಳಿದವರಿಗೆ ಲಿಂಗ ದೀಕ್ಷಾಧಿಕಾರಿ.

ಶಂಬಾಜೋಶಿಯವರು 'ರುದ್ರನೇ ವೃಷಭ. ಈತನ ಮಕ್ಕಳು ರುದ್ರಿಯರು[೯೨] ರುದ್ರಸ್ಯಮರ್ಯಾ ಎಂದರೆ ರುದ್ರಿಯರು ರುದ್ರನ ಉಪಾಸಕ ಜನರು.[೯೩] ಡಾ.ರಾಮಕೃಷ್ಣಪಂತ ಭಂಡಾರಕರರು ಸೂಚಿಸುವಂತೆ 'ಏಕೋಹಿ ರುದ್ರಃ' ಅಂದರೆ ಶಿವಸರ್ವೋತ್ತಮ ಎಂದು ಹೇಳಿದ್ದರಲ್ಲಿ ಯಥಾರ್ಥವಿದೆ. ಈ ದೃಷ್ಟಿಯಿಂದ ವಿಚಾರಿಸಿದರೆ ನಿಷ್ಕಪಟ ವೃತ್ತಿ, ಬಾಲಭಾವ, ತನ್ನ ಇಷ್ಟವಸ್ತುವಿನ ಹೊರತು ಜಗತ್ತಿನಲ್ಲಿ ಉಳಿದುದೆಲ್ಲವೂ ತುಚ್ಛ, ತ್ಯಾಜ್ಯ ಎಂಬ ಕಡುನಂಬಿಕೆ. ಈ ಏಕಾಂತಿಕ ಶ್ರದ್ಧೆಯಿಂದ ನಡೆದುಕೊಳ್ಳುವಾಗ ಅಡ್ಡ ಬಂದುದನ್ನು ತೊಡೆದು ಹಾಕುವುದು, ಹೊಡೆದು ಹಾಕುವುದು, ಅದಕ್ಕಾಗಿ ಹೊತ್ತು ಬಂದರೆ ತನ್ನ ಆತ್ಮಾಹುತಿಯನ್ನು ಅರ್ಪಿಸುವುದು ಇವೆಲ್ಲವೂ ವೀರಭಕ್ತನ ಲಕ್ಷಣಗಳು ಅಥವಾ ಭಕ್ತಿಯ ವೀರವೃತ್ತಿಯ ಕುರುಹುಗಳು. ಭಾಗವತದಲ್ಲಿ ಭಕ್ತಿಯ ಉಗಮವು ದ್ರಾವಿಡದೇಶದಲ್ಲಿ ಆದುದನ್ನು ಹೇಳಲಾಗಿದೆ. ಆದುದರಿಂದ ಋಗ್ವೇದದಲ್ಲಿ ಸೂಚಿತವಾಗಿರುವಂತೆ ವೀರರುದ್ರಿಯರೇ ಭಕ್ತಿಪಂಥದ ಮೂಲಗುರುಗಳೆಂದು ಹೇಳಲು ಅಡ್ಡಿಯಿಲ್ಲ. ಅಂದಿನ ವೀರರುದ್ರಿಯರು ಇಂದಿನ ವೀರಶೈವರ ಮೊದಲಿಗರು[೯೪] ಎಂದು ಹೇಳಿದ್ದಾರೆ. ಡಾ.ಜೋಶಿಯವರು ಕನ್ನಡನಾಡಿನ ಮೂಲನಿವಾಸಿಗಳು ವೀರಶೈವರು(?) ಎಂದು ಪ್ರತಿಪಾದಿಸಲು ಪ್ರಯತ್ನಿಸಿದ್ದಾರೆ. ಹಾಗೆಯೇ ಡಾ.ಜಚನಿಯವರು ಆರಂಭದಲ್ಲಿ ರುದ್ರನು ರುದ್ರಮತ ಸ್ಥಾಪಿಸಿದ. ಈತನ ಮಗ ವೀರಭದ್ರ ಅದನ್ನು ಪುನರುಜ್ಜೀವನಗೊಳಿಸಿದ ಈತ 'ಕಣ್ಣಡಿಗ' ಈತನನಿಂದಲೇ ಕನ್ನಡ ಎಂಬ ಹೆಸರು ಬಂದಿತು ಎಂದು ವಾದಿಸಿದ್ದಾರೆ. ಈ ಎರಡೂ ಹೇಳಿಕೆಗಳನ್ನು ಕುರಿತು ಆಳವಾದ ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ.

ಪ್ರೊ.ಎಸ್.ಎಸ್.ಬಸವನಾಳರು "ಪಂಚಮುಖ ಪರಮೇಶ್ವರನ ವಾಹನವಾದ ಧರ್ಮಸ್ವರೂಪವೆನಿಸಿದ ವೃಷಭನಿಂದ ಅಥವಾ ಆತನ ಗಣಸ್ವರೂಪವಾದ ನಂದಿಯಿಂದ ವೀರಶೈವ ಮತವು ಸ್ಥಾಪನೆಯಾಯಿತೆಂದು ಒಂದು ವಾದವಿದೆ. ಶಿಲಾದನೆಂಬ ಋಷಿಗೆ ಶಿವನೇ ನಂದಿಯೆಂಬ ಹೆಸರಿನಿಂದ ಪುತ್ರನಾದನೆಂದೂ ಅದರಿಂದಲೇ ಅವನಿಗೆ 'ಶೈಲಾದ'ನೆಂಬ ಹೆಸರು ಬಂದಿತೆಂದೂ ಆತನೇ ವೀರಶೈವ ಮತದ ಸ್ಥಾಪಕನೆಂದೂ ಕೆಲವೆಡೆ ಹೇಳಲಾಗಿದೆ. ವೃಷಭನೂ ನಂದಿಯೂ ಒಂದೇ ಎಂದು ಪುರಾಣಗಳಿಂದ ತಿಳಿದುಬರುವ ಸಂಗತಿಯಾಗಿದೆ. ವೃಷಭನಿಗೂ ಶೈವಧರ್ಮಕ್ಕೂ ಬಹು ಪುರಾತನ ಕಾಲದಿಂದ ಸಂಬಂಧವಿರುವುದೆಂಬುದಕ್ಕೆ

ಶೈವಗುಡಿಗಳಲ್ಲಿ ಶಿವಲಿಂಗದ ಎದುರು ವೃಷಭ ಅಥವಾ ನಂದಿಯನ್ನು ಪ್ರತಿಷ್ಠಿಸುವ ರೂಢಿಯೇ ಸಾಕ್ಷಿಯಾಗಿದೆ.[೯] ಎಂದು ಹೇಳುತ್ತಾ ಡಾ.ಎ.ಚಿಂತಾಮಣಿ ಎಂಬ ವಿದ್ವಾಂಸರು 'The Vedanta Kesari' ಎಂಬ ಇಂಗ್ಲೀಷ್ ಮಾಸಿಕ(೧೯೪೫ರ ಡಿಸೆಂಬರ್ ಸಂಚಿಕೆ, ಪು.೪೯)ದಲ್ಲಿ ಜೈನರ ಆದಿ ತೀರ್ಥಂಕರ ವೃಷಭನಾಥನ ಅಹಿಂಸಾಧರ್ಮಕ್ಕೂ ಮೂಲ ಶೈವಧರ್ಮಕ್ಕೂ ಸಂಬಂಧ ಕಲ್ಪಿಸಿದ್ದಾರೆ.

ದಕ್ಷಿಣ ಭಾರತದ ಸದ್ಯಸ್ಕಾಲದ ಶೈವ ಮತವು "ತೇವಾರಂ" ಎಂಬ ಸ್ತೋತ್ರಗಳಲ್ಲಿ ಸ್ತುತವಾದ ರುದ್ರ. ಶಿವ ಅಥವಾ ಕಾಪಾಲೇಶ್ವರನ ಪೂಜೆಯನ್ನೊಳಗೊಂಡಿದೆ. ಆದರೂ ಪ್ರೇಮ ಮತ್ತು ಕರುಣೆಯ ಮೂರ್ತಿಯಾದ ಶಿವನನ್ನು ಆರಾಧಿಸುತ್ತಿದ್ದ ಆದಿಶೈವ ಮತವೊಂದು ಇದ್ದಿತೆಂದು ಈ ಶೈವರೇ ಹೇಳುತ್ತಾರೆ. ಕಾಪಾಲೇಶ್ವರ ಮತವು ಪ್ರಚಾರವಾಗುವ ಮುಂಚೆ ಬೇರೆ ಧಾರ್ಮಿಕ ತತ್ತ್ವವುಳ್ಳ ಮತವೊಂದು ಪ್ರಚಾರದಲ್ಲಿದ್ದಿರಬಹುದು. ಆದುದರಿಂದ ದಕ್ಷಿಣ ಭಾರತದಲ್ಲಿ ಮೊದಲು ಪ್ರಚಾರದಲ್ಲಿದ್ದ ಆದಿಶೈವವು ಅಹಿಂಸೆಯನ್ನು ಪ್ರತಿಪಾದಿಸುತ್ತಿದ್ದ ಋಷಭಮತವೇ ಆಗಿರಬೇಕೆನ್ನುವುದಕ್ಕೆ ನಮಗೆ ಯಾವ ಸಂದೇಹವೂ ಇಲ್ಲ. ಮೂಲದಲ್ಲಿ ಋಷಭನೂ ಜೈನರ ಋಷಭನಾಥನೂ ಒಂದೇ ಆಗಿರಬೇಕು. ಜೈನರ ವೃಷಭನಾಥ ನಿರ್ವಾಣ ಹೊಂದಿದ್ದು ಕೈಲಾಸಪರ್ವತದಲ್ಲಿ. ಈ ಕೈಲಾಸಪರ್ವತ ಶಿವನ ವಾಸಸ್ಥಾನವಾಗಿದೆ. ಇದು ಶೈವರಿಗೆ ಪವಿತ್ರಸ್ಥಳ ಋಷಭನಾಥನಿಗೆ ಸಂಬಂಧಿಸಿದ ಸದ್ಯೋಜಾತ, ಅಘೋರ, ಈಶಾನ, ತತ್ಪುರುಷ ಮೊದಲಾದ ಹೆಸರುಗಳು ಶೈವಪುರಾಣಗಳಲ್ಲಿ ಶಿವನಿಗೂ ಅನ್ವಯಿಸಲ್ಪಟ್ಟಿವೆ. ಆದುದರಿಂದ ಋಷಭನಾಥನೇ ಆದಿಶಿವನಾಗಿರಬೇಕು. ಮತ್ತೆ ಪುರಾತನ ಶೈವವೂ ಶೈವ(ಮೂಲ) ಮತವೂ ಒಂದೇ ಆಗಿರಬೇಕು ಎನ್ನಲು ಬರುವಂತಿದೆ ಎಂದು ಊಹಿಸಿದ ಡಾ.ಚಿಂತಾಮಣಿಯವರ ವಾದವನ್ನು ಎತ್ತಿ ಹಿಡಿದ ಪ್ರೊ.ಬಸವನಾಳರು ಈ ದೃಷ್ಟಿಯಿಂದ ವಿಚಾರಿಸಿದರೆ ಅಹಿಂಸಾ ತತ್ತ್ವಕ್ಕೆ ಅಗ್ರಸ್ಥಾನವನ್ನು ಕೊಟ್ಟ ವೀರಶೈವವು ಈ ಆದಿಶೈವದ ಪುನರುಜ್ಜೀವನವಿರಬಹುದೆಂಬ ತರ್ಕಕ್ಕೆ ಎಡೆಕೊಡುತ್ತದೆ[೬] ಎಂದಿದ್ದಾರೆ.

ಪ್ರೊ.ಬಸವನಾಳ ಮತ್ತು ಡಾ.ಚಿಂತಾಮಣಿಯವರ ಹೇಳಿಕೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಆದಿಶೈವರೇ ಜೈನರಾಗಿರಬೇಕೆನಿಸುತ್ತದೆ. ಕಾರಣ ಆದಿಶೈವವು ಕಾಪಾಲಿಕ ಶೈವಶಾಖೆಯಾಗಿ ವಿಭಜನೆಯಾದಾಗ ಅದು ವಾಮಾಚಾರ ಪದ್ಧತಿಯನ್ನು ಅನುಸರಿಸತೊಡಗುತ್ತದೆ. ಇದರಿಂದ ಬೇಸತ್ತ ಆದಿಶೈವರ ಒಂದು ಗುಂಪು ಶಾಂತಿಯನ್ನು ಪ್ರತಿಪಾದಿಸಲು ಅಹಿಂಸೆಯನ್ನೇ ಕೇಂದ್ರೀಕರಿಸಿ ಋಷಭನಾಥನ ನೇತೃತ್ವದಲ್ಲಿ ಜೈನ ಎಂಬ ಹೊಸ ಸಿದ್ಧಾಂತ ಕಟ್ಟಿದಂತೆ ತೋರುತ್ತದೆ. ಋಷಭನಾಥನಿಗೆ ಸಂಬಂಧಿಸಿದ ಸದ್ಯೋಜಾತ, ಅಘೋರ, ಈಶಾನ್ಯ, ತತ್ಪುರುಷ, ವಾಮದೇವ ಎಂಬವು ರುದ್ರವಂಶಿಯರ ಗೋತ್ರಗಳ ಗಣೇಶ್ವರರಾಗಿದ್ದಾರೆ. ಅಲ್ಲದೆ ವೀರಶೈವ ಪಂಚಾಚಾರ್ಯರು ಶಿವನ ಈ ಐದು ಮೂಲಗಳಿಂದ ಹುಟ್ಟಿದ್ದಾರೆ. ಹಾಗಾಗಿ ಜೈನಧರ್ಮವು ಮೂಲದಲ್ಲಿ ಶೈವವಾಗಿರಬೇಕು. ಈ ಎರಡೂ ಧರ್ಮೀಯರಿಗೆ ವೃಷಭ ಪೂಜ್ಯನೀಯವಾದದ್ದು (ಪಂಚಾಚಾರ್ಯದಲ್ಲಿ ಒನೆಯನನಾದ ಪಂಡಿತಾರಾಧ್ಯನದು ವೃಷಭಗೋತ್ರ ವಾಗಿರುತ್ತದೆ).

ಡಾ.ಎಸ್.ಸಿ.ನಂದಿಮಠರು 'ಆಗಮಗಳನ್ನೇ ತನ್ನ ಮೂಲ ಪವಿತ್ರಗ್ರಂಥವಾಗಿರಿಸಿಕೊಂಡು ಶಿವನನ್ನೇ ತನ್ನ ಪರಮದೈವತವೆಂದು ನಂಬಿ, ಅಗ್ನಿಪೂಜೆ ಇತ್ಯಾದಿಗಳೊಂದಿಗೆ ಹೊಂದಿಕೊಳ್ಳದ ಹಾಗೂ ತನ್ನ ಪ್ರತ್ಯೇಕ ಅಸ್ತಿತ್ವವನ್ನು ಉಳಿಸಿಕೊಂಡಿದ್ದ ಒಂದು ಶೈವಪಂಥ ನಮ್ಮ ತಿಳುವಳಿಕೆಗೆ ನಿಲುಕದ ಬಹಳ ಪ್ರಾಚೀನ ಯುಗದಲ್ಲಿ ಇದ್ದಿರಬಹುದು. ಶಿವನೇ ಸರ್ವೋತ್ತಮನೆಂದು ನಂಬಿದ್ದ ಈ ಪಂಥ ಇತರ ಶೈವಪಂಥಗಳಿಂದ ಬೇರೆಯಾಗಿರಬೇಕು. ಮತ್ತು ಪ್ರಾಯಃ ಇದು ಸಾಮಾನ್ಯವಾಗಿ ಪೂರ್ವದ ಪಾಶುಪತವೆಂದು ಕರೆಯಲ್ಪಡುತ್ತಿದ್ದ ಶೈವಪಂಥದ ಒಂದು ಗಮನಾರ್ಹವಲ್ಲದ ಉಪಪಂಥವಾಗಿರಬಹುದು. ಶೈವಾಗಮದ ಭಾಗಗಳಾದ 'ವಾತುಲ-ಶುದ್ಧಾಖ್ಯ', 'ಸೂಕ್ಷ್ಮ' ಮತ್ತು 'ಪಾರಮೇಶ್ವರ' ಇವು 'ವೀರಶೈವ' ಹೆಸರಿನ ಒಂದು ಪಂಥವನ್ನು ಬಹಳ ಗೌರವದಿಂದ ಉಲ್ಲೇಖಿಸುತ್ತವೆ. ಈ ಆಗಮಗಳಲ್ಲಿ ವೀರಶೈವವನ್ನು ಕುರಿತು ಬರುವ ಅಂಶಗಳನ್ನು ಗಮನಿಸಿದಾಗ ಅದು ಲಕುಲೀಶ, ಪಾಶುಪತದ ತದ್ರೂಪವಲ್ಲ. ಶೈವಧರ್ಮದ ಒಂದು ಚಿಕ್ಕ ಶಾಖೆಯಾಗಿತ್ತೆಂದೂ, ಅದು ಬಹಳ ಕಟ್ಟುನಿಟ್ಟಿನ ಶಿವಾರಾಧನೆಯನ್ನು ಒಳಗೊಂಡಿತ್ತೆಂದೂ, ತತ್ಫಲವಾಗಿ, ಆಗ ಪ್ರಚಲಿತವಿದ್ದ ವಿವಿಧ ಶೈವಪಂಥಗಳು ಅದನ್ನು ಶ್ರೇಷ್ಠವೆಂದು ಪರಿಗಣಿಸುತ್ತಿದ್ದವೆಂದೂ ತಿಳಿಯಬಹುದಾಗಿದೆ. ಈ ಆಗಮಗಳ ಮತ್ತು ಇವುಗಳಲ್ಲಿ ಉಕ್ತವಾದ ವೀರಶೈವದ ಕಾಲವನ್ನು ಖಚಿತವಾಗಿ ಹೇಳುವುದು ಬಲವತ್ತರ ಆಧಾರಗಳ ಕೊರತೆಯಿಂದಾಗಿ ಸಾಧ್ಯವಾಗದು'[೭] ಎಂದು ಹೇಳಿದ್ದಾರೆ.

ಡಾ.ನಂದಿಮಠರು ಹೇಳುವಂತೆ ವೀರಶೈವದ ಕಾಲವನ್ನು ಖಚಿತವಾಗಿ ಹೇಳಲಿಕ್ಕೆ ಆಗುವುದಿಲ್ಲ. ಕಾರಣ ಆಗಮಗಳ ಕಾಲ ಇಂದಿಗೂ ನಿರ್ಧಾರವಾಗಿಲ್ಲ. ಆದರೆ ಒಂದು ಶೈವ ಸಿದ್ಧಾಂತ ವೇದಪೂರ್ವದಲ್ಲಿ ಇದದ್ದು ಮಾತ್ರ ಸತ್ಯವಾದದ್ದು. ಹಾಗೆ ಶೈವ ಶಾಖೆಗಳೂ ಅಸ್ತಿತ್ವದಲ್ಲಿದ್ದವು.

ಎಸ್.ಕೃಷ್ಣಸ್ವಾಮಿ ಅಯ್ಯಂಗಾರ ಅವರು ವೀರಶೈವವು ಕಾಕತೀಯ ದೊರೆ ಮೊದಲನೆಯ ರುದ್ರನ ಆಳ್ವಿಕೆಯ ಕಾಲದಲ್ಲಿ ಬಂಗಾಲದಿಂದ ಬಂದು ನೆಲೆಗೊಂಡ ಬ್ರಾಹ್ಮಣರಿಂದ ಆರಂಭಗೊಂಡಿತೆಂದು ಹೇಳುತ್ತಾರೆ.[೮] ಆ ಮೂಲಕ ಅವರು ಗೋಲಕೀಮಠದೊಡನೆ ವೀರಶೈವವನ್ನು ಸಂಬಂಧೀಕರಿಸಿದಂತೆ ತೋರುತ್ತದೆ. ಗೋಲಕೀಮಠಗಳು ತಮಿಳುನಾಡಿನಲ್ಲಿವೆ. ಇದರ ಪ್ರಭಾವ ಕರ್ನಾಟಕದಲ್ಲಿ ಇಲ್ಲ ಆದ್ದರಿಂದ ಇದು ತಪ್ಪು ಎಂದು ಡಾ.ನಂದಿಮಠರು ತಿರಸ್ಕರಿಸಿದ್ದಾರೆ. ಆದರೆ ಡಾ.ಎಂ.ಎಂ.ಕಲಬುರ್ಗಿಯವರು ಗೋಲಕೀಮಠ ಸಂಪ್ರದಾಯವು ಕರ್ನಾಟಕದಲ್ಲಿತ್ತೆಂದು ಕುರುಂಬೆಟ್ಟ ಶಾಸನದ ಹಿನ್ನೆಲೆಯಲ್ಲಿ ತಮ್ಮ ಮಾರ್ಗ-೪ ಕೃತಿಯಲ್ಲಿ ೨೮ ಶಿವಾಗಮಗಳ ಮೊದಲ ಭಾಗಗಳು ಶೈವ ಸಿದ್ಧಾಂತವನ್ನು ಪ್ರತಿಪಾದಿಸಿದರೆ, ಉತ್ತರ ಭಾಗಗಳು ವೀರಶೈವವನ್ನು ಪ್ರತಿಪಾದಿಸುತ್ತವೆ. ಶಿವಾಗಮಗಳ ಉತ್ತರ ಭಾಗಗಳು ಉಪಲಬ್ಧವಿಲ್ಲ ದಿರುವ ಇಂದಿನ ಪರಿಸ್ಥಿತಿಯಲ್ಲಿ ಈ ಸಾಂಪ್ರದಾಯಿಕ ಹೇಳಿಕೆ ಎಷ್ಟರಮಟ್ಟಿಗೆ ಸತ್ಯವಾಗಿದೆಯೆಂದು ಹೇಳಲು ಸಾಧ್ಯವಿಲ್ಲ. ಉಪಲಬ್ಧ ಶಿವಾಗಮಗಳು ಶಿವನನ್ನು ದೇವಸ್ಥಾನಗಳಲ್ಲಿ ಸ್ಥಾಪನೆಗೊಂಡ ಸ್ಥಾವರ ಲಿಂಗರೂಪದಲ್ಲಿ ಇಲ್ಲವೆ ಮೂರ್ತಿಯ ರೂಪದಲ್ಲಿ ಪೂಜಿಸಬೇಕೆಂದು ವಿಧಿಸುತ್ತವೆ.[೯] ಎಂದು ನಂದಿ

ಮಠರು ಹೇಳಿದರೆ ಡಾ.ಫ.ಗು.ಹಳಕಟ್ಟಿಯವರು "ವೀರಶೈವವು ಮೂರ್ತಿಪೂಜೆಯನ್ನು ಸಾಧ್ಯವಾದಷ್ಟು ಬಲವಾಗಿ ಖಂಡಿಸುತ್ತದೆ. ಮತ್ತು ದೀಕ್ಷಾ ಸಂದರ್ಭದಲ್ಲಿ ಗುರುವಿತ್ತ ಇಷ್ಟಲಿಂಗರೂಪದಲ್ಲಿಯೇ ಪರಶಿವನನ್ನು ಪೂಜಿಸಬೇಕೆಂದು ಹೇಳುತ್ತದೆ. ದೇವಾಲಯಗಳಲ್ಲಿ ಪ್ರತಿಷ್ಠಾಪಿತ ಸ್ಥಾವರ ಲಿಂಗಪೂಜೆಯನ್ನು ಕೂಡ ವೀರಶೈವ ಒಪ್ಪುವುದಿಲ್ಲ. ವೀರಶೈವದ ದೀಕ್ಷಾಸಂಸ್ಕಾರ ಶೈವಾಗಮೋಕ್ತ ನಿರ್ವಾಣದೀಕ್ಷೆಯನ್ನು ಹೆಚ್ಚು ಹೋಲುತ್ತದೆ ಎಂದಿದ್ದಾರೆಂದು(ವಚನಶಾಸ್ತ್ರಸಾರ ಭಾಗ-೧, ಮೊದಲನೆಯ ಆವೃತ್ತಿಯಲ್ಲಿ) ಡಾ.ಎಸ್.ಸಿ.ನಂದಿಮಠರು ತಮ್ಮ ವೀರಶೈವ ಧರ್ಮ ಕೈಪಿಡಿಯಲ್ಲಿ ವಿಶ್ಲೇಷಿಸಿದ್ದಾರೆ. ಈ ಶೈವ ಸಿದ್ಧಾಂತವನ್ನೊಳಗೊಂಡ ಶಿವಾಗಮಗಳನ್ನು ಕುರಿತು ಡಾ.ಚಿದಾನಂದ ಮೂರ್ತಿವರು ಒಪ್ಪಿ ಇವುಗಳೇ ಶಿವಶರಣರ ವಚನಗಳಿಗೆ ಪ್ರೇರಣೆ ಎಂದು ಭಾವಿಸಿ ಅವುಗಳಲ್ಲಿರುವ ಸಂಸ್ಕೃತ ಶ್ಲೋಕಗಳನ್ನು ಶರಣರು ತಮ್ಮ ವಚನಗಳಲ್ಲಿ ಬಳಸಿದ್ದಾರೆಂದು ಉದಾಹರಣೆಗೆ ಸಹಿತ ಹೇಳಿದ್ದಾರೆ.[೧೦೦] ಡಾ.ಎಂ.ಎಂ.ಕಲಬುರ್ಗಿ ಅವರು ಶಿವಾಗಮಗಳ ಉತ್ತರ ಭಾಗದಲ್ಲಿ ವೀರಶೈವ ಸಿದ್ಧಾಂತದ ನಿರೂಪಣೆ ಇದೆ ಎಂಬ ವಾದವನ್ನು ಸಂಪೂರ್ಣವಾಗಿ ತಿರಸ್ಕರಿಸುತ್ತಾರೆ. ಆಗಮಪಾಠ ವಿಪರೀತ ಪ್ರಕ್ಷೇಪಕ್ಕೆ ಗುರಿಯಾಗಿದೆ. ಇದಕ್ಕೆ ಕಾರಣ ವೇದದ ಅನುಯಾಯಿಗಳಿಗೆ ತಮ್ಮ ಪಠ್ಯದ ಶ್ರೇಷ್ಠತೆಯ ಬಗ್ಗೆ ಇರುವ ಆತ್ಮವಿಶ್ವಾಸ. ಆತ್ಮಾಭಿಮಾನವು ಆಗಮ ಅನುಯಾಯಿಗಳಿಗೆ ಇಲ್ಲದಿರುವುದು. ಮಗ್ಗುಲಲ್ಲಿ ಬೆಳೆದುನಿಂತ ವೇದದ ವಿಚಾರಗಳನ್ನು ತನ್ನಲ್ಲಿ ಸೇರಿಸಿಕೊಂಡು, ಅಲ್ಲಿರುವುದು ಇಲ್ಲಿಯೂ ಇದೆ ಎಂದು ಹುಸಿ ಪ್ರತಿಜ್ಞೆ ಮೆರೆಯಲು ಹವಣಿಸಿದ ಫಲವಾಗಿ ಆಗಮಗಳಲ್ಲಿ ಪ್ರಕ್ಷಿಪ್ತತೆ ಪ್ರವೇಶಿಸಿತು. ಅಲ್ಲದೆ ೧೨ನೇ ಶತಮಾನದಲ್ಲಿ ಹುಟ್ಟಿದ ದೇಶೀ ನೆಲೆಯ ಶರಣಧರ್ಮದ ಪ್ರಸಿದ್ಧಿಯೊಂದಿಗೂ ಸ್ಪರ್ಧಿಸಲು ಬಯಸಿ, ಇದರ ಷಟ್ಸ್ಥಲಾದಿ ಸಿದ್ಧಾಂತವನ್ನೂ ಸಂಸ್ಕೃತಕ್ಕೆ ಅನುವಾದಿಸಿಕೊಂಡು ತನ್ನಲ್ಲಿ ಸೇರಿಸಿಕೊಂಡಿತು. ಜೊತೆಗೆ ತಾನು ವೇದಗಳಿಂದ ಪಡೆದುಕೊಂಡಿದ್ದ ಸಿದ್ಧಾಂತವನ್ನು ವಚನಪಠ್ಯದಲ್ಲಿ ಸೇರಿಸಿತು. ಇದರಿಂದಾಗಿ ದೇಶೀ ಮೂಲದ ಶರಣಧರ್ಮವೂ ವೇದ ಮೂಲವೆಂಬ ಅನುಮಾನ ಬರುವಂತೆ ಮಾಡಿತು.[೧೦೧] ಷಟ್ಸ್ಥಲ ಸಿದ್ಧಾಂತವು ಕರ್ನಾಟಕದ ಸೃಷ್ಟಿ. ಕಲ್ಯಾಣದ ಶರಣರ ಕೊಡುಗೆಯಾಗಿದ್ದು, ಆ ಮೇಲೆ ಸಂಸ್ಕೃತಕರಣಗೊಂಡು ಶೈವ ಆಗಮ(ಗಳ) ಕೊನೆಯಲ್ಲಿ ಭಾಗವಾಗಿಯೋ, ಉತ್ತರಾರ್ಧವಾಗಿಯೋ ಜೋಡಿಸಲ್ಪಟ್ಟಿರಬೇಕು. ಅಲ್ಲಿಯ 'ಉತ್ತರ' ವೆಂಬುದು ಇದು ಆಮೇಲೆ ಸೃಷ್ಟಿಯಾದುದನ್ನು, ಬಳಿಕ ಸೇರ್ಪಡೆಯಾದುದನ್ನು ಸೂಚಿಸುತ್ತಿರಬಹುದೆಂದು[೧೦೨] ಶೈವಾಗಮಗಳಲ್ಲಿ ಬಂದಿರುವ ಪ್ರಕ್ಷಿಪ್ತತೆಯನ್ನು ಉದಾಹರಣೆ ಸಹಿತ ಚರ್ಚಿಸಿದ್ದಾರೆ(ನಿರೂಪಿಸಿದ್ದಾರೆ).

ಬಹುತೇಕ ವಿದ್ವಾಂಸರು ವೀರಶೈವ ಸಿದ್ಧಾಂತ ಶಿವಾಗಮಗಳಲ್ಲಿರುವುದನ್ನು ಒಪ್ಪಿಕೊಂಡಿಲ್ಲ. ಒಪ್ಪಿದರೂ ಅದನ್ನು ನಿರೂಪಿಸುವಲ್ಲಿ ವಿಫಲರಾಗಿದ್ದಾರೆ. ಡಾ.ಎಂ.ಎಂ.ಕಲಬುರ್ಗಿಯವರು ವೀರಶೈವ ಷಟ್ಸ್ಥಲಸಿದ್ಧಾಂತವು ೧೨ನೇ ಶತಮಾನದ ಶಿವಶರಣರದ್ದು ಅದನ್ನು ಆಗಮಗಳ ಅನುಯಾಯಿಗಳು ಸಂಸ್ಕೃತಕ್ಕೆ ಅನುವಾದಿಸಿಕೊಂಡು ಆಗಮಗಳಲ್ಲಿ ಸೇರಿಸಿದ್ದಾರೆ. ಅದು ಉತ್ತರ ಭಾಗದಲ್ಲಿ. ಅದು ಆ

ಅನುಯಾಯಿಗಳ ಸ್ವಂತ ಸಿದ್ಧಾಂತವಾದರೆ ಪೂರ್ವಭಾಗದಲ್ಲಿ ಏಕೆ ಸೇರಿಸಲಿಲ್ಲ? ಮತ್ತು ಈ ಸಿದ್ಧಾಂತವನ್ನೊಳಗೊಂಡ ಉತ್ತರ ಭಾಗವಷ್ಟೇ ಏಕೆ ಸಿಗುತ್ತಿಲ್ಲ? ಒಂದು ವೇಳೆ ಷಟ್ಸ್ಥಲಸಿದ್ಧಾಂತ ವೇದಾಗಮಗಳ ಅನುಯಾಯಿಗಳದ್ದೇಯಾಗಿದ್ದರೆ ಶಿವಾಗಮಗಳ ಎಲ್ಲಾ ಭಾಗದಲ್ಲೂ ಇರಬೇಕಾಗಿತ್ತು. ಆದ್ದರಿಂದ ಷಟ್ಸ್ಥಲಸಿದ್ಧಾಂತ ೧೨ನೇ ಶತಮಾನದ ಶಿವಶರಣರದ್ದೇ ಎಂದು ಖಚಿತವಾಗಿ ಹೇಳುತ್ತಾರೆ. ಇವರ ಈ ಹೇಳಿಕೆಯನ್ನು ನಿರ್ಲಕ್ಷಿಸುವಂತಿಲ್ಲ. ಏಕೆಂದರೆ ಷಟ್ಸ್ಥಲ ಸಿದ್ಧಾಂತ ಶಿವಾಗಮಗಳ ಉತ್ತರ ಭಾಗದಲ್ಲಿದ್ದಿದರೆ ೧೨ನೇ ಶತಮಾನಕ್ಕಿಂತ ಪೂರ್ವದಲ್ಲಿ ಯಾವುದಾದರೂ ಕನ್ನಡ ಕೃತಿಯಲ್ಲಿ ಆ ಅಂಶಗಳು ಬರಬೇಕಾಗಿತ್ತು. ಈ ಕುರಿತು ಆಳವಾದ ಅಧ್ಯಯನವಾಗಬೇಕಾಗಿದೆ.

### ಆ. ಪಂಚಾಚಾರ್ಯರು

ಸುಪ್ರಭೇದಾಗಮದ ಪಂಚಾಚಾರ್ಯ ಪಂಚಮೋತ್ಪತ್ತಿ ಪ್ರಕರಣ, ಸಿದ್ಧಾಂತಶಿಖಾಮಣಿ ಮುಂತಾದ ಸಂಸ್ಕೃತ ಕೃತಿಗಳ ಪ್ರಕಾರ ವೀರಶೈವದ ಉಗಮ, ಬ್ರಹ್ಮನು ಜಗತ್ತಿನಲ್ಲಿ ಮಾನವ ಸೃಷ್ಟಿಗೆ ತೊಡಗುವುದಕ್ಕಿಂತಲೂ ಮೊದಲಿನ ಕಾಲಕ್ಕೆ ಹೋಗುತ್ತದೆ. ಎಂದರೆ ಅವುಗಳ ಅಭಿಪ್ರಾಯದ ಪ್ರಕಾರ ಈ ಪಂಥ ಬ್ರಾಹ್ಮಣ ಪಂಥಕ್ಕಿಂತ ಪ್ರಾಚೀನವಾದುದು. ಪ್ರತಿಯೊಂದು ಯುಗದಲ್ಲಿಯೂ ಐದೈದು ಜನ ಆಚಾರ್ಯರು ಉದಿಸಿ ವೀರಶೈವವನ್ನು ಬೋಧಿಸಿದರೆಂದೂ, ಈ ಮತವನ್ನು ಮತ್ತೆ ಮತ್ತೆ ಸ್ಥಾಪಿಸಿದರೆಂದು ಸಾಂಪ್ರದಾಯಿಕವಾದ ಹೇಳಿಕೆಯಿದೆ. ಶಿವನ ಪಂಚಮುಖಗಳಿಂದ ಅವನ ಸ್ವರೂಪರಾದ ವೀರ, ನಂದಿ, ಭೃಂಗಿ, ವೃಷಭ, ಸ್ಕಂದ ಎಂಬ ಐವರು ಗಣೇಶ್ವರರು ಐದು ಗೋತ್ರಗಳನ್ನು ಸ್ಥಾಪಿಸಿದರು. ಆ ಗೋತ್ರಗಳಲ್ಲಿ ಕ್ರಮವಾಗಿ ದಾರುಕ, ಶಂಖಕರ್ಣ, ರೇಣುಕ, ದೇನುಕರ್ಣ, ವಿಶ್ವಕರ್ಣ ಎಂದು ಐವರು ಜನಿಸಿದರು.[೧೦೩]

ಕೃತಯುಗದಲ್ಲಿ ಇವರಿಗೆ ಏಕಾಕ್ಷರ, ದ್ವಕ್ಷರ, ತ್ರ್ಯಕ್ಷರ, ಚತುರಕ್ಷರ, ಪಂಚಾಕ್ಷರ ಎಂದೂ ತ್ರೇತಾಯುಗದಲ್ಲಿ ಏಕವಕ್ತ್ರ, ದ್ವಿವಕ್ತ್ರ, ತ್ರಿವಕ್ತ್ರ, ಚತುರ್ವಕ್ತ್ರ, ಪಂಚವಕ್ತ್ರ ಎಂದೂ, ದ್ವಾಪಾರ ಯುಗದಲ್ಲಿ ರೇಣುಕ, ದಾರುಕ, ಘಂಟಾಕರ್ಣ, ಧೇನುಕರ್ಣ, ವಿಶ್ವಕರ್ಣ ಎಂದೂ, ಕಲಿಯುಗದಲ್ಲಿ, ರೇವಣಸಿದ್ಧ, ಮರುಳಸಿದ್ಧ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ ಎಂಬ ಹೆಸರುಗಳಿಂದ ಐದು ಸ್ಥಾವರಲಿಂಗಗಳಿಂದ ಉದ್ಭವಿಸಿ ವೀರಶೈವ ಧರ್ಮ ಸ್ಥಾಪಿಸಿದ್ದಾರೆ.

೧. ರೇವಣಸಿದ್ಧ : ಕೊಲ್ಲಿಪಾಕಿ ಸೋಮೇಶ್ವರ ಲಿಂಗದಿಂದ ರೇವಣಸಿದ್ಧರು ಉದ್ಭವಿಸಿ ಇಂದಿನ ಬಾಳೆಹೊನ್ನೂರಿನ ರಂಭಾಪುರಿ ವೀರಸಿಂಹಾಸನ ಪೀಠ ಸ್ಥಾಪಿಸಿದ್ದಾರೆ. 'ರೇಣುಕಾಚಾರ್ಯರೂ' ಮತ್ತು 'ರೇವಣಸಿದ್ಧರು' ಇಬ್ಬರೂ ಒಂದೇ ಎಂಬ ನಂಬುಗೆಯಿದೆ. ರಾಮಚಂದ್ರ ಕೆಲದಿನ ಇದ್ದನೆಂದು ಹೇಳುವ ರಾಮಾಯಣೋಕ್ತ ಪಂಚವಟಿಯ ಅಗಸ್ತ್ಯಮಹರ್ಷಿಗೆ ರೇಣುಕಾಚಾರ್ಯರು ವೀರಶೈವ ಷಟ್ಸ್ಥಲ ಮತ್ತು

ನೂರೊಂದು ಸ್ಥಲಗಳನ್ನು ಬೋಧಿಸಿದರೆಂದು ಹೇಳಲಾಗುತ್ತದೆ. ಅದೇ 'ಸಿದ್ಧಾಂತ ಶಿಖಾಮಣಿ' ಎಂಬ ವೀರಶೈವ ಸಂಸ್ಕೃತ ಗ್ರಂಥದಲ್ಲಿ ಅಡಕವಾಗಿದೆಯಂತೆ.[೧೦೪] ಇವರು ೧೪೦೦ ವರ್ಷಗಳ ಕಾಲ ಬದುಕಿದ್ದರೆಂದು ಭರತಖಂಡದ ಉದ್ದಗಲಕ್ಕೂ ಸಂಚರಿಸಿದರೆಂದೂ ನಂಬಿಕೊಂಡು ಬರಲಾಗಿದೆ.[೧೦೫]

ರೇವಣಸಿದ್ಧರು ಐತಿಹಾಸಿಕ ವ್ಯಕ್ತಿಯೆಂಬುದಕ್ಕೆ ಶಾಸನಾಧಾರವಿದೆ. (ಈವರೆಗೆ ಈತನನ್ನು ಕುರಿತು ೧೩ ಶಾಸನಗಳು ದೊರತಿವೆ) ಇಂದಿನ ಪಂಚಪೀಠಗಳ ವೀರಗೋತ್ರದ ನಿರ್ಮಾಪಕ ಈತನೇ ಆಗಿದ್ದಾನೆ. ಈತನನ್ನು ಕುರಿತು ರೇವಣಸಿದ್ಧ ರಗಳೆ, ರೇವಣಸಿದ್ಧ ಸಾಂಗತ್ಯ, ಆರಾಧ್ಯಚಾರಿತ್ರ, ಚತುರಾಚಾರ್ಯ ಪುರಾಣ ಸಿದ್ಧಾಂತ, ಶಿಖಾಮಣಿ ಕಾವ್ಯಗಳು ದಾಖಲಿಸಿವೆ. ಕವಿ ಹರಿಹರನ ಪ್ರಕಾರ ರೇವಣ್ಣಸಿದ್ದ ಚೋಳ ದೊರೆಯ ಮಗಳೊಬ್ಬಳನ್ನು ವಿವಾಹವಾಗಿದ್ದು ಅವಳಲ್ಲಿ ರುದ್ರಮುನಿ ಎಂಬುವನು ಹುಟ್ಟುತ್ತಾನೆ. ಈತನಿಗೆ ರೇವಣಸಿದ್ಧ ಶೈವೋಪದೇಶ ಮಾಡಿ ತಾನು ಇಹಲೋಕ ಯಾತ್ರೆ ಮುಗಿಸುವ ಮುನ್ನ ಪಟ್ಟಕಟ್ಟುತ್ತಾನೆ.[೧೦೬] ಅಲ್ಲದೆ ಈತನನ್ನು ಕವಿ ವೀರಶೈವನೆಂದು ಹೇಳದೆ ಸಿದ್ಧಕುಲಪತಿ[೧೦೭] ಸಿದ್ದಕುಲ ಚಕ್ರವರ್ತಿ[೧೦೮] ಸಿದ್ಧಕುಲಕಮಳ, ಸಿದ್ದಕುಲಶೇಖರ, ಸಿದ್ಧಸಮಯ ಚಕೋರ, ಸಿದ್ಧಕುಲಚಾತಕ[೧೦೯] ಲಾಕುಳದ ಲೋಕೈಕ ಬಂಧು ಎಂಬಿತ್ಯಾದಿಯಾಗಿ ಹೊಗಳಿದ್ದಾನೆ. ಈ ರೇವಣಸಿದ್ಧರನ್ನು ಹರಿಹರ ಕವಿ ಲಾಕುಳದ ಲೋಕೈಕ ಬಂಧು ಎಂದಿರುವುದರಿಂದ ಈತ ಲಾಕುಳ ಶೈವನಾಗಿರಬೇಕೆಂದು ತೋರುತ್ತದೆ. ಡಾ.ಎಂ.ಎಂ. ಕಲಬುರ್ಗಿ ಅವರು ರೇವಣಸಿದ್ಧರನ್ನು ನಾಥಪಂಥದವನೆಂದು ಗುರುತಿಸುತ್ತಾರೆ.[೧೧೦] ರೇವಣಸಿದ್ಧರು ಕೊಲ್ಲಿಪಾಕಿಯ ಸೋಮೇಶ್ವರ ದೇವಾಲಯದ ಮುಖ್ಯ ಅರ್ಚಕರಾ(ಸ್ಥಾನಪತಿ)ಗಿರಬಹುದು. ಅವರು ಸ್ಥಾವರಲಿಂಗಗಳನ್ನು ಸ್ಥಾಪಿಸುವ, ಸ್ಥಾಪಿಸಲು ಪ್ರೇರೇಪಿಸುವುದನ್ನು ಗಮನಿಸಿದರೆ ಶೈವನಾಗಿದ್ದದ್ದು ಸತ್ಯವೆನಿಸುತ್ತದೆ. ಮುಂದೆ ಈತನ ಅನುಯಾಯಿಗಳು ಶರಣಸಿದ್ಧಾಂತಕ್ಕೆ ಒಳಗಾಗಿ ಈತನೇ ವೀರಶೈವ ಮತ ಸ್ಥಾಪಕನೆಂದು ಸೃಷ್ಟಿಸಿರಬಹುದೆನಿಸುತ್ತದೆ.

ಡಾ.ಎಂ.ಚಿದಾನಂದಮೂರ್ತಿಯವರು 'ರೇಣುಕಾಗಸ್ತ್ಯ ಸಂವಾದವನ್ನೊಳಗೊಂಡಿರುವ ಸಿದ್ಧಾಂತ ಶಿಖಾಮಣಿಯಲ್ಲಿ ರೇಣುಕರು ವೀರಶೈವಧರ್ಮವನ್ನು ಸ್ಥಾಪಿಸಿ ಜಗತ್ತಿಗೆ ಅದನ್ನು ಬೋಧಿಸಿದರು, ಅಗಸ್ತ್ಯ ಅವರ ಶಿಷ್ಯವರ್ಗದ ಮೊದಲಿಗ ಎಂಬ ಮಾತು ಎಲ್ಲಿಯೂ ಬಂದಿಲ್ಲ. ಆ ಕೃತಿಯ ಕರ್ತೃವಾದ ಶಿವಯೋಗಿಯು ಪ್ರಾಚೀನ ಕಾಲದಲ್ಲಿ ರೇಣುಕರು ಅಗಸ್ತ್ಯನಿಗೆ ಬೋಧಿಸಿದ್ದನ್ನೇ ತಾನು ಕೃತಿ ರೂಪದಲ್ಲಿ ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. ರೇಣುಕರು ಕೈಲಾಸದ ಶಿವಗಣದಲ್ಲಿ ಒಬ್ಬರು. ಷಣ್ಮುಖ, ಗಣೇಶ, ವೃಷಭರಂತೆ, ವೃಷಭನು ಭೂಲೋಕಕ್ಕೆ ಬಂದು ಬಸವ ಎಂಬ ಹೆಸರು ಪಡೆದು ಲೋಕೋದ್ಧಾರ ಕಾರ್ಯವನ್ನು ಕೈಗೊಂಡಂತೆ ರೇಣುಕನು 'ರೇವಣಸಿದ್ದ' ಎಂಬ ಹೆಸರು ತಳೆದು ಅಂತಹುದೇ ಕಾರ್ಯವನ್ನು ಕೈಗೊಂಡನೆಂಬ ನಮ್ಮ ಹಿಂದಿನ ಕವಿಗಳ ಕಲ್ಪನೆ ಗಮನಿಸಬೇಕಾದ್ದು. ಐತಿಹಾಸಿಕ ವ್ಯಕ್ತಿಯಾದ ರೇವಣಸಿದ್ದನೂ ವೀರಶೈವ ಧರ್ಮದ ಸ್ಥಾಪಕನಲ್ಲ. ಬಸವನ ಹಿರಿಯ ಸಮಕಾಲೀನ[೧೧೧]

ಎಂದು ಹೇಳಿದ್ದಾರೆ. ಹಾಗೆಯೇ ಮುಂದುವರೆದು ಅವನು ಆ ಧರ್ಮವನ್ನು ಸ್ಥಾಪಿಸಿ, ಷಟ್ಸ್ಥಲ ಸಿದ್ಧಾಂತವನ್ನೂ ಪಂಚಾಚಾರಗಳನ್ನೂ ರೂಪಿಸಿ, ಇಷ್ಟಲಿಂಗದ ಪರಿಕಲ್ಪನೆಯನ್ನು ತಾನೇ ಪ್ರಪ್ರಥಮವಾಗಿ ಕಂಡು ಅದನ್ನೆಲ್ಲ ತನ್ನ ಬದುಕಿನ ಐದಾರು ದಶಕಗಳ ಅವಧಿಯಲ್ಲಿ ಅಷ್ಟು ವ್ಯಾಪಕವಾಗಿ ಪ್ರಚಾರ ಮಾಡಿದನೆಂಬುದನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ.[೧೧೨] ಅದು ಒಂದು ವೇಳೆ ನಿಜವಾದರೂ, ಅವನಿಗಿಂತ ಸು.೪೦ ವರ್ಷಗಳ ಹಿಂದಿದ್ದ ಕೊಂಡಗುಳಿ ಕೇಶಿರಾಜನಲ್ಲಿಯೇ(ಕ್ರಿ.ಶ.೧೧೨೦) ವೀರಶೈವ ಧರ್ಮದ ಎಲ್ಲ ಪರಿಭಾಷೆ ಕಾಣಿಸಿಕೊಂಡಿದೆ[೧೧೩] ಎಂದಿದ್ದಾರೆ.

ಡಾ.ಎಂ.ಚಿದಾನಂದಮೂರ್ತಿಯವರು ರೇವಣಸಿದ್ಧರ ಬಗ್ಗೆ ಪ್ರತಿಪಾದಿಸಿದ ಅಭಿಪ್ರಾಯಗಳು ವಾಸ್ತವದಿಂದ ಕೂಡಿವೆ. ರೇವಣಸಿದ್ಧರು ಬಸವನ ಹಿರಿಯ ಸಮಕಾಲೀನ ಎಂದಷ್ಟೇ ಹೇಳಿದ್ದಾರೆ. ಆದರೆ ರೇವಣಸಿದ್ದರು ಶೈವರೋ ವೀರಶೈವರೋ ಎಂಬುದನ್ನು ಸ್ಪಷ್ಟಪಡಿಸಿಲ್ಲ. ಆದರೆ ಈತನೂ ಒಬ್ಬ ವಚನಕಾರನಾಗಿದ್ದನೆಂದೂ, ಈತನ ವಚನದ ಅಂಕಿತ ರಾಮೇಶ್ವರಲಿಂಗವೆಂದೂ[೧೧೪] ಡಾ.ಆರ್.ಸಿ.ಹಿರೇಮಠರು ತಮ್ಮ ಮಹಾಯಾತ್ರೆ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

೨. ಮರುಳಸಿದ್ದ : ವೀರಶೈವ ಪೌರಾಣಿಕ ವ್ಯಕ್ತಿ ದಾರುಕರೇ ಮರುಳಾರಾಧ್ಯ (ಮರುಳಸಿದ್ದ)ರಾದರೆಂಬ ನಂಬುಗೆಯಿದೆ. ಶಿವನ ವಾಮದೇವಮುಖ ಸಂಜಾತರಾದ ಶ್ರೀಜಗದ್ಗುರು ಮರುಳಾರಾಧ್ಯರು ಶಿವನ ಅಪ್ಪಣೆಯ ಮೇರೆಗೆ ವೀರಶೈವಮತ ಸಂಸ್ಥಾಪನೆಗಾಗಿ ಕ್ಷಿಪ್ರಾನದಿಯ ತಟದಲ್ಲಿರುವ ವಟಕ್ಷೇತ್ರದ ಸಿದ್ದೇಶ್ವರಲಿಂಗದಿಂದ ಪ್ರತಿಯೊಂದು ಯುಗದಲ್ಲೂ ಅವತರಿಸುತ್ತಾ ಬಂದಿದ್ದಾರೆ. ಇವರು ನೈಮಿಕ್ಷಾರಣ್ಯದಲ್ಲಿ ವಾಸಮಾಡುತ್ತಿದ್ದ ದಧೀಚಿ ಮಹರ್ಷಿಗಳಿಗೆ ಶಿವಾದ್ವೈತ ಸಿದ್ಧಾಂತ ಬೋಧಿಸಿದರು. ಇವರು ವೀರಶೈವದ ನಂದಿಗೋತ್ರದ ಸ್ಥಾಪಕರೆಂದೂ, ಉಜ್ಜಯನಿ ಸದ್ಧರ್ಮಪೀಠದ ನಿರ್ಮಾಪಕರೆಂದು[೧೧೫] ಹೇಳಲಾಗುತ್ತದೆ. ೪೦೦ ವರ್ಷಗಳವರೆಗೆ ಕಾಶಿಯಲ್ಲಿ ಯೋಗಸಮಾಧಿಯಲ್ಲಿದ್ದು ನಂತರ ಸಿದ್ದೇಶ್ವರ ಲಿಂಗದಲ್ಲಿಯೇ ಲೀನವಾದರೆಂದು[೧೧೬] ವೀರಶೈವ ಪಂಚಪೀಠ ಪರಂಪರೆ ಕೃತಿಯಲ್ಲಿ ಉಲ್ಲೇಖಿಸಲಾಗಿದೆ. ಇವರು ನಂದಿಗೋತ್ರದ ಪ್ರವರ್ತಕರಾಗಿದ್ದಾರೆ.

ಆದರೆ ಮಹಾದೇವ ಬಣಕಾರರು ಬರೆದ ವಿಶ್ವಬಂಧು ಮರುಳಸಿದ್ಧ ಕಾವ್ಯದಲ್ಲಿ ಇದು ಬಾಲ್ಗುಳಿ ದೇವ ಕವಿಯ ಮರುಳಸಿದ್ಧಕಾವ್ಯ(೧೫೮೭), ಸಿರಿಗೆರೆ ಗುರುಸಿದ್ಧಸ್ವಾಮಿಗಳ ಮರುಳಸಿದ್ಧ ಕಾವ್ಯ(೧೮೮೪) ಮುಂತಾದ ಕೃತಿಗಳನ್ನು ಆಧರಿಸಿದೆ) ಮರುಳಸಿದ್ಧ ಒಬ್ಬ ಸಾಮಾನ್ಯ ವ್ಯಕ್ತಿ. ಈತ ಜಾತಿಯಿಂದ ಮಾದಿಗನಾದರೂ ಆಧ್ಯಾತ್ಮ ಸಾಧನೆಯಿಂದ ಜಂಗಮನಾಗುತ್ತಾನೆ. ಈತನ ತಂದೆ ಕೂಚಮಾರ, ತಾಯಿ ಸುಪ್ರಭೆ, ಗುರು ರೇವಣಸಿದ್ಧ. ತನ್ನ ಬಾಲ್ಯದಲ್ಲಿ ನಡೆದ ಘಟನೆಯಿಂದ ವಿರಾಗಿಯಾಗುತ್ತಾನೆ. ಮಾರಿಹಬ್ಬಕ್ಕೆ ಮೂಕಪ್ರಾಣಿಗಳನ್ನು ಬಲಿನೀಡುವುದನ್ನು ತಡೆಯುತ್ತಾನೆ. ಜಾತ್ಯಾಂಧರ ವಿರುದ್ಧ, ಮೂಢನಂಬಿಕೆಗಳ

ವಿರುದ್ಧ ಹೋರಾಡುತ್ತಾನೆ ಬಯಸಿ ಬಂದವರಿಗೆಲ್ಲಾ ಲಿಂಗದೀಕ್ಷೆ ನೀಡುತ್ತಾನೆ. ಕೊನೆಗೆ ತನ್ನ ಹುಟ್ಟೂರಾದ ಕಗ್ಗಲಪುರವನ್ನು ಬಿಟ್ಟು ಉಜ್ಜಯನಿಗೆ ಬಂದು ನೆಲೆಸಿ ಅಲ್ಲಿ ಸದ್ಧರ್ಮಪೀಠ ಸ್ಥಾಪಿಸಿ ಲಿಂಗೈಕ್ಯನಾಗುತ್ತಾನೆಂದು[೧೧೭] ಹೇಳಿದ್ದಾರೆ. ಈತನನ್ನು ಕುರಿತು ಸುಪ್ರಭೇದಾಗಮಾಂತರ್ಗತ ಪಂಚಾಚಾರ್ಯ ಪಂಚಮೋತ್ಪತ್ತಿ ಪ್ರಕರಣ ವೀರಶೈವ ಸದಾಚಾರ ಸಂಗ್ರಹ, ಬಾಳ್ಗುಳಿ ದೇವಕವಿಯ ಮರುಳಸಿದ್ಧ ಕಾವ್ಯ, ಚತುರಾಚಾರ್ಯರ ಪುರಾಣ ಗುರುರಾಜಚಾರಿತ್ರ ಮುಂತಾದ ಕೃತಿಗಳು ದಾಖಲಿಸಿವೆ. 'ಲಿಂಗರೇವಣಪ್ರಭು' ಎಂಬ ವಚನಾಂಕಿತದಿಂದ ಮರುಳಸಿದ್ಧ ವಚನ ರಚಿಸಿದ್ದಾನೆಂದು[೧೧೮] ಡಾ.ಆರ್.ಸಿ.ಹಿರೇಮಠ ತಮ್ಮ ಮಹಾಯಾತ್ರೆ ಕೃತಿಯಲ್ಲಿ ದಾಖಲಿಸಿದ್ದಾರೆ. ಆದರೆ ಈತನ ಕಾಲವನ್ನು ಉಲ್ಲೇಖಿಸಿಲ್ಲ. ಮರುಳಸಿದ್ಧರು ರೇವಣಸಿದ್ಧರಷ್ಟು ಪ್ರಸಿದ್ಧರಲ್ಲ ಕಾರಣ ಈತ ಮಹಾದೇವ ಬಣಕಾರರು ಹೇಳುವಂತೆ ಮಾದಿಗ ಕುಲದವನಿರಬಹುದೆ? ಈ ಕುರಿತು ಹೆಚ್ಚಿನ ಅಧ್ಯಯನವಾಗಬೇಕಿದೆ.

೩. ಏಕೋರಾಮರಾಧ್ಯ : ಶಿವನ ಅಘೋರ ಮುಖ ಸಂಜಾತರಾದ ಇವರು ಶಿವನ ಅಪ್ಪಣೆಯಂತೆ ದ್ರಾಕ್ಷಾರಾಮ ಕ್ಷೇತ್ರದ ರಾಮನಾಥ ಶಿವಲಿಂಗದಿಂದ ಅವತರಿಸಿ ವೀರಶೈವ ಮತವನ್ನು ಸಂಸ್ಥಾಪಿಸುತ್ತಾರೆ. ಭೃಂಗಿಗೋತ್ರಪ್ರವರ್ತಕರಾದ ಏಕೋರಾಮರಾಧ್ಯರು ಕೇದಾರದ ವೈರಾಗ್ಯಸಿಂಹಾಸನವನ್ನು ಸ್ಥಾಪಿಸಿ ಅನಂತಕಾಲದವರೆಗೆ ಉತ್ತರ ಭಾರತದ ಅನೇಕ ಸ್ಥಾನಗಳಲ್ಲಿ ವೀರಶೈವ ತತ್ತ್ವಬೋಧೆಯನ್ನು ಮಾಡಿ ಅದನ್ನು ಸ್ಥಿರಗೊಳಿಸಿ ಪುನಃ ರಾಮನಾಥಲಿಂಗದಲ್ಲಿ ಐಕ್ಯವಾದರು[೧೧೯] ಎಂದು ವೀರಶೈವ ಪಂಚಪೀಠ ಪರಂಪರೆ ಕೃತಿಯಿಂದ ತಿಳಿದು ಬರುತ್ತದೆ. ಆದರೆ ಡಾ.ಎಸ್.ಸಿ.ನಂದಿಮಠರು ಏಕೋರಾಮರಾಧ್ಯರು ಶ್ರೀಶೈಲದಲ್ಲಿ ವೀರಶೈವಪೀಠವೊಂದನ್ನು ಸ್ಥಾಪಿಸಿದರೆಂದು[೧೨೦] ಹೇಳಿದ್ದಾರೆ. ಇವರ ಕುರಿತು ನಂದಿಮಠರಿಗೆ ಸರಿಯಾದ ಮಾಹಿತಿ ದೊರೆತಿಲ್ಲವೆಂದು ತೋರುತ್ತದೆ. ಈತನನ್ನು ಕುರಿತು ಆರಾಧ್ಯಚಾರಿತ್ರ, ಚತುರಾಚಾರ್ಯ ಪುರಾಣ ದಾಖಲಿಸಿದೆ.

ಡಾ.ಎಂ.ಎಂ.ಕಲಬುರ್ಗಿಯವರು ಶಿವಶರಣ ಏಕಾಂತರಾಮಯ್ಯನೇ ಏಕೋರಾಮರಾಧ್ಯ ಎಂದು ಹೇಳುತ್ತಾ 'ನಕುಲೀಶ ಶೈವ ಬಳ್ಳಿಗಾವಿಯ ಕೇದಾರಮಠ ಪರಂಪರೆಯನ್ನೇ ೧೬ನೇ ಶತಮಾನದಲ್ಲಿ ಚತುರಾಚಾರ್ಯ ಒಕ್ಕೂಟದ ಅಂಗ 'ಪೀಠ'ವೆಂದು ಗ್ರಹಿಸಿರುವ ಸಾಧ್ಯತೆಯಿದೆ. ಇಂದಿನ ಪೀಠಾಧಿಕಾರಿಗಳಿಗೆ ಇರುವ 'ರಾವಲ್' ವಿಶೇಷಣವು ಕೆಲವೊಮ್ಮೆ 'ರಾವುಳ' ರೂಪದಿಂದ ಪಾಶುಪತ ಆಚಾರ್ಯರಿಗೆ ಬಳಕೆಯಾದುದು ನಮ್ಮ ಅಭಿಪ್ರಾಯವನ್ನು ಬೆಂಬಲಿಸುತ್ತದೆ. ಅಬ್ಬಲೂರ ಏಕಾಂತರಾಮಯ್ಯನು ಅಲ್ಲಿಯ ಮೂವರ ಕೋಣೆಯ ಬ್ರಹ್ಮೇಶ್ವರ ದೇವಾಲಯಕ್ಕೆ ಸಂಬಂಧಿಸಿದ ಪ್ರಸಿದ್ಧ ವ್ಯಕ್ತಿಯಾಗಿದ್ದನು. ಆದುದರಿಂದ ಈತನನ್ನೇ ಏಕೋರಾಮರಾಧ್ಯನೆಂದು ಕರೆದು, ಕೇದಾರ ಪೀಠವನ್ನು (ಪಾಶುಪತೌನಕುಲೀಶ) ಅಸ್ತಿತ್ವಕ್ಕೆ ತಂದರೆಂದು ತೋರುತ್ತದೆ[೧೨೧] ಎಂದು ವಿಶ್ಲೇಷಿಸಿದ್ದಾರೆ.

ಬಸವನ ಸಮಕಾಲೀನ ವಚನಕಾರ ಏಕಾಂತರಾಮಯ್ಯ(ಎನ್ನಯ್ಯ ಚನ್ನರಾಯ, ಎನ್ನಯ ಪ್ರಿಯಚನ್ನರಾಮ ಚೆನ್ನಕೂಡಲರಾಮೇಶ್ವರ, ಏಕಾಂತ ವೀರಸೊಡ್ಡಳ ಇವು ಈತನ ವಚನಗಳ ಅಂಕಿತ)ನಿಗೂ ಏಕೋರಾಮರಾಧ್ಯರಿಗೂ ಸಾಮ್ಯತೆ ಇರುವುದಂತೂ ಸತ್ಯ.

೪. ಪಂಡಿತಾರಾಧ್ಯ : ಶಿವನ ತತ್ಪುರುಷಮುಖ ಸಂಜಾತರಾದ ಪಂಡಿತಾರಾಧ್ಯರು ಶಿವನ ಅಪ್ಪಣೆಯಂತೆ ಸುಧಾಕುಂಡದ ಮಲ್ಲಿಕಾರ್ಜುನ ಲಿಂಗದಿಂದ ಅವತರಿಸಿ ಶ್ರೀಶೈಲ ಕ್ಷೇತ್ರದಲ್ಲಿಯೇ ಧರ್ಮೋಪದೇಶಕ್ಕಾಗಿ ಒಂದು ಪೀಠವನ್ನು ಸಂಸ್ಥಾಪಿಸಿದರು.[೧೨] ಇವರೇ ವೃಷಭಗೋತ್ರದ ಸಂಸ್ಥಾಪಕರೆಂಬ ನಂಬಿಕೆಯಿದೆ. ಇವರು ಸ್ಥಾಪಿಸಿದ ಪೀಠವನ್ನು ಶ್ರೀಶೈಲ ಸೂರ್ಯಸಿಂಹಾಸನ ಪೀಠವೆಂದು ಕರೆಯುತ್ತಾರೆ. ಆಂಧ್ರ ಪ್ರದೇಶ ಹಾಗೂ ಸುತ್ತಮುತ್ತಲಿನ ಭಾಗಗಳಲ್ಲಿ ವೀರಶೈವ ಧರ್ಮೋಪದೇಶವನ್ನು ಮಾಡಿ ಜನರನ್ನು ಉದ್ಧಾರಗೊಳಿಸಿದ್ದಾರೆ.[೧೩] ಗುರುರಾಜ ಕವಿಯ 'ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತಂ' ನೀಲಕಂಠ ಶಿವಾಚಾರ್ಯನ ಆರಾಧ್ಯ ಚಾರಿತ್ರ್ಯ, ಸಂಪಾದನೆಯ ಪರ್ವತೇಶನ ಚತುರಾಚಾರ್ಯ ಪುರಾಣ ಮುಂತಾದ ಕೃತಿಗಳು ಪಂಡಿತಾರಾಧ್ಯರ ಜೀವನ ಕುರಿತು ಬೆಳಕು ಚೆಲ್ಲುತ್ತವೆ.

ಅಮರಗುಂಡದ ಈ ಶರಣನ ಹೆಸರು ಮಲ್ಲಿಕಾರ್ಜುನನೆಂದಿತ್ತು. ಅವರ ಅಗಾಧ ವಿದ್ವತ್ ನ್ನು ಕಂಡ ಜನ ಅವರನ್ನು 'ಪಂಡಿತ' ಎಂದು ಕರೆಯುತ್ತಿದ್ದರು. ಇದರಿಂದ ಅಮರಗುಂಡದ ಈ ಮಲ್ಲಿಕಾರ್ಜುನ ಪಂಡಿತರೂ ಪಂಡಿತಾರಾಧ್ಯರೂ ಒಂದೇ ಎಂಬುದು ಸಂದೇಹಾಸ್ಪದ. ಪಂಡಿತಾರಾಧ್ಯರ ಬಗ್ಗೆ ತಿಳಿದುಬರುವ ಸಂಗತಿಗಳನ್ನು ಗಮನಿಸಿದಾಗಲೂ ಅವರನ್ನು ಗೋತ್ರ ಕರ್ತೃವೆಂದು ಹೇಳುವುದು ತೃಪ್ತಿಕರವಾಗಿ ತೋರುವುದಿಲ್ಲ; ಏಕೆಂದರೆ ಪಂಡಿತಾರಾಧ್ಯರು ಬಸವಣ್ಣನವರನ್ನು ಮಹಾಪುರುಷರೆಂದೂ, ಪ್ರಭುದೇವರನ್ನು ಇನ್ನೂ ಹೆಚ್ಚಿನ ಮಹಾಪುರುಷರೆಂದೂ ಒಪ್ಪಿದ್ದಾರೆ. ಇವರಲ್ಲಿ ಯಾರೂ ಗೋತ್ರ ಪುರುಷರಲ್ಲ[೧೪] ಎಂದು ಡಾ.ಎಸ್.ಸಿ.ನಂದಿಮಠ ಅವರು ಅಭಿಪ್ರಾಯಪಡುತ್ತಾರೆ. ಡಾ.ನಂದಿಮಠ ಅವರ ವಾದದಲ್ಲಿ ಸತ್ಯವಿದೆ. ಏಕೆಂದರೆ ಪಂಡಿತರಾಧ್ಯರು ಬಸವಣ್ಣನ ಸಮಕಾಲೀನರೇ ಹೊರತು ಅವರಿಗಿಂತ ಮುಂಚಿನವರಲ್ಲ. ಮತ್ತು ಗೋತ್ರ ಪ್ರವರ್ತಕರಲ್ಲ ಎಂಬುದನ್ನು ಸಮಕಾಲೀನ ಆಧಾರಗಳು ದೃಢಪಡಿಸುತ್ತವೆ.

ಡಾ.ಎಂ.ಎಂ.ಕಲಬುರ್ಗಿಯವರು "ಶ್ರೀಶೈಲ ಪಂಡಿತಾರಾಧ್ಯಪೀಠವು ೧೨ನೆಯ ಶತಮಾನದ ಬಸವ ಚಳುವಳಿಯ ಸಿದ್ಧಾಂತವನ್ನು ಗೌರವಿಸಿ, ಅದರ ಉತ್ತಮಾಂಶಗಳನ್ನೊಳಗು ಮಾಡಿಕೊಂಡು, ಆರಾಧ್ಯ ಸಂಪ್ರದಾಯವನ್ನು ಆಗಲೇ ರೂಪಿಸಿಕೊಂಡಿದ್ದಿತು. ೧೬ನೆಯ ಶತಮಾನದ ಗುಬ್ಬಿಯ ಮಲ್ಲಣಾರ್ಯ ಮೊದಲಾದವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಈ ಆರಾಧ್ಯ ಸಂಪ್ರದಾಯದ ಬೆಳಕಿನಲ್ಲಿ ಶಾಂತಮಲ್ಲಿಕಾರ್ಜುನ ಗುರುವಿನ ಸನ್ನಿಧಿಯಲ್ಲಿ ಶಿವಗಂಗೆ ಬೆಟ್ಟದಲ್ಲಿ ಚತುರಾಚಾರ್ಯ ಒಕ್ಕೂಟವನ್ನು ಅಸ್ತಿತ್ವಕ್ಕೆ ತಂದರು. ಅಂದರೆ ತನ್ನ ಸಿದ್ಧಾಂತದ ಬೆಳಕಿನಲ್ಲಿ ಈ ಚತುರಾಚಾರ್ಯ

ಒಕ್ಕೂಟವನ್ನು ಅಸ್ತಿತ್ವಕ್ಕೆ ತಂದ ಕೀರ್ತಿ ಈ ಶ್ರೀಶೈಲ ಪೀಠಕ್ಕೆ ಸಲ್ಲುತ್ತದೆ. ಇದು ಈ ಒಕ್ಕೂಟದಲ್ಲಿ ತುಂಬ ಹಳೆಯದೆಂದು ಹೇಳಬೇಕಾಗುತ್ತದೆ. ಇಂದು ಉಳಿದ ನಾಲ್ಕು ಪೀಠಗಳೂ ಈ ಪಂಡಿತಾರಾಧ್ಯ ಸಿದ್ಧಾಂತವನ್ನೇ ಅನುಸರಿಸುತ್ತಿವೆ.[೧೨೫] ಈ ಪೀಠವು ಶ್ರೋತ್ರೀಯ ಶೈವ ಪರಂಪರೆಗೆ ಸಂಬಂಧಿಸಿದುದಾಗಿದೆ.[೧೨೬] ಎಂದು ಅಭಿಪ್ರಾಯಪಡುತ್ತಾರೆ. ಡಾ.ಕಲಬುರ್ಗಿಯವರ ಈ ವಾದವು ವಾಸ್ತವದಿಂದ ಕೂಡಿದೆ ಎಂದು ಹೇಳಬಹುದಾಗಿದೆ.

೫. ವಿಶ್ವಾರಾಧ್ಯ : ಶಿವನ ಈಶಾನಮುಖ ಸಂಜಾತರಾದ ವಿಶ್ವಾರಾಧ್ಯರು ಪರಶಿವನ ಅಪ್ಪಣೆಯಂತೆ ಭೂಲೋಕದಲ್ಲಿ ವೀರಶೈವಧರ್ಮವನ್ನು ಪ್ರತಿಷ್ಠಾಪಿಸುವುದಕ್ಕಾಗಿ ಕಾಶಿ ವಿಶ್ವೇಶ್ವರಲಿಂಗದಿಂದ ಉದ್ಭವಿಸಿದರು.[೧೨೭] ಸ್ಕಂದಗೋತ್ರ ಪ್ರವರ್ತಕರೆಂದೂ ಇವರೂ ವಿಶ್ವಕರ್ಣರೂ ಒಂದೇ ಎಂದು ಹೇಳಲಾಗುತ್ತಿದೆ.[೧೨೮] ಅಲ್ಲದೆ ಕಾಶಿಯಲ್ಲಿ ಜ್ಞಾನಸಿಂಹಾಸನ ಪೀಠ ಸ್ಥಾಪಿಸಿದರೆಂದು ನಂಬಲಾಗುತ್ತದೆ. ಈ ಪೀಠವು ಇಂದಿನವರೆಗೂ ಅಸ್ಥಿತ್ವದಲ್ಲಿದ್ದು ಅದನ್ನು ಜಂಗಮವಾಡಿ ಮಠವೆಂದು ಕರೆಯಲಾಗುತ್ತದೆ.[೧೨೯] ಆದರೆ ಡಾ.ಎಂ.ಎಂ.ಕಲಬುರ್ಗಿಯವರು ಈ ಪೀಠವು ೧೭ನೇ ಶತಮಾನದವರೆಗೆ ವೀರಶೈವ ಮಠವಾಗಿರಲಿಲ್ಲ ಎಂದು ಆಧಾರ ಸಹಿತ ನಿರೂಪಿಸುತ್ತಾರೆ.

ಡಾ. ಕಲಬುರ್ಗಿಯವರು ಅಭಿಪ್ರಾಯಪಡುವಂತೆ ೧೬ನೆಯ ಶತಮಾನದ ಸುಮಾರಿಗೆ ಶಿವಗಂಗೆಯಲ್ಲಿ ೪ ಪೀಠಗಳು ಹುಟ್ಟಿದ್ದರೂ, ಐದು ಪೀಠಗಳನ್ನು ಅಸ್ಥಿತ್ವಕ್ಕೆ ತರುವ ವಿಚಾರ ಆ ಕಾಲಕ್ಕೆ ಸುಳಿದಿರಬಹುದೆನಿಸುತ್ತದೆ. ಆ ಐದನೆಯ ಪೀಠ ಬಹುಶಃ ಸಿದ್ಧರಾಮನಿಗೆ ಸಂಬಂಧಿಸಿದುದು. ಮರೆಮಿಂಡದೇವ(೨೭), ಹಾವಿನಹಾಳ ಕಲ್ಲಯ್ಯ(೨೬)ಗಳ ವಚನಗಳಲ್ಲಿ ಈ ಸೂಚನೆಯಿದೆ (ಈ ವಚನಗಳು ಕೃತ್ರಿಮವೆಂಬ ವಾದವೂ ಇದೆ) ಬಹುಶಃ ಸಿದ್ಧರಾಮನ ವಿಚಾರವನ್ನು ಕೈಬಿಟ್ಟು, ಕಾಶಿ ವಿಶ್ವಾರಾಧ್ಯನ ಹೆಸರನ್ನು ಕೆಳದಿ ಅರಸರ ಕಾಲದಲ್ಲಿ ಸೇರಿಸಿರಬೇಕೆಂದು ತೋರುತ್ತದೆ. ಮೂಲತಃ ನಾಥಪಂಥದ ಗೋಸಾವಿಮಠವಾಗಿದ್ದ ಕಾಶಿಯ ಜಂಗಮವಾಡಿಮಠಕ್ಕೆ ಈ ಹೊತ್ತಿಗಾಗಲೇ ಯಾವನೋ ಒಬ್ಬ ಕರ್ನಾಟಕದ ಲಿಂಗಾಯತ ಜಂಗಮವ್ಯಕ್ತಿ ಗೋಸಾವಿಯಾಗಿ, ಕ್ರಮೇಣ ಮಠದ ಸ್ವಾಮಿಯಾಗಿದ್ದನೆಂದು ತೋರುತ್ತದೆ. ಗೋಸಾವಿಗಳಲ್ಲಿ ಪೀಠವೇರುವವರನ್ನು 'ಜಂಗಮ'ವೆಂದೂ ಕರೆಯುತ್ತಾರೆ. ಹೀಗಾಗಿ ಈ ಮಠದ ಪ್ರಾಚೀನ ದಾಖಲೆಗಳಲ್ಲಿ ನಾಥ, ಗೋಸಾವಿ, ಜಂಗಮ ಎಂಬ ಪದಗಳೂ, ಈ ಮಠದ ಒಡೆತನದ ಭೂಮಿಗೆ 'ಜಂಗಮಪುರ'ವೆಂದು ಕರೆದಿದ್ದಾರೆ. ಇಲ್ಲಿ ದೊರೆಯುವ ದಾಖಲೆಗಳಲ್ಲಿ ಗೋಸಾವಿಯೆಂಬ ಪದ ಇಲ್ಲಿಯ ಸ್ವಾಮಿಗಳಿಗೆ ಪದೇ ಪದೇ ಕಾಣುತ್ತಿರುವುದು ಅವೀರಶೈವೆನಿಸುತ್ತದೆ. ಕ್ರಿ.ಶ.೧೭೫೦ರಷ್ಟು ಇತ್ತೀಚಿಸ ಶಾಸನದ ಮಹಾಂತ ಶಿವಲಿಂಗಸ್ವಾಮಿ ಎಂಬುದು ಮಾತ್ರ ಇವನು ವೀರಶೈವನೆಂಬ ಭಾವನೆ ಹುಟ್ಟಿಸುತ್ತದೆ. ಆದುದರಿಂದ ಈ ಕಾಲಕ್ಕೆ ಅಥವಾ ಇದಕ್ಕೆ ಕೆಲವೇ ವರ್ಷ ಮೊದಲು ಜಂಗಮವಾಡಿಮಠ ಕರ್ನಾಟಕದ ವೀರಶೈವ ಜಂಗಮ ವ್ಯಕ್ತಿಯ ಸ್ವಾಮಿತ್ವಕ್ಕೆ ಒಳಗಾಗಿರುವ ಸಾಧ್ಯತೆಯಿದೆ. ಆಮೇಲೆ ಕರ್ನಾಟಕದ ವೀರಶೈವ

ಜಂಗಮರೇ ಪೀಠಕ್ಕೆ ಬರುವುದೂ, ಮಠವನ್ನು ನಾಥ ಸಂಪ್ರದಾಯದಿಂದ ವೀರಶೈವ ಸಂಪ್ರದಾಯಕ್ಕೆ ತಿರುಗಿಸಿಕೊಳ್ಳುವುದೂ ಆರಂಭವಾದಂತಿದೆ. ಕೆಳದಿ ವೆಂಕಟಪ್ಪನಾಯಕ ಕ್ರಿ.ಶ.೧೬೫೫ರಲ್ಲಿ ಕಾಶಿಗೆ ಭೇಟಿಕೊಟ್ಟ ತರುವಾಯದ ಯಾವುದೋ ಸಂದರ್ಭದಲ್ಲಿ ಈ ಮನೆತನದ ಅರಸನೊಬ್ಬ ಕರ್ನಾಟಕದ ಪಂಚಪೀಠಕ್ಕೆ ಕಾಶಿ ಜಂಗಮವಾಡಿ ಮಠವನ್ನು ಜೋಡಿಸುವ ಪ್ರಯತ್ನ ಮಾಡಿರಬಹುದು. ಷಡಕ್ಷರ ದೇವನಂಥ ಕವಿಗಳು ಚತುರಾಚಾರ್ಯನನ್ನು ಮಾತ್ರ ನೆನೆಯುವುದು ಮೊದಲಾದವುಗಳನ್ನು ಆಧರಿಸಿ ಕಾಶಿಪೀಠ ಆಮೇಲಿನ ಸೇರ್ಪಡೆಯೆಂದು ನಿಸ್ಸಂದೇಹವಾಗಿ ಹೇಳಬಹುದು[೨೦] ಎಂದು ವಿಶ್ಲೇಷಿಸಿದ್ದಾರೆ.

ಡಾ. ಕಲಬುರ್ಗಿಯವರ ವಾದಕ್ಕೆ ಕಾಕತಾಳೀಯವೆಂಬಂತೆ ಕನ್ನಡದಲ್ಲಿ ವಿಶ್ವಾರಾಧ್ಯರನ್ನು ಕುರಿತು ನಿರ್ದಿಷ್ಟ ಆಧಾರಗಳು ದೊರೆಯುವುದಿಲ್ಲ. ೧೫ನೇ ಶತಮಾನದ ಶಿವಲಿಂಗ ಕವಿಯ ಶಿವಾಧಿಕ್ಯ ಪುರಾಣ ವಿಶ್ವಾರಾಧ್ಯರನ್ನು ಕುರಿತು ಹೇಳಿದರೂ ಉಳಿದ ನಾಲ್ವರು ಆಚಾರ್ಯರನ್ನು ಉಲ್ಲೇಖಿಸುವುದಿಲ್ಲ. ಲಕ್ಕಣ್ಣದಂಡೇಶ ಪಂಚಾಚಾರ್ಯರನ್ನು ತನ್ನ ಕೃತಿಯಲ್ಲಿ ಉಲ್ಲೇಖಿಸಿದ್ದರೂ ಅವರು ಕೇವಲ ಶಿವಗಣರಾಗಿದ್ದಾರೆ.

ಈ ಮೇಲಿನ ಅಂಶಗಳು ಪಂಚಾಚಾರ್ಯರು ವೀರಶೈವಧರ್ಮವನ್ನು ಸ್ಥಾಪಿಸಿದರೆಂದು ವಿಶ್ವಾಸಾರ್ಹ ಮಾಹಿತಿಗಳನ್ನು ಒದಗಿಸುವುದಿಲ್ಲ. ಪಂಚಾಚಾರ್ಯರು ೪ ಯುಗಗಳಲ್ಲೂ ೪ ಅವತಾರ ತಾಳಿ ಐದು ಸ್ಥಾವರ ಶಿವಲಿಂಗಗಳಿಂದ ಉದ್ಭವಿಸಿದರೆಂಬುದು ಕಪೋಲಕಲ್ಪಿತ ಅಥವಾ ಪುರಾಣ ಕಲ್ಪನೆಯ ಭಾವತೀರೇಕವಾಗುತ್ತದೆ. ಏಕೆಂದರೆ ಮನುಷ್ಯ ಎಂಥ ತಪಸ್ವಿಯಾಗಿರಲಿ, ಶಿವಯೋಗಿಯಾಗಿರಲಿ ಅಥವಾ ಸನ್ಯಾಸಿಯಾಗಿರಲಿ ಅವನ ಜನನ ತಾಯಿಗರ್ಭದಿಂದಲೇ ಆಗಬೇಕು. ಮನುಷ್ಯನ ಜನನ ಜಡ ವಸ್ತುಗಳಿಂದಾಗಲಿ ಅಥವಾ ಸ್ಥಾವರಲಿಂಗಗಳಿಂದ ಆಗಲು ಸಾಧ್ಯವಿಲ್ಲ. ಜೊತೆಗೆ ಪಂಚಾಚಾರ್ಯರಲ್ಲಿ ಕೆಲವರು ೧೪೦೦ ವರ್ಷ ಮತ್ತೆ ಕೆಲವರು ೨೦೦ಕ್ಕೂ ಹೆಚ್ಚು ವರ್ಷಗಳ ಕಾಲ ಜೀವಿಸಿದ್ದರೆಂಬುದನ್ನು ನೋಡಿದರೆ ಮತ್ತು ಇವರು ೪ ಯುಗಗಳಲ್ಲಿ ನಾನಾ ಅವತಾರಗಳಲ್ಲಿ ಅದೇ ಶಿವಲಿಂಗಗಳಿಂದ ಅವತರಿಸಿ ಧರ್ಮೋದ್ಧಾರ ಮಾಡಿ ಮತ್ತು ಅವೇ ಶಿವಲಿಂಗಗಳಲ್ಲಿ ಲೀನವಾದರು ಎಂಬುದನ್ನು ಗಮನಿಸಿದರೆ ಇದು ಪುರಾಣ ಕರ್ತೃವಿನ ಭಾವಾತೀರೇಕದ, ಅಪ್ರಜ್ಞಾಪೂರ್ವಕ ಕಲ್ಪನೆ ಎಂದು ಹೇಳಬೇಕಾಗುತ್ತದೆ. ಒಬ್ಬ ವ್ಯಕ್ತಿ ೧೦೦ ರಿಂದ ೧೪೦ ವರ್ಷಗಳ ಕಾಲ ಬದುಕ(ಇದು ಅತೀ ಹೆಚ್ಚೆಂದರೆ)ಬಹುದು. ರೇವಣಸಿದ್ಧರು ಬಹುಶಃ ೧೪೦ ವರ್ಷಗಳ ಕಾಲ ಬದುಕಿದ್ದಿರಬಹುದು. ಇದನ್ನೇ ರೇವಣಸಿದ್ದನ ಚರಿತ್ರೆ ಬರೆದ ಕವಿಗಳು ೧೪೦೦ ವರ್ಷಗಳ ಕಾಲ ರೇವಣಸಿದ್ದರು ಬದುಕಿದ್ದರೆಂದು ಕಲ್ಪನೆ ಮಾಡಿಕೊಂಡಂತಿದೆ. ಹಾಗೆ ೪ ಯುಗಗಳಲ್ಲಿ ಪಂಚಾಚಾರ್ಯರು ಉದ್ಭವಿಸಿ ಧರ್ಮೋಪದೇಶ ಮಾಡಿದ್ದರೆ ಇಡೀ ವಿಶ್ವವೇ ವೀರಶೈವ ಧರ್ಮಮಯವಾಗಬೇಕಿತ್ತು. ಆದರೆ ಇಡೀ ಭಾರತದಲ್ಲಿ ವೀರಶೈವರ ಸಂಖ್ಯೆ ಕೇವಲ ೫ ಕೋಟಿ ಇರಬಹುದು. ಆದ್ದರಿಂದ ಪಂಚಾಚಾರ್ಯರು ೪ ಯುಗಗಳಲ್ಲಿ ಅವತರಿಸಿ ಧರ್ಮೋಪದೇಶ ಮಾಡಿದ್ದಾರೆಂಬುದು ಕೇವಲ ಪುರಾಣ ಕಲ್ಪನೆಯಷ್ಟೇ.

ಆದರೆ ಪಂಚಾಚಾರ್ಯದಿಂದಲೂ ವೀರಶೈವ ಪೋಷಿಸಲ್ಪಟ್ಟಿತು ಎಂಬುದರಲ್ಲಿ ಅನುಮಾನವಿಲ್ಲ. ಇವರಿಂದ ವೀರಶೈವ ಪ್ರೋತ್ಸಾಹಪಡೆಯದಿದ್ದರೆ ಅಥವಾ ಪ್ರಚಾರವಾಗದಿದ್ದರೆ ಕನ್ನಡದ ವೀರಶೈವ ಕವಿಗಳ ಕೃತಿಗಳಲ್ಲಿ ಇವರ ಹೆಸರುಗಳು ಪ್ರಸ್ತಾಪಗೊಳ್ಳುತ್ತಿರಲಿಲ್ಲ. ಪ್ರೊ.ಎಸ್.ಎಸ್.ಬಸವನಾಳರು ''ಪಂಚಾಚಾರ್ಯರೆಲ್ಲರೂ ಕ್ರಿ.ಶ.೧೨ನೇ ಶತಮಾನದಿಂದ ಈಚೀನವರೇ ಎನ್ನಲು ಬೇರೆ ಆಧಾರಗಳು ದೊರೆಯುತ್ತವೆ. ಇವರು ವೀರಶೈವರಲ್ಲದವರಿಗೆ ವೀರಶೈವವನ್ನು ಬೋಧಿಸಿರಬೇಕು. ಕಾಶಿ, ಶ್ರೀಶೈಲ, ಕೇದಾರ ಈ ಪ್ರಸಿದ್ಧ ಶೈವ ಯಾತ್ರಾ ಸ್ಥಳಗಳಲ್ಲಿ ನಿಂತುಕೊಂಡು ಈ ಕಾರ್ಯವನ್ನು ಮೊದಲು ಮಾಡುತ್ತಿರಬೇಕು. ಇವರ ಶಿಷ್ಯಕೋಟಿ ಬೆಳೆಯುತ್ತ ಹೋದಂತೆ ಇವರ ಹೆಸರಿನಿಂದ ಪೀಠಗಳು ಹಿಂದಿನಿಂದ ಸ್ಥಾಪಿತವಾಗುತ್ತಾ ಹೋಗಿರಬೇಕು. ಈ ಎಲ್ಲಾ ಆಚಾರ್ಯರ ಪೀಠಗಳಿಗೂ ಸ್ಥಾವರಲಿಂಗಗಳ ಸಂಬಂಧ ಈಗಲೂ ಇರುವುದರಿಂದ ಇವರು ಮೊದಲು ಶೈವರಿದ್ದು ಹಿಂದಣಿಂದ ವೀರಶೈವರಾಗಿರಬೇಕು.[೧೩೧] ಆದರೆ ಈ ಆಚಾರ್ಯರು ಒಬ್ಬೊಬ್ಬರು ಒಂದೊಂದು ಸ್ಥಾವರಲಿಂಗದಿಂದ ಜನಿಸಿದರೆಂಬ ಕಲ್ಪನೆಯೇ ಇವರನ್ನು ಇತಿಹಾಸದ ಪರಿವಿಡಿಯಿಂದ ಬಹಿಷ್ಕರಿಸುತ್ತದೆ.[೧೩೨] ವೀರಶೈವ ಮತವನ್ನು ಸಂವರ್ಧಿಸುವುದಕ್ಕೆ ಪಂಚಾಚಾರ್ಯರ ಸಹಾಯ ಅಪಾರವಾಗಿದ್ದುದರಿಂದಲೇ ಈ ಪೀಠಗಳ ಆರ್ಯಪುರುಷರ ಬಗೆಗೆ ಅವತಾರದ ಕಲ್ಪನೆಯು ಹಿಂದಣಿಂದ ಬರೆದವಾಗಿರಬೇಕೆಂದು ಊಹಿಸಬಹುದು[೧೩೩] ಎಂದು ಬಸವನಾಳರು ಅಭಿಪ್ರಾಯಪಡುತ್ತಾರೆ.

ಪ್ರೊ.ಬಸವನಾಳ ಅಭಿಪ್ರಾಯವನ್ನು ಒಪ್ಪಬಹುದಾಗಿದೆ. ಇವರು ಹೇಳುವಂತೆ ಪಂಚಾಚಾರ್ಯರು ಬಸವಣ್ಣನವರ ನಂತರದವರು ಬಹುಶಃ ಇವರು ತಮ್ಮ ಸಿದ್ಧಾಂತದ ಜೊತೆಗೆ ತಮ್ಮ ಅಸ್ಥಿತ್ವದ ಉಳಿವಿಗೆ ಬಸವ ಸಿದ್ಧಾಂತವನ್ನು ಪ್ರಚಾರ ಮಾಡಿರಬೇಕು. ಆದ್ದರಿಂದ ವೀರಶೈವ ಕವಿಗಳು ತಮ್ಮ ಕೃತಿಗಳಲ್ಲಿ ಇವರನ್ನು ಸ್ತುತಿಸಿದಂತೆ ತೋರುತ್ತದೆ. ಡಾ.ಎಸ್.ಸಿ.ನಂದಿಮಠ, ಡಾ.ಎಂ.ಚಿದಾನಂದಮೂರ್ತಿ, ಡಾ.ಎಂ.ಎಂ.ಕಲಬುರ್ಗಿ, ಪ್ರೊ.ಎಸ್.ಎಸ್.ಬಸವನಾಳರು ಮುಂತಾದವರ ಒಟ್ಟು ಅಭಿಪ್ರಾಯದ ಹಿನ್ನೆಲೆಯಲ್ಲಿ ಹೇಳುವುದಾದರೆ ಪಂಚಾಚಾರ್ಯರು (ಚತುರಾಚಾರ್ಯರು) ಬಸವನ ಸಮಕಾಲೀನರು. ಮೊದಲು ಶೈವರಾಗಿದ್ದು ತಮ್ಮ ಸಿದ್ಧಾಂತ ಮತ್ತು ಅಸ್ತಿತ್ವದ ಉಳುವಿಗಾಗಿ ನಂತರದ ಕಾಲಘಟ್ಟದಲ್ಲಿ ವೀರಶೈವರಾದರೆಂದು ಹೇಳಬಹುದಾಗಿದೆ.

ವೀರಶೈವದ ಪ್ರಾಚೀನತೆಯನ್ನು ಚಾರಿತ್ರಿಕವಾಗಿ ಹೇಳುವುದಾದರೆ ಕ್ರಿ.ಶ.೯೭೮ರ ಹೂಲಿ ಶಾಸನದಲ್ಲಿ ''....ಅಷ್ಟಾವರಣ ಸಂಪನ್ನರುಂ ರುಗ್ಯಜುಃ ಸಾಮಥರ್ವಣ ಸಮಸ್ತ ವೇದವೇದಾಂಗಾನೇಕ ಶಾಸ್ತ್ರಪ್ರಣರುಂ .....''[೧೩೪] ಎಂದು ವೀರಶೈವ ಧರ್ಮ ಸಿದ್ಧಾಂತದಲ್ಲಿ ಒಂದಾದ ಅಷ್ಟಾವರಣ ಪದವನ್ನು ಉಲ್ಲೇಖಿಸಿದೆ. ಅಂದರೆ ೧೦ನೇ ಶತಮಾನದ ವೇಳೆಗೆ ವೀರಶೈವ ಅಸ್ಥಿತ್ವ ಪಡೆಯುತ್ತಿತ್ತೆ? ಎಂಬ ಪ್ರಶ್ನೆ ಮೂಡುತ್ತದೆ.

ಬಹುಶಃ ಮೂಲ ಶೈವರು ಅಷ್ಟಾವರಣವನ್ನು ಅನುಸರಿಸುತ್ತಿದ್ದಿರಬಹುದಾಗಿದೆ. ಈ ಶಾಸನದಲ್ಲಿ ವೀರಶೈವ ಪದಬಳಕೆಯಾಗಿಲ್ಲದ ಕಾರಣ ೧೧ನೇ ಶತಮಾನದ ವೇಳೆಗೆ ವೀರಶೈವ ಅಸ್ಥಿತ್ವ ಪಡೆದಿರಲಾರದು. ವಡ್ಡಾರಾಧನೆ ಮತ್ತು ಜಿನಸೇನನ ಮಹಾಪುರಾಣಗಳಲ್ಲಿ ಲಿಂಗಧಾರಿಗಳ ಉಲ್ಲೇಖವಿದೆಂದು ಟಿ.ಎನ್.ಮಲ್ಲಪ್ಪ ಹೇಳುತ್ತಾರೆ. ಡಾ.ಭಂಡಾರ್ಕರ್‌ರವರು ಪಾಶುಪತರು ಲಿಂಗಧಾರಿಗಳೆಂದು ಹೇಳಿರುವುದರಿಂದ ವಡ್ಡಾರಾಧನೆ ಮತ್ತು ಮಹಾಪುರಾಣಕೃತಿಗಳಲ್ಲಿ ಬರುವ ಲಿಂಗಧಾರಿಗಳು ಪಾಶುಪತದಿರಬಹುದು.

ವೀರಶೈವ ಪದ ಮೊದಲು ಕಾಣಿಸಿಕೊಳ್ಳುವುದು ಕ್ರಿ.ಶ.೧೨೬೧ರ ಮಲ್ಕಾಪುರ ಶಾಸನದಲ್ಲಿ. ಈ ಶಾಸನದಲ್ಲಿ ಗೋಳಕಿಮಠದ ವಿಶ್ವೇಶ್ವರ ದೇಶಿಕರನ್ನು 'ಮಹೀಸುರ' 'ವೀರಶೈವಾಚಾರ್ಯ ಶತ್ರೈರ್ವೃತ' ಎದು ವರ್ಣಿಸಲಾಗಿದೆ. ಈ ಶಾಸನದ ವಿಷಯವಾಗಿ ದಿ.ಕಪಟರಾಳ ಕೃಷ್ಣರಾಯರು 'ಶುದ್ಧಶೈವ ಸಂಪ್ರದಾಯದ ಶಿವಯೋಗಿಗಳಿಗೆ ವೀರಶೈವಾಚಾರ್ಯರೆಂದು ಹೇಳಲಾಗಿದೆ' ಎಂದು ಹೇಳುತ್ತಾರೆ.[೧೩೫] ವೀರಶೈವ ಪದ ಮೊದಲು ಶಾಸನದಲ್ಲಿ ದೊರೆಯುವುದು ೧೨ನೇ ಶತಮಾನದ ಶರಣ ಚಳುವಳಿಯ ನಂತರ ಎಂದು ನಿರ್ದಿಷ್ಟವಾಗಿ ಹೇಳಬಹುದು. ಶಾಸನಗಳಲ್ಲಿ ೧೨ನೇ ಶತಮಾನಕ್ಕಿಂತ ಪೂರ್ವದಲ್ಲಿ ವೀರಶೈವ ಪದ ಕಂಡುಬರುವುದಿಲ್ಲ. ಆದರೆ ವಚನ ಸಾಹಿತ್ಯದಲ್ಲಿ ವೀರಶೈವ-ಲಿಂಗಾಯತ (ಲಿಂಗವಂತ) ಪದಗಳು ಕಂಡುಬರುತ್ತವೆ.

ಬಸವಣ್ಣ

"ಸದ್ಗುರು ಪಾಣಿಜಾತಸ್ಯ ಸ್ಥಿತೇ ಸದ್ಭಕ್ತಸಂಗಿನಾಂ
ಲೀಯತೆ ಚ ಮಹಾಲಿಂಗೀ ವೀರಶೈವೋತ್ತಮೋತ್ತಮಂ"[೧೩೬]

"ಎನ್ನ ಶೈವಮಾರ್ಗಗಳನತಿಗಳೆದು ನಿಜ
ವೀರಶೈವಾಚಾರವನರುಹಿತೋರಿ"[೧೩೭]

"ಲಿಂಗವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗ ಕೆಡುವುದು"[೧೩೮]

"ಲಿಂಗವಂತನು ಲಿಂಗವಂತಂಗೆ ಬುದ್ಧಿಯ ಹೇಳುವಲ್ಲಿ"[೧೩೯]

"ಲಿಂಗವಂತರು ತಾನು ಅಂಜಲೇತಕೆ?"[೧೪೦]

ಅಕ್ಕಮಹಾದೇವಿ

"ಬಸವ ಮೊದಲಾದ ಸಮಸ್ತ ಗಣಂಗಳೆಲ್ಲಾ
ಪ್ರಮಥ ನಿರಾಭಾರಿ ವೀರಶೈವ ಸನ್ಮಾರ್ಗವಿಡಿದು ವಿಚಾರಿಸಿದರು ನೋಡಾ"[೧೪೧]
ಲಿಂಗವಂತಂಗೆ ಲಿಂಗವಾರ್ತೆಯ ನುಡಿವುದೆ ಭಂಗ, ಹಂಗುನೋಡಾ!"[೧೪೨]

ಚೆನ್ನಬಸವಣ್ಣ

"ಸಕಲಪ್ರಾಣಿಗಳಲ್ಲಿ ವೀರಶೈವನೆ ಸರ್ವೋತ್ತಮನಯ್ಯಾ"[೧೪೩]

ಅಮುಗಿರಾಯಮ್ಮ

'ನಿತ್ಯಶಿವಾರ್ಚನೆ ತ್ರಿಕಾಲವಿಲ್ಲ; ನಿತ್ಯಪಾದೋದಕ ಪ್ರಸಾದ ಸೇವನೆಯಿಲ್ಲ; ಇದೇತರ 'ವೀರಶೈವರ ವ್ರತ.''[೧೪೪]

ಚನ್ನಬಸವಣ್ಣ "......ಲಿಂಗಾಯಿತ ಲಿಂಗಸ್ವಾಯತ ಈ ಏಳನು ಕಾಯಕ್ಕುಪದೇಶದ ಮಾಡುವುದು.''[೧೪೫]

ಹೀಗೆ ಅನೇಕ ಶರಣರ ವಚನಗಳಲ್ಲಿ ವೀರಶೈವ ಲಿಂಗಾಯತ ಪದಗಳು ಬಳಕೆಯಾಗಿವೆ. ಈ ಶಿವಶರಣರ ಪೂರ್ವದಲ್ಲಿ ಬರುವ ಕೊಂಡಗುಳಿ ಕೇಶಿರಾಜನ 'ಶೀಲಮಹತ್ವದ ಕಂದ' ಎಂಬ ಕೃತಿಯಲ್ಲಿ ವೀರಶೈವ ಲಿಂಗಾಯತ ಪದ ಬಳಕೆಯಾಗಿದೆ ಎಂದು ಡಾ.ಎಂ.ಚಿದಾನಂದಮೂರ್ತಿಯವರು ಹೇಳಿದರೆ, ಡಾ.ಎಂ.ಎಂ.ಕಲಬುರ್ಗಿ ಮುಂತಾದ ವಿದ್ವಾಂಸರು ಈ ಕೃತಿಯೇ ಪ್ರಕ್ಷಿಪ್ತವೆಂದು ಹೇಳುತ್ತಾರೆ. ಅಲ್ಲದೆ ಇವರು ಡಾ.ಚಿದಾನಂದಮೂರ್ತಿಯವರು ಬಸವಾದಿ ಶರಣರ ವಚನಗಳಲ್ಲಿ 'ವೀರಶೈವ' ಪದ ಬಳಕೆಯಾಗಿದೆ ಎಂಬ ಹೇಳಿಕೆಯನ್ನು ಅಲ್ಲಗಳೆಯುತ್ತಾರೆ. ಡಾ. ಕಲಬುರ್ಗಿ ಮೊದಲಾದ ವಿದ್ವಾಂಸರು ಬಸವಾದಿ ಶರಣರ ಕೃತಿಗಳಲ್ಲಿ ಕೇವಲ 'ಲಿಂಗಾಯತ' ಪದ ಮಾತ್ರ ಬಳಕೆಯಾಗಿದೆಯೆಂದೂ 'ವೀರಶೈವ' ಪದ ಬಳಕೆಯಾದ ವಚನಗಳು ಪ್ರಕ್ಷಿಪ್ತವೆಂದೂ ಷಟ್ಸ್ಥಲದ ವಚನಕಟ್ಟುಗಳಲ್ಲಿ ಲಿಂಗಾಯತ ಪದ ಮಾತ್ರ ಬಳಕೆಯಾಗಿದೆ ಎಂದೂ ಹೇಳುತ್ತಾರೆ. ಅವರು 'ವೀರಶೈವ' ಎಂಬ ಪದವು ಆಂಧ್ರದ ಆರಾಧ್ಯರ ಪ್ರಭಾವದಿಂದ ೧೪ನೇ ಶತಮಾನದಲ್ಲಿ ಕರ್ನಾಟಕಕ್ಕೆ ಪ್ರವೇಶಪಡೆಯುತ್ತದೆ[೧೪೬] ಎಂದಿದ್ದಾರೆ. ೧೪ನೇ ಶತಮಾನಕ್ಕಿಂತ ಮುಂಚಿನ ೨೦೦ ವರ್ಷಗಳ ಅವಧಿಯಲ್ಲಿ ಕರ್ನಾಟಕದಲ್ಲಿ ವೀರಶೈವ ಕವಿಗಳಿಂದ ರಚಿತವಾದ ಕೃತಿಗಳಲ್ಲಿ ಈ ಪದ ಬಳಕೆಯಾಗಿಲ್ಲದಿರುವುದನ್ನು ಗಮನಿಸಿದರೆ ಕಲಬುರ್ಗಿಯವರ ಈ ವಾದ ಸರಿ ಎನಿಸುತ್ತದೆ.

ಹಂಪಿ ಪರಿಸರದ ಕನ್ನಡ ಸಾಹಿತ್ಯದಲ್ಲಿ ವೀರಶೈವ ಪದ ಕ್ರಿ.ಶ.೧೪೦೦ರ ನಂತರ ಬಳಕೆಯಾಗಿರುವುದನ್ನು ಕಾಣುತ್ತೇವೆ. ಹರಿಹರ ಕವಿ ತನ್ನ ರಗಳೆಗಳಲ್ಲಿ ವೀರಶೈವದ ಬದಲು 'ಲಿಂಗವಂತ' ಎಂಬ ಪದ ಬಳಸಿದ್ದಾನೆ. ಬಸವರಾಜದೇವರ ರಗಳೆಯಲ್ಲಿ ಬಸವಣ್ಣ ತನ್ನ ಮಗುವನ್ನು(ಸಿದ್ದರಸ) "ಮೌಳಿಕಾರಂ ಹೊಂಗಡಗದ ಲಿಂಗದಂತಂ" ಎಂದು ಕರೆದಿದ್ದಾನೆ. ಕವಿ ಹರಿಹರ ತನ್ನ ಇತರೆ ರಗಳೆಗಳಲ್ಲಿ ಲಿಂಗವಂತ ಪದಕ್ಕೆ ಸಮಾನಾರ್ಥಕವೆಂಬಂತೆ 'ವೀರಕುಲ'[೧೪೮] 'ಶಿವಲಿಂಗವ್ರತ'[೧೪೯] 'ಶರಣಕುಲ'[೧೫೦] 'ಶಿವಭಕ್ತಕುಲ'[೧೫೧], 'ಲಿಂಗಕುಳ' ಶಿವಲಿಂಗಕುಳ[೧೫೨] 'ಶಿವಲಿಂಗವಂತ' 'ಘನಲಿಂಗವಂತ'[೧೫೩], 'ಶಿವಭಕ್ತ ಸಂತಾನ'[೧೫೪], 'ಹರಭಕ್ತಕುಲ'[೧೫೫] ಎಂಬಿತ್ಯಾದಿಯಾಗಿ ಉಲ್ಲೇಖಿಸಿದ್ದಾನೆ. ರಾಘವಾಂಕ ಕವಿ ತನ್ನ ವೀರೇಶ ಚರಿತೆಯಲ್ಲಿ ವೀರಭದ್ರವನ್ನು 'ವೀರಕುಲಾಧೀಶ್ವರ'[೧೫೬] ಎಂದು ಕರೆದಿದ್ದಾನೆ. ವೀರ ಕುಲವೆಂದರೆ(ಇಲ್ಲಿ ವೀರಶೈವವೆಂದು ಅರ್ಥೈಯಿಸಿಕೊಳ್ಳಬಹುದಾಗಿದೆ) ಲಿಂಗಾಯತ ಎಂದು ಅರ್ಥೈಸಿಕೊಳ್ಳಬೇಕು. ಏಕೆಂದರೆ ರಾಘವಾಂಕ

ಇದೇ ಕಾವ್ಯದಲ್ಲಿ ವೀರಭದ್ರವನ್ನು 'ನಡುನೆತ್ತಿಯ ಲಿಂಗಂ'[೧೫೭] ಎಂದು ಕರೆದಿದ್ದಾರೆ. ಅಂದರೆ ವೀರಭದ್ರನು ನಡುನೆತ್ತಿಯಲ್ಲಿ (ತಲೆಯಲ್ಲಿ) ಲಿಂಗಧರಿಸಿದ ಲಿಂಗವಂತನಾಗಿದ್ದಾನೆಂದು ಕವಿ ಹೇಳುತ್ತಾನೆ.

೧೫ನೇ ಶತಮಾನದಲ್ಲಿ ಹಂಪಿಯಲ್ಲಿ ಬರುವ ಚಾಮರಸ ಕವಿ ತನ್ನ ಪ್ರಭುಲಿಂಗಲೀಲೆಯಲ್ಲಿ ಚನ್ನಬಸವಣ್ಣನನ್ನು ಕುರಿತು ಹೇಳುವಾಗ "ವೀರಶೈವಾ'ಚಾರ ಮಾರ್ಗವಿಚಾರದಭ್ಯಂತರದೊಳೀ ಪರಿ"[೧೫೮] ಎಂದಿದ್ದಾನೆ. ಅಲ್ಲದೆ ಅಲ್ಲಮನನ್ನು ಕುರಿತು ಹೇಳುವಾಗ 'ಸಂಪ್ರೀತನದರಜೊಳು ವೀರಶೈವದಲತಿ ಮಹಾಪ್ರೀತ"[೧೫೯] ಎಂದು ಹೇಳಿದ್ದಾನೆ. ಹೀಗೆ ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ 'ವೀರಶೈವ' ಪದವನ್ನು ಹತ್ತಾರು ಕಡೆ ಬಳಸಿದ್ದಾನೆ. ಮಹಾಲಿಂಗದೇವ ತನ್ನ 'ಏಕೋತ್ತರ ಶತಸ್ಥಲ' ಕೃತಿಯಲ್ಲಿ 'ಪರಮ ವೀರಶೈವಾಗಮಾಚಾರ್ಯರುಂ'[೧೬೦] ಎಂದೂ, ಕಲ್ಲುಮಠದ ಪ್ರಭುದೇವನು 'ವೀರಶೈವ ಷಟ್ ಸ್ಥಲ ಜ್ಞಾನಾಚಾರ್ಯರಪ್ಪ'[೧೬೧] 'ವೀರಶೈವಾಮೃತಾರ್ಣವ'[೧೬೨] ಎಂದು ಮುಂತಾಗಿ ವೀರಶೈವ ಪದಬಳಸಿದ್ದಾನೆ. ಲಕ್ಕಣ್ಣ ದಂಡೇಶನು ತನ್ನ 'ಶಿವತತ್ತ್ವ ಚಿಂತಾಮಣಿ' ಕೃತಿಯಲ್ಲಿ 'ನಿಂದವರು ಲಿಂಗವಂತರು ಮೆಚ್ಚಿ'[೧೬೩] 'ವೀರಶೈವಾಚಾರದೊಳಗೆ'[೧೬೪], 'ವೀರಶೈವೋನ್ನತದ ದಶಗಣಂಗಳ'[೧೬೫] 'ವೀರಶೈವಾಚಾರಿ ಗಂದಿಗರ'[೧೬೬], 'ವೀರಶೈವವ್ರತಾಚಾರಪಥ'[೧೬೭] ಎಂದೂ, ಇದಲ್ಲದೆ 'ಪಂಪಾಪುರ ದೊಳಿರ್ಪ ಶಿವಯುತದ'[೧೬೮], 'ಶಿವಧರ್ಮ ಮಾರ್ಗದೊಳು'[೧೬೯], 'ಶಿವಮತದೊಳಿಹುದೆಂಬವನ'[೧೭೦] ಎಂದೂ ಉಲ್ಲೇಖಿಸಿದ್ದಾನೆ. ಲಕ್ಕಣ್ಣದಂಡೇಶನು ಶಿವಯುತ, ಶಿವಧರ್ಮಮಾರ್ಗ ಹಾಗೂ ಶಿವಮತ ಎಂಬ ಪದ್ಗಳನ್ನು ವೀರಶೈವ ಪದಕ್ಕೆ ಪರ್ಯಾಯ ಪದಗಳಾಗಿ ಬಳಸಿದಂತೆ ತೋರುತ್ತದೆ. ಹಾಗೆಯೇ ಮೊಗ್ಗೆಯ ಮಾಯಿದೇವ ತನ್ನ 'ಏಕೋತ್ತರ ಶತಸ್ಥಲ' ಎಂಬ ಕೃತಿಯಲ್ಲಿ 'ವೀರಶೈವ ಸಿದ್ಧಾಂತಮಂ'[೧೭೧] ವೀರಶೈವಾಚಾರ ಷಟ್ ಸ್ಥಲಂಗಳ'[೧೭೨] ವೀರಶೈವಾಚಾರ ನಿರತ'[೧೭೩] 'ಶರಣಕುಲ'[೧೭೪] ಎಂಬಿತ್ಯಾದಿಯಾಗಿ ಹತ್ತಾರು ಕಡೆ ಕವಿ ವೀರಶೈವ, ಶರಣಕುಲವೆಂದು ಉಲ್ಲೇಖಿಸುತ್ತಾನೆ. 'ಶರಣಕುಲ'ವೆಂಬ ಪದವನ್ನು ಇಲ್ಲಿ ಕವಿ ಲಿಂಗವಂತ ಎಂಬರ್ಥದಲ್ಲಿ ಬಳಸಿರುವಂತೆ ತೋರುತ್ತದೆ. ಕರಸ್ಥಲದನಾಗಿದೇವ ತನ್ನ ಸ್ವರ ವಚನಗಳಲ್ಲಿ 'ವೀರಶೈವಾಚಾರಮಾರ್ಗ'[೧೭೪ಅ] 'ಲಿಂಗಾಯತ ಲಿಂಗಸ್ವಾಯತ'[೧೭೪ಬ] ಎಂದು ಕರೆದಿದ್ದಾನೆ[(ಅ.ಟಿ.೧೭೪ಬ) ಎಫ್.ಟಿ.ಹಳ್ಳಿಕೇರಿ(ಸಂ) ಕರಸ್ಥಲ ಸಾಹಿತ್ಯ, ಪು.೧೬೮)].

ಹೀಗೆ ಕ್ರಿ.ಶ.೧೨೦೦ ರಿಂದ ಕ್ರಿ.ಶ.೧೫೦೦ರವರೆಗಿನ ಕವಿಗಳು 'ಲಿಂಗವಂತ' 'ಶರಣಕುಲ' 'ಶರಣಸಂತಾನ' ಮುಂತಾದ ಪದಗಳನಷ್ಟೇ ಬಳಸಿದ್ದಾರೆ. ವೀರಶೈವಪದ ಬಳಕೆಯಾಗಿಲ್ಲ. ಕ್ರಿ.ಶ.೧೫೦೦ರ ನಂತರ ಬರುವ ಕವಿಗಳು 'ವೀರಶೈವ' ಲಿಂಗವಂತ, ಶರಣಕುಲ, ಶಿವಯುತ, ಶಿವಮತ, 'ಶಿವಧರ್ಮಮಾರ್ಗ' ಇನ್ನು ಮುಂತಾಗಿ ತಮ್ಮ ಕಾವ್ಯಗಳಲ್ಲಿ ಬಳಸಿದ್ದಾರೆ. ೧೨ನೇ ಶತಮಾನದ ಶರಣರು ವೀರಶೈವ ಪದವನ್ನು ತಮ್ಮ ವಚನಗಳಲ್ಲಿ ಬಳಸಿದ್ದಾರೆಂದು ಅವರ ವಚನಗಳ ಹಿನ್ನಲೆಯಲ್ಲಿ ಅರ್ಥೈಸಲು ಹೊರಟರೆ ಅದು

ಪ್ರಕ್ಷಿಪ್ತವೆಂದು ಈಗಾಗಲೇ ಹಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. 'ಲಿಂಗವಂತ', 'ಲಿಂಗಾಯತ' ಪದಗಳು ಮಾತ್ರ ೧೨ನೇ ಶತಮಾನದ ಬಸವಾದಿ ಶರಣರ ವಚನಗಳಲ್ಲಿ ಮೊದಲು ಬಳಕೆಯಾಗಿವೆ. ಆದರೆ 'ವೀರಶೈವ' ಪದ ಯಾವಾಗ ಬಳಕೆಗೆ ಬಂದಿತೋ ತಿಳಿಯದು.

'ವೀರಶೈವ-ಲಿಂಗಾಯತ' ಎಂಬ ಪದಗಳು ಬೇರೆ-ಬೇರೆಯೋ? ಅಥವಾ ಒಂದೆಯೋ? ಎಂಬುದರ ಬಗ್ಗೆ ಹಲವಾರು ವರ್ಷಗಳಿಂದ ಚರ್ಚೆ ನಡೆಯುತ್ತಲೇ ಇದೆ. ಡಾ.ಎಂ.ಚಿದಾನಂದಮೂರ್ತಿ ಮೊದಲಾದ ವಿದ್ವಾಂಸರು 'ವೀರಶೈವ-ಲಿಂಗಾಯತ' ಎರಡೂ ಒಂದೇ ಎಂದು ವಾದಿಸಿದರೆ. ಡಾ.ಎಂ.ಎಂ.ಕಲಬುರ್ಗಿ ಮೊದಲಾದ ವಿದ್ವಾಂಸರು ಅವೆರಡೂ ಭಿನ್ನ-ಭಿನ್ನ ಎಂದು ವಾದಿಸುತ್ತಾರೆ. ಈ ಎರಡೂ ಬಣದ ಸಂಶೋಧಕ ವಿದ್ವಾಂಸರು ತಮ್ಮದೇ ಆದ ಆಧಾರ ಮತ್ತು ಕಾರಣಗಳನ್ನು ನೀಡುತ್ತಾರೆ.

## ಲಿಂಗಾಯತ ಪದದ ನಿಷ್ಪತ್ತಿ

'ಲಿಂಗಾಯತ' ಪದ ಯಾವಾಗಿನಿಂದ ಬಳಕೆಗೆ ಬಂದಿತೆಂದು ತಿಳಿಯಲು ನಿರ್ದಿಷ್ಟ ಆಧಾರಗಳಿಲ್ಲ. ಆದರೆ 'ಲಿಂಗವಂತ' ಎಂಬ ಪದ ಬಸವಾದಿ ಶರಣರ ವಚನಗಳಲ್ಲಿ ಬಳಕೆಯಾಗಿರುವುದು ಕಂಡುಬರುತ್ತದೆ. ಧನವನ್ನು ಉಳ್ಳವನು ಧನವಂತ. ಹಣವನ್ನು ಉಳ್ಳವನು ಹಣವಂತ. ಹಾಗೆಯೇ ಲಿಂಗವನ್ನು ಉಳ್ಳವನು ಎಂದರೆ ಅದನ್ನು ಮೈಮೇಲೆ ಧರಿಸಿದವನು ಲಿಂಗವಂತ. ಲಿಂಗವಂತ ಶಬ್ದದ ತದ್ಭವ ಅಥವಾ ಇನ್ನೊಂದು ರೂಪ ಲಿಂಗಾಯತ. ಲಿಂಗಾಯತವನ್ನು ಲಿಂಗ-ಆಯತ ಎಂದು ಬಿಡಿಸಬಹುದು. 'ಲಿಂಗ' ಎನ್ನುವುದು ಇಲ್ಲಿ ದೇಹದ ಮೇಲೆ ಧರಿಸುವ ಇಷ್ಟಲಿಂಗವನ್ನು ಹೇಳುತ್ತದೆ. "ಆಯತ" ಸಂಸ್ಕೃತ ಪದ. ಅದರ ಅರ್ಥ 'ವಿಸ್ತಾರ' ದೊಡ್ಡದು[೧೭೫] ಎಂದು ಇದರ ಜೊತೆಗೆ ಉಚಿತ ಕ್ರಮ, ಯೋಗ್ಯರೀತಿ, ಸಿದ್ಧ, ಸನ್ನದ್ಧ, ಉಚಿತವಾದ ವಿಶಾಲವಾದ[೧೭೬] ಎಂದು ಅರ್ಥೈಯಿಸಬಹುದಾಗಿದೆ. 'ಲಿಂಗಾಯತ' ಎನ್ನುವುದು ಲಿಂಗವನ್ನು ಧರಿಸಿ ವಿಸ್ತಾರಗೊಂಡವರನ್ನು, ಎಂದರೆ ಧನ್ಯರಾದವರನ್ನು, ದೊಡ್ಡವರಾದವರನ್ನು ಸೂಚಿಸುತ್ತದೆ.[೧೭೭]

ಡಾ.ಎಂ.ಚಿದಾನಂದಮೂರ್ತಿಯವರು 'ಲಿಂಗಾಯತ'ಪದವು ಬಸವಪೂರ್ವದ ಕೇಶಿರಾಜನ ಕೃತಿಯಲ್ಲಿ ಬಳಕೆಯಾಗಿದೆ.(ಲಿಂಗಾಯತ) ಇದು ಗುರುವಿನಿಂದ ಶಿಷ್ಯನಿಗೆ ನಡೆಯುವ ದೀಕ್ಷಾ ಸಂಸ್ಕಾರ ಎಂಬರ್ಥದಲ್ಲಿ ಚನ್ನಬಸವಣ್ಣನ ವಚನದಲ್ಲಿ ಬಳಕೆಯಾಗಿದೆ(III ವ. ೯೯೫). ಇಲ್ಲಿ ಬರುವ ಲಿಂಗಾಯತವು ಗುರುವಿನಿಂದ ಲಿಂಗದ ಅನುಗ್ರಹ ಪಡೆಯುವುದನ್ನು, ಲಿಂಗಸ್ವಾಯತವು ಹಾಗೆ ದತ್ತವಾದ ಲಿಂಗವನ್ನು ಶಿಷ್ಯನು ತನ್ನ ದೇಹದ ಹೊರ, ಒಳಭಾಗವಾಗಿ(ಅಂತರಂಗ) ಮಾಡಿಕೊಳ್ಳುವುದನ್ನುಹೇಳುತ್ತದೆ[೧೭೮] ಎಂದು ಹೇಳಿದ್ದಾರೆ. ಕೇಶಿರಾಜನ ಕೃತಿಯಲ್ಲಿ ಬಳಕೆಯಾಗಿರುವ 'ಲಿಂಗಾಯತ' ಅಥವಾ ವೀರಶೈವ ಪದವು ಪ್ರಕ್ಷಿಪ್ತವಾಗಿದೆ ಎಂದು ಡಾ.ಎಂ.ಎಂ.ಕಲಬುರ್ಗಿಯವರ ಮಾತು ಗಮನಾರ್ಹವಾಗಿದೆ. ಏಕೆಂದರೆ ಬಸವಪೂರ್ವದಲ್ಲಿ ಅಂಗದ ಮೇಲೆ ಲಿಂಗಧರಿಸುವ ಪದ್ಧತಿ ಕೇವಲ ಪಾಶುಪತದ ಕಾಳಾಮುಖರಿಗೆ ಮಾತ್ರ ಸೀಮಿತವಾಗಿತ್ತು.

ಅದು ಸಾರ್ವತ್ರಿಕವಾಗಿರಲಿಲ್ಲ. ಹಾಗೆ ಸಾರ್ವತ್ರೀಕರಣಗೊಂಡಿದ್ದರೆ ಯಾವುದಾದರೂ ಶಾಸನದಲ್ಲಿ 'ಲಿಂಗಾಯತ' ಅಥವಾ 'ವೀರಶೈವ' ಪದ ಬಳಕೆಯಾಗುತಿತ್ತು. ಲಿಂಗದೀಕ್ಷೆ ಸಾರ್ವತ್ರೀಕರಣಗೊಂಡಿದ್ದು ಬಸವಣ್ಣನ ಕಾಲದಲ್ಲಿ ಎಂಬುದು ಮಹತ್ವದ ಅಂಶವಾಗಿದೆ.

'ಲಿಂಗಾಯತ' ಪದವನ್ನು ಹೀಗೂ ಅರ್ಥೈಸಬಹುದು. ಲಿಂಗದೀಕ್ಷೆಯನ್ನು ಹೊಸದಾಗಿ ತೆಗೆದುಕೊಂಡವರು. ಸ್ವ-ಇಚ್ಛೆಯಿಂದ ಲಿಂಗದೀಕ್ಷೆ ಸ್ವೀಕರಿಸಿದವರು(ಪಡೆದವರು). ತಮ್ಮ ಮೂಲ ಜಾತಿ ತೊರೆದು(ಬಿಟ್ಟು) ಇಷ್ಟಲಿಂಗಧಾರಣ ಹೊಂದಿದವರು. ಮೇಲು-ಕೀಳು ಬೇಧ-ಭಾವದಿಂದ ಮುಕ್ತಿ ಹೊಂದಿ, ಸಾಮಾಜಿಕವಾಗಿ ಸಮಾನವಾಗಿ ಬದುಕಲು ಲಿಂಗವನ್ನು ಹೊಸದಾಗಿ ಆಯತ(ಸ್ವೀಕರಿಸು) ಮಾಡಿಕೊಂಡವರು. ಸಾಮಾಜಿಕ ಸಮಾನತೆ ಪಡೆಯಲು ಇಷ್ಟಲಿಂಗದೀಕ್ಷೆ ತೆಗೆದುಕೊಂಡವರು. ಸ್ಥಾವರಲಿಂಗಪೂಜೆ ತ್ಯಜಿಸಿ, ಇಷ್ಟಲಿಂಗಪೂಜೆ(ವ್ರತ) ನಿರತರಾದವರು, ಇಷ್ಟಲಿಂಗ ಪೂಜಾ ನಿರತರಾಗಿದ್ದು, ಕಾಯಕ-ದಾಸೋಹದಲ್ಲಿ ದೇವರನ್ನು ಕಾಣುವವರು. ಸದಾ ದೇಹದ ಮೇಲೆ ಇಷ್ಟಲಿಂಗ ಧರಿಸಿದ್ದು ಕಾಯಕದಲ್ಲಿ ಬೇಧವೆಣಿಸದೆ ಪ್ರಾಣಿದಯೆ, ಸ್ತ್ರೀಸಮಾನತೆ, ಜಾತಿಬೇಧ ತೊಡೆದು ಸಾಮಾಜಿಕ ಸಮಾನತೆಯಲ್ಲಿ ನಂಬಿಕೆ ಉಳ್ಳವರು. ಇಷ್ಟಲಿಂಗವೇ ಪರಮದೈವವೆಂದು ನಂಬಿ, ಅದನ್ನು ಸದಾ ಅಂಗದ ಮೇಲೆ ಧರಿಸಿ ವೃತ್ತಿಯಲ್ಲಿ ಸಮಾನತೆ ಕಂಡುಕೊಂಡವರು ಎಂದು ಅರ್ಥೈಯಿಸಬಹುದಾಗಿದೆ. ಇನ್ನೂ ಸರಳವಾಗಿ ಹೇಳುವುದಾದರೆ ಸಾಮಾಜಿಕ ಸಮಾನತೆ ಪಡೆಯಲು ತಮ್ಮ ಮೂಲಜಾತಿ ತೊರೆದು ಸಾಮೂಹಿಕವಾಗಿ ಹೊಸದಾಗಿ ಇಷ್ಟಲಿಂಗ ದೀಕ್ಷೆ ಪಡೆದು ಅದನ್ನು ಸದಾ ದೇಹದ ಮೇಲೆ(ಕೊರಳಲ್ಲಿ) ಧರಿಸಿ ಜಾತಿ ಬೇಧವಿಲ್ಲದೆ ಮುನ್ನಡೆದವರು ಲಿಂಗಾಯತರು. ೧೨ನೇ ಶತಮಾನದಲ್ಲಿ ಬಸವಣ್ಣ ಒಂದು ಸಮುದಾಯಕ್ಕೆ (ಕಾಳಾಮುಖ) ಸೀಮಿತವಾಗಿದ್ದ ಇಷ್ಟಲಿಂಗವನ್ನು ಸಾರ್ವತ್ರಿಕಗೊಳಿಸಿದ. ಆ ಸಂದರ್ಭದಲ್ಲಿ ಇಷ್ಟಲಿಂಗದೀಕ್ಷೆ ಪಡೆದವರು ಲಿಂಗಾಯತರೆನಿಸಿದರು. ಈ ಮೊದಲು ಇವರ ಪೂರ್ವಿಕರು ಇಷ್ಟಲಿಂಗವನ್ನು ಪಡೆದಿರಲಿಲ್ಲ. ಬಸವಣ್ಣನ ಪ್ರಭಾವಕ್ಕೆ ಒಳಗಾದವರು ಇಷ್ಟಲಿಂಗ ದೀಕ್ಷೆ ಪಡೆದು ಲಿಂಗಾಯತರಾದರು. ಇವರು ಹೊಸದಾಗಿ ಲಿಂಗದೀಕ್ಷೆ ಪಡೆದವರು. 'ಲಿಂಗಾಯತ' ಹೊಸದಾಗಿ ಲಿಂಗದೀಕ್ಷೆ ಹೊಂದಿ ಅದನ್ನು ಸದಾದೇಹದ ಮೇಲೆ ಧರಿಸಿ ಆರಾಧಿಸುವವನು ಎಂದರ್ಥ. ಬಸವಣ್ಣನಿಂದಲೇ ಈ ಪದ ಬಳಕೆಗೆ ಮತ್ತು ಬೆಳಕಿಗೆ ಬಂದಿದೆ. ಬಸವಣ್ಣನೇ 'ಲಿಂಗಾಯತ' 'ಲಿಂಗವಂತ' ಪದದ ನಿರ್ಮಾತೃ. ಅವನೇ ಪರಮಗುರು. 'ಇಷ್ಟಲಿಂಗ'ವನ್ನು ಸಾರ್ವತ್ರೀಕರಣಗೊಳಿಸಿ ಅದರ ಮೌಲ್ಯ ಹೆಚ್ಚಿಸಿದ ಕೀರ್ತಿ ಬಸವಣ್ಣನಿಗೆ ಸಲ್ಲುತ್ತದೆ. ಬಹುಶಃ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಆಳವಾಗಿ ಬೇರೂರಿದ್ದ ಚಾತುರ್ವರ್ಣ ಪದ್ಧತಿ ಅಥವಾ ಜಾತಿಬೇಧ ಅಳಿಸಲು ಈ ಇಷ್ಟಲಿಂಗವನ್ನು ಸಾರ್ವತ್ರೀಕರಣಗೊಳಿಸಿದಂತೆ ತೋರುತ್ತದೆ. ಆದ್ದರಿಂದ ಬಸವಣ್ಣನೇ ಲಿಂಗಾಯತ ಧರ್ಮದ ಸ್ಥಾಪಕನೆಂದು ಹೇಳಬೇಕಾಗುತ್ತದೆ.

## ಬಸವಣ್ಣ

ಕರ್ನಾಟಕದ ಸಮಾಜೋಧಾರ್ಮಿಕ ಇತಿಹಾಸದಲ್ಲಿ ಮತ್ತು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ೧೨ನೇ ಶತಮಾನದಲ್ಲಿ ನಡೆದ ವಚನ ಚಳುವಳಿ ಅಥವಾ ಲಿಂಗಾಯತ ಚಳುವಳಿ ಇಡೀ ಸಾಮಾಜಿಕ ವ್ಯವಸ್ಥೆಯನ್ನು ಬದಲಾಯಿಸಿದ ಮಹತ್ವದ ಘಟನೆಯಾಗಿದೆ. ಇದರ ನೇತೃತ್ವ ವಹಿಸಿದವನು ಬಸವಣ್ಣ. ಬಸವಣ್ಣನಿಗಿಂತಲೂ ಮೊದಲೇ ವಚನ ಸಾಹಿತ್ಯ ರಚನೆಯಾಗಿದ್ದರೂ ಅಲ್ಲಿ ನಾಯಕನಿರಲಿಲ್ಲ. ಸ್ತ್ರೀ ಸ್ವಾತಂತ್ರ್ಯ, ಸಮಾನತೆಯ ಕಿಡಿ ಹೊತ್ತಿ ಸ್ಫೋಟಗೊಂಡದ್ದು ಮಾತ್ರ ಬಸವಣ್ಣನ ನೇತೃತ್ವದಲ್ಲಿಯೇ. ಬಸವಣ್ಣ ಹುಟ್ಟಿದ್ದು ಕ್ರಿ.ಶ.೧೧೩೨ರಲ್ಲಿ ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿಯಲ್ಲಿ. ತಂದೆ ಮಂಡಗೆಯ ಮಾದಿರಾಜ ತಾಯಿ ಮಾದಲಾಂಬಿಕೆ. ಹರಿಹರ ಕವಿ ತನ್ನ "ಬಸವರಾಜ ದೇವರ ರಗಳೆ"ಯಲ್ಲಿ ಬಾಗೆವಾಡಿಯೊಳಗೆಸೆದಿರ್ಪನಗ್ರೇಸರಂ ಕಮ್ಮೆಕುಲದಿಂದ ಮೆಱೆದಿರ್ಪವಿಪ್ರನಿಪ್ಪಂ ಮಾದಿರಾಜ ನಾತನ ಸತಿಯು ಅಪ್ರತಿಮೆ ಮಾದಾಂಬೆಯೆಂದೆಂಬ ಗುಣವತಿಯು[೧೭೯] ಎಂದು ಬಸವಣ್ಣನ ತಾಯಿ ಮಾದಾಂಬೆ ತಂದೆ ಮಾದಿರಾಜನೆಂದು ಹೇಳಿದ್ದಾನೆ. ಎಂಟು ವರುಷ ತುಂಬುತ್ತಲೇ (ಬಸವಣ್ಣನಿಗೆ) ತಂದೆ ಉಪನಯನ ಮಾಡಿಸಲು ಮುಂದಾದಾಗ "ಶಿವಲಿಂಗಾರ್ಚನಾಸಕ್ತಚಿತ್ತಂ ಕರ್ಮಲತೆಯಂತಿರ್ದ ಜನ್ನಿವರಮಂ ಕಳೆದು ಬಿಸುಟ್ಟು ಹೋತಿನ ಗಂಟಲಂ ಬಿಗಿದಂತಿರ್ದ ಮೌಂಜಿಯಂ ಪಱಿದು ಬಿಸುಟ್ಟು ನವ್ಯದುಕೂಲಮಂ ತೆಗೆದುಟ್ಟು ದಿವ್ಯವಸ್ತ್ರವಂ ಪೊದೆದು"[೧೮೦] ಎಂದು ಕವಿ ಹರಿಹರ ಹೇಳುತ್ತಾನೆ. ಅಂದರೆ ಬಾಲಕ ಬಸವಣ್ಣನಿಗೆ ಉಪನಯನ ಮಾಡಲು ತಂದೆ ಸಿದ್ಧನಾದಾಗ ಇಷ್ಟಲಿಂಗದ ಆರಾಧಾನಾಸಕ್ತನಾದ ಅವನು ಉಪನಯನ ತಿರಸ್ಕರಿಸಿ ಪಾಪದ ಬಳ್ಳಿಯಂತಿದ್ದ ಜನಿವಾರವನ್ನು ಕಿತ್ತು (ಹರಿದು) ಹಾಕಿ ಹೊಸ ಪಿತಾಂಬರ ವಸ್ತ್ರ(ಬಟ್ಟೆ) ತೆಗೆದಿಟ್ಟು ಹೊಸ ನೂಲಿನ ಬಟ್ಟೆಯನ್ನು ಹಾಕಿಕೊಂಡು ಎಲ್ಲ ಹಿರಿಯರ ಮಾತನ್ನು ದಿಕ್ಕರಿಸಿ ಮನೆಬಿಟ್ಟು ಕೂಡಲಸಂಗಮಕ್ಕೆ ಬಂದನು. ಅಲ್ಲಿ "ಸ್ಥಾನಪತಿಯೆನಿಪ್ಪೀಶಾನ್ಯಗುರುಗಳ್ ಕಂಡೀತಂ"[೧೮೧] ಎಂದು ಕವಿ ಬಸವಣ್ಣನಿಗೆ ವಿದ್ಯಾಗುರುವಾಗಿ ಈಶಾನ್ಯ ಗುರುಗಳು ದೊರಕಿದ್ದುದರ ಬಗ್ಗೆ ಹೇಳುತ್ತಾನೆ. ಸಂಗಮದಲ್ಲಿ ನಂದಿಯಿಂದ ಬಸವನಿಗೆ ಲಿಂಗದೀಕ್ಷೆಯಾಗುತ್ತದೆ. ಸಂಗಮ ಕ್ಷೇತ್ರದಲ್ಲಿನ ಅಧ್ಯಯನ ಕೊನೆಗೊಂಡ ಮೇಲೆ ಕಲ್ಯಾಣಕ್ಕೆ ಬಂದು ಬಿಜ್ಜಳನಲ್ಲಿ ಭಂಡಾರಿಯಾಗಿ ಕಾರ್ಯನಿರ್ವಹಿಸಲು ಪ್ರಾರಂಭಿಸಿದ. ತನ್ನ ಸತ್ಯ, ನಿಷ್ಠೆ, ಪ್ರಾಮಾಣಿಕತೆಯಿಂದ "ಸಂದಾಯಮಂ ಬೀಯದೊಳಗೆ ಕಳೆವನಿತಕ್ಕೆ ಅಯ್ದು ಕೋಟಿಸ್ಥಿತವನೊಳಗೆ ಗಣಕರ್ಕಂಡು"[೧೮೨] ಎಂದು ಕವಿ ಬಿಜ್ಜಳನಿಗೆ ಐದು ಕೋಟಿ ಲಾಭವಾದ ಅಂಶವನ್ನು ಬಸವಣ್ಣ ತಿಳಿಸುವುದರ ಮೂಲಕ ಭಂಡಾರಿಯಾದ ಬಗೆಯನ್ನು ತಿಳಿಸುತ್ತಾನೆ.

ಗಂಗಾದೇವಿ ಮತ್ತು ಮಾಯಿದೇವಿ(ನೀಲಾಂಬಿಕೆ) ಎಂಬ ಇಬ್ಬರು ಚೆಲುವೆಯರನ್ನು ಬಸವಣ್ಣ ವಿವಾಹವಾದನೆಂದು ಕವಿ ಹರಿಹರ "ಸತ್ಕುಲ ಸಾದೃಶ್ಯ ಸುಶೀಲೆಯರಪ್ಪ ಸದ್ಭಕ್ತೆಯರಂ ಗಂಗಾದೇವಿ

ಮಾಯಿದೇವಿಯರೊಡತಣ ವಿವಾಹ ಸಂಪದದಿಂ''[೧೮೩] ಎಂದು ಹೇಳುತ್ತಾನೆ. ತನ್ನ ಭಂಡಾರಿ ವೃತ್ತಿಯ ಜೊತೆಗೆ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಆಳವಾಗಿ ಬೇರುಬಿಟ್ಟ ಚತುರ್ವರ್ಣ ಪದ್ಧತಿ, ಸಾಮಾಜಿಕ ಅಸಮಾನತೆ, ಸ್ತ್ರೀಯರಿಗೆ ದೊರೆತ ಅಸಮಾನತೆ ಇನ್ನು ಮುಂತಾದ ಸಾಮಾಜಿಕ ಪಿಡುಗುಗಳನ್ನು ಹೋಗಲಾಡಿಸಲು ಸದಾ ಚಿಂತಿಸಿದನು. ಸಾಮಾಜಿಕ ಸಮಾನತೆ, ಜಾತಿ ನಿರ್ಮೂಲನೆ ಮಾಡಿ ಸಾಮಾಜಿಕ ಅಸಮಾನತೆ ಹೋಗಲಾಡಿಸಲು ಬಸವಣ್ಣನವರು

ಏನಯ್ಯಾ, ವಿಪ್ರರು ನುಡಿದಂತೆ ನಡೆಯರು; ಇದೆಂತಯ್ಯಾ?
ನಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ!
ಕೂಡಲಸಂಗಮ ದೇವಯ್ಯಾ ಹೊಲೆಯ ಬಸುರಲ್ಲಿ
ವಿಪ್ರರು ಹುಟ್ಟಿ ಗೋಮಾಂಸವ ತಿಂಬರೆಂಬುದಕ್ಕೆ ಇದೆ ದೃಷ್ಟ''[೧೮೪]

ಬ್ರಾಹ್ಮಣರ ಗುಟ್ಟು ಬ್ರಾಹ್ಮಣರಿಗೆ ಮಾತ್ರ ಗೊತ್ತು. ಅವರು ರಚಿಸುವ ಶಾಸ್ತ್ರ ಶೂದ್ರಾತಿ ಶೂದ್ರರಿಗೆ ಅನ್ವಯವಾಗುತ್ತದೆಯೆ ಹೊರೆತು ತಮಗಲ್ಲ. ಅವರಿಗೆ ಬೇರೆ ಶಾಸ್ತ್ರವುಂಟು. ತಾವೊಂದು ನಿಯಮ ಅನುಸರಿಸಿದರೆ ಬೇರೆಯವರಿಗೊಂದು ನಿಯಮ ಮಾಡುತ್ತಾರೆ. ಬ್ರಾಹ್ಮಣರು ಸಹ ಹೊಲೆಯರ ಹೊಟ್ಟೆಯಲ್ಲಿ ಹುಟ್ಟಿ ಗೋಮಾಂಸ ತಿಂದಿದ್ದಾರೆಂದು ಬಸವಣ್ಣ ಹೇಳುತ್ತಾನೆ. ಆತ ಮುಂದುವರಿದು

''ಸೆಟ್ಟಿಯೆಂದೆಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ?
ಡೋಹಾರನೆಂದೆಂಬೆನೆ ಕಕ್ಕಯ್ಯನ? ಮಾದಾರನೆಂದೆಂಬೆನೆ ಚೆನ್ನಯ್ಯನ?
ಆನು ಹಾರುವನೆಂದರೆ ಕೂಡಲ ಸಂಗಯ್ಯನ ನಗುವನಯ್ಯಾ!
ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯಾ
ಕಕ್ಕಯ್ಯನೊಕ್ಕುದನಿಕ್ಕು ನೋಡಯ್ಯಾ! ದಾಸಯ್ಯ ಶಿವದಾನದ ನೆರೆಯ ನೋಡಯ್ಯಾ;''[೧೮೫]

ಎಂದು ಸಾಮಾಜಿಕ ಸಮಾನತೆಗಾಗಿ ಅವರು ವಹಿಸಿದ ಪಾತ್ರ ಮೇಲಿನ ವಚನಗಳಿಂದ ತಿಳಿದುಬರುತ್ತದೆ. ಸಿರಿಯಾಳ, ಮಡಿವಾಳ ಮಾಚಿದೇವ, ಡೋಹಾರ ಕಕ್ಕಯ್ಯ, ಮಾದಾರಚನ್ನಯ್ಯ, ಇನ್ನು ಮುಂತಾದವರು ತಮ್ಮ ಮೂಲ ಜಾತಿಬಿಟ್ಟು ಲಿಂಗದೀಕ್ಷೆ ಪಡೆದು ಶರಣರಾಗಿದ್ದಾರೆ. ಆದ್ದರಿಂದ ಅವರನ್ನು ಅವರ ಮೂಲ ಜಾತಿಗಳಿಂದ ಕರೆಯಲಾಗದು, ಕಾರಣ ತಾವು ತಮ್ಮ ಮೂಲ ಜಾತಿ(ಬ್ರಾಹ್ಮಣ)ಯನ್ನು ಬಿಟ್ಟಿರುವುದಾಗಿ ಹೇಳುತ್ತಾ, ತಾವು ಹಾರವನೆಂದರೆ ಕೂಡಲಸಂಗಮದೇವ ನಗುತ್ತಾನೆ ಎನ್ನುತ್ತಾರೆ. ಹಾಗೆಯೇ ಮುಂದುವರೆದು ತಾವು(ಬಸವಣ್ಣ) ಉತ್ತಮ(ಬ್ರಾಹ್ಮಣ) ಕುಲದಲ್ಲಿ ಹುಟ್ಟಿದೆನೆಂಬ ಅಹಂಕಾರವಿಲ್ಲ, ಆದ್ದರಿಂದ ಯಾರೂ ತಮ್ಮನ್ನು ತಮ್ಮ ಮೂಲಜಾತಿಯಿಂದ ಗುರುತಿಸಿ ಕಷ್ಟಕ್ಕೆ ಗುರಿ ಮಾಡಬೇಡಿರಿ ಎನ್ನುತ್ತಾನೆ.

ಅಸ್ಪೃಶ್ಯತಾ ನಿವಾರಣೆ : ಅಸ್ಪೃಶ್ಯರನ್ನು ಕಂಡರೆ ಬಸವಣ್ಣನಿಗೆ ಬಹಳ ಪ್ರೀತಿ. ಹುಟ್ಟನಿಂದ ಯಾರೂ ಅಸ್ಪೃಶ್ಯರಲ್ಲ ಎಲ್ಲರಿಗೂ ಬದುಕುವ ಹಕ್ಕಿದೆ ಎಂದ ಬಸವಣ್ಣ ಬ್ರಾಹ್ಮಣರ ಕುತಂತ್ರದಿಂದ ಬಂದ

ಈ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಜೀವನಪರ್ಯಂತ ಹೋರಾಡಿದ. ಅನೇಕ ಅಸ್ಪೃಶ್ಯರಿಗೆ ಸಾಮೂಹಿಕ ಲಿಂಗದೀಕ್ಷೆನೀಡಿ ಅವರನ್ನು ಸ್ಪರ್ಶರನ್ನಾಗಿಸಿ ಸಾಮಾಜಿಕವಾಗಿ ಸಮಾನತೆಯಿಂದ ಬಾಳುವಂತೆ ಮಾಡಿದನು. ಬಸವಣ್ಣ ಅಸ್ಪೃಶ್ಯತಾ ನಿವಾರಣೆಗಾಗಿ ತಾನೇ ಸ್ವತಃ ಅದನ್ನು ಜಾರಿಗೊಳಿಸಲು ಕೆಳವರ್ಗದ ಹಿರಿಯ ಮಹೇಶ್ವರ ಸಂಬೋಳಿ ನಾಗಿದೇವನ ಮನೆಗೆ ಹೋಗಿ ಊಟ ಮಾಡಿ ಜಾತಿ ಸಂಕೋಲೆಯನ್ನು ಹರಿದು ಹಾಕಿದ್ದನ್ನು ಹರಿಹರ ಕವಿ "ಕಂಬಳಿ ನಾಗಿದೇವನೆಂಬ ಹಿರಿಯಮಾಹೇಶ್ವರರ ಮನೆಯಂ ಪೊಕ್ಕು, ಸಂಗಪ್ರಸಾದದಲವರ ಪ್ರಸಾದಮಂ ಬೆರೆಸಿ ಕೈಕೊಳ್ಳುತ್ತಿರಲಿತ್ತಲೊಡನೆ"[೧೮೬] ಎಂದು ಉಲ್ಲೇಖಿಸಿದ್ದಾನೆ. ಅಂದರೆ ಬಸವಣ್ಣ ಹಿರಿಯ ಮಹೇಶ್ವರನಾದ ಸಂಬೋಳಿನಾಗಿದೇವನ ಮನೆಗೆ ಹೋಗಿ ಅವನು ಕರೆಯುವ ಮುನ್ನ ಬಸವಣ್ಣ ಸಂಗನ ಪ್ರಸಾದನೊಡನೆ ನಾಗಿದೇವನ ಪ್ರಸಾದ ಬೆರೆಸಿ ಸ್ವೀಕರಿಸಿದನು ಇದೇ ಮುಂದೆ ಬಸವಣ್ಣನಿಗೂ ಬಿಜ್ಜಳನಿಗೂ ಮೈಮನಸ್ಸು ಉಂಟಾಗುವಂತೆ ಮಾಡುತ್ತದೆ. ಈ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಬಸವಣ್ಣ ತಾನೇ ಸ್ವತಃ ಮಾದಾರ ಚೆನ್ನಯ್ಯನ ಮಗ ಎಂದು ಹೇಳಿಕೊಳ್ಳುತ್ತಾನೆ.

"ಅಪ್ಪನು ನಮ್ಮ ಮಾದರ ಚೆನ್ನಯ್ಯ;
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ;
ಚಿಕ್ಕಯ್ಯನೆಮ್ಮಯ್ಯ, ಕಾಣಯ್ಯ;
ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ...."[೧೮೭]

ಎಂದು ಬಸವಣ್ಣ ಈ ವಚನದಲ್ಲಿ ಕೆಳವರ್ಗದ ವ್ಯಕ್ತಿಗಳಾದ ಮಾದರ ಚೆನ್ನಯ್ಯ ತಂದೆ, ಡೋಹರ ಕಕ್ಕಯ್ಯ ದೊಡ್ಡಪ್ಪನೆಂದೂ, ಅಣ್ಣ ಕಿನ್ನರಿ ಬೊಮ್ಮಯ್ಯನೆಂದು ಹೇಳಿ ಅವರಿಗೆ ಕುಲವೆಂಬುದಿಲ್ಲ, ಅವರೇ ಶ್ರೇಷ್ಠ ಕುಲದವರೆಂದು ಒತ್ತಿ ಹೇಳುತ್ತಾನೆ. ಹಾಗೆಯೇ ಮುಂದುವರಿದು ಬಸವಣ್ಣ ಹುಟ್ಟಿನಿಂದ ಯಾರೂ ಹೆಚ್ಚಲ್ಲ, ಕಡಿಮೆಯೂ ಅಲ್ಲ. ಹುಟ್ಟಿನಿಂದ ಯಾರೂ ಕೀಳು ಜಾತಿಯಲ್ಲ ಎಂಬುದನ್ನು ಬಸವಣ್ಣನವರು ಹೀಗೆ ಹೇಳಿದ್ದಾರೆ.

"ಕೊಲುವವನೇ ಮಾದಿಗ, ಹೊಲಸ ತಿಂಬವನೇ ಹೊಲೆಯೆ!
ಕುಲವೇನೋ, ಆವಂದಿರ ಕುಲವೇನೋ!
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ತಮ್ಮ ಕೂಡಲಸಂಗನ ಶರಣರೇ ಕುಲಜರು."[೧೮೮]

ಎಂದು ಬಸವಣ್ಣನವರು ಕುಲದ ನೆಲೆಯನ್ನು ಈ ವಚನದಲ್ಲಿ ಅಭಿವ್ಯಕ್ತಿಸಿದ್ದಾರೆ. ಕೊನೆಗೆ ಅವರು ಕೂಡಲಸಂಗನ ಶರಣರೇ ಕುಲದಲ್ಲಿ ಶ್ರೇಷ್ಠರು ಎಂದು ಹೇಳಿ ಸಂಪ್ರದಾಯವಾದಿಗಳ ಬಾಯಿ ಮುಚ್ಚಿಸುತ್ತಾರೆ.

**ವೇದಶಾಸ್ತ್ರ-ಪುರಾಣ ತಿರಸ್ಕಾರ :** ಚತುರ್ವರ್ಣ ಪದ್ಧತಿ, ಶ್ರೇಷ್ಠ-ಕನಿಷ್ಠ, ಮೌಢ್ಯತೆಗಳನ್ನು ಪ್ರತಿಪಾದಿಸುವ ವೇದ-ಆಗಮ, ಶಾಸ್ತ್ರ-ಪುರಾಣಗಳನ್ನು ಬಸವಣ್ಣ ಖಂಡಿಸುತ್ತಾನೆ.

'ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ
ತರ್ಕದ ಬೆನ್ನಬಾರನೆತ್ತುವೆ, ಆಗಮದ ಮೂಗ ಕೊಯಿವೆ ನೋಡಯ್ಯ"[೧೮೯]

ಹೀಗೆ ಬಸವಣ್ಣ ಸರ್ವರಿಗೂ ಭಾಜನವಾಗದ ವೇದಕ್ಕೆ ಒರೆಕಟ್ಟುವ, ಶಾಸ್ತ್ರಕ್ಕೆ ಸರಪಳಿ ಕಟ್ಟುವ, ತರ್ಕದ ಬೆನ್ನು ಮುರಿಯುವ, ಆಗಮದ ಮೂಗಕೊಯ್ಯುವೆನೆಂದು ಹೇಳುತ್ತಾನೆ. ಕಾರಣ ಇವುಗಳು ಮನುಷ್ಯ ಬದುಕಿನ ಸಹಜ ಕ್ರಿಯೆಗಳನ್ನು ಹೇಳುವುದಿಲ್ಲ. ಶ್ರೇಷ್ಠ-ಕನಿಷ್ಠತೆಯನ್ನು ಎತ್ತಿ ಹಿಡಿಯುತ್ತವೆ. ಈ ಶ್ರೇಷ್ಠ-ಕನಿಷ್ಠತೆಯನ್ನು ತೊಡೆದು ಹಾಕಲು ತಾವು ಮಾದಾರ ಚೆನ್ನಯ್ಯನ ಮನೆಯಲ್ಲಿ ಊಟ ಮಾಡಿದ ಕಾರಣ ವೇದ ನಡುಗಿತು, ಶಾಸ್ತ್ರ ಬದಿಗೆ ಸರಿಯಿತು, ತರ್ಕ ಮೂಲೆ ಗುಂಪಾಯಿತು. ಆಗಮ ಸಂಪೂರ್ಣ ದೂರ ಹೋಯಿತೆಂದು ಬಸವಣ್ಣ ವ್ಯಂಗ್ಯ ಮಾಡುತ್ತಾನೆ.

**ವೃತ್ತಿ ಸಮಾನತೆ :** ವೃತ್ತಿಯ ಕಾರಣದಿಂದ ಯಾವುದೇ ವ್ಯಕ್ತಿಯೂ ಕೀಳಲ್ಲ ಎಲ್ಲಾ ವ್ಯಕ್ತಿಗಳೂ ಬಸವಣ್ಣನ ದೃಷ್ಟಿಯಲ್ಲಿ ಶ್ರೇಷ್ಠ ಕಾಯಕದಿಂದಲೇ ಬದುಕನ್ನು ಸಾಗಿಸಬೇಕು ಮತ್ತು ಬದುಕನ್ನು ಕಟ್ಟಿಕೊಳ್ಳಬೇಕು. ಪ್ರತಿಯೊಬ್ಬ ವ್ಯಕ್ತಿ ತಾನು ಮಾಡುವ ಕೆಲಸದಿಂದ ಮಹತ್ವ ಪಡೆಯುತ್ತಾನೆ.

"ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ;
ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ...."[೧೯೦]

ಎಂದು ಬಸವಣ್ಣ ಜಾತಿಗಳು ಹುಟ್ಟಿನಿಂದ ಬಂದವುಗಳಲ್ಲ. ಅವು ವ್ಯಕ್ತಿ ಮಾಡುವ ಕಾಯಕದಿಂದ ಬಂದವುಗಳಾಗಿವೆ. ಯಾವುದೇ ಜಾತಿ ವೃತ್ತಿಗಳು ಕೀಳಲ್ಲ ಎಲ್ಲವೂ ಶ್ರೇಷ್ಠವಾದವುಗಳಾಗಿವೆ ಎಂದು ಈ ಮೇಲಿನ ವಚನದಿಂದ ತಿಳಿದುಬರುತ್ತದೆ.

**ಕಾಯಕ-ದಾಸೋಹ :** ಕಾಯಕ-ದಾಸೋಹದ ಮೂಲಕ ಸಮಾಜ ಸುಧಾರಣೆಗೆ ತೊಡಗಿದ ಬಸವಣ್ಣ ಕಾಯಕಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದಾನೆ. ಯಾವ ಕಾಯಕವೂ ಕನಿಷ್ಠವಲ್ಲ ಎಂದು ನಂಬಿದ ಬಸವಣ್ಣ ಕಾಯಕದಲ್ಲಿ ಕುಲವನ್ನು ನೋಡಬಾರದೆಂದು ಹೇಳಿ ಎಲ್ಲಾ ಕಾಯಕಗಳಿಗೆ (ಕುಲಕಸುಬು) ಮನ್ನಣೆ ನೀಡಿ ಅವುಗಳಿಗೆ ಶ್ರೇಷ್ಠತೆಯ ಮೌಲ್ಯ ಒದಗಿಸಿದ್ದಾನೆ. ಆ ಕಾಯಕದಿಂದ ಬಂದ ಆದಾಯದ ಸ್ವಲ್ಪ ಭಾಗವನ್ನು ದಾಸೋಹಕ್ಕೆ ಉಪಯೋಗಿಸಬೇಕೆಂದು ಹೇಳಿ ಕಾಯಕದ ಮೂಲಕ ಜಾತಿ ಎಣಿಸಬಾರದೆಂದ ಬಸವಣ್ಣ

ದೇವಸಹಿತ ಭಕ್ತ ಮನೆಗೆ ಬಂದರೆ
ಕಾಯಕವಾವುದೆಂದು ಬೆಸಗೊಂಡರೆ
..................................
ಭಕ್ತರ ಕುಲವನರಸಿದರೆ ನಿಮ್ಮ ರಾಣಿವಾಸದಾಣೆ!"[೧೯೧]

ಎಂದಿದ್ದಾನೆ. ದೀಕ್ಷೆ ಪಡೆದು ಭಕ್ತನಾದ ಮೇಲೆ ಅವನು ಯಾವುದೇ ಸಕ್ರಮ ಕಾಯಕ ಮಾಡಿದರೂ ಕೆಟ್ಟದ್ದಲ್ಲ. ಆತನ ಕಾಯಕದ ಮೂಲಕ ಕುಲವನ್ನು ಎಣಿಸಬಾರದು. ದೇವಸಹಿತ ಭಕ್ತ ಮನೆಗೆ ಬಂದು ಕಾಯಕ ಯಾವುದೆಂದು ಕೇಳಿದರೆ ದಂಡ ಹಾಕಬೇಕು. ಕುಲವನ್ನು ಹೇಳಬಾರದೆಂದು ಬಸವಣ್ಣ ಹೇಳುತ್ತಾನೆ.

**ಸ್ತ್ರೀ ಸಮಾನತೆ :** ೧೨ನೇ ಶತಮಾನಕ್ಕಿಂತ ಪೂರ್ವದಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆ ತನ್ನ ಸ್ವಾತಂತ್ರ್ಯ ಕಳೆದುಕೊಂಡು ನಿಕೃಷ್ಟ ಸ್ಥಿತಿಗೆ ಹೋಗಿದ್ದಳು. ಅವಳು ಶೂದ್ರರಿಗಿಂತಲೂ ಕೀಳಾದ ಬದುಕನ್ನು ಅನುಭವಿಸಿದ್ದಳು. ಇಂಥ ಶೋಚನೀಯ ಸಂದರ್ಭದಲ್ಲಿ ಬಂದ ಬಸವಣ್ಣನ ನೇತೃತ್ವದ ವಚನ ಚಳುವಳಿ ಸ್ತ್ರೀ ಸ್ವಾತಂತ್ರ್ಯವನ್ನು ಎತ್ತಿ ಹಿಡಿದು ಅವಳಿಗೂ ಪುರುಷನ ಸಮಾನ ಸ್ಥಾನ ನೀಡಿತು. ಮಹಿಳೆಯರಿಗೂ ಲಿಂಗದೀಕ್ಷೆ ನೀಡಿ ಲಿಂಗಾಯತ ಧರ್ಮದಲ್ಲಿ ಸಮಾನತೆ ತರಲು ಪ್ರಯತ್ನಿಸಿತು. ಸ್ತ್ರೀ ಶೂದ್ರತ್ವದಿಂದ ಬಿಡುಗಡೆ ಹೊಂದಿದಳು. ಬಸವಣ್ಣ ಸ್ತ್ರೀ ಸಮಾನತೆಯ ಮಹತ್ವ ಕುರಿತು ಹೇಳುವಾಗ

> "ನಿನ್ನ ಮಡದಿಗಿರಲೆಂದೆಡೆ ಮಡದಿಯ ಕೃತಕ ಬೇರೆ
> ನಿನ್ನೊಡಲು ಕೆಡೆಯಲು ಮತ್ತೊಬ್ಬನಲ್ಲಿ ಗಡಕದೆ ಮಾಣ್ಬಳೆ?
> ಎಲ್ಲಿದೆ ಇಲ್ಲಿ ಹೊಸ ಹೆಣ್ಣಿನ ಚಿತ್ರ? ಸ್ತ್ರೀ ಸಮಾನತೆ?"[೯೨]

ಎಂದಿದ್ದಾನೆ. ಸ್ತ್ರೀ ಸಮಾನತೆ ಘೋಷಿಸಿದ ಬಸವಣ್ಣನಿಗೆ ಅಂದಿನ ಸಂಪ್ರದಾಯವಾದಿಗಳು ನಾನಾ ರೀತಿಯಲ್ಲಿ ಸ್ತ್ರೀ ಸಮಾನತೆಯನ್ನು ಪ್ರಶ್ನಿಸಿರಬಹುದು. ಅದಕ್ಕುತ್ತರವಾಗಿ ಬಸವಣ್ಣ ಪಾತಿವ್ರತ್ಯವನ್ನು ಬದಿಗಿರಿಸಿ ಸೂಳೆ ಸಂಕವ್ವನಂಥವರಿಗೂ ಸಮಾನತೆಯನ್ನು ತೋರಿ ಇಂಥವರಿಗೆಲ್ಲಿದೆ ಸಮಾನತೆ ಹೆಣ್ಣಿಗೆ ಹೊಸ ಬದುಕಿನ ನೀತಿ ಎಲ್ಲಿದೆ? ಅದೇ ಸಂಪ್ರದಾಯ ಪ್ರತಿಪಾದಿಸುತ್ತೀರಿ ಎಂದು ಹೇಳಿ ಸ್ತ್ರೀಯರಿಗೂ ದೀಕ್ಷೆಯನ್ನು ನೀಡಿರುವುದನ್ನು ಬಸವಣ್ಣನ ಜೀವನ ಚರಿತ್ರೆಯಿಂದ ಅರಿಯಬಹುದಾಗಿದೆ. ಅದಕ್ಕಾಗಿ ಬಸವಣ್ಣ ಪರಸ್ತ್ರೀಯಾದ ಅಕ್ಕಮಹಾದೇವಿಯನ್ನು ತನ್ನ 'ಹೆತ್ತ ತಾಯಿ' ಎಂದು ಹೇಳುತ್ತಾನೆ.

> "ಎನ್ನ ಹೆತ್ತತಾಯಿ ಮಹಾದೇವಿಯಕ್ಕನ ನಿಲವ ನೋಡಯ್ಯ ಪ್ರಭುವೆ"[೯೩]

ಈ ವಚನದಲ್ಲಿ ಬಸವಣ್ಣ ಅಕ್ಕಮಹಾದೇವಿಯ ರೂಪದ ಮೂಲಕ ಅನುಭವಮಂಟಪದಲ್ಲಿ ಶರಣಗೋಷ್ಠಿಯಲ್ಲಿ ಪಾಲ್ಗೊಂಡ ಸ್ತ್ರೀಯರ ದೃಢನಿರ್ಧಾರ, ನಿಷ್ಕಲ್ಮಶ ಮನಸ್ಸು, ಆಲೋಚನಾ ಕ್ರಮ ಮುಂತಾದ ಅಂಶಗಳನ್ನು ಗಮನಿಸಿ ಈ ಹಿಂದಿನ ಪುರೋಹಿತಶಾಹಿ ಸಾಮಾಜಿಕ ವ್ಯವಸ್ಥೆಯ ಸಂಪ್ರದಾಯವನ್ನು ತಿರಸ್ಕರಿಸದೆ ಸ್ತ್ರಿ ಸ್ವಾತಂತ್ರ್ಯ ಎತ್ತಿ ಹಿಡಿದಾಗ ಸ್ತ್ರೀಯರನ್ನು ಕುರಿತು ಸ್ತ್ರೀದೇಹ ಹೊಲಸು ಎಂಬ ಕಲ್ಪನೆಯನ್ನು ಕಳೆದು, ಬದುಕಿನ ಮೋಹ, ಮನಸ್ಸಿನ ನೆಲೆ, ತರ ತರಹದ ಭಾವನೆಗಳ ಬತ್ತಲೆ ಮಾಡಿ ಸ್ತ್ರೀ ಸ್ನೇಹ ಮೋಸ ಅಲ್ಲ, ಒಳ್ಳೆಯ ಗುಣಗಳಿರುತ್ತವೆ, ಅವುಗಳಲ್ಲಿ ಅವಳಿಗೂ ಮನಸ್ಸಿದೆ ಅಭಿವ್ಯಕ್ತಿ

ಸ್ವಾತಂತ್ರ್ಯ ನೀಡಬೇಕು ಎಂದ ಬಸವಣ್ಣ ಅನುಭವಗೋಷ್ಠಿಗೆ ಬಂದ ಅಕ್ಕಮಹಾದೇವಿಯನ್ನು 'ಹೆತ್ತತಾಯಿ' ಎಂದು ಕರೆಯುತ್ತಾನೆ.

**ಮೌಢ್ಯತೆಗಳ ನಿರಾಕರಣೆ-ವೈಚಾರಿಕ ನಿಲುವು :** ಮನುಷ್ಯನಲ್ಲಿ ಅನೇಕ ನಂಬಿಕೆಗಳಿರುತ್ತವೆ. ಕಾಲಕಳೆದಂತೆ ಆ ನಂಬಿಕೆಗಳು ಅರ್ಥಹೀನವಾಗುತ್ತವೆ. ಆ ನಂಬಿಕೆಗಳಿಗೆ ಪುರೋಹಿತಶಾಹಿಗಳು ಶಾಸ್ತ್ರ-ಪುರಾಣದಲ್ಲಿ ಹೀಗೆ ಹೇಳಿದೆ ಎಂದು ಹೇಳಿ ಮೌಢ್ಯತೆಯನ್ನು ತುಂಬಿ ಮೂಢನಂಬಿಕೆಗಳಾಗಿಸಿ, ಜನರಲ್ಲಿ ಆಳವಾಗಿ ಬೇರೂರುವಂತೆ ಮಾಡಿರುವುದನ್ನು ಕಂಡ ಬಸವಣ್ಣ ಜನರಲ್ಲಿರುವ ಆ ನಂಬಿಕೆಯನ್ನು ಹೋಗಲಾಡಿಸಲು ಪ್ರಯತ್ನಿಸುತ್ತಾನೆ. ಅವರಲ್ಲಿ ವೈಚಾರಿಕತೆ ಬೆಳೆಯಲು ಶ್ರಮಿಸುತ್ತಾನೆ.

"ಕಲ್ಲನಾಗರ ಕಂಡರೆ ಹಾಲನೆರೆಯೆಂಬರು
ದಿಟದ ನಾಗರ ಕಂಡರೆ ಕೊಲ್ಲೆಂಬರಯಾ!
ಉಂಬ ಜಂಗಮ ಬಂದರೆ ನಡೆಯೆಂಬರು
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ!"[೧೯೪]

ಈ ವಚನದಲ್ಲಿ ಬಸವಣ್ಣ ಮನುಷ್ಯನಲ್ಲಿ ಇರಬೇಕಾದ ಸ್ವಯಂ ಆಲೋಚನೆ, ಪ್ರಗತಿಪರ ಚಿಂತನೆಯನ್ನು ಕುರಿತು ಹೇಳುತ್ತಾನೆ. ಮನುಷ್ಯನಲ್ಲಿ ಮೌಢ್ಯತೆ ಎಂಬುದು ಯಾವ ಮಟ್ಟದಲ್ಲಿ ಆಳವಾಗಿ ಬೇರೂರಿದೆ ಎಂಬುದನ್ನು ಈ ಮೇಲಿನ ವಚನದ ರೂಪಕದ ಮೂಲಕ ಅಭಿವ್ಯಕ್ತಿಸಿದ್ದಾನೆ. ವ್ಯಕ್ತಿ ಕಲ್ಲನಾಗ ಶಿಲ್ಪ ಕಂಡರೆ ಹಾಲನೆರೆಯುತ್ತಾನೆ. ಆದರೆ ಜೀವಂತ ನಾಗರ ಹಾವು ಬಂದರೆ ಅದನ್ನು ಕೊಲ್ಲೆನ್ನುತ್ತಾನೆ. ತಿನ್ನಲಾರದ ಶಿವಲಿಂಗಕ್ಕೆ ನೈವೇದ್ಯ ಮಾಡುತ್ತಾನೆ. ಉಣ್ಣುವ ಶಿವಸ್ವರೂಪಿ ಜಂಗಮ ಬಂದರೆ ಮುಂದೆ ನಡೆ ಎಂದು ಭಿಕ್ಷೆ ನೀಡದೆ ಕಳಿಸುತ್ತಾನೆ. ಹೀಗೆ ಮನುಷ್ಯನಲ್ಲಿ ಮನೆ ಮಾಡಿದ ಮೂಢನಂಬಿಕೆಯನ್ನು ಅಲ್ಲಗಳೆದು ವೈಚಾರಿಕ ಅಂಶವನ್ನು ಪ್ರತಿಪಾದಿಸುತ್ತಾನೆ. ಮದುವೆ-ಶುಭ ಕಾರ್ಯ ಮಾಡುವಾಗ ಪ್ರತಿಘಳಿಗೆ, ದಿನವೂ ಶ್ರೇಷ್ಠ ಯಾವುದೇ ಕ್ಷಣವೂ ಕೆಟ್ಟದ್ದಲ್ಲ ಎನ್ನುತ್ತಾ

"ಎಮ್ಮವರು ಬೆಸಗೊಂಡಡೆ ಶುಭಲಗ್ನವೆನ್ನಿರಯ್ಯಾ
ರಾಶಿಕೂಟಗಣ ಸಂಬಂಧವುಂಟೆಂದು ಹೇಳಿರಯ್ಯ
ಚಂದ್ರಬಲ ತಾರಬಲವುಂಟೆಂದು ಹೇಳಿರಯ್ಯ..."[೧೯೫] ಎಂದಿದ್ದಾನೆ.

ಪುರೋಹಿತ ಶಾಹಿಗಳು ತಮ್ಮ ಜೀವನೋಪಾಯಕ್ಕಾಗಿ ಮದುವೆ ಮುಂತಾದ ಶುಭಕಾರ್ಯಗಳಲ್ಲಿ ರಾಶಿಕೂಟ, ಗಣಕೂಟಗಳ ನೆಪವೊಡ್ಡಿ ಕಾಲ ನಿರ್ಣಯ ಮಾಡುವ ಸಂಪ್ರದಾಯವನ್ನು ಬಸವಣ್ಣ ವಿರೋಧಿಸುತ್ತಾ ಪ್ರತಿದಿನವೂ ಶುಭದಿನವೆಂದು ಹೇಳಿರಿ ಮದುವೆಗೆ ನಾಳೆ ಎನ್ನುವುದಕ್ಕಿಂತ ಈ ದಿನವೇ ಶುಭವೆಂದು ತಿಳಿದು ರಾಶಿಕೂಟ, ಚಂದ್ರಬಲ ತಾರಾಬಲ ಇದೆ ಎಂದು ಹೇಳಿರಿ ಎನ್ನುತ್ತಾನೆ.

ಮೂಢನಂಬಿಕೆಯನ್ನು ಹೋಗಲಾಡಿಸಲು ಬಸವಣ್ಣ ಪ್ರಯತ್ನಿಸುತ್ತಾನೆ. ಹಾಗೆಯೇ ಸ್ವರ್ಗನರಕದ ಬಗ್ಗೆ ಇದ್ದ ಮೂಢನಂಬಿಕೆಯನ್ನು ಅಲ್ಲಗಳೆಯುತ್ತಾನೆ.

"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ!
ಸತ್ಯವ ನುಡಿವುದೆ ದೇವಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ!
ಆಚಾರವೇ ಸ್ವರ್ಗ, ಅನಾಚಾರವೇ ನರಕ. ಕೂಡಲ ಸಂಗಮದೇವಾ ನೀನೇ ಪ್ರಮಾಣ."[೧೯೬]

ಈ ಮೇಲಿನ ವಚನದಲ್ಲಿ ಸ್ವರ್ಗ-ನರಕಗಳು ಬೇರೆ ಯಾವ ಕಡೆಯೂ ಇಲ್ಲ. ಅವು ತಮ್ಮ ನಡುವೆಯೇ ಇವೆ ಎಂದು ಹೇಳಿ ಅವರೆಗಿನ ಮೂಢನಂಬಿಕೆಯನ್ನು ತೊಡೆದು ಹಾಕುತ್ತಾನೆ.

**ಏಕ ದೇವೋಪಾಸನೆ :** ಒಂದು ದೇಹಕ್ಕೆ ಒಂದೇ ತಲೆ ಇದ್ದರೆ ಎಷ್ಟು ಚೆನ್ನವೋ ಹಾಗೆಯೇ ಒಂದು ಧರ್ಮಕ್ಕೆ ಒಂದೇ ದೇವರಿರಬೇಕು. ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಸಹಸ್ರಾರು ದೇವರಿದ್ದುದನ್ನು ಮನಗಂಡ ಬಸವಣ್ಣ ಬೇಸತ್ತು ಇಸ್ಲಾಂ, ಕ್ರೈಸ್ತಧರ್ಮದಲ್ಲಿ ಏಕದೇವೋಪಾಸನೆ ಇರುವಂತೆ ಲಿಂಗಾಯತ ಧರ್ಮದಲ್ಲಿ ಏಕದೇವತಾರಾಧನೆ ಜಾರಿಗೆ ತರುವುದರ ಮೂಲಕ ಸಮಾಜದಲ್ಲಿ ಶಾಂತಿ ಮತ್ತು ಐಕ್ಯತೆ ಬರಲು ಶ್ರಮಿಸಿದ. ಆ ಬಹುದೇವಾತಾರಾಧನೆಯನ್ನು ಖಂಡಿಸಿ ಏಕದೇವತಾರಾಧನೆಯನ್ನು ಪ್ರತಿಪಾದಿಸುತ್ತಾನೆ.

"ದೇವನೊಬ್ಬ, ನಾಮ ಹಲವು, ಪರಮಪತಿವ್ರತೆಗೆ ಗಂಡನೊಬ್ಬ,
ಮತ್ತೊಂಬಕ್ಕೆರಗಿದರೆ ಕಿವಿಮೂಗ ಕೊಯ್ವನು!
ಹಲವು ದೈವದ ಎಂಜಲು ತಿಂಬದರನೇನೆಂಬೆ ಕೂಡಲ ಸಂಗಮದೇವಾ"[೧೯೭]

"ಮಡಕೆ ದೈವ, ಮೊರದೈವ, ಬೀದಿಯ ಕಲ್ಲುದೈವ, ಹಣಿಗೆ ದೈವ
ಬಿಲ್ಲನಾರಿದೈವ ಕಾಣಿರೋ! ಕೊಳಗದೈವ, ಗಿಣ್ಣಿಲು ದೈವ ಕಾಣಿರೋ!
ದೈವ ದೈವವೆಂದು ಕಾಲಿಡಲಿಂಬಿಲ್ಲಾ!! ದೈವನೊಬ್ಬನೇ ಕೂಡಲ ಸಂಗಮದೇವ"[೧೯೮]

ಈ ಮೇಲಿನ ವಚನಗಳಲ್ಲಿ ಬಸವಣ್ಣ ಮಡಕೆ, ಮೊರ, ಬೀದಿಯ ಕಲ್ಲು ಹಣಿಗೆ ಬಿಲ್ಲದಾರಿ, ಕೊಳಗ, ಗಿಣ್ಣಿಲು ಮುಂತಾದವುಗಳು ದೇವರಲ್ಲ ಅವುಗಳನ್ನು ನಂಬಬೇಡಿರಿ. ಅವುಗಳನ್ನು ನಂಬಿದರೆ ಹಲವು ದೇವರ ಎಂಜಲು ತಿಂದಂತಾಗುತ್ತದೆ. ದೇವರು ಒಬ್ಬನೇ ಇದ್ದಾನೆ ಅವನಿಗೆ ಹಲವು ಹೆಸರುಗಳಿವೆ. ಆ ಒಬ್ಬ ದೇವರನ್ನು ಬಿಟ್ಟು ಬೇರೆ ದೇವರಿಗೆ ತಲೆಬಾಗಬೇಡ ಕೂಡಲಸಂಗಮನಲ್ಲದೆ ಮತ್ತೊಬ್ಬ ದೇವರಿಲ್ಲ ಎಂದು ಒಂದೇ ದೇವರಲ್ಲಿ ನಿಷ್ಠೆ ತೋರುವಂತೆ ಪರಮ ಪತಿವ್ರತೆಯ ರೂಪಕದ ಮೂಲಕ ಏಕದೇವೋಪಾಸನೆಯನ್ನು ಪ್ರತಿಪಾದಿಸಿದ್ದಾನೆ.

**ಲಿಂಗಾಯತ ಧರ್ಮಸ್ಥಾಪಕ, ಇಷ್ಟಲಿಂಗಪ್ರತಿಪಾದಕ**

೧೨ನೇ ಶತಮಾನಕ್ಕಿಂತ ಪೂರ್ವದಲ್ಲಿ ಸ್ಥಾವರಲಿಂಗ ಪೂಜೆ ಮತ್ತು ಇಷ್ಟಲಿಂಗ ಪೂಜೆ ಎರಡೂ ಆಚರಣೆಗಳೂ ಜಾರಿಯಲ್ಲಿದ್ದವು. (ಈ ಆಚರಣೆ ಇಂದಿಗೂ ನಡೆದುಕೊಂಡು ಬಂದಿದೆ) ಆದರೆ ಈ

ಎರಡು ತೆರನಾದ ಪೂಜೆ ಕೇವಲ ಕೆಲವೇ ವರ್ಗಗಳಿಗೆ ಮಾತ್ರ ಸೀಮಿತವಾಗಿತ್ತು. ಕೆಳವರ್ಗದವರಿಗೆ ಈ ಪೂಜೆಗಳಲ್ಲಿ ಅವಕಾಶವಿರಲಿಲ್ಲ. ದೇವಾಲಯಗಳು ಶೋಷಣೆ ಆರಂಭಿಸಿದ್ದವು. ಕೆಳವರ್ಗದ ಜನರಿಗೆ ದೇವರ ದರ್ಶನ ನಿಷಿಧವಾಗಿತ್ತು. ಇದನ್ನು ತುಂಬಾ ಗಂಭೀರವಾಗಿ ಗಮನಿಸಿದ ಬಸವಣ್ಣ ಸ್ಥಾವರಲಿಂಗ ಪೂಜೆಯನ್ನು ಮತ್ತು ಕಟ್ಟಿಗೆ, ಕಲ್ಲು, ಮಡಕೆ ಮುಂತಾದ ದೇವರುಗಳ ಆರಾಧನೆಯನ್ನು ನಿರಾಕರಿಸಿ ಇಷ್ಟಲಿಂಗ ಪೂಜೆಯನ್ನು ಪ್ರತಿಪಾದಿಸಿ, ಲಿಂಗದೀಕ್ಷೆಯನ್ನು ಸಾವತ್ರಿಕಗೊಳಿಸಿದ. ಮಾನವನು ದೇವನಾಗಲು ಅಂದಿನ ಕುರುಹು ಆಚಾರದ ಪ್ರತೀಕ, ಅನುಭಾವದ ನಿಲುವಾಗಿ ಧರಿಸಿದ ಇಷ್ಟಲಿಂಗ ತನ್ನ ಸಾಕಾರದ ಕುರುಹು. ತಾನೇ ಪರಶಿವನೆಂಬ ಭಾವ. ವಿಶ್ವವೆಲ್ಲ ಪರಶಿವನ ಸಾಕಾರ ರೂಪವೆಂಬ ಸುಜ್ಞಾನ ಈ ಭಾವಜ್ಞಾನವನ್ನು ಕ್ರಿಯೆಯಲ್ಲಿ ಅಳವಡಿಸಿಕೊಂಡ ಸದಾಚಾರ ಸಂಪನ್ನ ಸತ್ಕ್ರಿಯಾಮೂರ್ತಿ ಮಾನವನೇ ದೃಷ್ಟಲಿಂಗ, ಇಷ್ಟಲಿಂಗ, ವಿಕಾಸದ ಏಕಸ್ವರೂಪವಾದ ದೃಷ್ಟಲಿಂಗ ಮಾನವನ ಸ್ವರೂಪವನ್ನು ಬ್ರಹ್ಮಾಂಡಗತವಾದ ನಿರಾಕಾರ ಪರಶಿವ ಚೇತನ ಸ್ವರೂಪವಾದ ಕಂತೆಯಲ್ಲಿ ಹುದುಗಿಸಿದ ಸ್ವರೂಪವೇ ತನ್ನ ರೂಪವಾದ ಇಷ್ಟಲಿಂಗ. ಇದು ಸೃಷ್ಟಿಕರ್ತನಾದ ಪರಶಿವನ ಸ್ವರೂಪ.''[೨೦೩] ಈ ಇಷ್ಟಲಿಂಗವನ್ನು ಸಾರ್ವತ್ರೀಕರಣಗೊಳಿಸಲು ಬಸವಾದಿ ಶರಣರು ಸ್ಥಾವರಲಿಂಗವನ್ನು ತಿರಸ್ಕರಿಸುತ್ತಾರೆ.

``ಕಲ್ಲಮನೆಯ ಮಾಡಿ, ಕಲ್ಲದೇವರ ಮಾಡಿ
ಆ ಕಲ್ಲು ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೋ
ಲಿಂಗ ಪ್ರತಿಷ್ಠೆಯ ಮಾಡಿದವಂಗೆ ನಾಯಕನರಕ...''[೧೯೯]

ಎಂದು ಸ್ಥಾವರಲಿಂಗ ಪ್ರತಿಷ್ಠಾಪನೆಯನ್ನು ವಿರೋಧಿಸಿದ್ದಾರೆ. ಕಲ್ಲ ಮೇಲೆ ಕಲ್ಲ ಕೆಡೆದರೆ ದೇವರು ಎಲ್ಲಿ ಹೋದ ಎಂದು ಪ್ರಶ್ನಿಸಿದ್ದಾರೆ. ಹಾಗೆಯೇ ಮುಂದುವರೆದು

``ಉಳ್ಳವರು ಶಿವಾಲಯವ ಮಾಡುವರಯ್ಯಾ
ನಾನೇನು ಮಾಡುವೆ? ಬಡವನಯ್ಯಾ
ಎನ್ನ ಕಾಲೇ ಕಂಭ, ದೇಹವೇ ದೇಗುಲ
ಶಿರ ಹೊನ್ನ ಕಳಸವಯ್ಯಾ ಕೂಡಲಸಂಗದೇವಾ
ಕೇಳಯ್ಯ : ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲಾ!''[೨೦೦]

ಎಂದು ಬಸವಣ್ಣ ಕಾಲೇಕಂಭ, ದೇಹವೇ ದೇಗುಲ ಸಿರ ಹೊನ್ನ ಕಳಸ ಆದ್ದರಿಂದ ಭೌತಿಕ ಕಟ್ಟಡವಾದ ದೇವಾಲಯಕ್ಕೆ ಅಳಿವಿದೆ ಇಷ್ಟಲಿಂಗದ ಸ್ವರೂಪನಾದ ಜಂಗಮನಿಗೆ ಅಳಿವಿಲ್ಲ ಎಂದಿದ್ದಾರೆ.

ಈ ಇಷ್ಟಲಿಂಗದ ಮಹತ್ವವನ್ನು ಕುರಿತು ಬಸವಣ್ಣ

``ಎಂತಹನಾದರೇನು, ಲಿಂಗಮುಟ್ಟಿದವನೇ ಕೀಳು ಜಾತಿ
ಕುಲವಹುದು ತಪ್ಪುದು ಲಿಂಗ ಮುಟ್ಟಲೊಡನೆ...''[೨೦೧]

ಎಂದು ಹೇಳಿದ್ದಾನೆ. ಅಂದರೆ ಎಂಥ ಕೀಳು ಜಾತಿಗೆ ಸೇರಿದ ವ್ಯಕ್ತಿಯಾಗಲಿ ಅವನಿಗೆ ಲಿಂಗದೀಕ್ಷೆಯಾದ ಬಳಿಕ ಅವನ ಕುಲ ನಾಶವಾಗಿ ಅವನು ಶ್ರೇಷ್ಠತೆ ಪಡೆಯುತ್ತಾನೆ. ಎಂತಹ ಶ್ರೇಷ್ಠ ಕುಲದಲ್ಲಿ ಹುಟ್ಟಿದ ವ್ಯಕ್ತಿಯಾಗಲಿ ಅವನು ಲಿಂಗದೀಕ್ಷೆ ತೆಗೆದುಕೊಳ್ಳದಿದ್ದರೆ ಅವನೇ ಕೀಳುಜಾತಿಯವನು. ಬಹುಶಃ ಬಸವಣ್ಣ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿದ್ದ ಶ್ರೇಷ್ಠ-ಕನಿಷ್ಠತೆಯನ್ನು ತೊಡೆದು ಹಾಕಲು ಈ ಇಷ್ಟಲಿಂಗ ಪರಿಕಲ್ಪನೆಯನ್ನು ಹುಟ್ಟು ಹಾಕಿ ಸಾರ್ವತ್ರೀಕರಣಗೊಳಿಸಿದಂತಿದೆ. ಇಷ್ಟಲಿಂಗದ ಮಹತ್ವ ಅರಿತ ಎಲ್ಲಾ ಶರಣರು ಲಿಂಗದೇಹಿಗಳಾದರು.

ಪ್ರತಿಯೊಂದೂ ಧರ್ಮಕ್ಕೂ ತನ್ನದೇ ಆದ ಸಿದ್ಧಾಂತ ಮತ್ತು ಪ್ರವರ್ತಕ ಅಥವಾ ಧರ್ಮಗುರು ಇದ್ದೇ ಇರುತ್ತಾರೆ. ಕ್ರಿಶ್ಚಿಯನ್, ಮುಸ್ಲಿಂ, ಬೌದ್ಧ, ಜೈನ ಮುಂತಾದ ಧರ್ಮಗಳಿಗೆ ಧರ್ಮಗುರು ಮತ್ತು ಧಾರ್ಮಿಕ ಸಿದ್ಧಾಂತ ಇರುವಂತೆ ಲಿಂಗಾಯತ ಅಥವಾ ವೀರಶೈವ ಧರ್ಮಕ್ಕೆ ಧರ್ಮಪ್ರವರ್ತಕ ಅಥವಾ ಗುರು ಇದ್ದಿರಲೇಬೇಕಲ್ಲವೇ? ಕೆಲವು ವಿದ್ವಾಂಸರ ಪ್ರಕಾರ ವೀರಶೈವ(ಲಿಂಗಾಯತ) ಧರ್ಮಕ್ಕೆ ಪ್ರವರ್ತಕರು ಪಂಚಾಚಾರ್ಯರು ಎಂದರೆ ಮತ್ತೆ ಕೆಲವರು ಇದಕ್ಕೆ ಧರ್ಮಪ್ರವರ್ತ ಇಲ್ಲ ಎನ್ನುತ್ತಾರೆ. ಲಿಂಗಾಯತ ಧರ್ಮ ಪ್ರವರ್ತಕ ಬಸವಣ್ಣ ಎಂದು ಮತ್ತೆ ಕೆಲವು ವಿದ್ವಾಂಸರು ಹೇಳುತ್ತಾರೆ. ಈ ಕುರಿತು ಅನೇಕ ಚರ್ಚೆಗಳು ನಡೆದಿರುವುದು ನಮ್ಮ ಕಣ್ಣ ಮುಂದೆ ಇದೆ.

೧. ವೀರಶೈವ ಧರ್ಮ ಪ್ರವರ್ತಕರು ಪಂಚಾಚಾರ್ಯರು ಎಂದಾದರೆ ಇವರು ಹುಟ್ಟಿದ ಸ್ಥಳ ತಂದೆ-ತಾಯಿ ಇವರ ಕಾರ್ಯಕ್ಷೇತ್ರ ಮುಂತಾದವುಗಳ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ಇವರು ಹುಟ್ಟಿದ್ದು ಸ್ಥಾವರಲಿಂಗಗಳಿಂದ. ಐಕ್ಯವಾದದ್ದು ಸ್ಥಾವರಲಿಂಗಗಳಲ್ಲೇ. ವೀರಶೈವಧರ್ಮದ ಪ್ರಧಾನ ಲಕ್ಷಣ ಶಿವನನ್ನು ಇಷ್ಟಲಿಂಗದಲ್ಲಿ ಪೂಜಿಸುವುದು ಇಷ್ಟಲಿಂಗೋಪಾಸನೆ. ಪಂಚಾಚಾರ್ಯರಲ್ಲಿ ಮೊದಲಿಗನಾದ ರೇವಣಸಿದ್ಧನು ಸ್ಥಾವರಲಿಂಗ ಪೂಜಕನಾಗಿದ್ದು ಕೋಟ್ಯಾಂತರ ಸ್ಥಾವರ ಲಿಂಗಗಳನ್ನು ಸ್ಥಾಪಿಸುತ್ತಾನೆ. ಈ ಕುರಿತು ಕವಿ ಹರಿಹರ ತನ್ನ ರೇವಣ ಸಿದ್ದೇಶ್ವರ ರಗಳೆಯಲ್ಲಿ ''ವಿಭೀಷಣ ಸಹಿತಂ ಲಂಕೆಗೆ ನೆಗೆದು ಸಮುದ್ರ ಮಧ್ಯದ ಮತ್ಸ್ಯಕೇಶ್ವರನ ಸಮಕ್ಷಮದೊಳ್ ಮಾಡಿತೇ ಮುಹೂರ್ತಮಾಗೆ ಮೂರುಕೋಟಿ ಶಿವಲಿಂಗಪ್ರತಿಷ್ಠೆಯಂ ಮಾಡಿ''[೨೦೨] ಎಂದು ರೇವಣಸಿದ್ದೇಶ್ವರ ಲಂಕಾದಲ್ಲಿ ಮೂರು ಕೋಟಿ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿದ್ದರ ಬಗ್ಗೆ ದಾಖಲಿಸುತ್ತಾನೆ. ಉಳಿದಂತೆ ನಾಲ್ಕು ಆಚಾರ್ಯರ ಕಾರ್ಯ ಸಾಧನೆಯ ಬಗ್ಗೆ ಹಂಪಿ ಪರಿಸರದ ಕನ್ನಡ ಸಾಹಿತ್ಯ ಮೌನವಹಿಸಿದೆ. ಇಷ್ಟಲಿಂಗವನ್ನು ಪ್ರಧಾನೀಕರಿಸಿದ ವೀರಶೈವ ಧರ್ಮ ಸ್ಥಾವರಲಿಂಗ ಪ್ರತಿಷ್ಠಾಪನೆಯನ್ನು ನಿರಾಕರಿಸುತ್ತದೆ. ಅಲ್ಲದೆ ಹರಿಹರ ರೇವಣಸಿದ್ದರನ್ನು 'ಸಿದ್ದ ಕುಲಪತಿ, ಸಿದ್ಧಕುಲ ಕಮಳ, ಸಿದ್ಧಕುಲ ಶೇಖರ''[೨೦೩] ಎಂಬಿತ್ಯಾದಿಯಾಗಿ ಕರೆದಿರುವುದರಿಂದ ರೇವಣಸಿದ್ಧ ಸಿದ್ದಸಂಪ್ರದಾಯದವನೆ ಹೊರತು ವೀರಶೈವನಲ್ಲ ಎಂದೆನಿಸುತ್ತದೆ.

೨. ಡಾ.ಎಂ.ಚಿದಾನಂದಮೂರ್ತಿ ಮೊದಲಾದ ವಿದ್ವಾಂಸರು ವೀರಶೈವಧರ್ಮ ಹಿಂದೂ ಧರ್ಮದಷ್ಟೇ ಪ್ರಾಚೀನ. ಹಿಂದೂ ಧರ್ಮ ಸ್ಥಾಪಕ ಯಾರು ಎಂಬ ಪ್ರಶ್ನೆಗೆ ಏನು ಉತ್ತರವೋ ಅದೇ ಉತ್ತರ ಇಲ್ಲೂ ಇದೆ''[೨೦೪] ಎಂದಿದ್ದಾರೆ. ಇವರ ಪ್ರಕಾರ ವೀರಶೈವಧರ್ಮದ ಸ್ಥಾಪಕರು ಯಾರೆಂದು ತಿಳಿಯದು. ಧರ್ಮಸ್ಥಾಪಕರೇ ಇಲ್ಲವೆಂದ ಮೇಲೆ ಧರ್ಮದ ಸಿದ್ಧಾಂತ ತಾನೇ ಹೇಗೆ ಹುಟ್ಟಿಕೊಳ್ಳಲು ಸಾಧ್ಯ ಎಂಬ ಪ್ರಶ್ನೆ ಹಾಕಿಕೊಂಡರೆ ಡಾ.ಚಿದಾನಂದಮೂರ್ತಿಯವರ ವಾದ ಸರಿಯಲ್ಲವೆಂದು ತೋರುತ್ತದೆ.

೩. ಪ್ರೊ.ಎಸ್.ಎಸ್.ಬಸವನಾಳ ಮೊದಲಾದ ವಿದ್ವಾಂಸರು ಲಿಂಗಾಯತ ಧರ್ಮ ಸ್ಥಾಪಕ ಬಸವಣ್ಣ ಎಂಬ ಮಾತನ್ನು ಒಪ್ಪಬಹುದಾಗಿದೆ. ಏಕೆಂದರೆ ಅನೇಕ ವಚನಕಾರರು ಕವಿಗಳು ಬಸವಣ್ಣನನ್ನು ಗುರು, ಪ್ರಥಮಾಚಾರ್ಯ, ಷಟ್ಸ್ಥಲಮಾರ್ಗಿ ಮುಂತಾಗಿ ಕರೆದಿದ್ದಾರೆ. ಅಲ್ಲದೆ ಇಷ್ಟಲಿಂಗದ ದೀಕ್ಷೆಯನ್ನು ಎಲ್ಲಾ ಜಾತಿ-ಜನವರ್ಗಗಳಿಗೂ ನೀಡಿ ಲಿಂಗದೀಕ್ಷೆಯನ್ನು ಸಾರ್ವತ್ರೀಕರಣಗೊಳಿಸಿದ ಮತ್ತು ಸಮಾಜದ ಎಲ್ಲಾ ಕೆಳವರ್ಗಗಳಿಗೆ ಸಾಮಾಜಿಕ ಸಮಾನತೆ ನೀಡಿದ ಕೀರ್ತಿ ಬಸವಣ್ಣನಿಗೆ ಸಲ್ಲುತ್ತದೆ. ಆದ್ದರಿಂದ ಈತನೇ ಲಿಂಗಾಯತ ಧರ್ಮದ ಸ್ಥಾಪಕನೆಂದು ಹೇಳಬಹುದಾಗಿದೆ. ವಚನಕಾರರು ಬಸವಣ್ಣನ(ಹಿರಿಮೆ)ನ್ನು ಕುರಿತು ಹೀಗೆ ಹೇಳಿದ್ದಾರೆ.

ಅಲ್ಲಮ ಪ್ರಭುದೇವರು ಬಸವಣ್ಣನನ್ನು ಕುರಿತು

೧. ''ಕಲ್ಯಾಣವೆಂಬ ಪ್ರಣಿತೆಯಲ್ಲಿ ಭಕ್ತಿ ರಸವೆಂಬ ತೈಲವನೆರೆದು
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿ ಮುಟ್ಟಿಸಲು
ಗೊಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನ ಬಸವಣ್ಣನ
ಕಂಡು ಬದುಕಿದೆ ಕಾಣಾ ಸಿದ್ಧರಾಮಯ್ಯ!

೨. ಸಕಲವನೆ ಬಲ್ಲ; ಲಿಂಗದೊಳಗೆ ತೋರಿದನು
ಲಿಂಗದ ಬೆಳಗ ಸಕಲದೊಳಗೆ ತೋರಿದನು
.........................................
ಹೊರಗೆ ಮಹಾಲಿಂಗವಾಗಿ ನಿಂದನು ಶ್ರೀಗುರುಲಿಂಗ ಬಸವಣ್ಣನು

೩. ................................
........ಜಗವರಿಯೆ ಶಿವಾಚಾರದ ಧ್ವಜವನೆತ್ತಿ
ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಗೆಯಾದನು''[೨೦೫]

೪. ''ಶಿವಗುರುವೆಂಬ ಬಲ್ಲಾತನೆ ಗುರು, ಶಿವ ಲಿಂಗವೆಂದು ಬಲ್ಲಾತನೆ ಗುರು
ಅರಿದ ಮಹಾಮಹಿಮ ಸಂಗನಬಸವಣ್ಣನು ಎನಗೆಯೂ ಗುರು, ನಿನಗೆಯೂ ಗುರು;

೫. “ನಿತ್ಯ ಬಸವಣ್ಣ, ನಿರಂಜನ ಬಸವಣ್ಣ, ನಿಸ್ಸಂಗ ನಿಜ ರೂಪು ಬಸವಣ್ಣ
ಶಿವಸಮಯ ಪ್ರತಿಷ್ಠಾಪನಾಚಾರ್ಯ ಬಸವಣ್ಣ”[೨೦೬]

೬. “ಆದಿಯಲ್ಲಿ ನೀನೇ ಗುರುವಾದ ಕಾರಣ ನಿನ್ನಿಂದ ಹುಟ್ಟಿತು ಲಿಂಗ
ಆದಿಯಲ್ಲಿ ನೀನೇ ಲಿಂಗವಾದ ಕಾರಣ ನಿನ್ನಿಂದ ಹುಟ್ಟಿತ್ತು ಜಂಗಮ

ಅದು ಕಾರಣ ನೀನೇ ಸರ್ವಾಚಾರ ಸಂಪನ್ನನಾಗಿ ಪೂರ್ವಾಚಾರಿ
ನೀನೆಯಾದ ಕಾರಣ ಗೂಹೇಶ್ವರಲಿಂಗದಲ್ಲಿ........ಸಂಗನ ಬಸವಣ್ಣಾ”[೨೦೭] ಎಂದಿದ್ದಾರೆ.

ಅಲ್ಲಮ ಪ್ರಭುವಿನ ಪ್ರಕಾರ ಬಸವಣ್ಣ ಪರಮಾರಾಧ್ಯ, ಗುರು, ಪೂರ್ವಾಚಾರಿ ಮುಂತಾಗಿ ಕಾಣುತ್ತಾನೆ. ಕಾರಣ ಲಿಂಗಬಲ್ಲವನು ಬಸವಣ್ಣ, ಜಂಗಮ, ಪ್ರಸಾದ, ಆಚಾರ, ಶಿವಾಚಾರದ ಧ್ವಜವನ್ನು ಭೂಮಿಯಲ್ಲಿ ಎತ್ತಿ ಹಿಡಿದವನು ಬಸವಣ್ಣ. ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ಬಸವಣ್ಣನಿಂದಲೇ ಹುಟ್ಟಿವೆ. ಆದ್ದರಿಂದ ಶಿವಸಮಯ(ಲಿಂಗಾಯತ) ಪ್ರತಿಷ್ಠಾಪನಾಚಾರ್ಯ ಬಸವಣ್ಣನಾಗಿದ್ದಾನೆ.

ಚನ್ನಬಸವಣ್ಣ : “ಭಕ್ತರಿಗೆ ಒಡೆಯನಾಗಿಪ್ಪನು ಸಂಗನ ಬಸವಣ್ಣನು
ಜಗದಾರಾಧ್ಯ ಬಸವಣ್ಣನು ಪ್ರಥಮಗುರು ಬಸವಣ್ಣನು”

ಸಿದ್ಧರಾಮ : “ಶಿವಗುರು ಬಸವಣ್ಣ ಬಸವಗುರು ಶಿವನಾಗಿ...”[೨೦೮]

ಎಂದಿದ್ದಾರೆ.

ಚನ್ನಬಸವಣ್ಣನ ಪ್ರಕಾರ ಬಸವಣ್ಣ ಪ್ರಥಮಗುರು, ಭಕ್ತರಿಗೆ ಒಡೆಯ(ಜಗದ್ಗುರು?) ಜಗದಾರಾಧ್ಯ ಆಗಿದ್ದಾನೆ. ಅಂದರೆ ಲಿಂಗಾಯತ ಧರ್ಮಕ್ಕೆ ಪ್ರಥಮ ಗುರುವಾಗಿದ್ದಾನೆ. ಸಿದ್ಧರಾಮನಿಗೆ ಶಿವಗುರು ಬಸವಣ್ಣ ಬಸವಣ್ಣನೇ ಶಿವಗುರುವಾಗಿದ್ದಾನೆ.

ಅಕ್ಕಮಹಾದೇವಿ ಮತ್ತು ಅಕ್ಕನಾಗಮ್ಮ ಬಸವಣ್ಣನನ್ನು ಕುರಿತು

ಅಕ್ಕಮಹಾದೇವಿ : “ವೇದಂಗಳಿಗಭೇದ್ಯನು, ಶಾಸ್ತ್ರಂಗಳಿಗಸಾಧ್ಯನು, ಪುರಾಣಂಗಳಿಗಗಮ್ಯನು
ಆಗಮಂಗಳಿಗಗೋಚರನು, ತರ್ಕಕ್ಕತರ್ಕ್ಯನು, ವಾಙ್ಮನಕ್ಕತೀತವೆನಿಪ ಪರಶಿವಲಿಂಗನು
......................
“........ಬಸವಣ್ಣನು ಜಗದ್ಧಿತಾರ್ಥವಾಗಿ ಮರ್ತ್ಯಕ್ಕೆ ಬಂದು
ವೀರಶೈವ ಮಾರ್ಗವವರಿಪುವುದಕ್ಕೆ ..........
ಗುರುಕಾರುಣ್ಯವೇದ್ಯನು ವಿಭೂತಿ ರುದ್ರಾಕ್ಷಿ ಧಾರಕನು
ಪಂಚಾಕ್ಷರಿಭಾಷಾ ಸಮೇತನು ಲಿಂಗಾಂಗ ಸಂಬಂಧಿ ಏಕಲಿಂಗ ನಿಷ್ಠಾಪರನು

.......................

ಷಟ್‌ಸ್ಥಲಭರಿತ ಸರ್ವಾಂಗಲಿಂಗಿ... ದಾಸೋಹ ಸಂಪನ್ನ......

ಶಿವಧರ್ಮಪುಂಜ........."[೨೦೯]

ಅಕ್ಕನಾಗಮ್ಮ : "......ಮರ್ತ್ಯಲೋಕದಲ್ಲಿ ಸದಾಚಾರದ ಬೆಳವಿಗೆಯ

ಮಾಡಲೆಂದು ಬಸವಣ್ಣ ಬಂದು ಭಕ್ತಿಸ್ಥಲವರುಹಿದನು

ಗುರುಲಿಂಗ ಜಂಗಮದಾಸೋಹ ಪ್ರಸಾದ ಪಾದೋದಕದ

ಹಾದಿಯನೆಲ್ಲರಿಗೆ ತೋರಿದ ..........."[೨೧೦]

ಅಕ್ಕಮಹಾದೇವಿಯ ಪ್ರಕಾರ ಬಸವಣ್ಣ ವೇದ, ಆಗಮ, ಶಾಸ್ತ್ರ, ಪುರಾಣಗಳಿಗೆ ಅಗೋಚರನು ಜಗತ್ತಿನ ಹಿತಕ್ಕಾಗಿ ಭೂಮಿಯಲ್ಲಿ (ಜಗತ್ತಿಗೆ) ವೀರಶೈವ ಮಾರ್ಗವನ್ನು ತಿಳಿಸುವುದಕ್ಕೆ ವಿಭೂತಿ ರುದ್ರಾಕ್ಷಿಧಾರಕನಾದ ಬಸವಣ್ಣ ಭೂಮಿಗೆ ಬಂದಿದ್ದಾನೆ. ಹಾಗೆಯೇ ಅಕ್ಕನಾಗಮ್ಮನ ಪ್ರಕಾರ ಬಸವಣ್ಣ ಭೂಲೋಕದಲ್ಲಿ ಸದಾಚಾರ ಬೆಳಗಲು ಭಕ್ತಸ್ಥಲ ತಿಳಿಸಿದ. ಹಾಗೆಯೇ ಗುರುಲಿಂಗ ಜಂಗಮ ದಾಸೋಹ ಪ್ರಸಾದ ಪಾದೋದಕ ತತ್ವಗಳನ್ನು ಹುಟ್ಟು ಹಾಕಿ ಅದರ ಮಾರ್ಗವನ್ನು ಎಲ್ಲಾ ಶರಣರಿಗೆ ತೋರಿಸಿಕೊಟ್ಟ ಗುರು ಬಸವಣ್ಣ.

ಈ ಮೇಲಿನ ವಚನಕಾರರಲ್ಲದೆ ಅನೇಕ ವಚನಕಾರರು ಬಸವಣ್ಣನನ್ನು ಪೂರ್ವಾಚಾರಿ, ಪ್ರಥಮಗುರು, ಪರಮಾರಾಧ್ಯ, ಶಿವಗುರು ಮುಂತಾಗಿ ಕರೆದಿರುವುದು ಅವರ ವಚನಗಳಿಂದ ತಿಳಿದುಬರುತ್ತದೆ.

ಹರಿಹರ ಕವಿಯು ತನ್ನ ಬಸವರಾಜದೇವರ ರಗಳೆಯಲ್ಲಿ

"ಶಿವಭಕ್ತಿ ಸಾರ್ವಭೌಮಂ ಜಂಗಮಪ್ರಾಣಿ ಸಂಗನಬಸವಂ"

"ಶರಣಸರೋಜಸಂಕುಳ ಸಹಸ್ರಕರಂ ಶರಣಾಬ್ಧಿಚಂದ್ರಮಂ

ಶರಣ ಸಮಾಜ ಚಾತಕ ಸುಧಾವರುಷಂ ಶರಣಾದ್ರಿ ಶಾಸನಂ"[೨೧೧]

"ಭಕ್ತಿ ಕುಲತಿಲಕಂ ಸತ್ಯಸಾಮ್ರಾಜ್ಯ ಸಾರ್ವಭೌಮಂ"

ಶರಣರ ಸಂಗದ ಶಾಶ್ವತನೆನಿಪ ಬಸವರಾಜಂ

ಲಿಂಗಜಂಗಮ ಪ್ರಸಾದ ಹೃದಯನಾಗಿ"[೨೧೨]

ಎಂದು ಬಸವಣ್ಣನನ್ನು ಕರೆದಿದ್ದಾನೆ. ಹರಿಹರನ ಪ್ರಕಾರ ಬಸವಣ್ಣ ಭಕ್ತಕುಲ(ಲಿಂಗವಂತ)ಕ್ಕೆ ಕಣ್ಣು ಇದ್ದ ಹಾಗೆ. ಲಿಂಗದೀಕ್ಷೆ ನೀಡುವುದರ ಮೂಲಕ ಶಿವಭಕ್ತಿಯನ್ನು ಜಗತ್ತಿಗೆ ತೋರಿಸಿದ ಜಂಗಮ ಪ್ರಾಣಿಯಾದವನು. ಶರಣರೆಂಬ ಕಮಲಗಳ ಸಮೂಹಕ್ಕೆ ಸೂರ್ಯ, ಶರಣ ಸಮೂಹ ಸಮುದ್ರಕ್ಕೆ ಚಂದ್ರ. ಶರಣ(ಲಿಂಗಾಯತ) ಸಮಾಜ ಚಾತಕ ಅಮೃತಬಿಂದು, ಶರಣರೆಂಬ ಬೆಟ್ಟಕ್ಕೆ ಆದಿಗುರು(ಶಾಸನ) ಸತ್ಯ ಸಾಮ್ರಾಜ್ಯದ ಒಡೆಯ, ಭಕ್ತಕುಲ(ಲಿಂಗಾಯತ)ಕ್ಕೆ ತಿಲಕ(ಪ್ರಮುಖಶ್ರೇಷ್ಠ) ಅಂಥಹ ಬಸವಣ್ಣ ಲಿಂಗ ಜಂಗಮ ಪ್ರಸಾದ ಎಂಬ ಸಿದ್ಧಾಂತ ರೂಪಿಸಿದನು ಎಂದಿದ್ದಾನೆ ಹರಿಹರ ಕವಿ.

ಚಾಮರಸ ಕವಿ ತನ್ನ ಪ್ರಭುಲಿಂಗಲೀಲೆಯಲ್ಲಿ

"ಕಾಯದೊಳು ಗುರುಲಿಂಗಜಂಗಮ

ದಾಯತವನರಿಯಲ್ಕೆ................

ರಾಯ ಪೂರ್ವಾಚಾರ್ಯ ಸಂಗನ ಬಸವ ಶರಣಾರ್ಥಿ"[೨೧]

"ಪರಮ ಪೂರ್ವಾಚಾರ್ಯ ಬಸವೇ

ಶ್ವರನಿಗೊಬ್ಬ ........"[೨೨] ಬಸವಣ್ಣನನ್ನು ಕುರಿತು ಉಲ್ಲೇಖಿಸಿದ್ದಾನೆ.

ಚಾಮರಸನ ಪ್ರಕಾರ ಬಸವಣ್ಣ ದೇಹದಲ್ಲಿ ಗುರುಲಿಂಗ ಜಂಗಮದ ಕ್ರಮವನ್ನು ಸರಿಯಾಗಿ ಆಚರಿಸಲು ಸರಳ ಮಾರ್ಗ ತೋರಿದ್ದಾನೆ. ಅದರ ಮೂಲಕ ಎಲ್ಲಾ ಭಕ್ತರನ್ನು ಪವಿತ್ರಗೊಳಿಸಿದ್ದಾನೆ. ಆದ್ದರಿಂದ ಈತನೇ ಪೂರ್ವಾಚಾರ್ಯ (ಲಿಂಗಾಯತದ ಪ್ರಥಮಗುರು)ನಾಗಿದ್ದಾನೆ. ಅದಕ್ಕಾಗಿ ಆತನಿಗೆ ನಮಿಸುತ್ತೇನೆ. ಮತ್ತೊಂದು ಕಡೆ ಇದೇ ಕಾವ್ಯದಲ್ಲಿ ಬಸವಣ್ಣನನ್ನು ಪರಮ ಪೂರ್ವಾಚಾರ್ಯ 'ಆದಿಪುರುಷ'(ಪು.೨೪೯) ಎಂದು ಕರೆದಿದ್ದಾನೆ.

ಮೊಗ್ಗೆಯ ಮಾಯಿದೇವ ತನ್ನ ಏಕೋತ್ತರಶತಸ್ಥಲ ಕೃತಿಯಲ್ಲಿ

೧. "ಆದಿ ವೃಷಭೇಶ್ವರನು ಬಸವನಾಮವ ಧರಿಸಿ

ಮೇದಿನಿಯೊಳುದಿಸಿ ಭಕ್ತಿಯ ಸಕಲ ಭಕ್ತರಿಗೆ

..................... ಕರ್ಮ

ಬೋಧೆ ಮುಸುಕದ ವೀರಶೈವ ಸಿದ್ಧಾಂತಮಂ ಬೋಧಿಸಿದ ಕರುಣವೊಗೆದು"[೨೩]

೨. "ಶಿವಾಧವ ಶತಕಕೃತಿಯಲ್ಲಿ (ಪದ್ಯ ೨)

ಜಯ ಬಸವೇಶ ಭಕ್ತಜನ ಭಾಗ್ಯ ಶುಭೋದಯ ವೀರಶೈವ

ನಿರ್ಣಯ ಪರಮಾವತಾರ"

"ಬಸವಪುರಾತನರ್ ಚರಿಸಿ ತೋರಿದ ಷಟ್‌ಸ್ಥಲ ಮಾರ್ಗ"[೨೪] ಎಂದು ಹೇಳಿದ್ದಾನೆ.

ಮೊಗ್ಗೆಯ ಮಾಯಿದೇವನ ಪ್ರಕಾರ ಬಸವಣ್ಣ ವೇದಶಾಸ್ತ್ರ ಪುರಾಣಗಳ ವಾದವನ್ನು ಒಪ್ಪದವ ಸಕಲಭಕ್ತರಿಗೆ ಭಕ್ತಿಯನ್ನು ಮತ್ತು ಸಕಲದರುಶನಗಳ ಕರ್ಮಬೋಧೆ ಮುಸುಕದೇ ಇರುವ ವೀರಶೈವ ಸಿದ್ಧಾಂತವನ್ನು ಬೋಧಿಸಲು(ಆದಿರುದ್ರ) ಬಸವನಾಮ ಧರಿಸಿ ಭೂಮಿಯಲ್ಲಿ ಹುಟ್ಟಿಬಂದ ಅಂದರೆ ವೀರಶೈವ ಸಿದ್ಧಾಂತ ಪ್ರತಿಪಾದಕ ಬಸವಣ್ಣನೇ ಆಗಿದ್ದಾನೆ.

ಚತುರ್ಮುಖ ಬೊಮ್ಮರಸ ತನ್ನ ರೇವಣಸಿದ್ದೇಶ್ವರ ಪುರಾಣದಲ್ಲಿ

"............ಪರಮ ಶಿವಧರ್ಮವನು

ಮೇದಿನಿಯ ಮೇಲುಂಟು ಮಾಡಿ

.............ವೀರಶೈವಾಚಾರ್ಯ ಬಸವದಂ

ಡಾಧೀಶ..........''೨೧

ಎಂದು ಹೇಳಿದ್ದಾನೆ. ಬೊಮ್ಮರಸನ ಪ್ರಕಾರ ಭೂಮಿಯಲ್ಲಿ ಶಿವಧರ್ಮ(ಲಿಂಗಾಯತ)ವನ್ನು ಸ್ಥಾಪಿಸಿದ ಬಸವಣ್ಣ ವೀರಶೈವಾಚಾರ್ಯನಾಗಿದ್ದಾನೆ. ಅಂದರೆ ವೀರಶೈವಧರ್ಮ(ಲಿಂಗಾಯತ)ಸ್ಥಾಪಕ ಗುರುವಾಗಿದ್ದಾನೆ.

ಹೀಗೆ ಒಟ್ಟಾರೆಯಾಗಿ ಹೇಳುವುದಾದರೆ ಬಸವಣ್ಣನನ್ನು 'ಪರಮಾರಾಧ್ಯ' ಗುರು, ಪೂರ್ವಾಚಾರಿ, ಶಿವಸಮಯ ಪ್ರತಿಷ್ಠಾಪನಾಚಾರ್ಯ, ಲಿಂಗಪ್ರಾಣಿ, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ ಸ್ವರೂಪ, ಪ್ರಥಮಗುರು, ಭಕ್ತರಿಗೆ ಒಡೆಯ(ಜಗದ್ಗುರು) ಜಗದಾರಾಧ್ಯ, ಶಿವಗುರು, ವೇದ ಆಗಮ, ಶಾಸ್ತ್ರ ಪುರಾಣಗಳಿಗೆ ಅಗೋಚರನು, ವೀರಶೈವಮಾರ್ಗ ತೋರಿದವನು (ತಿಳಿಸಿದವನು). ಗುರು, ಲಿಂಗ, ಜಂಗಮ, ದಾಸೋಹ, ಪ್ರಸಾದ ಪಾದೋದಕದ ಮಹತ್ವವನ್ನು ಎಲ್ಲರಿಗೂ ತಿಳಿಸಿದವನು. ಭಕ್ತಕುಲದ ಕಣ್ಣು, ಶರಣ ಸಮೂಹದ ಸೂರ್ಯ, ಪರಮಪೂರ್ವಚಾರಿ, ವೇದ, ಶಾಸ್ತ್ರ, ಪುರಾಣಗಳ ವಾದ ಒಪ್ಪದವನು. ವೀರಶೈವ ಸಿದ್ಧಾಂತ ಪ್ರತಿಪಾದಕ, ವೀರಶೈವಾಚಾರ್ಯ ಇನ್ನು ಮುಂತಾಗಿ ಸಮಕಾಲೀನ ವಚನಕಾರರು, ನಂತರದ ವೀರಶೈವ ಕವಿಗಳು (ಬಸವಣ್ಣನನ್ನು) ಕರೆದಿದ್ದಾರೆ. ಈ ಮೇಲಿನ ಅಂಶಗಳನ್ನು ಗಮನಿದಲ್ಲಿಟ್ಟುಕೊಂಡು ಹೇಳುವುದಾದರೆ, ಬಸವಣ್ಣನೇ ಲಿಂಗಾಯತ (ವೀರಶೈವ) ಧರ್ಮದ ಸ್ಥಾಪಕನೆಂದು ಹೇಳಬೇಕಾಗುತ್ತದೆ.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ವೀರಶೈವ - ಲಿಂಗಾಯತ ಅಥವಾ ಲಿಂಗವಂತ ಎಂಬ ಪದಗಳೂ ಹರಿಹರನಿಂದ ಹಿಡಿದು ಚಾಮರಸನ ತನಕ ಎಲ್ಲಿಯೂ ವೀರಶೈವ ಪದ ಬಳಕೆಯಾಗಿಲ್ಲ. ಕೇವಲ 'ಲಿಂಗವಂತ' ಎಂಬ ಪದ ಮಾತ್ರ ಬಳಕೆಯಾಗಿದೆ. ಚಾಮರಸನಿಂದ ಹಿಡಿದು ಎಲ್ಲಾ ವೀರಶೈವ (ಲಿಂಗಾಯತ) ಕವಿಗಳು ವೀರಶೈವ, ಲಿಂಗವಂತ ಪದ ಬಳಸಿದ್ದಾರೆ. ವಚನಕಾರರಲ್ಲಿಯೂ ''ವೀರಶೈವ'ಪದ (ಷಟ್ ಸ್ಥಲ ವಚನ ಕಟ್ಟುಗಳಲ್ಲಿ) ಬಳಕೆಯಾಗಿಲ್ಲವೆಂದು ಡಾ.ಎಂ.ಎಂ.ಕಲಬುರ್ಗಿಯವರು ಹೇಳುತ್ತಾರೆ. ಅಂದರೆ 'ವೀರಶೈವ' ಎಂಬ ಪದ ೧೪ನೇ ಶತಮಾನದ ನಂತರ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಕಾಣಿಸಿಕೊಳ್ಳುತ್ತದೆ. 'ಲಿಂಗವಂತ'(ಲಿಂಗಾಯತ) ಪದ ಮಾತ್ರ ೧೨ನೇ ಶತಮಾನದಲ್ಲಿಯೇ ಶರಣರ ವಚನಗಳಲ್ಲಿ ಬಳಕೆಯಾಗಿದೆ. ಲಿಂಗವಂತ(ಲಿಂಗಾಯತ) ವೀರಶೈವ ಎಂಬ ಪದಗಳು ''ಇಷ್ಟಲಿಂಗಧರಿಸಿ ಶಿವನಲ್ಲಿ ಏಕನಿಷ್ಠೆ ಹೊಂದಿದವರು'' ಎಂಬ ಅರ್ಥದಲ್ಲಿ ಬಳಕೆಯಾಗಿವೆಯಾದರೂ ಇವುಗಳ ನಡುವೆ ವ್ಯತ್ಯಾಸ ಇರುವುದನ್ನು ಕಾಣಬಹುದಾಗಿದೆ.

ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ

''ಆದೊಡಾಲಿಸಿ ಕೇಳು ಧರ್ಮಾ

ರ್ಥಾದಿಯಾಗಿಹ ಕಾಮ ಮೋಕ್ಷಾ

.....................

ವೇದವರಿಯಲು ವೀರಶೈವದ

ಹಾದಿಯೆಂಬುದು ನಿಷ್ಪೃಹದ........"[೨೧೮]

ಎಂದು ಕವಿ ಸರ್ವಧರ್ಮಗಳು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ದೊರಕಿಸಿಕೊಟ್ಟು ಸಂತೋಷಗೊಳಿಸುವಂತಹವುಗಳಾಗಿವೆ. ಆಗಮಗಳಲ್ಲಿ ಹೇಳುವಂತೆ, ವೇದಗಳು ತಿಳಿದಿರುವಂತೆ ವೀರಶೈವ ಮಾರ್ಗವೆಂಬುದು ಪ್ರಾಮಾಣಿಕವಾದ ಹಿತಮಾರ್ಗವಾಗಿದೆ. ಅಂದರೆ ವೀರಶೈವವು ವೇದ, ಆಗಮ ಪ್ರಣೀತವಾದದ್ದೆಂದು ಹೇಳಬಹುದು.

ಹಾಗೆಯೇ ಲಕ್ಕಣ್ಣದಂಡೇಶನ ಶಿವತತ್ವಚಿಂತಾಮಣಿಯಲ್ಲಿ

"ವೀರಶೈವಾಗಮಾಚಾರ ಲಕ್ಷಣಯುತರು

ಸಾರವೇದಂಗಳಾ ಸ್ಮೃತ್ಯರ್ಥ ತತ್ತ್ವಕರು"[೨೧೯]

ಎಂದು ವೀರಶೈವ ಕುರಿತು ಹೇಳಲಾಗಿದೆ. ವೀರಶೈವ ಆಗಮ ಆಚಾರಗಳ ಲಕ್ಷಣ ಹೊಂದಿದ್ದು ವೇದಗಳ ಸಾರ ಹೇಳುತ್ತದೆ. ಅಂದರೆ ವೀರಶೈವವು ವೇದ ಆಗಮಗಳ ಸಾರ ಹೊಂದಿದೆ.

ಇದೇ ಕಾವ್ಯದಲ್ಲಿ ಲಕ್ಕಣ್ಣದಂಡೇಶ ಲಿಂಗಾಯತ ಕುರಿತು

"ಲಿಂಗಪೂಜೆಯೆ ವೇದ ಲಿಂಗದರ್ಚನೆ ಶಾಸ್ತ್ರ

ಲಿಂಗ ನಂತರ ಭಜನೆ ತತ್ತ್ವಪ್ರಸಿದ್ಧವುಂ"[೨೨೦]

ಎಂದು ಹೇಳಿದ್ದಾನೆ.

ಲಕ್ಕಣ್ಣ ದಂಡೇಶನ ಪ್ರಕಾರ ಲಿಂಗವಂತರಿಗೆ ಭಜನೆ ಪ್ರಸಿದ್ಧವಾದದ್ದು. ಅವರಿಗೆ ಲಿಂಗಪೂಜೆಯೇ ವೇದ. ಲಿಂಗದರ್ಚನೆ ಶಾಸ್ತ್ರವಾಗಿದೆ. ಅಂದರೆ ಲಿಂಗವಂತರಿಗೆ ವೇದಶಾಸ್ತ್ರಗಳಿಲ್ಲ ಎಂದರ್ಥ

ಒಟ್ಟಾರೆಯಾಗಿ ಹೇಳುವುದಾದರೆ ವೀರಶೈವವು ವೇದ ಆಗಮ ಶಾಸ್ತ್ರ ಪುರಾಣ ಪ್ರಣೀತವಾದರೆ ಲಿಂಗಾಯತ(ಲಿಂಗವಂತ) ಬಸವ(ಬಸವಾದಿ ಶರಣರ ವಚನಗಳ) ಪ್ರಣೀತವಾಗಿದೆ. ಚಾಮರಸ, ಲಕ್ಕಣದಂಡೇಶ, ಮೊಗ್ಗೆಯ ಮಾಯಿದೇವ, ಕಲ್ಲುಮಠದ ಪ್ರಭುದೇವ, ಮಹಾಲಿಂಗದೇವ ಮುಂತಾದ ಕವಿ, ಸಂಕಲನಕಾರರು 'ವೀರಶೈವ' ಪದವನ್ನು ಲಿಂಗಾಯತ(ಲಿಂಗವಂತ) ಪದಕ್ಕೆ ಸಮನಾರ್ಥಕ ಪದವಾಗಿ ಬಳಸಿದ್ದಾರೆ. ಇದಕ್ಕೆ ಅಂದಿನ ಸಾಮಾಜಿಕ, ಸಾಹಿತ್ಯಕ ಪರಿಸರದ ಪ್ರಭಾವವೇ ಪ್ರಧಾನ ಕಾರಣವೆಂದು ಹೇಳಬಹುದು. ಯಾವ ಬಸವಾದಿ ಶರಣರು ವೇದ ಆಗಮ ಶಾಸ್ತ್ರ ಪುರಾಣಗಳನ್ನು ತಿರಸ್ಕರಿಸಿದರೋ ಅವರನ್ನೇ ವೇದ ಆಗಮ ಶಾಸ್ತ್ರ ಪುರಾಣ ಪ್ರಣೀತ ವೀರಶೈವರೆಂದು ಕರೆದದ್ದು ವಿಪರ್ಯಾಸದ ಸಂಗತಿ. 'ಲಿಂಗವಂತ' ಅಥವಾ 'ಲಿಂಗಾಯತ' ಪದ ಮಾತ್ರ ವಚನಕಾರರಿಂದ ಅಥವಾ ಬಸವಣ್ಣನಿಂದ

ಪ್ರಾರಂಭವಾಯಿತೆಂದು ಹೇಳಬಹುದಾಗಿದೆ. ಹೀಗಾಗಿ ಬಸವಣ್ಣನೇ 'ಲಿಂಗಾಯತ' ಧರ್ಮದ ಸ್ಥಾಪಕನೆಂಬುದರಲ್ಲಿ ಅನುಮಾನವಿಲ್ಲ. ಇದರ ಸ್ಪಷ್ಟತೆಗಾಗಿ ರೆ.ಉತ್ತಂಗಿ ಚನ್ನಪ್ಪನವರ ಈ ಮಾತನ್ನು ಗಮನಿಸಬಹುದಾಗಿದೆ. 'ಬಸವೇಶ್ವರನು ಅವತಾರವೆತ್ತುವ ಪೂರ್ವದಲ್ಲಿ ವೀರಶೈವ ಧರ್ಮಾನುಯಾಯಿಗಳ ಸಂಖ್ಯೆ ಬೆರಳೆಣಿಸುವಷ್ಟು ಇತ್ತೆಂದು ಭಾಸವಾಗುತ್ತದೆ. ಅಲ್ಲದೆ ಅದು ಅಷ್ಟಾವರಣ, ಪಂಚಾಚಾರ ಮತ್ತು ಷಟ್ ಸ್ಥಲಗಳೆಂಬ ತಾತ್ವಿಕ ಸಿದ್ಧಾಂತದ ಮೇಲೆ ಕಟ್ಟಲ್ಪಟ್ಟಿತ್ತೆಂಬುದಕ್ಕೆ ಪ್ರಬಲ ಆಧಾರಗಳಿಲ್ಲದಿರುವುದರಿಂದ ಬಸವೇಶ್ವರನಿಂದ ಸ್ಥಾಪಿಸಲ್ಪಟ್ಟ ಲಿಂಗಾಯತ ಧರ್ಮಕ್ಕೂ ಅವನ ಪೂರ್ವದಲ್ಲಿದ್ದ ಧರ್ಮಕ್ಕೂ ವಿಶೇಷ ವ್ಯತ್ಯಾಸವುಂಟು.''[೨೨] ಎಂದೂ ಉತ್ತಂಗಿ ಚೆನ್ನಪ್ಪನವರು ಅಷ್ಟಾವರಣ, ಪಂಚಾಚಾರ, ಷಟ್ ಸ್ಥಲಗಳು ಬಸವಣ್ಣನಿಂದ ಹುಟ್ಟಿದವು ಬಸವಣ್ಣನಿಂದ ಸ್ಥಾಪಿಸಲ್ಪಟ್ಟ ಲಿಂಗಾಯತ ಧರ್ಮಕ್ಕೂ ವೀರಶೈವ ಧರ್ಮಕ್ಕೂ ವ್ಯತ್ಯಾಸವಿದೆ ಎಂದಿರುವುದರಲ್ಲಿ ಔಚಿತ್ಯವಿದೆ ಎಂದೆನಿಸುತ್ತದೆ.

ವೀರಶೈವ-ಲಿಂಗಾಯತ ಧರ್ಮದ ತತ್ತ್ವಸಿದ್ಧಾಂತಗಳು

೧. ಪಂಚಾಚಾರಗಳು : ಲಿಂಗಾಚಾರ ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ

೨. ಷಟ್‌ಸ್ಥಲಗಳು : ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ

೩. ಅಷ್ಟಾವರಣಗಳು : ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ

ಈ ಕುರಿತು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

೪. ದೈವಗಳು : ಹಂಪಿಯಲ್ಲಿ ಪ್ರಧಾನ ದೈವಗಳಲ್ಲಿ ವಿರೂಪಾಕ್ಷ, ವೀರಭದ್ರ ಪ್ರಮುಖರು.

**ಅ. ವಿರೂಪಾಕ್ಷ**

ಹಂಪಿಯ ವೀರಶೈವ ಕವಿಗಳ ಕಾವ್ಯಗಳಲ್ಲಿ ಪ್ರಧಾನವಾಗಿ ಕಾಣಿಸಿಕೊಳ್ಳುವ ಪ್ರಧಾನ ದೇವರೆಂದರೆ 'ವಿರೂಪಾಕ್ಷ'. ಹರಿಹರನಂತೂ 'ವಿರೂಪಾಕ್ಷನಿಗೇ' ತನ್ನ ನಾಲಿಗೆಯನ್ನು ಮೀಸಲಿಟ್ಟಿದ್ದೇನೆ ಎಂದು ಘೋಷಿಸಿ ವಿರೂಪಾಕ್ಷನೇ ಹಂಪಿ ಪ್ರದೇಶಕ್ಕೆ ''ಚಕ್ರವರ್ತಿ'' ಎಂದು ಸಾರಿದ. ಆತನ 'ಗಿರಿಜಾ ಕಲ್ಯಾಣದ ಕಥಾನಾಯಕ ವಿರೂಪಾಕ್ಷನೇ ಆಗಿದ್ದಾನೆ. ಹರಿಹರನಂತೆ ವಿರೂಪಾಕ್ಷನನ್ನು ಹೊಗಳಿದವನು ರಾಘವಾಂಕ. ನಂತರ ಚಂದ್ರಶೇಖರ ಕವಿ ವಿರೂಪಾಕ್ಷನನ್ನೇ ಕಥಾನಾಯಕನನ್ನಾಗಿ ಮಾಡಿ 'ವಿರೂಪಾಕ್ಷಸ್ಥಾನ ವರ್ಣನಂ' ಎಂಬ ಚಂಪೂ ಕಾವ್ಯ ಬರೆದಿದ್ದಾನೆ. ಹಂಪಿ ಪರಿಸರದಲ್ಲಿದ್ದ ಅನೇಕ ಕವಿಗಳು ವಿರೂಪಾಕ್ಷನನ್ನು ಒಂದಿಲ್ಲ ಒಂದು ಕಾರಣಕ್ಕೆ ಸ್ತುತಿಸಿರುವುದು ಕಂಡುಬರುತ್ತದೆ. ಶಕ್ತಿಕೇಂದ್ರವಾದ ಹಂಪಿ ವಿರೂಪಾಕ್ಷಮಯವಾದದ್ದು, ವಿರೂಪಾಕ್ಷ ತೀರ್ಥವಾದದ್ದು, ಮುಂದೆ ವಿರೂಪಾಕ್ಷ ಹಂಪಿಯಾಳ್ದನಾದದ್ದು ತುಂಬಾ ಕುತೂಹಲಕರವಾದ ಸಂಗತಿಯಾಗಿದೆ. ಹರಿಹರ ವಿರೂಪಾಕ್ಷನನ್ನು ಹೊಗಳಿ ಕಾವ್ಯ ರಚಿಸುವ ಮೊದಲೇ ವಿರೂಪಾಕ್ಷ ಹಂಪಿಯ

ಪ್ರಧಾನ ದೇವತೆಯಾಗಿದ್ದನೆಂದು ಕ್ರಿ.ಶ.೧೧೬೩ರ ಕಲಚೂರಿ ಅರಸ ಬಿಜ್ಜಳನ ಕಾಲದ ಶಾಸನದಿಂದ ತಿಳಿದುಬರುತ್ತದೆ. ಕ್ರಿ.ಶ.೧೧೯೯ರ ಹೊತ್ತಿಗೆ ಅಂದರೆ ಕುರುಗೋಡು ಸಿಂಧರ ಕಾಲಕ್ಕೆ ಹಂಪಿ ವಿರೂಪಾಕ್ಷ ತೀರ್ಥವಾಯಿತು. ಇದೇ ಸಂದರ್ಭದಲ್ಲಿ ಹಂಪಿಯಲ್ಲಿ ನೆಲೆಸಿದ ಹರಿಹರ ಕವಿಯಿಂದಾಗಿ ಎಲ್ಲವೂ ವಿರೂಪಾಕ್ಷಮಯವಾಯಿತು. ನಂತರ ವಿರೂಪಾಕ್ಷ ಇಲ್ಲಿಯೇ ಸ್ಥಾಪಿಸಲ್ಪಟ್ಟ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಯಾಗಿ ಮೆರೆದದ್ದು ಶಾಸನಗಳಿಂದ ತಿಳಿದುಬರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಹಂಪಿಯಲ್ಲಿ ವಿರೂಪಾಕ್ಷನ ಹುಟ್ಟು ಮತ್ತು ಬೆಳವಣಿಗೆ, ವಿರೂಪಾಕ್ಷನ ಸ್ವರೂಪ ಮತ್ತು ಆತನ ನೆಲೆ, ವಿರೂಪಾಕ್ಷನಿಗೆ ನೀಡಿದ ದಾನ-ದತ್ತಿ ಶಾಸನಗಳು, ವಿರೂಪಾಕ್ಷ ಮತ್ತು ವೀರಶೈವ ಧರ್ಮ ಇತ್ಯಾದಿ ಅಂಶಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

೧. ವಿರೂಪಾಕ್ಷನ ಹುಟ್ಟು ಮತ್ತು ಬೆಳವಣಿಗೆ : 'ವಿರೂಪಾಕ್ಷ ಲಿಂಗದ' ಹೆಸರು ದಕ್ಷಿಣ ಭಾರತದಲ್ಲಿ ಮೊದಲು ಶಾಸನದಲ್ಲಿ ಉಲ್ಲೇಖವಾಗುವುದು ಬಹುಶಃ ಹಂಪಿಯಲ್ಲಿಯೆಂದೆನಿಸುತ್ತದೆ. ಕ್ರಿ.ಶ.೭ನೇ ಶತಮಾನದಿಂದ ಹಂಪಿಯ ಚರಿತ್ರೆ ಪ್ರಾರಂಭವಾಗುತ್ತದೆ. ಕುಕ್ಕನೂರಿನ ಕ್ರಿ.ಶ.೧೧೬೩ರ ಬಿಜ್ಜಳನ ಕಾಲದ ಶಾಸನದಲ್ಲಿ ವಿರೂಪಾಕ್ಷನ[೨೨೨] ಉಲ್ಲೇಖ ಮೊದಲು ಕಂಡುಬರುತ್ತದೆ. ಹಂಪಿಯಲ್ಲಿ ಮೊದಲು ವಿರೂಪಾಕ್ಷನ ಉಲ್ಲೇಖ ಕಂಡುಬರುವುದು ಕ್ರಿ.ಶ.೧೧೯೯ರ ಕುರುಗೋಡು ಸಿಂಧರ ಕಾಲದ ಶಾಸನದಲ್ಲಿ.[೨೨೩] ಇದಕ್ಕಿಂತ ಮೊದಲು ಶಾಸನಗಳಲ್ಲಿ ಪಂಪಾಪುರವೆಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಮುಂದೆ ಇಡೀ ಹಂಪಿ ಪ್ರದೇಶಕ್ಕೆ ವಿರೂಪಾಕ್ಷ ಒಡೆಯನಾಗಿ ಕವಿಗಳ ಕಾವ್ಯಗಳಿಗೆ ಸ್ಫೂರ್ತಿ, ಕಥಾನಾಯಕನಾಗಿದ್ದನ್ನು ಅನೇಕ ಆಕರಗಳು ದೃಢಪಡಿಸುತ್ತವೆ.

'ವಿರೂಪ+ಅಕ್ಷ' = ವಿರೂಪಾಕ್ಷ, ಅಂದರೆ ಅಸಮನೇತ್ರ-ಶಿವ, ವಿಷಮವಾದ ಕಣ್ಣುಗಳುಳ್ಳವನು,[೨೨೪] ವಿಕಾರರೂಪ ಕಣ್ಣನ್ನು ಹೊಂದಿದವನು, ಹಣೆಗಣ್ಣುಳ್ಳವನು ಶಿವ ಎಂಬಿತ್ಯಾದಿಯಾಗಿ ಅರ್ಥೈಸಬಹುದಾಗಿದೆ. ಶಿವನ ಮತ್ತೊಂದು ಹೆಸರು ವಿರೂಪಾಕ್ಷ. ಶಿವ ವಿರೂಪಾಕ್ಷನಾದದ್ದು ಮನ್ಮಥನಿಂದಲೇ ಎಂದು ಹೇಳಲು ಸಾಧ್ಯವಿದೆ. ಶಿವ ವಿರೂಪಾಕ್ಷನಾದ ಬಗೆಯನ್ನು ಹರಿಹರ ತನ್ನ ಗಿರಿಜಾ ಕಲ್ಯಾಣ ಕಾವ್ಯದಲ್ಲಿ ಹೀಗೆ ಉಲ್ಲೇಖಿಸಿದ್ದಾನೆ.

"ನೋಡದ ಮುನ್ನಂ ಕೋಪಂ
ನಾಡೆಯುಮೊತ್ತರಿಸಿ ನೀಳ್ದು ನಿಟಿಲೇಕ್ಷಣದೊಳ್
ಕೂಡೆ ಬಳೆಬಳೆದು ಸುಳಿಸುಳಿ
ದೀಡಿಜೆದೊಳಗೊಳಗೆ ಘುಳುಘುಳಿಸಿ ಕುದಿದಾಗಳ್
ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದು ನಾಲ್ದೆಸೆದೋಜಿದತ್ತು ಬಾನ್
ಗೊಗೆದುದು ನಿಂದು ಪೊಂಬೆಳಗುಮಂ ಪದಪುತ್ತದು ಧಂಧಗಿಲ್ ಧಗಿಲ್

ಧಗಿಲೆನುತಟ್ಟಿ ತಟ್ಟಿದುದು ಮುಟ್ಟಿತು ಸುಟ್ಟಿತು ತಿಂದು ತೇಗಿದ
ತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ''[೨೨೫]

ದಕ್ಷನ ಯಜ್ಞಧ್ವಂಸದ ನಂತರ ಆ ಯಾಗದ ಅಗ್ನಿಗಾಹುತಿಯಾದ ಪಾರ್ವತಿಯನ್ನು ಕಳೆದುಕೊಂಡು ಬಹುದುಖಿಃತನಾದ ಶಿವ ಮನಶಾಂತಿಗಾಗಿ ಹೇಮಕೂಟಪರ್ವತದಲ್ಲಿ ತಪನಿರತನಾದ. ಇತ್ತ ತಾರಕಾಸುರನ ಸಂಹಾರಕ್ಕಾಗಿ ದೇವತೆಗಳು ಪರಶಿವನಿಗೆ ಮೊರೆಯಿಟ್ಟರೂ ಶಿವ ಕಣ್ತೆರೆಯಲಿಲ್ಲ. ಅವನನ್ನು ಎಚ್ಚರಿಸಲು ಒಪ್ಪಿಕೊಂಡ ಮನ್ಮಥ ಶಿವನಿಗೆ ಬಾಣಬಿಟ್ಟು ಎಚ್ಚರಿಸಲು ಪ್ರಯತ್ನಿಸಿ ವಿಫಲನಾದ. ಕಾರಣ ಶಿವ ಧ್ಯಾನಮಾಡುತ್ತಾ ಸಮಾಧಿಸ್ಥಿತಿ ತಲುಪಿದ್ದ. ಜೀವವನ್ನು ಬ್ರಹ್ಮ(ತಲೆಗೆ) ಸ್ಥಾನಕ್ಕೇರಿಸಿಕೊಂಡು ತಪಸ್ಸು ಮಾಡುತ್ತಿದ್ದ ಶಿವನಿಗೆ ಮನ್ಮಥ ಹೂವಿನ ಬಾಣವನ್ನು ಜೀವನೆಲೆಗೊಂಡಿದ್ದ ಹಣೆಗೆ ಬಿಟ್ಟ. ಬಾಣ ತಾಗಿದ ಹಣೆ ಸೀಳಿ ರಕ್ತಸೋರ್ರಿ ನಂತರ ಅದರಿಂದ ಅಸಾಧ್ಯವಾದ ಬೆಂಕಿಯ ಜ್ವಾಲೆ ಮೊಳೆತು ಬೆಳೆಬೆಳೆದು ಸುಳಿದು ಒಳಗೊಳಗೆ ಘುಳುಘುಳಿಸಿ ಕುದಿದು ಪರಶಿವನ ಕಣ್ಣಿನಿಂದ ಉರಿ ಹೊರೆಗೆ ಬಂದು ಕಿಡಿಯಿಟ್ಟಿತು. ನಾಲ್ಕು ದಿಕ್ಕುಗಳಿಗೂ ಹಬ್ಬಿತು. ಗಗನಕ್ಕೆ ಒಗೆಯಿತು. ಅದು ಹೊಂಬೆಳಗನ್ನು ಹರಡುತ್ತಾ ಧಂಧಗಿಲ್ ಧಗಿಲ್ ಧಗಿಲೆನುತ ಅಟ್ಟಿತಟ್ಟಿ ಮುಟ್ಟಿತ್ತು. ಅಗಿಯದೆಯೇ ಕಾಮನನ್ನು ತಿಂದು ತೇಗಿತು. ಮನ್ಮಥ ಸುಟ್ಟ ಮೇಲೆ ಬೆಂಕಿ ನಿಂತಿತು. ಮನ್ಮಥನ ಬಾಣದಿಂದ ಸೀಳಿದ ಹಣೆ ಹಣೆಗಣ್ಣಾಗಿ ರೂಪುಗೊಂಡಿತು. (ಬಹುಶಃ ಶಿವನಿಗೆ ಮೊದಲು ಎರಡೇ ಕಣ್ಣುಗಳಿದ್ದಂತೆ ತೋರುತ್ತದೆ) ಆಗಿನಿಂದ ಶಿವನಿಗೆ ಮೂರು ಕಣ್ಣುಗಳಾದವು. ಅವನ(ಶಿವನ) ಆಕಾರ ವಿಕಾರವಾಯಿತು. ಅಂದಿನಿಂದ ಶಿವ ವಿರೂಪಾಕ್ಷನಾದನೆಂದು ಹೇಳಬಹುದು.

ಹೀಗೆ ಶಿವನಿಗೆ ಹಣೆಯಲ್ಲಿ ಮೂರನೇ ಕಣ್ಣು ಹುಟ್ಟಿದ್ದರಿಂದ ಆತನ ಆಕಾರ ಕೆಟ್ಟು ಹೋಗಿ ವಿರೂಪವಾಯಿತು. ಅಂದಿನಿಂದ ಶಿವನಿಗೆ ವಿರೂಪಾಕ್ಷನೆಂಬ ಹೆಸರು ಹುಟ್ಟಿತು(ಬಂದಿತು). ಹಿಂದೆ ಗಂಗೆಯನ್ನು ತಲೆಯ ಮೇಲೆ ಧರಿಸಿದ್ದರಿಂದ ಗಂಗಾಧರನೆಂದೂ, ವಿಷವನ್ನು ಕುಡಿದು ಗಂಟಲಲ್ಲಿಯೇ ಉಳಿಸಿಕೊಂಡು ನೀಲಕಂಠನಾದಂತೆ, ಮೂರು ಕಣ್ಣು ಹೊಂದಿ ಮುಕ್ಕಣ, ವಿರೂಪಾಕ್ಷನೆಂದು ಹೆಸರು ಪಡೆದನು.

ಪಂಪಾದೇವಿ ಅಥವಾ ಹಂಪಾದೇವಿ ಹಂಪಿಯ ಅತೀ ಪ್ರಾಚೀನ ದೇವತೆ. ಈಕೆಯಿಂದಲೇ ಈ ಪ್ರದೇಶಕ್ಕೆ ಹಂಪಿ ಎಂಬ ಹೆಸರು ಬಂದಿದೆ. ಪಾರ್ವತಿಯ ಅವತಾರವಾದ ಪಂಪಾದೇವಿಯು ಹಂಪಿಯ ಹತ್ತಿರ ಇರುವ ಪಂಪಾಸರೋವರದ ದಡದಲ್ಲಿ ಕಠಿಣವಾದ ತಪಸ್ಸನಾಚರಿಸಿ ವಿರೂಪಾಕ್ಷನನ್ನು ವರಿಸಿದಳು.[೨೨೬] ಅಂದಿನಿಂದ ವಿರೂಪಾಕ್ಷ ಪಂಪಾ ವಿರೂಪಾಕ್ಷನಾದನು.

ತುಂಗಭದ್ರಾ ನದಿ ದಂಡೆಯ ಮೇಲೆ ಇರುವ ಹೇಮಕೂಟದ ನಿವಾಸಿಯಾದ ಮೇಲೆ ಹರಿಹರ ಕವಿಗಳಿಂದಾಗಿ ಪ್ರಸಿದ್ಧಿಗೆ ಬಂದು ಜನಾಕರ್ಷಣೆಗೆ ಒಳಗಾದನು ವಿರೂಪಾಕ್ಷ. ಇಲ್ಲಿನ ನದಿ, ಕಲ್ಲು,

ಬೆಟ್ಟಗಳ ನಡುವೆ ನೆಲೆನಿಂತ ವಿರೂಪಾಕ್ಷ ಯಾವ ರಾಜನ ಆಳ್ವಿಕೆಗೂ ಒಳಗಾಗಲಿಲ್ಲ. ಪಂಪಾ ನದಿ, ಪಂಪಾಂಬಿಕೆಯಿಂದ ತೀರ್ಥ ಕ್ಷೇತ್ರವಾಗಿದ್ದ ಹಂಪಿ ವಿರೂಪಾಕ್ಷ ತೀರ್ಥವಾಗಿ ಮಾರ್ಪಟ್ಟಿತ್ತು. ವಿರೂಪಾಕ್ಷ ನೆಲೆಸಿದ ಸ್ಥಳ ವಿರೂಪಾಕ್ಷ ಸೀಮೆಯಾಯಿತು. ಈ ವಿರೂಪಾಕ್ಷ ಸೀಮೆಯ ಮೇಲೆ ಯಾವ ರಾಜರೂ ದಾಳಿ ಮಾಡದಂತೆ ಅಥವಾ ಇದನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಳ್ಳದಂತೆ ಕುರುಗೋಡು ಸಿಂಧರು ಇದರ ರಕ್ಷಣೆಗೆ ಒಂದು ಸೇನಾ ತುಕಡಿಯನ್ನು ಇಟ್ಟಿದ್ದರು. ಈ ಅಂಶವನ್ನು ಕ್ರಿ.ಶ.೧೧೯೯ರ ಶಾಸನವು "ಕುಱುಗೋಡ್ಡೊಳ್ಸುಖದಿಂ ರಾಜ್ಯಂಗೆಯ್ಯುತ್ತಮಿರ್ದ್ದವರೋಳ್ ವಿರೂಪಾಕ್ಷತೀರ್ತ್ಥ ರಕ್ಷಣಾರ್ಥ ಸಾಮನ್ತ ಮಾದಯ ನಾಯಕಂ ಮತಂಗಪರ್ವ್ವತಮಂ ಪ್ರತಿಪಾಳಿಸುತ್ತಮಿರೆ"[೨೨೭] ಎಂದು 'ವಿರೂಪಾಕ್ಷ ತೀರ್ಥ' ಸ್ವತಂತ್ರವಾಗಿದ್ದದ್ದನ್ನು ದಾಖಲಿಸುತ್ತದೆ. ಮಹಾಕವಿ ಹರಿಹರ "ಸ್ತೋಮಾಂಘ್ರಿಜ್ಯೋತಿ ಪಂಪಾಪುರದರಸ ವಿರೂಪಾಕ್ಷ ನಾದಂದದಿಂದಂ"[೨೨೮] 'ಹಂಪಿಯರಸಂ ಮೆರೆದಂ"[೨೨೯] ಎಂಬಿತ್ಯಾದಿಯಾಗಿ ವಿರೂಪಾಕ್ಷನನ್ನು ತನ್ನ ಕಾವ್ಯ ರಗಳೆಗಳಲ್ಲಿ ಹೊಗಳಿ ಹಂಪಿಗೆ ಒಡೆಯನನ್ನಾಗಿ ಮಾಡಿಬಿಟ್ಟ. ಹರಿಹರನ ನಂತರ ಆತನ ಶಿಷ್ಯ ರಾಘವಾಂಕ ತನ್ನ ಹರಿಶ್ಚಂದ್ರ ಚಾರಿತ್ರ ಕಾವ್ಯದಲ್ಲಿ ವಿರೂಪಾಕ್ಷ (ವಿರೂಪಾಕ್ಷ ಕಾಶಿ ಹಂಪೆಗಳು... ಅವಕೆ ವಿಶ್ವೇಶ್ವರ ವಿರೂಪಾಕ್ಷರೇ ಒಡೆಯರವನಿಯೊಳಗಲ್ಲಿ...)ಮತ್ತು ಹಂಪಿಯ ಹಿರಿಮೆಯನ್ನು ವರ್ಣಿಸಿದ್ದಾನೆ.

"ಪಂಪಾಧಿಪತಿ ವಿರೂಪಾಕ್ಷ" ಮತ್ತು 'ಪಂಪಾಪುರಾಧೀಶ್ವರ'[೨೩೦] ಎಂದೂ, ವೀರೇಶ ಚರಿತೆಯಲ್ಲಿ "ಪೊಂಪಾಪುರದರಸ ವಿರೂಪಾಕ್ಷಂ"[೨೩೧] ಎಂದು ಕರೆದಿದ್ದಾನೆ. ಚಂದ್ರಶೇಖರ ಕವಿ ತನ್ನ 'ಪಂಪಾಸ್ಥಾನ ವರ್ಣನಂ' ಕಾವ್ಯದಲ್ಲಿ 'ಪಣೆಗಣ್ಣಂ ಪಂಪೆಯಾಳ್ವನಾ"[೨೩೨] ಎಂದು ಕರೆದರೆ ಲಕ್ಕಣ್ಣದಂಡೇಶ ತನ್ನ ಶಿವತತ್ತ್ವ ಚಿಂತಾಮಣಿ ಕಾವ್ಯದಲ್ಲಿ 'ಪಂಪಾಪುರಾಧೀಶ'[೨೩೩] ಎಂದು ವಿರೂಪಾಕ್ಷನನ್ನು ಸ್ತುತಿಸಿದ್ದಾನೆ. ಇದೇ ಕಾವ್ಯದಲ್ಲಿ 'ಹೇಮಕೂಟಾಧಿಪ'[೨೩೪] ಎಂದೂ ಕರೆಯಲಾಗಿದೆ. ಹೀಗೆ ಅನೇಕ ಸಾಹಿತ್ಯ ಕೃತಿಗಳು ವಿರೂಪಾಕ್ಷನನ್ನು ಚಕ್ರವರ್ತಿ ಹಂಪಿಯ ಒಡೆಯನೆಂದು ಚಿತ್ರಿಸಿರುವುದು ಕಂಡುಬರುತ್ತದೆ.

ದೋರಸಮುದ್ರವು ಮುಸ್ಲೀಮರ ದಾಳಿಯಿಂದ ನಾಶವಾದ ಮೇಲೆ ೩ನೇ ಬಲ್ಲಾಳನು ಹಂಪಿಯನ್ನು ವಿರೂಪಾಕ್ಷ ಹೊಸದುರ್ಗವೆಂದು ಕರೆದು ಕ್ರಿ.ಶ.೧೩೩೧ರಲ್ಲಿ ಹಂಪಿಯಿಂದ ಆಳುತ್ತಿದ್ದನೆಂದು"[೨೩೫] ಶಾಸನವೊಂದು ದಾಖಲಿಸುತ್ತದೆ. ಈತನ ಮಗನ ಹೆಸರು ವಿರೂಪಾಕ್ಷ ಬಲ್ಲಾಳ. ಈತನ ಯುವರಾಜ ಪಟ್ಟಾಭಿಷೇಕವು ಹಂಪೆಯಲ್ಲಿ ನಡೆಯಿತೆಂಬುದನ್ನು[೨೩೬] ಶಾಸನಾಧಾರದಿಂದ ಅರಿಯಬಹುದಾಗಿದೆ. ಈ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಹೊಯ್ಸಳರ ಕೊನೆಯ ಅರಸರು ಹಂಪಿ ವಿರೂಪಾಕ್ಷನಲ್ಲಿ ಆಶ್ರಯ ಪಡೆದಿದ್ದರೆಂಬುದು ತಿಳಿದುಬರುತ್ತದೆ.

ಮುಂದೆ ಕ್ರಿ.ಶ.೧೩೩೬ರಲ್ಲಿ ವಿಜಯನಗರ ಸ್ಥಾಪನೆಯಾದ ಮೇಲೆಯೂ ವಿರೂಪಾಕ್ಷನೇ ಚಕ್ರವರ್ತಿಯಾಗಿ ಮುಂದುವರೆದನು ಎಂಬುದು ಮಹತ್ವದ ಸಂಗತಿಯಾಗಿದೆ. ಇದಕ್ಕೆ ಕಾರಣ ವಿಜಯನಗರ

ಪೂರ್ವದ ರಾಜರು (ಹೊಯ್ಸಳರು) ಪಾಳೆಯಗಾರರು (ಕುರುಗೋಡು ಸಿಂಧರು) ವಿರೂಪಾಕ್ಷನನ್ನು ಚಕ್ರವರ್ತಿಯಾಗಿ ಮಾಡಿದ್ದುದು. ಇವರಿಗೂ ಮೂಲ ಪ್ರೇರಣೆ ಮಹಾಕವಿ ಹರಿಹರನ ರಗಳೆಗಳು ಹರಿಹರ ರಾಘವಾಂಕಾದಿಗಳು ತಮ್ಮ ಕಾವ್ಯಗಳನ್ನು ವಿರೂಪಾಕ್ಷನನ್ನು ಚಕ್ರವರ್ತಿಯಾಗಿಯೂ ಹಂಪೆಯನ್ನು ದೇವರ ರಾಜ್ಯವಾಗಿ ರೂಪಿಸಿದ್ದರು. ಇದನ್ನು ಮಾದರಿಯಾಗಿಟ್ಟುಕೊಂಡು ಹೊಯ್ಸಳರು ಮತ್ತು ವಿಜಯನಗರದ ಸಾಮ್ರಾಟರು ವಿರೂಪಾಕ್ಷನ್ನೇ ಚಕ್ರವರ್ತಿಯೆಂದು ನಂಬಿ ವಿರೂಪಾಕ್ಷನ ಹೆಸರಿನಲ್ಲಿಯೇ (ವಿಜಯನಗರದ ಅರಸರು) ಆಡಳಿತ ಮಾಡಿದರು. ವಿರೂಪಾಕ್ಷ ವಿಜಯನಗರ ಸಾಮ್ರಾಜ್ಯದ ರಾಜಧಾನಿ ರಕ್ಷಕ ಮತ್ತು ಅರಸರ ಆರಾಧ್ಯ ದೈವವಾದನು. ಸಂಗಮ ವಂಶದ ೨ನೇ ಹರಿಹರನು ವಿಜಯನಗರ ಪಟ್ಟದ ಜೊತೆಗೆ ವಿರೂಪಾಕ್ಷನನ್ನು ವಂಶಪಾರಂಪರ್ಯವಾಗಿ ಪಡೆದನೆಂದು ಶಾಸನವೊಂದು ತಿಳಿಸುತ್ತದೆ.''[೨೩೭] ವಿಜಯನಗರ ಸಾಮ್ರಾಟರ ಬಹುತೇಕ ತಾಮ್ರಶಾಸನಗಳಲ್ಲಿ ಮತ್ತು ಕೆಲವು ಶಿಲಾ ಶಾಸನಗಳಲ್ಲಿ ಹಸ್ತಾಕ್ಷರವು ''ಶ್ರೀ ವಿರೂಪಾಕ್ಷ'' ಎಂದಿದೆ. 'ಶ್ರೀ ವಿರೂಪಾಕ್ಷ' ಎಂಬ ಹಸ್ತಾಕ್ಷರ ಹಾಕುವ ಪದ್ಧತಿಯನ್ನು ಅರವೀಡುವಂಶದ ೧ನೇ ರಂಗನವರೆಗೆ ಎಲ್ಲ ಅರಸರು ಮುಂದುವರಿಸಿಕೊಂಡು ಬಂದಿರುವುದನ್ನು ಕಾಣಬಹುದು. ಶಾಸನದ ಭಾಷೆ ಮತ್ತು ಲಿಪಿ ಯಾವುದೇ ಆಗಿದ್ದರೂ ''ಶ್ರೀ ವಿರೂಪಾಕ್ಷ'' ಹಸ್ತಾಕ್ಷರವು ಸಾಮಾನ್ಯವಾಗಿ ಕನ್ನಡ ಲಿಪಿಯಲ್ಲಿರುತ್ತದೆ.[೨೩೮]

ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ವಿಜಯನಗರದ ಅರಸರು ವಿರೂಪಾಕ್ಷನ ಹೆಸರಿನಲ್ಲಿ ಆತನೇ ವಿಜಯನಗರದ ಚಕ್ರವರ್ತಿ ತಾವು ಆತನ ಆಜ್ಞಾರಾಧಕರು ಪ್ರತಿನಿಧಿಗಳೆಂದು ಭಾವಿಸಿ ಆಡಳಿತ ನಡೆಸಿರುವುದು ಕಂಡುಬರುತ್ತದೆ.

೨. ವಿರೂಪಾಕ್ಷನ ಸ್ವರೂಪ ಮತ್ತು ನೆಲೆ : ಪ್ರತಿಯೊಂದು ದೇವತೆಗೆ ಒಂದು ರೂಪ ಇರುವಂತೆ ವಿರೂಪಾಕ್ಷನಿಗೂ ಒಂದು ರೂಪವಿದೆ. ಪ್ರಭಾವವಿದೆ. ಹೀಗೆ ಸ್ವಭಾವ ರೂಪವನ್ನು ಒಳಗೊಂಡ ವಿರೂಪಾಕ್ಷನ ಸ್ವರೂಪ ಕುರಿತು ಹರಿಹರ ಕವಿ ತನ್ನ ಎಲ್ಲಾ ಕೃತಿಗಳಲ್ಲಿ ದಾಖಲಿಸಿದ್ದಾನೆಂಬುದು ಮಹತ್ವದ ಅಂಶ. ಹರಿಹರನಲ್ಲದೆ ರಾಘವಾಂಕ, ಚಂದ್ರಶೇಖರ ಮತ್ತು ಲಕ್ಕಣದಂಡೇಶ ಕವಿಗಳು ಇಲ್ಲಿನ ಶಾಸನಗಳು ದಾಖಲಿಸಿದ ವಿರೂಪಾಕ್ಷನ ಸ್ವರೂಪ ಮತ್ತು ನೆಲೆಯನ್ನು ಅಧ್ಯಯನ ಮಾಡಲಾಗಿದೆ.

ವಿರೂಪಾಕ್ಷನ ಸ್ವರೂಪವನ್ನು ವಿರೂಪಾಕ್ಷ ದೇವಾಲಯದ ಕನಕಗಿರಿ ಗೋಪುರದಲ್ಲಿ ಪಶ್ಚಿಮಕ್ಕಿರುವ ಹೊಯ್ಸಳರ ಕಾಲದ ಶಾಸನ(ಕ್ರಿ.ಶ.೧೨೧೬)

''ಮಹಿದ್ರೋ ಹೇಮಕೂಟಾಖ್ಯಸ್ತುಂಗ ಭದ್ರಾನದಿತಟ ಅಸ್ತೀಯತ್ರ
ವಿರೂಪಾಕ್ಷ ದೇವಃ ಕ್ರೀಡತಿ ಶಂಕರಃ ..........
ಗೌರಿ ಗುರುಲ್ಲೀಳೆಯಾ | ಆಸ್ತೇಯತ್ರ ಲಲಾಟ ಲೋಚನ
ಶಿಖಿಜ್ವಳಾ ಕಳಾಪೋದಕಂದರ್ಪ ದಹ ಪತಂಗತಾಮುಪಗತ

ಕಾಮಃ ಪ್ರಕಾಮಂಕ್ಷಣಾತ್ ಏಸ್ಯೋರ್ದ್ವಂಡ ವಿನೋದತ ತಿಡವಭವ

ಬ್ರಾಂಮ್ಯಜಟಾಳಿಗಳದ್ಗಂದಾ ತುಂಗಾ ತರಂಗ ಪಾತವಿಸ್ಮಾದ್ರಾದ...''[೨೩೯]

ಎಂದು ಉಲ್ಲೇಖಿಸಿದೆ.

ಈ ಶಾಸನದ ಪ್ರಕಾರ ತುಂಗಭದ್ರಾನದಿ ತಟದಲ್ಲಿರುವ ಹೇಮಕೂಟದಲ್ಲಿ ವಿರೂಪಾಕ್ಷ ದೇವನಾದ ಶಂಕರ ವಿರಾಜಮಾನನಾಗಿದ್ದಾನೆ. ಆ ದೇವನು ಹಣೆಗಣ್ಣುಳ್ಳವನಾಗಿದ್ದು, ಗೌರಿ ಸಮೇತನಾಗಿದ್ದಾನೆ. ಕಂದರ್ಪನನ್ನು ಪತಂಗದಂತೆ ನಾಶ(ತಾನೇ ನಾಶವಾಗುವಂತೆ) ಮಾಡಿದಭವನಾದ, ಜಡೆಯಲ್ಲಿ ಗಂಗೆಯ ಎತ್ತರವಾದ ತುರಂಗಗಳಾಘಾತದಿಂದ ಕುಡಿದ ಶಿರಸ್ಸುಳ್ಳ, ದೇವತೆಗಳಿಂದ ಸ್ತುತಿ ಸಲ್ಪಡುವವನು ವಿರೂಪಾಕ್ಷ. ಇವನ ವಾಸಸ್ಥಳ ಹೇಮಕೂಟ.

ವಿರೂಪಾಕ್ಷನ ವಾಸಸ್ಥಾನ ಮತ್ತು ಆತನ ಶ್ರೇಷ್ಠತೆ ಕುರಿತು ಕ್ರಿ.ಶ.೧೩೭೮ರ ಇಮ್ಮಡಿ ಹರಿಹರನ ಕಾಲದ ಕನಕಗಿರಿ ಗೋಪುರದಲ್ಲಿ ಪೂರ್ವಕ್ಕಿರುವ ಶಾಸನವು

''ಪ್ರಾಕಾರೋ ಹೇಮಕೂಟಃ ಪರಸರತ್ಯ(ಶಿ)ಖಾ

ತುಂಗಭದ್ರಾತಿಭದ್ರ ಸಾಕ್ಷಧಾರಕ್ಷ ಕೋಯಂಕ್ಷತ

ಭವನ ಭಯಃ ಶ್ರೀ ವಿರೂಪಾಕ್ಷದೇವಃ''[೨೪೦]

ಎಂದು ಉಲ್ಲೇಖಿಸಿದೆ.

ಈ ಶಾಸನದ ಪ್ರಕಾರ ಶ್ರೀ ವಿರೂಪಾಕ್ಷನು ಹೇಮಕೂಟ ಪರಿಸರದ ಪ್ರಾಕಾರದಿಂದ ಕೂಡಿರುವ ತುಂಗಭದ್ರೆಯಿಂದ ಪವಿತ್ರವಾದ ಭೂಮಿಗೆ ಅಭಯವನ್ನು ನೀಡು ರಕ್ಷಕನಾಗಿದ್ದಾನೆಂದು ಶಾಸನ ವರ್ಣಿಸಿದೆ. ವಿರೂಪಾಕ್ಷನ ಸ್ವರೂಪ ಮತ್ತು ನೆಲೆ ಕುರಿತು ಕ್ರಿ.ಶ.೧೫೧೦ರ ವಿರೂಪಾಕ್ಷ ದೇವಾಲಯದ ಕೃಷ್ಣದೇವರಾಯನ ಕಾಲದ ಶಾಸನವು

''ಭುವನಭರಣ ಸಾಮಧಾನಾಯ ಶ್ರೀವಿರೂಪಾಕ್ಷಾಭಿದಾನಾಯ

ವಿತೀರ್ಣ್ನವಿನತಜನ ಹೇಮಕೂಟಾಯ ಹೇಮಕೂಟಾಯತ''[೨೪೧]

ಎಂದು ದಾಖಲಿಸಿದೆ. ಇದರ ಪ್ರಕಾರ ವಿರೂಪಾಕ್ಷ ಜಗತ್ತಿನ ರಕ್ಷಕನೂ ಶಾಂತ ಚಿತ್ತನೂ ಜನಪ್ರಿಯನೂ ಹೇಮಕೂಟವಾಸಿಯೂ ಆಗಿದ್ದಾನೆ. ಹರಿಹರ ತನ್ನ ಗಿರಿಜಾಕಲ್ಯಾಣ ಕಾವ್ಯದಲ್ಲಿಯೂ ವಿರೂಪಾಕ್ಷನ ನೆಲೆ ಹೇಮಕೂಟವೆಂದೇ ಹೇಳಿದ್ದಾನೆ.

''ಹೇಮಕೂಟದೊಳ್ ನಿಜಾವಲೋಕನ ಸಮಾಧಿಸ್ಥ

ನಾಗಿರುತಿರ್ಪ ಸರ್ಪಾಭರಣನಲ್ಲಿಗೆ.....''[೨೪೨]

ಎಂದು ಉಲ್ಲೇಖಿಸಿದ್ದಾನೆ. ಹೇಮಕೂಟದಲ್ಲಿ ನೆಲೆಸಿದ ವಿರೂಪಾಕ್ಷ ಅಲ್ಲೇ ತಪಸ್ಸಿಗೆ ಕುಳಿತು ಸಮಾಧಿಸ್ತನಾಗಿದ್ದಾನೆ.

೩. ವಿರೂಪಾಕ್ಷ ಮತ್ತು ವೀರಶೈವ ಧರ್ಮ : ೧೨ನೇ ಶತಮಾನಕ್ಕಿಂತ ಮೊದಲು ಹಂಪಿಯಲ್ಲಿ ನೆಲೆಯೂರಿದ್ದ ವಿರೂಪಾಕ್ಷ ಶೈವರ ಪ್ರಭಾವಿ ದೇವರಾಗಿದ್ದ. ಹರಿಹರ ರಾಘವಾಂಕಾದಿಗಳಿಂದ ವಿರೂಪಾಕ್ಷ ವೀರಶೈವಧರ್ಮೀಯರ ಆರಾಧ್ಯದೈವನಾದ ಎಂಬುದು ಅವರ ಕೃತಿಗಳಿಂದ ಅರಿಯಬಹುದು. ಹರಿಹರನ ಪ್ರತಿಯೊಂದು ಕಾವ್ಯದ ಆರಂಭ ಮತ್ತು ಅಂತ್ಯ ವಿರೂಪಾಕ್ಷನಿಂದ ಕೊನೆಗೊಳ್ಳುವುದನ್ನು ಕಾಣಬಹುದು. ಮೂಲತಃ ಶೈವನಾದ ಹರಿಹರ ಬಸವಾದಿ ಶರಣರ ಪ್ರಭಾವಕ್ಕೆ ಒಳಗಾಗಿ ವೀರಶೈವನಾದ ಮೇಲೆ ಹಂಪಿಯ ವಿರೂಪಾಕ್ಷನನ್ನು ತನ್ನ ಕಾವ್ಯಗಳಲ್ಲಿ ಹಾಡಿಹೊಗಳಿ ವೀರಶೈವನನ್ನಾಗಿ ರೂಪಿಸಿದ. ವೀರಶೈವರ ಆರಾಧ್ಯದೈವ ವಿರೂಪಾಕ್ಷನೆಂಬಂತೆ ತನ್ನ ಕಾವ್ಯಗಳಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ. ಇದಲ್ಲದೆ ರಾಘವಾಂಕ ಮತ್ತು ಚಂದ್ರಶೇಖರ ಕವಿಗಳೂ ಸಹ ವಿರೂಪಾಕ್ಷನನ್ನು ವೀರಶೈವಧರ್ಮದ ಗುರು ಎಂಬಂತೆ ಚಿತ್ರಿಸಿದ್ದಾರೆ. ವಿರೂಪಾಕ್ಷ ವೀರಶೈವ ಧರ್ಮದ ಗುರು ಎಂಬುದನ್ನು ಅನೇಕ ಸಾಹಿತ್ಯ ಕೃತಿಗಳು ದೃಢಪಡಿಸುತ್ತವೆ. ಹರಿಹರ ಕವಿ ತನ್ನ ರಗಳೆಗಳಲ್ಲಿ ವಿರೂಪಾಕ್ಷನನ್ನು "ದೇವ ಶರಣ ಸಂಕುಳದಘ ಶೋಷಣ"[೨೪೩] "ಶರಣ ಜನದ ಹರಣವಾಗಿ ಕರುಣಿಸಿರ್ಪ ಹಂಪೆಯರಸ"[೨೪೪] 'ಸೊಂಪಿನ ಶರಣ ಮನೋವರೂಡ ಜಯ"[೨೪೫] "ಎನೆನ್ನ ಮೆಚ್ಚಿನ ಮಹಾಗುರು ವಿರೂಪಾಕ್ಷ" ಎನೆನ್ನನೊಲಿವ ಕುಲದೈವವೆ ವಿರೂಪಾಕ್ಷ"[೨೪೬] ಎಂದು ಕವಿ ಹೇಳಿದ್ದಾನೆ. ಅಂದರೆ ಶರಣ (ಶಿವಶರಣರು) ಜನರ ಮನದೊಡೆಯ, ಮೆಚ್ಚಿನ ಮಹಾಗುರು ಕುಲದೈವ ವಿರೂಪಾಕ್ಷ ಆಗಿದ್ದಾನೆ. ರಾಘವಾಂಕ "ಜಗದ್ಗುರು ವಿರೂಪಾಕ್ಷನಿಲ್ಲಿಯೆ ಸುಖದೊಳಿಪ್ಪ ಪಂಪಾಕ್ಷೇತ್ರವಿದೆಯೆಂದನು"[೨೪೭] "ಗುರುವಿರೂಪಾಕ್ಷ ಸನ್ನಿಧಿಯೊಳೆನ್ನಂ"[೨೪೮] ಎಂದು ಕವಿ ವಿರೂಪಾಕ್ಷನನ್ನು 'ಜಗದ್ಗುರು', 'ಗುರು'ವೆಂದು ಸ್ತುತಿ ಮಾಡಿರುವುದು ಕಂಡುಬರುತ್ತದೆ.

ವೀರಶೈವ ಧರ್ಮದ ತತ್ತ್ವಾಚರಣೆ ಲಾಂಛನಗಳಲ್ಲಿ ವಿಭೂತಿ ಒಂದು. ಇದನ್ನು ವಿರೂಪಾಕ್ಷ ಧರಿಸಿರುವುದು ಹಂಪಿ ಪರಿಸರದ ಕಾವ್ಯಗಳಲ್ಲಿ ಕಂಡುಬರುತ್ತದೆ. ಹರಿಹರನ ಗಿರಿಜಾ ಕಲ್ಯಾಣ ಕಾವ್ಯದಲ್ಲಿ 'ಸಿತ ಭಸ್ಮಭಸ್ಮಮಯ..... ಜಂಗಮ ಕೃಪಾವನ"[೨೪೯] ಎಂದೂ, ರಗಳೆಯಲ್ಲಿ "ಜಂಗಮಾರ್ಥಿ ಲಿಂಗಮೂರ್ತಿ"[೨೫೦] "ಪಂಚಾಕ್ಷರೀ ಪ್ರಿಯಂ ಪಂಚವರ್ಣನೆ ಘನಂ"[೨೫೧] "ಪಂಪಾಪುರಾಧಿನಾಥನ ಪಂಚಾಕ್ಷರಿ ಪಂಚಾಕ್ಷರಿ ಪಂಚಾಕ್ಷರಿಯಲ್ಲದೆ ಬೇರೆ ಮತ್ತೆ ಮಂತ್ರಗಳುಂಟೇ"[೨೫೨] "ರುದ್ರಾಕ್ಷಿ ಪಂಪಾಪುರದರಸ ವಿರೂಪಾಕ್ಷನಕ್ಷಿ ಪ್ರಭಾವಂ"[೨೫೩] "ವಿರೂಪಾಕ್ಷನೆನ್ನಬಿಡದೆ ಸಲಹುತಿಹ ನಮಃ ಶಿವಾಯ"[೨೫೪] "ವಿಭೂತಿಯ ನೆಲೆ ಶಿವನೆ ಹಂಪೆಯ ವಿರೂಪಾಕ್ಷ"[೨೫೫] ಎಂದು ಹರಿಹರ ಕವಿ ವಿರೂಪಾಕ್ಷ ಭಸ್ಮಭೂಷಿತ ಕಾಯ ಹೊಂದಿದ್ದು ಜಂಗಮ ಕೃಪಾವನನಾಗಿದ್ದಾನೆ. ಅಲ್ಲದೆ ಲಿಂಗಸ್ವರೂಪನಾದ ವಿರೂಪಾಕ್ಷ ಜಂಗಮ ರೂಪಿಯಾಗಿದ್ದಾನೆ. ಪಂಚಾಕ್ಷರಿ ಮಂತ್ರ ಪ್ರಿಯನಾಗಿದ್ದು, ಹಣೆಗಣ್ಣಿನ ಪ್ರಭಾವದಿಂದ ರುದ್ರಾಕ್ಷಿ ಸೃಷ್ಟಿಸಿದ್ದಾನೆ. ಹಾಗೂ ವಿಭೂತಿಗೆ ವಿರೂಪಾಕ್ಷನೇ ನೆಲೆಯಾಗಿದ್ದಾನೆ. "ನಮಃ ಶಿವಾಯ"ಎಂಬ ಪಂಚಾಕ್ಷರಿ ಮಂತ್ರ ಪಠಿಸಿದವರನ್ನು ಸದಾ ಕಾಪಾಡುತ್ತಾನೆ. ಇದೇ ಕವಿ ರಕ್ಷಾಶತಕದಲ್ಲಿ

''ಎಸೆವೀ ಪಂಚಾಕ್ಷರೀ ಮಂತ್ರಮೆ ಗುರುತರ ಮಂತ್ರಂ
ವಿಶುದ್ಧಾಂಗಲೇಪಂ ಭಸಿತಂ ರುದ್ರಾಕ್ಷಿಯೇ ಭೂಷಣತತಿ
ಪರಮಸ್ವಾಮಿ...''[೨೫೬]

ಎಂದು ಹೇಳಿದ್ದಾನೆ. ಪಂಚಾಕ್ಷರಿ ಮಂತ್ರವೇ ಶ್ರೇಷ್ಠಮಂತ್ರ. ಭಸಿತವೇ ವಿಶುದ್ಧ ಅಂಗಲೇಪ, ರುದ್ರಾಕ್ಷಿಗಳೇ ಆಭರಣ ಪಂಪಾಪುರದರಸ ವಿರೂಪಾಕ್ಷನೇ ಪೂಜ್ಯನು ಎಂದು ಹೇಳಿ ''ಶರಣ ಹೃದ್ ರಾಜೀವ ಸಪ್ತಾಶ್ವವಂ''[೨೫೭] ಎಂದಿದ್ದಾನೆ. ಅಂದರೆ ಶಿವಶರಣರ ಹೃದಯಕಮಲಕ್ಕೆ ಸೂರ್ಯನಾದವನು ವಿರೂಪಾಕ್ಷ. ರಾಘವಾಂಕ ಕವಿ ಹರಿಶ್ಚಂದ್ರ ಕಾವ್ಯದಲ್ಲಿ.

''ಗುರು ವಿರೂಪಾಕ್ಷ ಸನ್ನಿಧಿಯೊಳೆನ್ನಂ ನೀವು
ಹರಸುವುದು ಶಿವಪೂಜೆಯಂ ಮಾಡಿಯಘುವಸಂ
ಹರಿಸುವುದುಯೆಂದವರ್ಗೆ ಕೈಮುಗಿದು ಸುಖದಿಂ ಪ್ರಸಾದ ಪಾದೋದಕವನು''[೨೫೮]

ಎಂದು ಕವಿ ಹೇಳಿದ್ದಾನೆ. ಹಂಪಿಗೆ ಬಂದ ಹರಿಶ್ಚಂದ್ರ ವಿರೂಪಾಕ್ಷನ ದರ್ಶನ ಪಡೆದು ಶಿವಪೂಜೆ ಮಾಡಿಸಿ ಪಾದೋದಕ ಪ್ರಸಾದ ಪಡೆದನೆಂದು ಕವಿ ವಿಶ್ಲೇಷಿಸಿದ್ದಾನೆ. ಇಲ್ಲಿ ಪಾದೋದಕ ಪ್ರಸಾದವು ವೀರಶೈವ ಧರ್ಮದ ಅಷ್ಟಾವರಣದ ಭಾಗವಾಗಿದೆ.

ಚಂದ್ರಶೇಖರ ಕವಿ ವಿರೂಪಾಕ್ಷನ ಓಲಗದಲ್ಲಿ ಪಾಲ್ಗೊಂಡ ಭಕ್ತರ ಸ್ವರೂಪ ಕುರಿತು ಹೇಳುವಾಗ

''ಇಟ್ಟ ವಿಭೂತಿಯ ತೊಟ್ಟ ರುದ್ರಾಕ್ಷಿಯ ಶಿರದೊಳ್ ಧರಿಸಿದ
ಶಿವಲಿಂಗ...............................
ಶಿವಲಿಂಗವನಲ್ಲದೆ ಪೂಜಿಸದ ಶಿವಮೂರ್ತಿಯನಲ್ಲದೆ ನೋಡದ ಶಿವಮಂತ್ರ
ವನಲ್ಲದೆ ಜಪಿಸದ....... ಪರಶಿವ ಮಹೇಶ್ವರರಾದ ಭಕ್ತಜನಂ''[೨೫೯]

ಎಂದು ದಾಖಲಿಸಿದ್ದಾನೆ. ಅಂದರೆ ಕವಿಯ ಪ್ರಕಾರ ಹಣೆಯಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿ, ತಲೆಯಲ್ಲಿ ಶಿವಲಿಂಗ ಧರಿಸಿದ, ಕೈಬೆರಳಿನಿಂದ ತಿರುವ ಜಪಮಾಲೆ ಹಿಡಿದ ಸಾತ್ವಿಕ ಭಾವದ ಭಕ್ತರಸದಿಂದ ತುಂಬಿದ ಪರಮಮಾಹೇಶ್ವರರಾದ ಭಕ್ತ ಜನರು ವಿರೂಪಾಕ್ಷನ ಓಲಗದಲ್ಲಿ ಇದ್ದರು. ಅವರು ಶಿವನಲ್ಲದೆ ಬೇರೆ ದೇವರನ್ನು ಧ್ಯಾನಿಸರು, ಶಿವಲಿಂಗವನ್ನಲ್ಲದೆ ಬೇರೆಯದನ್ನು ಪೂಜಿಸರು. ಶಿವಮೂರ್ತಿಯನ್ನು ಬಿಟ್ಟು ಬೇರೆಯದನ್ನು ನೋಡಲಾರರು. ಶಿವಮಂತ್ರವನ್ನಲದೆ (ನಮಃ ಶಿವಾಯ) ಬೇರೆ ಮಂತ್ರವನ್ನು ಜಪಿಸಲಾರರು. ಶಿವಕ್ಷೇತ್ರ ಬಿಟ್ಟು ಬೇರೆ ಕಡೆ ನೆಲೆಸುವುದಿಲ್ಲ. ಶಿವತೀರ್ಥಗಳನ್ನು ಬಿಟ್ಟು ಬೇರೆ ಕಡೆ ಸ್ನಾನ ಮಾಡಲಾರರು, ಶಿವಪುರಾಣಗಳನ್ನು ಬಿಟ್ಟು ಬೇರೆ ಪುರಾಣಗಳನ್ನು ಕೇಳಲಾರರು, ಶಿವಭಕ್ತರ ಸಂಗವನ್ನು ಬಿಟ್ಟು ಬೇರೆಯವರ ಸಹವಾಸ ಮಾಡುವುದಿಲ್ಲ. ಇಂಥ ಸಿದ್ಧಾಂತ ಅನುಸರಿಸುವವರು ಶಿವಭಕ್ತರು ಅವರು ವೀರಶೈವರೆಂದರೆ ತಪ್ಪಾಗಲಾರದು. ಏಕೆಂದರೆ ವೀರಶೈವರಿಗೆ ಶಿವ(ವಿರೂಪಾಕ್ಷ)ನೇ

ಪರಮೋಚ್ಛದೈವವಾಗಿದ್ದಾನೆ. ಶರಣರ ಏಕದೇವೋಪಾಸನೆ ಸಿದ್ಧಾಂತದನ್ವಯ ಕವಿ ಚಂದ್ರಶೇಖರ ಈ ಕಾವ್ಯದಲ್ಲಿ ವಿರೂಪಾಕ್ಷನಲ್ಲದೆ ಬೇರೆ ದೈವವಿಲ್ಲ ಎಂದು ಸಾರಿದ್ದಾನೆ. ಹಾಗೆಯೇ ಹರಿಹರ ರಾಘವಾಂಕಾದಿಗಳು ಸಹ ವಿರೂಪಾಕ್ಷನೇ ಪರಮೋಚ್ಛ ದೈವವೆಂದು ಚಿತ್ರಿಸಿದ್ದಾರೆ.

ವಿರೂಪಾಕ್ಷನೇ ಪರಮದೈವವೆಂದು ಅರಿತು ಹಂಪಿಗೆ ಬಂದ ಸಾಧಕರು ಸನ್ಯಾಸಿಗಳು ಭಕ್ತಾನುಯಾಯಿಗಳು ವಿರೂಪಾಕ್ಷನದೇ ಒಂದು ಪಂಥ ಹುಟ್ಟು ಹಾಕಿದಂತೆ ಹಂಪಿ ಪರಿಸರದಲ್ಲಿ ಕಂಡುಬರುತ್ತದೆ. ಹಂಪಿಯಲ್ಲಿ ೧. ಮೂಲ ಅಥವಾ ಹೇಮಕೂಟ ವಿರೂಪಾಕ್ಷ ೨. ಪಂಪಾಂಬಿಕಾ ವಿರೂಪಾಕ್ಷ ೩. ಪ್ರಸನ್ನ ವಿರೂಪಾಕ್ಷ ಎಂಬ ಮೂರು ರೀತಿಯ ದೇವಾಲಯಗಳಿರುವುದನ್ನು ಕಾಣಬಹುದು. ಅಲ್ಲದೆ ಹಂಪಿಗೆ ಬಂದ ಯೋಗಿಗಳು ಸಾಧಕರು ವಾಸಿಸುತ್ತಿದ್ದ ಕಡೆಗಳಲ್ಲಿ ವಿರೂಪಾಕ್ಷ ಲಿಂಗವನ್ನು ಪ್ರತಿಷ್ಠಾಪನೆ ಮಾಡಿರುವುದು ಕಂಡುಬರುತ್ತದೆ.

ವಿರೂಪಾಕ್ಷ ದೇವಾಲಯದ ದೊಡ್ಡ ಗೋಪುರದ ಹಿಂಬದಿಯಲ್ಲಿ ನಿಲ್ಲಿಸಿರುವ ಶಾಸನವು "ಶ್ರೀ ವಿರೂಪಾಕ್ಷಾಭಿದಾನಾಯ ವಿತೀರ್ಣವಿನತಜನ ಹೇಮಕೂಟಾಯ"[೨೦] "ಹೇಮಕೂಟ ಶಿಖರೇ ಸಿಂಹಾಸನಾಸೀನಾಯ ಶ್ರೀ ವಿರೂಪಾಕ್ಷದೇವ"[೨೧] ಎಂದು ಹೇಮಕೂಟ ವಿರೂಪಾಕ್ಷನನ್ನು ಸ್ತುತಿಸಿವೆ. ಹಂಪಿಯ ಹೇಮಕೂಟದಲ್ಲಿ ಈಗಲೂ ವಿರೂಪಾಕ್ಷ ದೇವಾಲಯವಿದೆ. ಈ ಹೇಮಕೂಟದಲ್ಲಿಯೇ ವಿರೂಪಾಕ್ಷ ವಾಸಿಸುತ್ತಾನೆಂಬ ಪ್ರತೀತಿ ಇದೆ. ಹೇಮಕೂಟ ದೇವಾಲಯವೊಂದರ ಎದುರಿಗಿರುವ ಕಲ್ಲಿನ ಮೇಲಿನ ಶಾಸನವು "ಶ್ರೀ ಪಂಪಾವಿರೂಪಾಕ್ಷ ದೇವಂಡು"[೨೨] ಎಂದೂ ಹಂಪಿಯ ಕ್ರಿ.ಶ.೧೫೨೪ರ ಕೃಷ್ಣದೇವರಾಯನ ಶಾಸನವು "ಪಂಪಾ ವಿರೂಪಾಕ್ಷದೇವರು"[೨೩] ಎಂದು ಪಂಪಾವಿರೂಪಾಕ್ಷನನ್ನು ದಾಖಲಿಸಿವೆ. ಹಾಗೆಯೇ ಇದೇ ಕೃಷ್ಣದೇವರಾಯನ ಕ್ರಿ.ಶ.೧೫೧೩ರ ಎರಡು ಶಾಸನಗಳಲ್ಲಿ "ಶ್ರೀ ಪ್ರಸಂನ ವಿರೂಪಾಕ್ಷ ದೇವರ ಗ್ರಾಮ"[೨೪] ಎಂದೂ ಪ್ರಸನ್ನ ವಿರೂಪಾಕ್ಷ ದೇವಾಲಯದ ಶಾಸನವು "ಶ್ರೀ ಪ್ರಸಂನ ವಿರೂಪಾಕ್ಷ ದೇವರು"[೨೫] ಎಂದು ದಾಖಲಿಸಿವೆ. ಹೀಗೆ ವಿರೂಪಾಕ್ಷ ವಿಭಿನ್ನ ಜನರ ಆರಾಧ್ಯ ದೈವವಾದ ಮೇಲೆ ಮೂರು ರೀತಿಯ ವಿರೂಪಾಕ್ಷರನ್ನು ಸೃಷ್ಟಿಸಿಕೊಂಡರು. ವಿರೂಪಾಕ್ಷನನ್ನೇ ಒಂದು ಪಂಥವಾಗಿ ರೂಪಿಸಿದ್ದರಿಂದ 'ವಿರೂಪಾಕ್ಷ' ಎಂಬ ಹೆಸರಿನ ಒಂದು ಸಾಲಿನ ಶಾಸನ ಹಂಪಿಯ ಕೆಲವಾರು ಕಡೆ ಕಂಡುಬರುತ್ತವೆ. ವಿರೂಪಾಕ್ಷ ದೇವಾಲಯದ ಬಳಿ ನದಿ ದಂಡೆಯ ಹಳೆಯ ಸ್ನಾನಘಟ್ಟದ ಹತ್ತಿರ ಕೆತ್ತಲಾಗಿರುವ ವಿಗ್ರಹಗಳ ಸಮೀಪದ ಕಲ್ಲಿನ ಮೇಲೆ "(ವಿರು)ಪಕ್ಷ"[೨೬] ಇಲ್ಲೇ ಇರುವ ಇನ್ನೊಂದು ಬಂಡೆಯ ಮೇಲೆ "ಶ್ರೀ ವಿರೂಪಾಕ್ಷನ ಪಾದ"[೨೭] ಕೋಟಿಲಿಂಗದ ಬಳಿಯ ಬಂಡೆಯ ಮೇಲೆ "ಶ್ರೀ ವಿರೂಪಾಕ್ಷ"[೨೮] ಹಳೇ ಸ್ನಾನಘಟ್ಟದ ಬಳಿ ಬಂಡೆಯ ಮೇಲ್ಭಾಗದಲ್ಲಿ ಲಿಂಗ ಮತ್ತು ನಂದಿ ಶಿಲ್ಪಗಳ ಕೆಳಗೆ ಇರುವ ಶಾಸನವು "ಶ್ರೀ... ವೀರಬತ್ರಡ ಲಿಂಗಂ ಶ್ರೀವಿರೂಪಾಕ್ಷದೇವ"[೨೯] ಎಂದು ಅಲ್ಲಲ್ಲಿ

ವಿರೂಪಾಕ್ಷ ಲಿಂಗಗಳನ್ನು ಸ್ಥಾಪಿಸಿರುವುದನ್ನು ಕಾಣಬಹುದಾಗಿದೆ. ಕೋದಂಡರಾಮ ದೇವಸ್ಥಾನದ ಬಳಿ ನದಿದಂಡೆಯ ಮೇಲೆ ಹೆಬ್ಬಂಡೆಯಲ್ಲಿ ಸಾವಿರಾರು ಶಿವಲಿಂಗಗಳನ್ನೂ ಮಾಲ್ಯವಂತ ಪರ್ವತದಲ್ಲಿ ನೂರಾರು ಶಿವಲಿಂಗಗಳನ್ನು ಕೆತ್ತಲಾಗಿದೆ. ಹಂಪಿಯ ಮೂರು ತೆರನಾದ ವಿರೂಪಾಕ್ಷ ದೇವರಿಗೆ ಸಾಮಾನ್ಯ ಜನರು, ವ್ಯಾಪಾರಿಗಳು, ರಾಜ ಮಹಾರಾಜರು, ಸಾಮಂತರು ಗಣ್ಯರು ಹೀಗೆ ಅನೇಕರು ದಾನ ನೀಡಿರುವುದನ್ನು ಕಾಣಬಹುದು.

ಕೇವಲ ವೀರಶೈವ ಕವಿಗಳಿಂದ ಮಾತ್ರ ಸ್ತುತಿಸಲ್ಪಟ್ಟ ವಿರೂಪಾಕ್ಷ ವೀರಶೈವ ಧರ್ಮೀಯರ ಆರಾಧ್ಯ ದೈವನಾಗಿ ಬೆಳೆದಿರುವನೆಂಬುದನ್ನು ಗಮನಿಸಬೇಕಾದ ಮುಖ್ಯ ಅಂಶವಾಗಿದೆ. ಇದು ಹರಿಹರ ರಾಘವಾಂಕ ಕವಿಗಳಿಂದ ಆರಂಭವಾಯಿತೆಂದು ಹೇಳಬಹುದು. ಹರಿಹರ ರಾಘವಾಂಕರು ಇಷ್ಟಲಿಂಗದಷ್ಟೇ ಸ್ಥಾವರಲಿಂಗಕ್ಕೂ ಮಹತ್ವ ನೀಡಿದರೆಂಬುದನ್ನು ಹಾಗೆಯೇ ವಿಜಯನಗರದ ಆರಂಭಿಕ ಅರಸರು ಈ ಕವಿಗಳ ಧೋರಣೆಯನ್ನೇ ತಾಳಿ ತಾವು ವಿರೂಪಾಕ್ಷನ ಪ್ರತಿನಿಧಿಗಳು ವಿರೂಪಾಕ್ಷನೇ ರಾಜನೆಂದು ಸಾರಿದರು. ಇದರಿಂದ ವಿರೂಪಾಕ್ಷ ವೀರಶೈವ ಧರ್ಮದ ಆರಾಧ್ಯದೈವವಾದಂತೆ ವಿಜಯನಗರದ ರಕ್ಷಕನೂ ಆದನೆಂದು ಹೇಳಬಹುದಾಗಿದೆ.

### ಆ. ವೀರಭದ್ರ

ದಕ್ಷಿಣ ಭಾರತದ ರಾಜ್ಯಗಳಲ್ಲಿ ಅದರಲ್ಲೂ ಆಂಧ್ರ-ಕರ್ನಾಟಕ ರಾಜ್ಯಗಳಲ್ಲಿ ವೀರಶೈವ ದೇವತೆಯಾಗಿ ವೀರಭದ್ರ ಪೂಜೆಗೊಳ್ಳುತ್ತಾನೆ. ವೀರಭದ್ರನೇ ಪ್ರಧಾನ ದೇವತೆಯಾಗಿ ಪೂಜೆಗೊಳ್ಳುತ್ತಿರುವುದರಿಂದ ಅನೇಕ ವೀರಭದ್ರ ದೇವಾಲಯಗಳು ನಿರ್ಮಾಣಗೊಂಡಿರುವುದನ್ನು ಕಾಣಬಹುದು. ವೀರಭದ್ರ ವೈದಿಕಶಾಹಿ ವಿರುದ್ಧ ಅಥವಾ ಶೋಷಣೆಯ ವಿರುದ್ಧ ನ್ಯಾಯದ ಪರ ಹೋರಾಡಿದವನು. ಅವನದು ಜಂಗಮ ವೃತ್ತಿಶ್ಚೈತನ್ಯ ಲೀಲೆ ಅವನು ವೀರಗಣರ ನಾಯಕ ಹಿಡಿದ ಆಯುಧ ಅನ್ಯಾಯದ ಯಜ್ಞಕ್ಕೆದುರು ತೋರಿದ ಪ್ರತಿಭಟನೆ, ಶೌರ್ಯಗಳು ಜನಸಂಸ್ಕೃತಿಯ ವಿವಿಧ ಅಳವಡಿಕೆಗಳಿಗೆ ಪ್ರೇರಣೆ ನೀಡಿದವು ಪ್ರಾಣಿ ಹತ್ಯೆ ಎದುರು ಸೆಡ್ಡು ಹೊಡೆದು ನಿಂತ ವೀರಭದ್ರ ಮೊದಲು ಪಶುಪಾಲಕ ಸಮುದಾಯದ ದೈವವಾಗಿದ್ದಂತೆ ತೋರುತ್ತದೆ. ನಂತರ ಕೃಷಿಕಾಯಕ, ಕುಲಕಸುಬು ಕಾಯಕದವರ ಕುಲದೈವವಾಗಿರುವುದನ್ನು ಕಾಣಬಹುದಾಗಿದೆ. ಕ್ರಿ.ಶ.೮-೯ನೇ ಶತಮಾನದ ಶಾಸನಗಳಲ್ಲಿ ವೀರಭದ್ರನ ಉಲ್ಲೇಖ ಅಲ್ಲಲ್ಲಿ ಕಂಡುಬಂದರೂ ವೀರಭದ್ರನ ಆರಾಧನೆ ಇದ್ದರೂ ವೀರಭದ್ರ ಪ್ರಧಾನ ದೇವತೆಯಾಗಿರಲಿಲ್ಲ. ವೀರಭದ್ರ ಪ್ರಧಾನ ದೇವತೆಯಾಗುವುದು ಆತನಿಗಾಗಿಯೇ ದೇವಾಲಯಗಳು ನಿರ್ಮಾಣವಾಗುವುದು ಕ್ರಿ.ಶ.೧೨-೧೩ನೇ ಶತಮಾನದ ನಂತರವೇ. ಹಂಪಿ ಪರಿಸರದಲ್ಲಿ ಅನೇಕ ಕಡೆಗಳಲ್ಲಿ ವೀರಭದ್ರನ ದೇವಾಲಯಗಳು ವೀರಭದ್ರನ ಶಿಲ್ಪಗಳು ಕಂಡುಬರುತ್ತವೆ. ಇದರಿಂದ ಹಂಪಿ ವೀರಭದ್ರ ಕ್ಷೇತ್ರವಾಗಿತ್ತೆಂಬುದು ತಿಳಿದುಬರುತ್ತದೆ. ವಿರೂಪಾಕ್ಷ-ವೀರಭದ್ರನು ಒಂದೆಯೇ? ಅಥವಾ ಬೇರೆ ಬೇರೆಯೇ? ವೀರಭದ್ರನ

ಹುಟ್ಟು, ಸ್ವರೂಪ, ಬೆಳವಣಿಗೆ, ನೆಲೆ ಮುಂತಾದ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದಲ್ಲದೆ ವೀರಶೈವ ಧರ್ಮಕ್ಕೂ ವೀರಭದ್ರನಿಗೂ ಇರುವ ಸಂಬಂಧ ಕುರಿತು ವಿಶ್ಲೇಷಿಸಲಾಗಿದೆ. ಹಂಪಿ ಪರಿಸರದಲ್ಲಿ ವೀರಭದ್ರನ ಪ್ರಭಾವ ಹೆಚ್ಚಾಗಲು ಪ್ರಧಾನ ಕಾರಣಗಳನ್ನು ಗುರುತಿಸಲಾಗಿದೆ.

**ಅ. ವೀರಭದ್ರನ ಹುಟ್ಟು ಮತ್ತು ಸ್ವರೂಪ :** ಸ್ಕಂದ, ಕೂರ್ಮ, ಮತ್ಸ್ಯ ಮುಂತಾದ ಪುರಾಣಗಳಲ್ಲಿ, ಶೈವಾಗಮಗಳಲ್ಲಿ ವೀರಭದ್ರನ ಆವಿರ್ಭಾವ, ವಿರೋಚಿತ ಕಾರ್ಯ, ಮಹಿಮೆ ಅರ್ಚನೆ ಇತ್ಯಾದಿ ವಿಷಯಗಳ ನಿರೂಪಣೆ ಬಂದಂತೆ, ಹಂಪಿಯ ಸಾಹಿತ್ಯ (ಕನ್ನಡ) ಕೃತಿಗಳಲ್ಲಿಯೂ ಈ ನಿರೂಪಣೆ ಬರುತ್ತದೆ. ಈ ಹಂಪಿ ಪರಿಸರದ ಕಾವ್ಯಗಳಲ್ಲಿ ದಕ್ಷನ ಅಹಂಕಾರ, ಆತನ ಯಜ್ಞಸಂದರ್ಭದಲ್ಲಿ ಶಿವನಿಗೆ ಆದ ಅಪಮಾನವನ್ನು ಸಹಿಸದ ಪಾರ್ವತಿ ಅದೇ ಯಜ್ಞಕ್ಕೆ ಆಹುತಿಯಾದದ್ದು, ಈ ವಿಚಾರ ತಿಳಿದ ಶಿವ ಕೋಪಗೊಂಡು ತನ್ನ ಮೂರನೇ ಕಣ್ಣು ತೆರೆದು ವೀರಭದ್ರನನ್ನು ಸೃಷ್ಟಿಸಿದ್ದು, ವೀರಭದ್ರನಿಂದ ದಕ್ಷನ ಯಾಗಧ್ವಂಸ ದಕ್ಷನ ಶಿರಚ್ಛೇದನವಾದದ್ದು, ನಂತರ ದಕ್ಷನಿಗೆ ಕುರಿತಲೆಯನ್ನು ಇಟ್ಟು ಜೀವದಾನ ಮಾಡಿದ ಪೌರಾಣಿಕ ಅಂಶಗಳು ಈ ಕಾವ್ಯಗಳಲ್ಲಿ ಕಂಡುಬರುತ್ತವೆ. ಪುರಾಣ ಕಥೆ ಏನೇ ಇದ್ದರೂ ವೀರಭದ್ರ ಹುಟ್ಟಿದ್ದು ಮಾತ್ರ ಮೂಢಾಚರಣೆಯಾದ ಯಜ್ಞಧ್ವಂಸ ಮತ್ತು ಪ್ರಾಣಿಬಲಿ ತಡೆಗಟ್ಟಲು ಎಂಬುದು ಮುಖ್ಯವಾದದ್ದು.

ವೀರಭದ್ರನ ಹುಟ್ಟು ಮತ್ತು ಸ್ವರೂಪ ಕುರಿತು ಹರಿಹರ ಕವಿ ತನ್ನ ದಕ್ಷಾಧ್ವರ ರಗಳೆಯಲ್ಲಿ

> "ಇರೆ ದೇಹದೊಳು ಸುತ್ತಿಹೊತ್ತಿಹೊಗೆದುರು ಕೋಪ
> ಉರವಣಿಸುತೊಡಲೊಳಗೆ ತುಂಬಿಟ್ಟುದನುತಾಪ
> ಅಡಸಿ ನೆಗೆದುದು ಭಾಳಲೋಚನದ ಕೆಲದಿಂದೆ
> ಘುಡುಘುಡಸಿದುದು ಮಸಗಿದುದು ಬೆಮರನೆವದಿಂದೆ
> ..................................
> ಕೂಡೆ ಪುಟ್ಟುತ್ತಿರ್ದನಭವನಧಟನ ಮೂರ್ತಿ"[೨೭೦]

ಎಂದು ಹೇಳಿದರೆ, ಕವಿ ರಾಘವಾಂಕನ 'ವೀರೇಶ ಚರಿತೆ'ಯಲ್ಲಿ ವೀರಭದ್ರನ ಹುಟ್ಟನ್ನು(ಜನನ) ಕುರಿತು

> "ಕಡೆಗಾಲದ ಕಿಚ್ಚಿನ ಮುಚ್ಚಳ್ದೆಗೆದಂದದೆ
> ಘುಡಿಘುಡಿಸುವ ನಡುಗಣ್ಣೆವೆಯೊಡೆಯಲ್........
> ಬೆವರಿಳಿದುಜೆ ಚುಯ್ಯನೆ ದನಿ
> ಗೊಡುವ ಸುಧಾಬಿಂದುವಿನೊತ್ತು ವಿಡಿದನೆಲೆಲೇ ವೀರಕುಲಾಧೀಶ್ವರನು"[೨೭೧]

ಎಂದು ದಾಖಲಿಸಿದರೆ, ಲಕ್ಕಣ್ಣದಂಡೇಶ ತನ್ನ 'ಶಿವತತ್ತ್ವಚಿಂತಾಮಣಿ' ಕಾವ್ಯದಲ್ಲಿ

"ಎಡವಿಡದೆ ಬೆಮರಿಡುವ ಮೃಡನ ಮೂಜನೆಯಕ್ಷಿ
ಕಿಡಿಗಳನುಗುಳೆ ರೋಷಪಾವಕಂ ಪದೆದುಣ್ಮೆ
ಕಡೆಗಾಲದಗ್ನಿಗಿಕ್ಕಿದ ಮುಚ್ಚಳಂ ತೆಗೆದುಬಿಟ್ಟಂತೆ ಲೋಕವೆಲ್ಲ
..........................................
ಮಿಱುಗುವತಿಮೂಱು ಕೆಂಗೆಣ್ಣ ರೌದ್ರತೆಯಿಂದ
.......................................
ಬೆಮರತಿರೋಷದಿಂದ ಹೂಂಕರಿಪಭವನಂ ನೋಡಲಮ್ಮದಸುವ
................................ ತನ್ನ
ಬಿಱುಗೋಪವಂ ತೆಗೆದು ನೆಜೆ ಮೂರ್ತಿಗೆಯ್ದವನ ಚರಣಾಂಬುಜಕ್ಕೆ ಶರಣು"[೨೭೨]

ಎಂದು ಕವಿ ದಾಖಲಿಸಿದ್ದಾನೆ. ಹಾಗೆಯೇ ಕರಸ್ಥಲನಾಗಿದೇವನು ತನ್ನ ಮಡಿವಾಳ ಮಾಚಯ್ಯನ ತಾರಾವಳಿ ಕಾವ್ಯದಲ್ಲಿ "ಪಣೆಯಗಣ್ಣ ತೆರೆಯಲುದ್ಭವಿಸಿದ ವೀರಾವತಾರದ"[೩೭೩] ಎಂದು ಹೇಳಿದ್ದಾನೆ.

ಪಾರ್ವತಿ ದಕ್ಷನ ಯಜ್ಞಶಾಲೆಗೆ ಬಂದಾಗ ದಕ್ಷನಿಂದ ಶಿವನಿಂದೆ ಕೇಳಿ ಅಪಮಾನಿತಳಾಗಿ ಅದೇ ಯಜ್ಞಕುಂಡದಲ್ಲಿ ಬಿದ್ದು ಸುಟ್ಟುಹೋಗುತ್ತಾಳೆ. ಈ ವಿಚಾರವನ್ನು ನಂದೀಶ್ವರನಿಂದ ತಿಳಿದ ಶಿವ ಸತಿಯ ಅಗಲಿಕೆಯ ಸಂತಾಪದಿಂದ ನೆಲಕ್ಕಪ್ಪಳಿಸಿ ಮಲಗುತ್ತಾನೆ. ಆ ಸಂದರ್ಭದಲ್ಲಿ ಕೋಪ ಹೆಚ್ಚಾಗಿ ವೀರಭದ್ರ ಉದ್ಭವಿಸುವುದನ್ನು ಕವಿ ಹರಿಹರ ತನ್ನ ದಕ್ಷಾಧ್ವರ ರಗಳೆಯಲ್ಲಿ "ಹರನ ಕೋಪ ಶರೀರದಲೆಲ್ಲಾ ಹಬ್ಬಿ ಹೊಗೆಸುತ್ತಿದಂತಾಗಿ ತಾಪವು ಮೂರನೆಯ ಕಣ್ಣಿನಿಂದ ಹೊರಬಿದ್ದಿತು. ಕೋಪವೆಲ್ಲ ಸಂಗ್ರಹಗೊಂಡು ಬೆವರಾಗಿ ಬಿಂದು ರೂಪ ತಳೆದು ಒಂದೆಡೆಗೆ ಆ ಬೆವರ ಬಿಂದು ಬಿದ್ದು ಅದೊಂದು ತೇಜೋಮೂರ್ತಿಯಾಗಿ ಅವರಿಸತೊಡಗಿತು. ಆಗ ಅದೇ ತೇಜೋಮೂರ್ತಿ ವೀರಭದ್ರನ ರೂಪ ಪಡೆಯಿತು" ಎಂದು ಹೇಳಿದರೆ ರಾಘವಾಂಕ ಕವಿ "ಕೋಪೋದ್ರಿಕ್ತನಾದ ಶಿವ ಪ್ರಳಯ ಕಾಲದ ಜ್ವಾಲೆಯ ಮುಚ್ಚುಳವನ್ನು ತೆಗೆದಂತೆ ನಡುಗಣ್ಣೆವೆಯು ಘುಡುಘುಡಿಸುತ್ತ ಒಡೆಯಲು, ಪ್ರಚಂಡವಾದ ಕಿಡಿಗಳನ್ನು ಕೆದರುತ್ತಾ, ದಳ್ಳುರಿ ಆಕಾಶವನ್ನು ತೀವುತ್ತ ಬಿರುಬಿಸಿಯಿಂದ ಲೋಕವನ್ನು ಕಾಯಿಸುತ್ತ ಇರಲು, ಅದರ ಫಲವಾಗಿ ಶಿವನ ಜಡೆಯಲ್ಲಿದ್ದ ಗಂಗೆಯ ಮಡು ಕಾದು ಉಕ್ಕಿ ಎಸರಾಯಿತು. ತಲೆಯಲ್ಲಿದ್ದ ಚಂದ್ರನು ಬೆವರಿಳಿದು ಚುಯ್ಯನೆ ಶಬ್ದ ಮಾಡುವ ಸುಧಾಬಿಂದುವಿನಿಂದ ಕರಗಿಹೋದನು ಎಂಬಂತಿರಲು"[೨೭೪] ಶಿವನ ಪಾಲನೇತ್ರಜ್ವಾಲೆಯಿಂದ ವೀರಕುಲಾಧೀಶ್ವರನಾದ ವೀರಭದ್ರನು ಜಗತ್ತಿಗೆ ಅವತರಿಸಿದನು.

ಲಕ್ಕಣ್ಣದಂಡೇಶನು ಪಾರ್ವತಿ ದಕ್ಷನ ಯಜ್ಞಕುಂಡದಲ್ಲಿ ಬಿದ್ದು ಸುಟ್ಟುಹೋದ ವಿಚಾರ ಕೇಳಿ ಕೋಪಗೊಂಡು ಬೆವರೊಡೆದು ಮೂರನೆಯ ಕಣ್ಣು ತೆಗೆಯಲು ಅದು ಕಿಡಿಗಳನ್ನು ಉಗುಳಿತು. ಕೋಪವೆಂಬ ಬೆಂಕಿಯು ಪ್ರಳಯ ಕಾಲದ ಅಗ್ನಿಯ ಮುಚ್ಚಳ ತೆಗೆದುಬಿಟ್ಟಂತೆ ಲೋಕವನ್ನು ವ್ಯಾಪಿಸಿತು.

ಶಿವನ ರೌದ್ರಭಾವದಿಂದ ಮೂರು ಕಣ್ಣುಗಳು ಕೆಂಡವಾದವು. ದೇಹವು ಕೋಪಾಗ್ನಿಯಿಂದ ಕುದಿಯಿತು. ಇದರಿಂದ ಮತ್ತೆ ಬೆವರು ಹುಟ್ಟಿ ದೇಹಕ್ಕೆ ಲೇಪಿಸಿದ ಭಸ್ಮವನ್ನು ತೊಯಿಸಿ ಹರಿಯಿತು. ಆ ಬೆವರ ರೋಷವು ಶಿವನನ್ನು ಮೈಮರೆಯುವಂತೆ ಮಾಡಿತು. ಆಗ ಕಣ್ಣ(ಹಣೆಗಣ್ಣು) ಅಂಚಿನಿಂದ ಭಕ್ತಜನದ ಭಾಗ್ಯದಂತಿರುವ ವೀರಭದ್ರ ಅವತರಿಸಿದ. ಆಗ ಶಿವನ ಕೋಪ ಶಮನವಾಯಿತು. ಹಾಗೆಯೇ ಕರಸ್ಥಳದ ನಾಗಿದೇವರು ಹಣೆಗಣ್ಣನ್ನು ತೆರೆದೊಡನೆ ವೀರಾವತಾರದಂತಿರುವ ವೀರಭದ್ರ ಉದ್ಭವಿಸಿದನು ಎಂದು ಹೇಳಿದ್ದಾನೆ.

ಹೀಗೆ ವೀರಭದ್ರನ ಹುಟ್ಟನ್ನು ಕವಿಗಳು ವರ್ಣಿಸಿದ್ದಾರೆ. ಹರಿಹರ ಕವಿಯನ್ನು ಹೊರತುಪಡಿಸಿ ರಾಘವಾಂಕ, ಲಕ್ಕಣ್ಣದಂಡೇಶ, ಕರಸ್ಥಲದ ನಾಗಿದೇವ ವೀರಭದ್ರನು ಶಿವನ ಹಣೆಗಣ್ಣಿನಿಂದ ಉದ್ಭವಿಸಿದ ಎಂದು ಹೇಳಿದ್ದಾರೆ. ಆದರೆ ಹರಿಹರ ಮಾತ್ರ ಶಿವನ ಮೈ ಬೆವರು ಬಿಂದು ರೂಪ ತಾಳಿ ಅದರಿಂದ ವೀರಭದ್ರ ಹುಟ್ಟಿದ ಎಂದು ಹೇಳಿದ್ದಾನೆ. ವೀರಭದ್ರನ ಹುಟ್ಟಿನ ಬಗ್ಗೆ ಹರಿಹರ ಮತ್ತು ರಾಘವಾಂಕಾದಿಗಳಲ್ಲಿ ಭಿನ್ನಾಭಿಪ್ರಾಯವಿರುವುದು ಸತ್ಯ. ಈ ಎರಡು ರೀತಿಯ ಭಿನ್ನಾಭಿಪ್ರಾಯಗಳಿಗೆ ಕಾರಣ ಕಂಡುಹಿಡಿಯಲು ಹೆಚ್ಚಿನ ಶೋಧನೆಯ ಅಗತ್ಯವಿದೆ ಎಂದೆನಿಸುತ್ತದೆ.

ವೀರಭದ್ರನ ಜನನ ನಿರೀಕ್ಷಿಸಲಾರದ್ದು ಪ್ರಕೃತಿ ನಿಯಮಕ್ಕೆ ಅತೀತವಾದದ್ದು ಅಂಥಹ ಭಯಂಕರ ಉಗ್ರರೂಪಿ ಶಿವನ ಹಣೆಗಣ್ಣಿನಲ್ಲಿ ಹುಟ್ಟಿದನೆಂದೂ, ಶಿವನ ಮೈಬೆವರಿನಿಂದ ಜನ್ಮತಾಳಿದನೆಂದೂ ಕಾವ್ಯಗಳು ವರ್ಣಿಸುತ್ತವೆ. ವೀರಭದ್ರನ ಜನನದ ಬಗ್ಗೆ ಕವಿಗಳಲ್ಲಿ ಒಮ್ಮತಾಭಿಪ್ರಾಯವಿಲ್ಲ. ಡಾ.ಜಚನಿಯವರು ''ಶಿವ-ಭದ್ರ ಎರಡೂ ಒಂದೇ ಅರ್ಥದ ಪರ್ಯಾಯ ಪದಗಳು. ವೀರಭದ್ರನೆಂದರೂ ವೀರಶಿವನೆಂದರೂ ಒಂದೇ! ವೀರಭದ್ರನು ಪಾರ್ವತಿ ಪತಿಯಾದ ಶಿವನ ಸಮಕಾಲೀನನು. ರುದ್ರತನಯನು''[೨೭] 'ಕಣ್ಣಲ್ಲಿ ತಲೆಯಲ್ಲಿ ಜಡೆಯಲ್ಲಿ ಜನಿಸಿದವನಲ್ಲ''[೨೮] ಎಂದಿದ್ದಾರೆ. ವೀರಭದ್ರನ ಜನನದ ಬಗ್ಗೆ ಏಕಾಭಿಪ್ರಾಯವಿಲ್ಲದ ಕಾರಣ ವೀರಭದ್ರ ಶಿವನ ಮತ್ತೊಂದು ಅವತಾರವೆಂದು ಹೇಳಬಹುದು.

ವೀರಭದ್ರನ ಸ್ವರೂಪ ಕುರಿತು ಹಂಪಿ ಪರಿಸರದ ಕವಿಗಳು ತಮ್ಮದೇಯಾದ ನೆಲೆಯಲ್ಲಿ ತಮ್ಮ ಕಾವ್ಯಗಳಲ್ಲಿ ಚಿತ್ರಿಸಿದ್ದಾರೆ.

ಹರಿಹರ ಕವಿ ದಕ್ಷಾಧ್ವರ ರಗಳೆಯಲ್ಲಿ

''ಏಕಜೆಡೆಲಿಂಗಂ ಶಿರೋಮಾಲೆಗಳ್ತೊಳಗೆ
ಭೀಕರವೆನಿಪ್ಪ ಕೆಂಗಣ್ಮೀಸೆಗಳ್ಬೆಳಗೆ
ಕುಂಡಲಂ ಕೋರೆದಾಡೆಗಳೊಪ್ಪಿ ತೋರುತಿರೆ
ಚಂಡಾಂಶು ವೀರಫಳಕಂ ತೊಡರ್ಮೊರೆವುತಿರೆ''[೨೯]

ರಾಘವಾಂಕ ಕವಿ ವೀರೇಶ ಚರಿತೆಯಲ್ಲಿ

"ಸೊಡರ್ಗುಡಿವೆಳಗಿನ ಮೈವಣ್ಣಂ ನಿಡುಜಡೆ ಮುಡಿ
ನಡುನೆತ್ತಿಯ ಲಿಂಗಂ ಮುಕುಟಂ ಫಣಿಕುಂಡಲ
ಕುಡಿಗಣ್ಣುರಿಗೆದಱುವ ಪಂಚಮುಖಂ ನಿಡುದಾಡೆಗಳೆಸೆವ ಸಹಸ್ರಭುಜಂ
........................................"[೨೭೮]

ಲಕ್ಕಣ್ಣದಂಡೇಶ ಶಿವತತ್ತ್ವಚಿಂತಾಮಣಿ ಕಾವ್ಯದಲ್ಲಿ

"ಕಟ್ಟುಗ್ರಮೂರ್ತಿ ಪೊಂಬಟ್ಟೆ ಚಲ್ಲಣವೆಸೆಯ
ಲುಟ್ಟಖಿಳಭೂಷಣಂದೊಟ್ಟು ಶಿರಮಾಲೆಯಂ
ಕಟ್ಟಿ ಫಣಿಕುಂಡಲಗಳಿಟ್ಟು ಹೊಳೆಹೊಳೆವ ದಂಷ್ಟ್ರಂಗಳಿಂಗಿಂಬುಗೊಟ್ಟು
ನೆಟ್ಟನುರುಲಿಂಗವಳವಟ್ಟು........"[೨೭೯]

ಕರಸ್ಥಲದನಾಗಿದೇವ ತನ್ನ ಮಡಿವಾಳ ಮಾಚಯ್ಯಗಳ ತಾರಾವಳಿ ಕಾವ್ಯದಲ್ಲಿ

"ಬಿಡುಗಣ್ಣು ಪೊಳೆವ ದೌಂಷ್ಟ್ರವು ಮೀಸೆಗಳಂತೆ
ಕಡಿತಲೆ ಕಾಸೆ ಕಾಲಂದುಗೆ ಝುಣದಂತೆ
ಪಿಡಿದ ಖಡ್ಗವು ಚಾಪಸರಳು ಹಲಗೆಯಂತೆ
ಉಡಿಯಲು ಕುಡಿಬಾಕು ರಣಚೂರಿ ಮೆರೆವುತ್ತೆ"[೨೮೦]

ಎಂದು ಕವಿಗಳು ವೀರಭದ್ರನ ಸ್ವರೂಪ ಕುರಿತು ವರ್ಣಿಸಿದ್ದಾರೆ. ಶಿವನ ಬೆವರಿನ ವಿರಾಟ್ ರೂಪ ಅಥವಾ ಶಿವನ ಹಣೆಗಣ್ಣಿನಿಂದ ಮೂರ್ತಿವೆತ್ತ ವೀರಭದ್ರ ಏಕ ಜಡೆ, ಶಿವಲಿಂಗ, ಕೊರಳಲ್ಲಿ ರುಂಡಮಾಲೆ ಭಯಂಕರ ರಕ್ತದ ಕಣ್ಣುಗಳು, ಮೀಸೆಗಳು, ಕುಂಡಲಕೋರೆದಾಡೆಗಳು ಚಂಡಾಂಶು ವೀರಫಲಕಗಳನ್ನು ಧರಿಸಿದ್ದ. ಅಲ್ಲದೆ ಪಂಚಮುಖ, ಸಾವಿರ ಭುಜಗಳಿಂದಲೂ ಉಡುಗೆಯ ಚಲ್ಲಣದಿಂದಲೂ ಅನಂತದಿವ್ಯಾಯುಧಗಳಿಂದಲೂ ನಡುನೆತ್ತಿಯಲ್ಲಿ ಶಿವಲಿಂಗಧರಿಸಿದ್ದ. ಕತ್ತರಿಸಿದ ತಲೆಗಳು, ಕಾಸೆ ಕಾಲಂದುಗೆ ಖಡ್ಗ ಚಾಪಬಾಣ, ಹಲಗೆ, ಉಡಿಯಲ್ಲಿ ಚೂಪಾದ ಬಾಕು ರಣಚೂರಿ ಹಿಡಿದಿದ್ದ. ಇವುಗಳೇ ವೀರಭದ್ರನಿಗೆ ಆಭರಣಗಳಾಗಿದ್ದವೆಂದು ಈ ಕವಿಗಳು ಪ್ರತಿಪಾದಿಸಿದ್ದಾರೆ. ವೀರಭದ್ರ ನಡುನೆತ್ತಿಯಲ್ಲಿ ಶಿವಲಿಂಗಧರಿಸಿರುವುದು ವೀರಭದ್ರ ವೀರಶೈವನೆಂಬುದನ್ನು ತೋರಿಸುತ್ತದೆ. ವೀರಭದ್ರ ವೀರಯೋಧನ ಪ್ರತೀಕ ಎಂಬುದೂ ಅಷ್ಟೇ ಸತ್ಯ.

ಈ ಮೇಲಿನ ಎಲ್ಲಾ ಆಯುಧಗಳನ್ನು ಹಿಡಿದು ಜನಿಸಿದ ವೀರಭದ್ರನಿಗೆ ಜಾತಕರ್ಮ ಮಾಡಿ ನಾಮಕರಣ ಮಾಡಿದ್ದರ ಬಗ್ಗೆ ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ

ಹರಿಹರ : "ನೋಡಿರೇ ಬಾಳನಯನಂ ಹೆತ್ತ ಶಿಶುವಿಂಗೆ
ಮಾಡಿದುದು ಜಾತಕರ್ಮ ವೀರದಾತಂಗೆ

ನಾಮಕರಣಂ ವೀರಭದ್ರನೆಂಬುದು ತನಗೆ

.......................

ಬಾಲತನದಾಟವದು ಮಖವನುರುಪುವಲೀಲೆ''[೨೮೧]

ಲಕ್ಕಣ್ಣದಂಡೇಶ : ''ತದ್ರೂಪದಿಂ ಕ್ಷುದ್ರದೈವದೈವಂಗಳ ನಿ

ಜೋದ್ರೇಕದಿಂ ಹತಿಸುವುದಕೆ ವೀರಂ ವೀರ

ಭದ್ರನಾಮವ ಧರಿಸಿನಿಂದ ವೀರೇಶ್ವರನ ಚರಣಾಂಬುಜಕೆ ಶರಣ''[೨೮೨]

ಎಂದು ವೀರಭದ್ರನಿಗೆ ನಾಮಕರಣ ಮಾಡಿದ್ದರ ಬಗ್ಗೆ ದಾಖಲಿಸಲಾಗಿದೆ. ಈ ಕಾವ್ಯಗಳ ಪ್ರಕಾರ ಬಾಳನಯನ ಅಂದರೆ ಹಣೆಗಣ್ಣುಳ್ಳ ಶಿವ ಹೆತ್ತ ಶಿಶುವಿಗೆ ನಾಮಕರಣದ ಶಾಸ್ತ್ರ ಮಾಡಿ ವೀರಭದ್ರನೆಂದು ಹೆಸರಿಟ್ಟರು. ಜಗತ್ತೇ ಆತನಿಗೆ ಬಾಯ್ಬೆಣ್ಣೆ ಆಕಾಶವೇ ತೊಟ್ಟಿಲು, ಪ್ರತಾಪಗಳೇ ಕಟ್ಟಿದ ಹಗ್ಗಗಳು. ಇಂತಹ ಮಗುವನ್ನು ಪ್ರಳಯ ಕೋಲಾಹಲ ಗಣಾದಿಗಳು ಸೇರಿ ತೂಗಿದರು. ವೀರ ಸಿರಿಮಾರಿಗಳು ಜೋಗುಳವಾಡಿದರು. ಬಾಲ್ಯದಲ್ಲಿಯೇ ಯಜ್ಞನಾಶ ಮಾಡುವ ಲೀಲೆ ತೋರಿದನೆಂದು ಹರಿಹರ ಕವಿ ಹೇಳಿದರೆ ಲಕ್ಕಣ್ಣ ದಂಡೇಶ ರುದ್ರವತಾರ ತಾಳಿದ, ಶಿವದ್ರೋಹಿಗಳಿಗೆ ಭಯಹುಟ್ಟಿಸಿದ ಶಿವನೇ ಸೃಷ್ಟಿಸಿದ ರೂಪ ತಳೆದ ತನ್ನ ಉಗ್ರರೂಪ, ಕೋಪದಿಂದ ಶಾಂತನಾಗಿ ಚೈತನ್ಯ ಸ್ವರೂಪವೇ ಮಂಗಲವೆಂದರಿತ ಶಿವನ ಸುತನಿಗೆ ಮೊದಲು ಭದ್ರನೆಂದು ಹೆಸರಿಟ್ಟರು. ಆ ನಂತರ ತನ್ನ ಹುಟ್ಟು ಗುಣದಿಂದ ಭದ್ರನು ಕ್ಷುಲ್ಲಕದೈವಗಳನ್ನು ನಾಶ ಮಾಡಿ, ಲೋಕಕಲ್ಯಾಣ ಮಾಡಿ, ಯುದ್ಧದಲ್ಲಿ ಜಯಶಾಲಿಯಾದುದರಿಂದ ವೀರನಾದನು ಮುಂದೆ ವೀರಭದ್ರನೆಂಬ ಹೆಸರು ಧರಿಸಿದನು ಎಂದು ಕವಿ ವ್ಯಾಖ್ಯಾನಿಸುತ್ತಾನೆ.

ಈ ಇಬ್ಬರೂ ಕವಿಗಳ ಅಭಿಪ್ರಾಯ ಭಿನ್ನ ಭಿನ್ನವಾಗಿವೆ. ಆದರೆ ಲಕ್ಕಣ್ಣದಂಡೇಶ ಹೇಳುವ 'ಭದ್ರ' ಹೆಸರೇ ಮೂಲವಾಗಿರಬೇಕು. ದುಷ್ಟಶಕ್ತಿಗಳ ವಿರುದ್ಧ ಹೋರಾಡಿ ಯುದ್ಧದಲ್ಲಿ ಜಯಶೀಲನಾದ ಮೇಲೆ 'ಭದ್ರ'ನಿಗೆ 'ವೀರ'ನೆಂಬ ಬಿರುದು ನೀಡರಬೇಕು. ನಂತರ ಅವನ ಬಿರುದಿನೊಂದಿಗೆ ವೀರಭದ್ರನೆಂದು ಕರೆದಿರಬೇಕೆನಿಸುತ್ತದೆ. ಅಂದರೆ ವೀರಭದ್ರನ ಮೂಲ ಹೆಸರು 'ಭದ್ರ' ಎಂದು ಹೇಳಬಹುದಾಗಿದೆ.

ಆ. ವೀರಯೋಧ ವೀರಭದ್ರ : ದುಷ್ಟಶಿಕ್ಷಕ ಶಿಷ್ಟರಕ್ಷಕ ಎಂದು ಖ್ಯಾತನಾದ ವೀರಭದ್ರ ವೀರಯೋಧನೇ ಸರಿ. ಈತ ವೀರಯೋಧನೆಂದು ಅನೇಕ ಕಾವ್ಯಗಳು ವರ್ಣಿಸುತ್ತವೆ. ಪ್ರಾಣಿಬಲಿ, ಮೂಢ ಆಚರಣೆ, ಶೋಷಣೆ ಮೊದಲಾದ ದುಷ್ಟತೆಯ ವಿರುದ್ಧ ಹೋರಾಡಿದವನು ವೀರಭದ್ರ. ಇವನು ವೀರಯೋಧರಿಗೆ ಸ್ಪೂರ್ತಿದಾಯಕ. ಅದಕ್ಕಾಗಿ ನಮ್ಮ ರಾಜ ಮಹಾರಾಜರು ವೈರಿಗಳ ವಿರುದ್ಧದ ಯುದ್ಧದಲ್ಲಿ ಗೆಲ್ಲಲು ಸೈನಿಕರಿಗೆ ವೀರಭದ್ರನ ಕಾವ್ಯ ಸಾಹಸದ ಸ್ಫೂರ್ತಿ ತುಂಬಿ ಪ್ರೋತ್ಸಾಹಿಸಲು ವೀರಭದ್ರನ ದೇವಾಲಯ ನಿರ್ಮಿಸಿ ಆರಾಧಿಸಿರಬೇಕೆಂದೆನಿಸುತ್ತದೆ. ಶೌರ್ಯಕ್ಕೆ ಮತ್ತೊಂದು ಹೆಸರು ವೀರಭದ್ರನೆಂದರೆ ತಪ್ಪಾಗಲಾರದು. ಒಬ್ಬ ವ್ಯಕ್ತಿ ಯೋಧನಾಗಬೇಕಾದರೆ ವೈರಿಗಳು, ದುಷ್ಟರು, ಅಹಂಕಾರಿಗಳು ಇರಲೇಬೇಕು. ಅಂತಹ

ವ್ಯಕ್ತಿಗಳಿದ್ದಾಗ ಮಾತ್ರ ವ್ಯಕ್ತಿ ಯೋಧನಾಗಲು ಸಾಧ್ಯ. ಅದರ ವಿರುದ್ಧ ಹೋರಾಡಲು ಕೆಚ್ಚೆದೆ, ಶೌರ್ಯ ಕೋಪ ಹುಟ್ಟಲೇಬೇಕು. ಆ ಹಿನ್ನಲೆಯಲ್ಲಿ ವೀರಭದ್ರ ದಕ್ಷನೆಂಬ ದುರಾಹಾಂಕಾರಿ ದೈತ್ಯನ ಸಂಹಾರಕ್ಕಾಗಿ ವೀರಯೋಧನಾದನೆಂಬುದು ದಿಟವಾದದ್ದು.

ಈ ಮೇಲಿನ ಅಂಶಗಳು ಪುರಾಣ ಕಲ್ಪನೆಯಾದರೂ ಇದರಲ್ಲಿ ವೈಚಾರಿಕ ಅಂಶ ಅಡಗಿದೆ ಎನ್ನಬಹುದು. ವೀರಭದ್ರ ಹೋರಾಟ ಮಾಡಿದ್ದು ದುಷ್ಟಶಕ್ತಿಗಳ ವಿರುದ್ಧ. ಶೋಷಣೆ ಮೌಢ್ಯ ಕಂದಾಚಾರಗಳ ವಿರುದ್ಧ. ೧೨ನೇ ಶತಮಾನದ ವಚನಕಾರರು ಸಹ ಹೋರಾಟ ಮಾಡಿದ್ದು ವರ್ಣಾಶ್ರಮ ಪದ್ಧತಿ, ಸ್ತ್ರೀ ಶೋಷಣೆ, ಜಾತಿಪದ್ಧತಿ ಮುಂತಾದವುಗಳ ವಿರುದ್ಧ, ಈ ಶರಣರ ಸಿದ್ಧಾಂತ ರಕ್ಷಿಸಲು ಅವರ ಅನುಯಾಯಿಗಳು ವೀರಭದ್ರನನ್ನು ಆದರ್ಶ ಮಾಡಿಕೊಂಡಂತಿದೆ. ಹಾಗಾಗಿ ವೀರಭದ್ರ ವೀರಶೈವರಿಗೆ ಪೂಜ್ಯನೀಯನಾಗಿದ್ದಾನೆ.

ಶಿವನಿಂದ ಜನ್ಮ(ರೂಪ) ಪಡೆದ ವೀರಭದ್ರ ನೋಡುತ್ತಿದ್ದಂತೆ ಆಕಾಶದೆತ್ತರಕ್ಕೆ ಬೆಳೆದುನಿಂತು ಕೋಪಬಿಟ್ಟು ಶಾಂತನಾದನು. ಆಗ ಶಿವನು ವೀರಭದ್ರನನ್ನು ನೋಡಿ ದಕ್ಷನ ಯಜ್ಞಧ್ವಂಸ ಮಾಡಿ ಬರಲು ಆದೇಶ ನೀಡಿದ ಕೂಡಲೇ ಶಿವನ ಪಕ್ಕದಲ್ಲಿ ಭದ್ರಕಾಳಿ ಮೂರು ಉರಿಗಣ್ಣುಗಳಿಂದಲೂ, ನಂಜನ್ನು ಹೊರಸೂಸುವ ಮುಖಮುದ್ರೆಯಿಂದಲೂ, ದಶಾಯುಧಗಳಿಂದಲೂ ಮಿಂಚನ್ನು ತಿರಸ್ಕರಿಸುವ ಅಲಂಕಾರಗಳಿಂದಲೂ ಪ್ರಾಣಗೊಂಡು ಅವತರಿಸಿದಳು. ಆಗ ಶಿವನು ಅವರಿಬ್ಬರಿಗೂ ಮದುವೆ ಮಾಡಿ ಕಳುಹಿಸಿದನು. ಪ್ರಾಚೀನ ಕಾಲದಲ್ಲಿ ವೀರಯೋಧರು ಯುದ್ಧಕ್ಕೆ ಹೊರಡುವಾಗ ಆ ಯೋಧನ ಪತ್ನಿಯರು ವೀರತಿಲಕವಿಟ್ಟು ಬೀಳ್ಕೊಡುತ್ತಿದ್ದರು. ಇಲ್ಲಿ ಯುದ್ಧಕ್ಕೆ ಹೊರಟ ವೀರಭದ್ರನ ಜೊತೆ ಪತ್ನಿ ಭದ್ರಕಾಳಿಯೂ ಹೊರಡುತ್ತಾಳೆ. ಅವಳು ಶಕ್ತಿಯ ಪ್ರತಿರೂಪ. ಅಂದರೆ ಭದ್ರಕಾಳಿ ವೀರಭದ್ರನಿಗೆ ಯುದ್ಧದಲ್ಲಿ ಗೆಲುವಾಗಲು ಸ್ಫೂರ್ತಿ ತುಂಬಲು ಅವನ ಹಿಂದೆ ಹೋದಂತೆ ತೋರುತ್ತದೆ.

ಭದ್ರಕಾಳಿಯ ಜೊತೆ ಯುದ್ಧಕ್ಕೆ ಹೊರಟ ವೀರಭದ್ರ ನಾನಾ ತರಹದ ಸೇನೆಯೊಂದಿಗೆ ದಕ್ಷನ ಯಜ್ಞಶಾಲೆಗೆ ಬಂದ ವಿಚಾರವನ್ನು ಹರಿಹರಾದಿ ಕವಿಗಳು ತಮ್ಮದೇ ನೆಲೆಯಲ್ಲಿ ವರ್ಣಿಸಿದ್ದಾರೆ.

ಹರಿಹರ : "...ಭದ್ರಕಾಳಿ ಸಹಿತಂ ಬಂದ
ನಂದ ಕೋಟಾಕೋಟಿ ರೋಮಜರ್ ನಡೆತಂದ
ರುರರ ಬಾಯನರಲ್ಲಿ, ಶಿರದ ಕಾಲವರಲ್ಲಿ
..........ಗಗನದೊಳ್ನಡೆವುತಂ"[೨೮೩]

ರಾಘವಾಂಕ : "ಕುಲಗಿರಿಗಳ ಕೈಗುಂಡುಗಳ ಬ್ರಹ್ಮಾಂಡಂ
ಗಳ ಹೊಡೆಸೆಂಡುಗಳ ದಿಶಾಕರಿಗಳ

.........................

ಬಲದಿಂ ಗಣಕುಲನಡೆದುದು ವೀರೇಶನ ಕೆಲಬಲದಲಿ ಜಗದಗಲದೊಳು''[೨೮೪]

ಲಕ್ಕಣದಂಡೇಶ : ''ಕೆಂಡಗಳ ಮಳೆಯ ಕಱೆವುತ ತೋರಗಿರಿಯ ಸರಿ
ಗುಂಡುಗಳ ಸರಿಯ ಸುರಿವುತ ವಿವಿಧ ಶಸ್ತ್ರಗಳ
ಕೊಂಡು ನಾನಾ ದಿಕ್ಕುಗಳನ್ನು ಹೊಕ್ಕೊಕ್ಕಲಿಕ್ಕಿಸುತಲತಿ ರೌದ್ರರಸದ''[೨೮೫]

ಎಂದು ಹರಿಹರಾದಿ ಕವಿಗಳು ವೀರಭದ್ರನ ಸೈನ್ಯದಲ್ಲಿದ್ದ ವ್ಯಕ್ತಿಗಳ ವಿವರನೀಡುತ್ತಾರೆ. ಇವರ ಪ್ರಕಾರ ಭದ್ರಕಾಳಿ ಸಹಿತ ಕೋಟಾನುಕೋಟಿ ಕೂದಲಿನಲ್ಲಿ ಹುಟ್ಟಿದವರು ವೀರಭದ್ರನ ಜೊತೆ ದಕ್ಷನ ಯಾಗವನ್ನು ನಾಶಗೊಳಿಸಲು ಹೊರಟರು. ಈ ವೀರರು ಉರದ ಬಾಯವರು, ಶಿರದ ಕಾಲಿನವರು, ಚರಣದ ಮುಖದವರು ಕೈಯಲ್ಲಿ ಕಣ್ಣಿದ್ದವರು. ಬೆನ್ನಲ್ಲಿ ಬಾಯಿದ್ದವರು. ಕೆನ್ನೆಯಲ್ಲಿ ತುಟಿಯಿದ್ದವರು ಆಕಾಶದಲ್ಲಿ ನಡೆಯುವವರು. ಅನೇಕ ತರಹದ ಭೂತಗಣಗಳು ಇದ್ದವು. ಆ ವೀರಭದ್ರನ ಸೈನ್ಯವು ಕುಲಪರ್ವತಗಳನ್ನು ಕೈಗುಂಡುಗಳನ್ನಾಗಿ ಮಾಡಿಕೊಂಡು, ಬ್ರಹ್ಮಾಂಡಗಳನ್ನು ಚೆಂಡುಗಳನ್ನಾಗಿ ಮಾಡಿಕೊಂಡು, ದಿಕ್ಕುಗಳೆಂಬ ಆನೆಗಳ ದಂತ, ಯಮನ ಕೋಣನ ಕೋಡು ಇವುಗಳಿಂದಾದ ಬಡಿಗೆಗಳನ್ನು ಹಿಡಿದುಕೊಂಡು, ಸೂರ್ಯಚಂದ್ರರನ್ನು ತಾಳಗಳನ್ನಾಗಿ ಮಾಡಿಕೊಂಡು ವೀರೇಶನ ಅಕ್ಕಪಕ್ಕದಲ್ಲಿ ಬರುತ್ತಿತ್ತು.[೨೮೬] ಭೂತಗಣವು ಕೆಂಡಮಳೆಗರೆಯುತ್ತ, ತೋರಗಿರಿಯ ಸರಿಗುಂಡುಗಳನ್ನು ಸರಿಸುತ್ತಾ ವಿವಿಧ ಶಸ್ತ್ರಗಳನ್ನು ಹಿಡಿದು ರೌದ್ರಭಾವದಿಂದ ನಾನಾ ದಿಕ್ಕುಗಳನ್ನು ಹಾರುತ್ತಾ ದಕ್ಷನ ಯಜ್ಞಮಂಟಪಕ್ಕೆ ಬಂದಿತು. ಇದಕ್ಕೆ ಪ್ರತಿಯಾಗಿ ದಕ್ಷನು ಸೂರ್ಯ, ಚಂದ್ರ, ಇಂದ್ರ, ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳನ್ನು ತನ್ನ ಸೇನೆಯ ನಾಯಕತ್ವ ವಹಿಸುವಂತೆ ಮಾಡಿದನು. ನಂತರ ದಕ್ಷಬ್ರಹ್ಮ ತಾನೂ ಯುದ್ಧಕ್ಕೆ ಸಿದ್ಧಾನಾದನು. ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ದಕ್ಷ ಮತ್ತು ವೀರಭದ್ರನ ಸೈನ್ಯದ ನಡುವೆ ನಡೆದ ಯುದ್ಧ ಪ್ರಸಂಗವನ್ನು ವಿಭಿನ್ನವಾಗಿ ಚಿತ್ರಿಸಿದ್ದಾರೆ.

ಹರಿಹರ : ''ಚತುರಂಗ ಬಲವಂ ಪೇಳ್ದನಾ ದಕ್ಷ
ನಂದು ಘುಳುಘುಳುಸಿ ಬರುತಿರ್ದ ಸರೋಜಾಕ್ಷ
..............
ಬೆರಸಿ ಮೀರಿತ್ತು ಶಿವದ್ರೋಹಿ ದಕ್ಷನ ಬಲಂ
ಹರಿಯಜ ಸುರಾಧಿಸರ್ ನೂಕಿತಾಗಳೆ ಬಲಂ
................
ಬಳಸಿ ದೂವಾಳಿಸುವ ತುರಗಬಲಮಂ ಸೀಳ್ದು
ನೆರೆದ ರಥನಿಕರಮಂ ನುಚ್ಚುನೂರಂ ಮಾಡಿ
.................

ಎಲೆ ದಕ್ಷ ನೀನೇಕೆ ಜನ್ನವೇಕೆಲೆ ಪಾಪಿ
ನಿಲಲರಿದು ಕೇಳೆಲವೊ ಮುಂದುಗಾಣದ ಕೋಪಿ....."[೨೮೭]

ರಾಘವಾಂಕ : "ಕಡಿತಲೆ ಕರಗಸ ಕತ್ತಿಗೆ ಕೊಂತಂ ಕಕ್ಕಣೆ
ಕುಡುಶಲ್ಲೆಹ ಬಲ್ಲೆಹ ಬಿಲ್ಲಲಗು ವಿಗಂಡಸಿ
ದಡಿ ಬಡಿ ಬಿಟ್ಟೇಱಿಟ್ಟಿ ನಖಂ ಚಕ್ರ ಪರಶು ಪಿಂಡಿವಳಂ ಪೆರ್ಬಾಳು
................
ಹರಿ ಚಕ್ರವ ತಿರುಹಿಸಿ ತಿರುಹುವ ಮದದಿಂ ಕಾಣದೆ ಬೊಮ್ಮನ ತಲೆಗಿಟ್ಟು
ಶಿರವಿಲ್ಲೆನುತಲು ಸುರಪತಿ ಮೊದಲಾದಮರರು"[೨೮೮]

ಲಕ್ಕಣ್ಣದಂಡೇಶ : "ಸುರಪನಂ ತುಳಿದು ಹುತವಹನೇಳು ನಾಲಗೆಯ
ಬರೆಕಿಳ್ತು ಯಮನ ತೋಳಂ ತಱಿದು ಚಂದ್ರಮನ
ನೊರಸಿ ಸೂರ್ಯನ ಹಲ್ಲ ಕಳೆದು ಮಾರ್ಮಲೆತವರಿನರಿದು ಮೇಲೊತ್ತಿಬಪ್ಪ"[೨೮೯]

ಕರಸ್ಥಲದ ನಾಗಿದೇವ : "ಸುರ ಮನು ಮುನಿಗಳು ಸ್ರವದಂತಾಗಲು ಮಿಗೆ
ಹರಿ ವಿರಂಚಿಗಳಿಗೆ ಹಮ್ಮು ಪಲ್ಲಟವಾಗೆ"[೨೯೦]

ಎಂಬಿತ್ಯಾದಿಯಾಗಿ ಹಂಪಿ ಪರಿಸರದ ಕನ್ನಡ ಕವಿಗಳು ದಕ್ಷನ ಸೈನ್ಯ ಮತ್ತು ವೀರಭದ್ರನ ಸೈನ್ಯಕ್ಕೆ ನಡೆದ ಯುದ್ಧದ ಪ್ರಸಂಗ ಕುರಿತು ವೀರಭದ್ರನ ಸೈನ್ಯ ಯಜ್ಞಶಾಲೆಯ ಕಡೆ ಬರುವುದನ್ನು ಕೇಳಿ ದಕ್ಷನ ಆದೇಶದಂತೆ ಇಂದ್ರ ಅಗ್ನಿ ದಿಕ್ಪಾಲಕರು ಸೈನ್ಯದ ನಾಯಕತ್ವವಹಿಸಿ ಚತುರಂಗ ಬಲಸಹಿತ ಬಂದರು. ವೀರಭದ್ರನ ಸೈನ್ಯದಲ್ಲಿ ವಾಯುವೇಗಕ್ಕಿಂತಲೂ ಎರಡು ಮೂರು ನಾಲ್ಕು ಐದು ಪಟ್ಟು ಹೆಚ್ಚು ವೇಗವುಳ್ಳ ಕುದುರೆಗಳ ಸೈನ್ಯವಿತ್ತು. ಆ ಯುದ್ಧಭೂಮಿಯಲ್ಲಿ ತಲೆ ಕತ್ತರಿಸುವ ಗರಗಸ, ಖಡ್ಗ, ಗಂಡಸಿ, ನಖ, ಚಕ್ರ, ಕೊಡಲಿ, ಫಳಕ, ಕುಠಾರ, ಬಡಿಗೆ ಮೊದಲಾದ ಆಯುಧಗಳಿದ್ದವು. ಶಿವದ್ರೋಹಿ ದಕ್ಷನ ಬಲವನ್ನು ಮೀರಿ ವೀರಭದ್ರನ ದಂಡು ಎದುರಾದವರನ್ನು ಧೂಳೀಪಟ ಮಾಡತೊಡಗಿತು. ತುರಗ ಬಲವನ್ನು ಸೀಳಿ ರಥಗಳನ್ನು, ಪದಾತಿಗಳನ್ನು ನುಚ್ಚುನೂರು ಮಾಡಿ ದಕ್ಷನ ಸೈನ್ಯವನ್ನು ಸಂಹರಿಸಿತು.

ಹೀಗೆ ಯುದ್ಧ ನಡೆಯುತ್ತಿರುವಾಗ ದೇವತೆಗಳು ತಮ್ಮ ತಮ್ಮಲ್ಲಿ ಹೊಡೆದಾಡಲು ಆರಂಭಿಸಿದರು. ವೀರಭದ್ರನ ಅವತಾರ ಕಂಡ ವಿಷ್ಣು ಗಾಬರಿಯಾಗಿ ತನ್ನ ಚಕ್ರವನ್ನು ಬ್ರಹ್ಮನ ತಲೆಗಿಟ್ಟನು. ಇಂದ್ರನು ವರುಣನನ್ನು ಹೊಡೆದನು. ವರುಣನು ಕುಬೇರನ ಮೇಲೆ ಬಿದ್ದನು ಇದನ್ನು ಕಂಡು ವೀರಭದ್ರ ಇಂದ್ರನನ್ನು ತುಳಿದು ಅಗ್ನಿಯ ನಾಲಿಗೆ ಕಿತ್ತನು. ಯಮನ ತೋಳನ್ನು ಕತ್ತರಿಸಿ, ಚಂದ್ರನನ್ನು ತಿಕ್ಕಿ, ಸೂರ್ಯನ ಹಲ್ಲು ಮುರಿದು, ವಿಷ್ಣುವಿನ ಜೊತೆ ಯುದ್ಧಮಾಡಿ ಅವನ ಚಕ್ರವನ್ನು ಧ್ವಂಸಗೊಳಿಸಿದ. ಇಂದ್ರ ಅಗ್ನಿ ಓಡಿದರು ಹರಿ ಅಲ್ಲಿಯೇ ಬಿದ್ದ. ಕೊನೆಗೆ ದಕ್ಷ ಮಾತ್ರ ಉಳಿದದನ್ನು ಕಂಡು "ಎಲೆ ದಕ್ಷ, ನೀನೇಕೆ? ನಿನ್ನ ಯಜ್ಞಯಾಗ ಕರ್ಮವೇಕೆ? ಎಲೆ ಪಾಪಿ ಮುಂದುಗಾಣದ ಕೋಪಿ" ಎಂದು

ದಕ್ಷನಲ್ಲಿಗೆ ಬಂದು ಅವನ ಶಿರ ಕತ್ತರಿಸಿ ಕುರಿತಲೆಯನಿಟ್ಟುದನ್ನು ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ಹೀಗೆ ಚಿತ್ರಿಸಿದ್ದಾರೆ.

ಹರಿಹರ : ''ಕೆಡೆಕೆಡೆ ಶಿವದ್ರೋಹಿಯೆನುತೆ ಶಿರವಂ
ಹೊಡೆದು ಉಡುಗುಡುಗು ಗರ್ವವನೆನುತೆ ತಲೆಯ ಕಡಿದು
ಒದೆದು ತಂದಾ ತಲೆಯನುರಿವ ಕುಂಡದೊಳಿಕ್ಕಿ
......................
ನಡನಡುಗಿ ಕಟ್ಟಿರ್ದ ಕುರಿಯ ತಲೆಯ ತಂದು''[೫೧]

ರಾಘವಾಂಕ : ''ಕಡುಗಲಿ ವೀರೇಶಂ ಘುಡುಘುಡಿಸುತ್ತೊಳ ಪೊಕ್ಕಾ
ನೆಡೆ ನಿಂದಕನೆನುತ್ತೆತರೆ ಕಂಡಿದಿರೇಳಲ್ ಕೇಕೆ
ಕೆಡೆ ಪಾಪಿ ಶಿವದ್ರೋಹಿಯೆನುತ್ತೆರಗಲ್ತಲೆ ದುಟುದುಟು ದುಟಮರುಳೆ
..................................................
ಕೆಡೆದಿರ್ದಜಪಶುವಿನ ತಲೆಯಂ ಮುಂಡದ ಮೇ
ಲಿಡಿಸಿದ ರುಂಡದ ಜೀವಂಗೊಟ್ಟಾನಿಂದಕ''[೫೨]

ಲಕ್ಕಣ್ಣದಂಡೇಶ : ''...............
ಪರಮಪಾತಕ ಶಿವದ್ರೋಹಿ ದಕ್ಷನನರಸಿ
ಶಿರವನರಿದದನೊಡೆದು ಪೊದೆ ಚೆಂಡನಾಡಿದರು
....................
ಮೆಚಿಸುವೆನೆನುತ್ತಲಜ ಪಶುವಿನ ತಲೆಯನಿಕ್ಕಿ
ಕುಚಿದಲೆಯ ದಕ್ಷನೆಂದೆಯ್ದೆ ಕರೆವುತ....''[೫೩]

ಕರಸ್ಥಲದ ನಾಗಿದೇವ ''...ಆ ನುಡಿಯೊಳು ಧುರಧೀರನೆಯ್ತಂದನು
ದಕ್ಷನ ಶಿರವರಿದು ಹೋಮದೊಳಿಟ್ಟನು
......................
ದಕ್ಷಂಗಜನ ಶಿರವಿತ್ತು ನಡೆಸಿದನು...''[೫೪]

ಎಂಬಿತ್ಯಾದಿಯಾಗಿ ಹೇಳಿದ್ದಾರೆ.

ಈ ಕವಿಗಳ ಪ್ರಕಾರ ಯಜ್ಞದೀಕ್ಷಿತನಾದ ದಕ್ಷನಲ್ಲಿಗೆ ವೀರಭದ್ರ ಘುಡುಘುಡಿಸುತ್ತ ಸಿಡಿಲೆರಗಿದಂತೆರಗಿ 'ಕೆಡೆಕೆಡೆ ಶಿವದ್ರೋಹಿ ಪರಮಪಾಪಿ' ಎನ್ನುತ್ತಾ ದಕ್ಷನ ಶಿರ ಕತ್ತರಿಸಿ ಉಡುಗುಡುಗು ಗರ್ವವೇ ಎಂದು ತಲೆ ಹಿಡಿದು ಒದೆಯುತ್ತ ತಂದು ಉರಿಯ ಕುಂಡಕ್ಕೆ ಹಾಕಿ ''ಅಗ್ನಿಯೆ, ನಿನಗೆ ಆಹುತಿಯಾಗಿ ಅವನನ್ನೇ ತಿನ್ನು ಹಿಡಿ ಹಿಡಿ'' ಎಂದನು. ನಂತರ ದಕ್ಷನ ಸತಿ ಪ್ರಸೂತಿಯ ಭಿನ್ನಹದ

ಮೇರೆಗೆ ತಲೆ ಇಲ್ಲದ ದಕ್ಷನ ಶರೀರಕ್ಕೆ ಅಲ್ಲಿಯೇ ಇದ್ದ ಅಜಪಶುವಿನ(ಕುರಿ) ತಲೆ ಕತ್ತರಿಸಿ ಆ ಮುಂಡಕ್ಕೆ ಇಟ್ಟು ಜೀವ ತುಂಬಿ ಆ ಕುರಿದಲೆಯ ದಕ್ಷನನ್ನು ಹೆಡಮುರಿಗೆ ಕಟ್ಟಿ, ಹೊತ್ತು ಹರನೆಡೆಗೆ ನಡೆದನು.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ದಕ್ಷನ ಶಿರಹರಿದ ಮೇಲೆ ಅಲ್ಲಿ ಅನೇಕ ದೇವತೆಗಳನ್ನು ಸೆರೆ ಹಿಡಿಯಲಾಗಿತ್ತು ಆದರೂ ದಕ್ಷನಿಗೆ ಮನುಷ್ಯನ ತಲೆ ಕತ್ತರಿಸಿ ಇಡದೆ ಯಜ್ಞ ಪಶು ಕುರಿ ತಲೆ ಕತ್ತರಿಸಿ ಇಡಲಾಯಿತು. ಇದು ತುಂಬಾ ಕುತೂಹಲಕಾರಿ ಯಕ್ಷಪ್ರಶ್ನೆಯಾಗಿದೆ. ಇದಕ್ಕೆ ಉತ್ತರ ಊಹಿಸುವುದಾದರೆ ದಕ್ಷ ಮತ್ತು ವೀರಭದ್ರನ ನಡುವಿನ ಸಂಘರ್ಷವನ್ನು ಶೈವ ಮತ್ತು ವೈದಿಕ (ವೈದಿಕ>ಅವೈದಿಕ) ಸಂಸ್ಕೃತಿಗಳ ನಡುವಿನ ಸಂಘರ್ಷವೆಂದು ಭಾವಿಸಬೇಕಾಗುತ್ತದೆ. ಅಹಂಕಾರದಿಂದ ಮೆರೆಯುವವರನ್ನೂ, ದುರಂಹಕಾರಿಗಳನ್ನು ಯುದ್ಧದಲ್ಲಿ ಸೋಲಿಸಿ ಕುರಿಯಂತೆ ಮುಗ್ಧರನ್ನಾಗಿ ಮಾಡಬೇಕೆಂಬ ಒಳಚಿಂತನೆ ಇದ್ದಂತೆ ತೋರುತ್ತದೆ.

**ಇ. ವೀರಭದ್ರನ ಬೆಳವಣಿಗೆ ಮತ್ತು ನೆಲೆ :** ನಮ್ಮ ಸಂಸ್ಕೃತಿಯ ವೀರಪ್ರತೀಕ ವೀರಭದ್ರ ಶೌರ್ಯಕ್ಕೆ ಸಂಕೇತವಾಗಿ 'ವೀರ' ಶಬ್ದವಿದ್ದರೆ, ಮಂಗಳಕ್ಕೆ ಸಂಕೇತವಾಗಿ 'ಭದ್ರ' ಶಬ್ದವಿದೆ. ಸಾಂಪ್ರದಾಯಿಕವಾಗಿಯೋ, ಪೌರಾಣಿಕವಾಗಿಯೋ ಆಗಮ, ಪುರಾಣಕಾವ್ಯ, ಜಾನಪದ, ಇತಿಹಾಸ, ಶಿಲ್ಪ, ಚಿತ್ರಕಲೆ ವಡಬುಗಳಲ್ಲಿ ವೀರಭದ್ರನನ್ನು ವರ್ಣಿಸಲಾಗಿದೆ. ಇಷ್ಟು ಆಕರಗಳಲ್ಲಿ ವೀರಭದ್ರನ ಪ್ರಸ್ತಾಪ ವರ್ಣನೆ ಬರಬೇಕಾದರೆ ಅವನು ತನ್ನ ವೀರತ್ವದಿಂದ ಜನಮಾನಸದಲ್ಲಿ ಆಳವಾಗಿ ಬೇರೂರಿರಬೇಕು. ಇದಕ್ಕೆ ವೀರಭದ್ರನಲ್ಲಿದ್ದ ವೀರ ವ್ಯಕ್ತಿತ್ವ. ಇಂಥ ವೀರಭದ್ರ ಪ್ರಧಾನ ದೇವತೆಯಾಗಿ ಜನಪ್ರಿಯನಾದದ್ದು ಯಾವಾಗ? ಕರ್ನಾಟಕದಲ್ಲಿ ವೀರಭದ್ರನ ಆರಾಧನೆ ಯಾವಾಗ ವ್ಯಾಪಕಗೊಂಡಿತು? ಹಂಪಿ ಪರಿಸರದಲ್ಲಿ ವೀರಭದ್ರನ ಆರಾಧನೆ ಬೆಳೆದುಬಂದ ಬಗೆ, ವೀರಭದ್ರ ಮತ್ತು ವೀರಶೈವ ಧರ್ಮಕ್ಕೆ ಇರುವ ಸಂಬಂಧ ಕುರಿತು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಿ ವಿಶ್ಲೇಷಿಸಲಾಗಿದೆ.

ಮೂಲತಃ ಸೌಮ್ಯ ಮೂರ್ತಿಯಾದ ವೀರಭದ್ರ ನಂತರದ ಕಾಲಸ್ಥಿತ್ಯಂತರದಲ್ಲಿ ಶೌರ್ಯ ವೀರತ್ವದ ಪ್ರತೀಕವಾಗಿ ಕಂಡುಬಂದಿರುವುದಕ್ಕೆ ಅನೇಕ ಆಧಾರಗಳಿವೆ. ಮೊದಲು ವೀರಭದ್ರ ಸಪ್ತಮಾತೃಕೆಯರಲ್ಲಿ ರಕ್ಷಕ ದೇವತೆಯಾಗಿ ಕಂಡುಬರುತ್ತಾನೆ. ಡಾ.ಕಲವೀರ ಮನ್ವಾಚಾರ ರವರು ಹೇಳುವಂತೆ "ಸಪ್ತಮಾತೃಕೆಯರ ಅಕ್ಕಪಕ್ಕದಲ್ಲಿ ಇಬ್ಬರು ಪುರುಷ ದೇವತೆಗಳಿರುವುದು, ಪಟ್ಟಿಯಲ್ಲಿ ಮಾತೃಕೆಯರು ಬಂದರೆ ಅವರ ರಕ್ಷಣಾ ದೇವತೆಗಳಾಗಿ ಇಬ್ಬರು ಪುರುಷರು ಕುಳಿತಿರುತ್ತಾರೆ. ಅವರಲ್ಲಿ ಒಬ್ಬ ಗಣೇಶನಾದರೆ ಇನ್ನೊಬ್ಬ ವೀರೇಶ್ವರ ಅಥವಾ ವೀರಭದ್ರನೆಂದು ಗುರುತಿಸಲಾಗಿದೆ. ವೀರಭದ್ರ ಅಥವಾ ವೀರೇಶ್ವರನಿಗೆ ನಾಲ್ಕು ಕೈಗಳಿದ್ದು, ಅವುಗಳಲ್ಲಿ ಶೂಲ ಹಾಗೂ ಅಭಯ ಹಸ್ತಗಳು ಬಲಭಾಗದಲ್ಲಿ ಇದ್ದರೆ, ಎಡಭಾಗದಲ್ಲಿ ಶೂಲ ಹಾಗೂ ವರದಾಹಸ್ತಗಳನ್ನು ನೋಡಬಹುದು. ಜಟಾಮಕುಟವನ್ನು ಹೊಂದಿರುತ್ತಾನೆ. ದಕ್ಷಿಣ ಭಾರತದಲ್ಲಿ ಗ್ರಾಮ ದೇವತೆಗಳ ಆರಾಧನೆಯಲ್ಲಿ

ದೇವತೆಗಳ ರಕ್ಷಕನಾಗಿ ಪೋತರಾಜ ಕಂಡುಬರುತ್ತಾನೆ. ಈ ಪೋತ ರಾಜುವೇ ವೀರಭದ್ರನಾಗಿರಬೇಕು ಎಂದು ಊಹಿಸಬಹುದಾಗಿದೆ. ಯಾಕೆಂದರೆ ಪೋತರಾಜುವಿಗೂ ಹಾಗೂ ವೀರಭದ್ರನಿಗೂ ಸಂಬಂಧ ಇರುವ ಹಾಗೆ ಕಂಡುಬರುತ್ತದೆ''[೨೯೫] ಎಂದು ಹೇಳಿದ್ದಾರೆ. ಈ ಕುರಿತು ಹೆಚ್ಚಿನ ಶೋಧನೆಯ ಅಗತ್ಯವಿದೆ.

ಕ್ರಿ.ಶ.೪ನೇ ಶತಮಾನದಿಂದಲೇ ವೀರಭದ್ರನ ಉಲ್ಲೇಖ ಶಾಸನಗಳಲ್ಲಿ ಪರೋಕ್ಷವಾಗಿ ಮತ್ತು ಪ್ರತ್ಯಕ್ಷವಾಗಿ ಕಂಡುಬಂದರೂ ವೀರಭದ್ರನ ಆರಾಧನೆ ಬಗ್ಗೆ ನಿಖರ ಆಧಾರಗಳಿಲ್ಲ. ವೀರಭದ್ರನ ಚರಿತ್ರೆ ಏನಿದ್ದಾರೂ ೧೨ನೇ ಶತಮಾನದ ನಂತರ ಪ್ರಾರಂಭವಾಗುತ್ತದೆ. ಕ್ರಿ.ಶ.೧೧೬೦ರ ಮುದ್ದನಗೆರೆ ಶಾಸನ ಕ್ರಿ.ಶ.೧೧೮೫ರ ದಾಯಿಶೆಟ್ಟಿಪುರ ಶಾಸನಗಳಲ್ಲಿ ಕೈಲಾಸದ ದೇವರುಗಳ ಪೈಕಿ ''ವೀರಭದ್ರ ದೇವರು'' ಪ್ರಸ್ತಾಪಗೊಂಡಿದ್ದಾನೆ.''[೨೯೬] ಕ್ರಿ.ಶ.೧೨೧೬ ಬಳ್ಳಾರಿ ಜಿಲ್ಲೆ ಕುರುಗೋಡು ಶಾಸನದಲ್ಲಿ, ಕ್ರಿ.ಶ.೧೨೨೫ರ ಚೌಡದಾನಪುರ ಶಾಸನದಲ್ಲಿ ವೀರಭದ್ರನ ಪ್ರತಿಷ್ಠಾಪನೆ ದೇಗುಲ ಜೀರ್ಣೋದ್ಧಾರಗಳ ಪ್ರಸ್ತಾಪವಿದೆ.[೨೯೭] ವೀರಭದ್ರನ ವರ್ಣನೆಗಳು ಕಂಡುಬರುತ್ತವೆ. ಕಲ್ಯಾಣ ಚಾಲುಕ್ಯರ ಕಾಲ ವೀರಯುಗ, ಆ ಅವಧಿಯಲ್ಲಿ ವೀರಗಲ್ಲುಗಳು ಹೆಚ್ಚು. ವೀರತನದ ಕೆಚ್ಚು ವೀರಭದ್ರ ಪ್ರಭಾವವೇ ಎನ್ನಬೇಕು. ಇನ್ನೂ ಹೊಯ್ಸಳರ ಆಳ್ವಿಕೆಯ ಅಂತ್ಯಭಾಗದಲ್ಲಿ ವೀರಭದ್ರನ ಉಪಾಸನೆಗೆ ಹೆಚ್ಚು ಒತ್ತು ಬಿದ್ದಿರುವುದು ಕಾಣಬರುತ್ತದೆ.[೨೯೮] ಇದಕ್ಕೆ ಕಾರಣ ವೈರಿಗಳ ವಿರುದ್ಧ ಜನರನ್ನು ಹುರಿದುಂಬಿಸುವುದು ಅವರಿಗೆ ತೀರಾ ಅನಿವಾರ್ಯವಾಗಿತ್ತು. ಹೊಯ್ಸಳ ರಾಜ್ಯವನ್ನು ದೆಹಲಿಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿಯಿಂದ ರಕ್ಷಿಸುವುದಾಗಿತ್ತು. ವಿಜಯನಗರ ಕಾಲದಲ್ಲಿ ವೀರಭದ್ರನ ಆರಾಧನೆ ಇನ್ನೂ ತೀವ್ರವಾಗಿತ್ತು. ಇದಕ್ಕೆ ಪ್ರಧಾನ ಕಾರಣಗಳೆಂದರೆ ಪರಧರ್ಮೀಯರಿಂದ ಧರ್ಮ ರಕ್ಷಿಸುವುದಾಗಿತ್ತು. ಹಾಗೆಯೇ ವಿಜಯನಗರ ಸಾಮ್ರಾಟರಿಗೂ, ಬಹಮನಿ ಸುಲ್ತಾನರಿಗೂ ಆಗಾಗ ಯುದ್ಧ ಜರುಗುತ್ತಲೇ ಇದ್ದವು. ಈ ಯುದ್ಧಗಳಲ್ಲಿ ಸಾಮ್ರಾಜ್ಯಕ್ಕೆ ಜಯ ತಂದು ಕೊಡಲು ಸೈನಿಕರಿಗೆ ಶೌರ್ಯ ಸ್ಫೂರ್ತಿ ತುಂಬಲು ವೀರಭದ್ರನ ಆರಾಧನೆ ವ್ಯಾಪಕಗೊಂಡಂತೆ ತೋರುತ್ತದೆ. ಅಂದರೆ ವಿಜಯನಗರದಲ್ಲಿ ಶೌರ್ಯ-ಸಾಹಸ-ರಕ್ಷಕಾ ದೇವತೆಯಾಗಿ ವೀರಭದ್ರನ ಆರಾಧನೆ ನಡೆಯುತ್ತಿತ್ತೆಂದು ಗ್ರಹಿಸಬಹುದಾಗಿದೆ. ಅಂತೆಯೇ ಹಂಪಿಯ ತುಂಬ ವೀರಭದ್ರ ಮತ್ತು ಆಂಜನೇಯನ ಶಿಲ್ಪಗಳು ಹೆಚ್ಚಾಗಿ ಕಂಡುಬರುವುದನ್ನು ಗಮನಿಸಬಹುದು. ಇಲ್ಲಿ ವೀರಶೈವ ಧರ್ಮದೇವತೆಯಾಗಿದ್ದರ ಜೊತೆಗೆ ರಕ್ಷಕ ದೇವತೆಯಾಗಿಯೂ ಕಂಡುಬರುತ್ತಾನೆ ವೀರಭದ್ರ. ಈ ಹಿನ್ನಲೆಯಲ್ಲಿ ಹಂಪಿ ವೀರಭದ್ರ ಕ್ಷೇತ್ರವಾಗಿತ್ತೆಂದು ಹೇಳಬಹುದಾಗಿದೆ.

೧೨ನೇ ಶತಮಾನಕ್ಕಿಂತ ಮೊದಲು ವೀಣಾಧರ ವೀರಭದ್ರ ಸಪ್ತ ಮಾತೃಕೆಯರಲ್ಲಿ ರಕ್ಷಕ ದೇವತೆಯಾಗಿದ್ದ. ೧೨ನೇ ಶತಮಾನದಲ್ಲಿದ್ದ ಅನೇಕ ಶರಣರ ವಚನಗಳಲ್ಲಿ ಆಗಲೇ ಪ್ರಧಾನ ದೇವತೆಯಾಗಿ ಕಂಡುಬರುತ್ತಾನೆ[....ಕೂಡಲ ಸಂಗಮ ದೇವನು ದಕ್ಷನ ಯಜ್ಞವ ಕೆಡಿಸಿದುದ ಮರೆದಿರಲ್ಲ.... ಯುದ್ಧಕ್ಕೆ ಸರಿಯಾಗಿ ಹುಟ್ಟಿದಾತ ವೀರಭದ್ರ(ಅಂ.ಚೌಡಯ್ಯ) ಎಂಬಿತ್ಯಾದಿ ವಚನಗಳು] ವೀರಭದ್ರ

ಅವೈದಿಕ ದೇವತೆ ಎಂಬುದರಲ್ಲಿ ಅನುಮಾನವಿಲ್ಲ. ವೀರಭದ್ರನೂ ವೈದಿಕರ ಯಜ್ಞ ವಿರೋಧಿ ವಚನ ಕಾರರೂ ವೇದ ವೈದಿಕಾಚರಣೆಗಳ ವಿರೋಧಿಗಳಾಗಿದ್ದರು(ವೇದಕ್ಕೆ ಒರೆಯ ಕಟ್ಟುವೆ...ಇತ್ಯಾದಿ) ಆದ್ದರಿಂದ ವಚನಕಾರರು ವೀರಭದ್ರನನ್ನು ಪ್ರಧಾನೀಕರಿಸಿ ಆತನ ಶೌರ್ಯವನ್ನು ಆದರ್ಶವಾಗಿಟ್ಟುಕೊಂಡು ವೈದಿಕರ ಮೂಢಾಚರಣೆಗಳನ್ನು ಜಾತಿ ಪದ್ಧತಿಗಳನ್ನು ವಿರೋಧಿಸಿದಂತೆ ಕಂಡುಬರುತ್ತದೆ. ಇವರ ನಂತರ ಬಂದ ಹರಿಹರ ದಕ್ಷಾಧ್ವರ ರಗಳೆ ಬರೆದು ಹಂಪಿ ಪರಿಸರದಲ್ಲಿ ವೀರಭದ್ರನ ಆರಾಧನೆಗೆ ಪ್ರೇರೇಪಿಸಿದಂತೆ ತೋರುತ್ತದೆ. ಇದೇ ಮಾರ್ಗ ಅನುಸರಿಸಿದ ರಾಘವಾಂಕನು ಓರಂಗಲ್ಲಿನ ವೀರಭದ್ರನಲ್ಲಿ (ಈ ಕೃತಿಪತಿಯೋರುಂಗಲ್ಲಿನ ವೀರೇಶ್ವರ...) ಕಥಾನಾಯಕನನ್ನಾಗಿ ಮಾಡಿ ವೀರೇಶ ಚರಿತೆ ರಚಿಸಿದ್ದಾನೆ. ಅಂದರೆ ಈ ಇಬ್ಬರು ಕವಿಗಳ ಕಾಲಕ್ಕೆ ಹಂಪಿಯಲ್ಲಿ ವೀರಭದ್ರನ ಆರಾಧನೆ ಪ್ರಾರಂಭವಾಗಿರಲಿಲ್ಲವೆಂದು ತೋರುತ್ತದೆ. ಪ್ರಾರಂಭವಾಗಿದ್ದರೂ ಆ ಕುರಿತು ಸ್ಪಷ್ಟ ಆಧಾರಗಳಿಲ್ಲ. ಹರಿಹರ, ರಾಘವಾಂಕರ ನಂತರ ಇವರ ಕಾವ್ಯ ಆಧರಿಸಿ ಹಂಪಿಯಲ್ಲಿ ವೀರಭದ್ರನ ಆರಾಧನೆ ಪ್ರಾರಂಭವಾಗಿರಬೇಕೆನಿಸುತ್ತದೆ. ''ಮಾತಂಗಪರ್ವತದ ವೀರಭದ್ರ ವಿಜಯನಗರ ಪೂರ್ವದ್ದೆಂಬ''[೯೯] ಅಭಿಪ್ರಾಯವನ್ನು ಟಿ.ಎಂ. ಮಂಜುನಾಥಯ್ಯ ವ್ಯಕ್ತಪಡಿಸಿದ್ದಾರೆ. ಈ ಹೇಳಿಕೆ ಆಧರಿಸಿ ವಿಜಯನಗರ ಪೂರ್ವ ವೀರಭದ್ರನ ಆರಾಧನೆ ಮೂರ್ತಿಶಿಲ್ಪ ಪ್ರತಿಷ್ಠಾಪನೆಯೊಂದಿಗೆ ಆರಂಭವಾಗಿ(ನಿಧಾನವಾಗಿ)ತೆಂದು ಹೇಳಬಹುದಾಗಿದೆ. (ಮಾತಂಗ ವೀರಭದ್ರ ಸಂಗಮರ ಕಾಲದ್ದೆಂದು ಕೆ.ಅಭಿಶಂಕರ ಅಭಿಪ್ರಾಯ ಪಟ್ಟಿದ್ದಾರೆ. ಇತಿಹಾಸ ದರ್ಶನ ಸಂ.೬, ಪು.೯೬)

ವಿಜಯನಗರದ ಆರಂಭಿಕ ಅರಸು ಮನೆತನವಾದ ಸಂಗಮರು ಶೈವ/ವೀರಶೈವರಾಗಿದ್ದ ಕಾರಣ ಸಹಜವಾಗಿ ವೀರಭದ್ರನ ಆರಾಧನೆಗೆ ಪೋತ್ಸಾಹಿಸಿ ದಾನ-ದತ್ತಿ ನೀಡಿದಂತೆ ಶಾಸನಗಳಿಂದ ತಿಳಿದುಬರುತ್ತದೆ. ಬಾಳೆಹೊನ್ನೂರಿನ ರಂಭಾಪುರಿಪೀಠದ ವೀರಭದ್ರಗುಡಿ ಹಿಂಬದಿ ಹೊರ ಅಂಗಳದಲ್ಲಿರುವ ಕ್ರಿ.ಶ.೧೩೭೭ರ ಬುಕ್ಕರಾಯನ ಅಪ್ರಕಟಿತ ಶಾಸನದಲ್ಲಿ ಸ್ವಹಸ್ತ ಹಾಕಿ ವೀರ ಬುಕ್ಕರಾಯನು ತನ್ನ ಕುಲದೇವರೂ ಆದ ಈ ವೀರಭದ್ರನಿಗೆ ದೇವದಾನ ನೀಡಿರುವ ಸಂಗತಿ ಇದೆ.''[೧೦೦] ಸಂಗಮವಂಶದ ಅನೇಕ ಸಾಮ್ರಾಟರು ವಿಜಯನಗರದ ವಿವಿಧ ಭಾಗಗಳಲ್ಲಿ ವೀರಭದ್ರ ಮೂರ್ತಿ ಪ್ರತಿಷ್ಠಾಪಿಸಿ ದಾನ ಬಿಟ್ಟಿರುವ ವಿಷಯ ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಪ್ರೌಢದೇವರಾಯನ ಪ್ರಧಾನಿ ಮತ್ತು ದಂಡನಾಯಕ ಲಕ್ಕಣ್ಣದಂಡೇಶ ಸ್ವತಃ ಕವಿಯಾಗಿದ್ದು ತನ್ನ ಕಾವ್ಯ ಶಿವತತ್ತ್ವ ಚಿಂತಾಮಣಿಯ ೧೮ನೆಯ ಸಂಧಿಯಲ್ಲಿ ದಕ್ಷಾಧ್ವರ ಮಾಡಿದ ವೀರಭದ್ರನ ಹುಟ್ಟು ಸ್ವರೂಪ ಸಾಧನೆ ಕುರಿತು ವರ್ಣಿಸಿದ್ದಾನೆ. ಅಲ್ಲದೆ ಚಾಮರಸನ ಪ್ರಭುಲಿಂಗ ಲೀಲೆ ಕಾವ್ಯದಲ್ಲಿಯೂ ವೀರಭದ್ರನ ವರ್ಣನೆ ಕಂಡುಬರುತ್ತದೆ. ಹಾಗೂ ಕರಸ್ಥಲದ ನಾಗಿದೇವನ ಮಡಿವಾಳಮಾಚಿದೇವನ ತಾರಾವಳಿಯಲ್ಲಿ ವೀರಭದ್ರನ ಹುಟ್ಟು ಸ್ವರೂಪ ಸಾಧನೆ ಕುರಿತು ವರ್ಣಿಸಲಾಗಿದೆ. ಪ್ರೌಢದೇವರಾಯನ ಕಾಲಕ್ಕಾಗಲೇ ವೀರಭದ್ರ ಪ್ರಧಾನ ದೇವತೆಯಾಗಿ ಕಂಡುಬರುತ್ತಾನೆ.

ಸಂಗಮರ ನಂತರದ ಅರಸು ಮನೆತನಗಳ ಕಾಲದಲ್ಲಿ ಉದ್ದಾನ ವೀರಭದ್ರ (ಮುದುವೀರಣ್ಣ) ದೇವರ ಪ್ರತಿಷ್ಠಾಪಿಸಿ ಅದಕ್ಕೆ ದಾನ ಬಿಟ್ಟ ವಿಚಾರ ಕ್ರಿ.ಶ.೧೫೪೫ರ ಸದಾಶಿವರಾಯನ ಕಾಲದ ಶಾಸನದಿಂದ ತಿಳಿದುಬರುತ್ತದೆ. ಉದ್ದಾನ ವೀರಭದ್ರದೇವಾಲಯದ ಆವರಣದಲ್ಲಿರುವ ಈ ಶಾಸನವು

“ಸದಾಶಿವರಾಯರ ಕಾರ್ಯಕೆ ಕರ್ತ್ತರಾದ ರಾಮ

ರಾಜಯ್ಯನವರ ತ(ಂ)ಮ್ಮಂದಿರು ಪ್ರಧಾನಿ

................................

ಪು(ಂ)ಣ್ಯವಾಗಬೇಕೆಂದು ಕೃಷ್ಣಾಪುರದ ಪೇಟೆಯ ಹಿರಿಯ

ಕಾಲುವೆಯ ಛತ್ರದ ಬಳಿಯಲೂ ಕಟಿಸ್ತಂಥಾ ಮುದುವೀರಂಣನ ಪ್ರತಿಷ್ಟೆಯನೂ”[೨೦೧]

ಎಂದು ದಳವಾಯಿ ಜಂಗಮಯ್ಯ ಸದಾಶಿವರಾಯ, ರಾಮರಾಜಯ್ಯ ಪ್ರಧಾನಿ ಎರದಿಂಮರಾಜಯ್ಯನವರಿಗೆ ಪುಣ್ಯವಾಗಬೇಕೆಂದು ಕೃಷ್ಣಾಪುರ ಪೇಟೆಯ ಹಿರಿಯ ಕಾಲುವೆಯ ಛತ್ರದ ಬಳಿ ದೇವಾಲಯ ಕಟ್ಟಿಸಿ ಮುದುವೀರಣ್ಣ(ಉದ್ದಾನ ವೀರಭದ್ರ)ನನ್ನು ಪ್ರತಿಷ್ಠಾಪಿಸಿದಂತೆ ದಾಖಲಿಸಿದೆ. ಅಂದರೆ ಸದಾಶಿವರಾಯ ಯಾವುದೋ ಯುದ್ಧದಲ್ಲಿ ಗೆದ್ದ ನೆನಪಿಗಾಗಿ ಈ ದೇವರನ್ನು ಪ್ರತಿಷ್ಠಾಪಿಸಿದಂತೆ ತೋರುತ್ತದೆ.

ಮತಂಗ ಪರ್ವತದ ಮೇಲೆ, ದಕ್ಷಿಣಕ್ಕಿರುವ ಮೆಟ್ಟಿಲು ದಾರಿಯ ಪಕ್ಕದ ಗುಂಡಿನ ಮೇಲೆ ಇರುವ ಕ್ರಿ.ಶ.೧೫೩೨ರ ಅಚ್ಚುತರಾಯನ ಕಾಲದ ಶಾಸನವು “ಶ್ರೀಪೀರಪ್ರತಾಪ ಶ್ರೀ ಅಚ್ಯುತ್ತದೇವ ಮಾಹರಾಯರು .......... ಶ್ರೀಮಾತಾಂಗದ ವೀರಭದ್ರದೇವರಿಗೆ ಯೆಲೆಯ ಮಹನಾಡ ಹಲ್ಲರು ಕೂಡಿ ತಂಮಧರ್ಮಕ್ಕೆ ಬಿಟ್ಟು ಕೊಟ್ಟದು”[೨೦೨] ಎಂದು ದಾಖಲಿಸಿದೆ. ಈ ಶಾಸನದ ಪ್ರಕಾರ ಅಚ್ಚುತರಾಯನ ಕಾಲದಲ್ಲಿ ಮತಂಗ ಪರ್ವತದ ವೀರಭದ್ರದೇವರಿಗೆ ಎಲೆಯ ಮಹಾನಾಡ ಹಲರು ದಾನ ನೀಡಿದ್ದನ್ನು ಉಲ್ಲೇಖಿಸಿದೆ.

ಗುರುಗುಹೇಶ್ವರ ಆಶ್ರಮದ ಉತ್ತರಕ್ಕೆ ಹತ್ತಿರ ಗುಂಡಿನ ಮೇಲೆ ಇರುವ ಶಾಸನ “ಶ್ರೀ ವೀರ್ರೈದೇವರ ಸೀಮೆ”[೨೦೩] ಎಂದು ದಾಖಲಿಸಿದೆ. ಈ ಶಾಸನದ ದಕ್ಷಿಣ ದಿಕ್ಕಿನಲ್ಲಿ ಒಂದು ಗುಹಾಲಯವಿದ್ದು ಅದರಲ್ಲಿ ವೀರಭದ್ರದೇವರ ಶಿಲ್ಪವಿದೆ(ಈಗ ಇದು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ಆವರಣದಲ್ಲಿ ಇಡಲಾಗಿದೆ). ಈ ಶಾಸನವು ಬಹುಶಃ ಹಂಪಿಯನ್ನು ವೀರಭದ್ರ ಸೀಮೆ ಎಂದು ಕರೆದಂತೆ ತೋರುತ್ತದೆ. ಹಂಪಿಯ ಅನೇಕ ಕಡೆ ಕಾಲದ ಉಲ್ಲೇಖವಿಲ್ಲದೆ ವೀರಭದ್ರನನ್ನು ಉಲ್ಲೇಖಿಸುವ ಶಾಸನಗಳು ಸಿಗುತ್ತವೆ.

ಹಂಪಿಯಲ್ಲಿ ವೀರಭದ್ರನ ನೆಲೆ ಮಾತಂಗ ಪರ್ವತವಾಗಿದೆ. ಮಾತಂಗ ವೀರಭದ್ರ ವಿಜಯನಗರ ಪೂರ್ವದೆಂದು ಮೂರ್ತಿಶಿಲ್ಪದ ಸ್ವರೂಪದ ಆಧಾರ ಮೇಲೆ ನಂಬಲಾಗಿದ್ದು, ಈ ವೀರಭದ್ರ ಮಾತಂಗ ಪರ್ವತದ ನಿವಾಸಿ ಎಂದು ಮತಂಗ ಪರ್ವತದ ಮೇಲೆ ದಕ್ಷಿಣಕ್ಕಿರುವ ಮೆಟ್ಟಿಲು ದಾರಿಯ ಪಕ್ಕದ ಗುಂಡಿನ ಮೇಲಿರುವ ಕ್ರಿ.ಶ.೧೫೩೨ರ ಅಚ್ಯುತ ದೇವರಾಯನ ಕಾಲದ ಶಾಸನವು “ಶ್ರೀಮಾತಾಂಗದ

ವೀರಭದ್ರದೇವರಿಗೆ"[೩೦೪] ಎಂದೂ ಮತಂಗ ವೀರಭದ್ರ ದೇವಾಲಯದ ದಕ್ಷಿಣಕ್ಕಿರುವ ಬಂಡೆಯ ಮೇಲೆ ಇರುವ ಶಾಸನ "ಶ್ರೀಮತು....ಂಗ್ಗ ಪರ್ವತದ ಮೇಲೆಯಿದ್ದ ವೀರಭದ್ರ ದೇವರಿಗೆ"[೩೦೫] ಎಂದು ದಾಖಲಿಸಿ ಹಂಪಿಯಲ್ಲಿ ವೀರಭದ್ರನಿಗೆ ಮೂಲ ನೆಲೆ ಮತಂಗ ಪರ್ವತವೇ ಆಗಿದೆ ಎಂದು ದೃಢೀಕರಿಸಿವೆ. ಈ ಕುರಿತು ಸಾಹಿತ್ಯ ಕೃತಿಗಳು ಮೌನವಹಿಸಿವೆ.

**ಈ. ವಿರೂಪಾಕ್ಷನ ಮತ್ತೊಂದು ರೂಪ ವೀರಭದ್ರ:** ವಿರೂಪಾಕ್ಷ ಲಿಂಗರೂಪಿಯಾದಂತೆ ವೀರಭದ್ರನೂ ಆರಂಭದಲ್ಲಿ ಹಂಪಿಯಲ್ಲಿ ಲಿಂಗರೂಪಿಯಾಗಿದ್ದನೆಂದು ಒಂದೆರಡು ಶಾಸನಗಳು ದಾಖಲಿಸಿವೆ. ಹಾಗೆಯೇ ವೀರಭದ್ರ ಶಿವನ ಸುತ ಹಣೆಗಣ್ಣಿನಲ್ಲಿ ಜನಿಸಿದನೆಂದು ಹಂಪಿ ಪರಿಸರದ ಕನ್ನಡ ಸಾಹಿತ್ಯ ಕೃತಿಗಳು ವರ್ಣಿಸಿದರೂ ಅವುಗಳೇ ವಿರೂಪಾಕ್ಷ ವೀರಭದ್ರ ಭಿನ್ನ ಭಿನ್ನ ಅಲ್ಲ ಎಂಬಂತೆ ಚಿತ್ರಿಸಿರುವುದೂ ಕಂಡುಬರುತ್ತದೆ.

ವೀರಭದ್ರ ಮೂಲತಃ ಲಿಂಗರೂಪಿಯಾಗಿದ್ದನೆಂದು ವಿರೂಪಾಕ್ಷ ದೇವಾಲಯದ ವಾಯುವ್ಯಕ್ಕೆ ನದಿಯ ದಂಡೆಯಲ್ಲಿ ಹಳೆಯ ಸ್ನಾನಘಟ್ಟದ ಬಳಿ ಬಂಡೆಯ ಮೇಲ್ಭಾಗದಲ್ಲಿ ಲಿಂಗ ಹಾಗೂ ನಂದಿಶಿಲ್ಪಗಳ ಕೆಳಗೆ ಇರುವ ಶಾಸನಗಳು "ಶ್ರೀ...ವೀರಬತ್ರಡ ಲಿಂಗಂ, ಶ್ರೀ ವೀರಭದ್ರುಡ ಲಿಂಗಂ"[೩೦೬] ಎಂದು ಉಲ್ಲೇಖಿಸಿವೆ. ಇದರಿಂದ ವೀರಭದ್ರ ಲಿಂಗರೂಪಿ ಎಂದು ತಿಳಿದುಬರುತ್ತದೆ.

ವಿರೂಪಾಕ್ಷ ವೀರಭದ್ರ ಇಬ್ಬರೂ ಒಂದೇ ಎಂಬ ಅಭಿಪ್ರಾಯವನ್ನು ಡಾ.ಎಂ.ಎಂ.ಕಲಬುರ್ಗಿಯವರು ಅಭಿವ್ಯಕ್ತಿಸಿದ್ದಾರೆ. ಅವರು ಹೇಳುವಂತೆ "ಹಂಪಿಯಲ್ಲಿ ಬೇರೆ ಬೇರೆ ಭಂಗಿಯ ಸು.೫೦ರಷ್ಟು ವೀರಭದ್ರನ ವಿಗ್ರಹಗಳಿವೆ. ಬೇರೆ ಯಾವುದೇ ಗ್ರಾಮದಲ್ಲಿಯೂ ಇರದೆ, ಈ ಒಂದು ಸ್ಥಳದಲ್ಲಿ ಮಾತ್ರ ಇಷ್ಟು ವಿಗ್ರಹಗಳಿರುವುದರಿಂದ ಹಂಪೆ ವೀರಭದ್ರನ ಉಪಾಸನೆಯ ಕೇಂದ್ರ ಭೂಮಿಯಾಗಿದ್ದು, ಅವನೇ ಈ ಪ್ರದೇಶದ ಅಧಿದೈವನೆಂದು ಸ್ಪಷ್ಟವಾಗುತ್ತದೆ. ಹೀಗಾಗಿ ರೌದ್ರಭಾವದ ವೀರಭದ್ರನ ಇನ್ನೊಂದು ರೂಪವೇ ಇಲ್ಲಿಯ ರೌದ್ರಭಾವದ ವಿರೂಪಾಕ್ಷನಾಗಿರಬಹುದೆ? ಎಂಬ ಸಂದೇಹ ಹುಟ್ಟುತ್ತದೆ.

ಶಿವಮೊಗ್ಗೆ ತಾಲೂಕಿನ ಒಂದು ಊರಿಗೆ ವಿರಪೇನಕೊಪ್ಪ ಮತ್ತು ವಿರುಪನಕೊಪ್ಪ ಎಂಬ ಎರಡು ಹೆಸರು ಬಳಕೆಯಲ್ಲಿವೆ. ಇದರಿಂದ ವೀರಪ್ಪ(=ವೀರಭದ್ರ), ವಿರೂಪ(=ವಿರೂಪಾಕ್ಷ)ಗಳು ಸಾಮ್ಯಭ್ರಾಂತಿ ಹುಟ್ಟಿಸುವ ಹೆಸರುಗಳೆಂದು ಖಚಿತವಾಗಿ ಇಂಥ ಪ್ರಕ್ರಿಯೆ ಹಂಪೆಯಲ್ಲಿಯ ವೀರಭದ್ರ(=ವೀರಪ್ಪ) ಸಂಪ್ರದಾಯವನ್ನು ಕ್ರಮೇಣ ವಿರೂಪಾಕ್ಷ (=ವಿರೂಪ) ಸಂಪ್ರದಾಯವನ್ನಾಗಿ ಪರಿವರ್ತಿಸಿರಬಹುದೆನಿಸುತ್ತದೆ. ಬಹುಶಃ ಹಂಪೆಯ ಅಧಿದೈವನಾದ ವಿರೂಪಾಕ್ಷಲಿಂಗದ ಹೆಸರು ಮೂಲತಃ 'ವೀರಪಚ್ಚ' ಎಂದಿದ್ದು (ಅಚ್ಚ: ಅಪ್ಪ, ಇಂದಿನ ಪೂಣಚ್ಚ ಹೆಸರನ್ನು ನೆನೆಪಿಸಿಕೊಳ್ಳಿ). ಅದನ್ನೇ ವಿರೂಪಾಕ್ಷ ಎಂದು ಸಂಸ್ಕೃತ ಕರಿಸಿಕೊಂಡಂತೆ ತೋರುತ್ತದೆ. ಮುಂದೆ ಪಂಡಿತರಾದವರು ಕಾಮದಹನ ಲೀಲೆಯ ವಿರೂಪಾಕ್ಷ ಮತ್ತು

ವೀರಭದ್ರನಲ್ಲಿರುವ ರುದ್ರ ಭಾವವನ್ನು ಗುರುತಿಸಿ, ಇಬ್ಬರಿಗೂ ತಂದೆ ಮಕ್ಕಳೆಂಬ ಪುರಾಣ ಕಥೆ ಕಟ್ಟಿರಬಹುದು. ಒಟ್ಟಾರೆ ಹಂಪೆಯಲ್ಲಿರುವ ಲಿಂಗರೂಪದ ವೀರಭದ್ರನೇ ಮುಂದೆ ವಿರೂಪಾಕ್ಷನೆಂಬ ಹೆಸರು ಪಡೆದನೆಂದು ಹೇಳಬಹುದಾಗಿದೆ.''[೩೦೭] ಎಂದು ಹೇಳಿರುವಲ್ಲಿ ಔಚಿತ್ಯವಿದೆ. ಏಕೆಂದರೆ ವೀರಭದ್ರ ವಿರೂಪಾಕ್ಷರು ಭಿನ್ನ ಭಿನ್ನ ಅಲ್ಲವೆಂಬುದನ್ನು ಹರಿಹರ ತನ್ನ ಗಿರಿಜಾ ಕಲ್ಯಾಣ ಕಾವ್ಯದಲ್ಲಿ ''ದುರಿತ ಪಂಚಾನನ ಶರಭಮೂರ್ತಿ ದಕ್ಷ ಮಖನಿರ್ಧೂಮಧಾಮಂ''[೩೦೮] ಎಂದೂ ಪಂಪಾಶತಕದಲ್ಲಿ ''ದಕ್ಷನಧ್ವರಮಂ ಸುಟ್ಟವನೀತನೀತನೆ''[೩೦೯] ಎಂದು ಹೇಳಿದ್ದಾನೆ. ಅಲ್ಲದೆ ಇದೇ ಕವಿ ತನ್ನ ರಗಳೆಗಳಲ್ಲಿ ''ದೇವ ದಕ್ಷನ ಯಾಗ ವಿನಾಶನ''[೩೧೦] ''ದೇವರುದ್ರಗಣ ಸಮುದ್ರ ವೀರಭದ್ರ ಹಂಪೆಯರಸ''[೩೧೧] ಎಂದು ಉಲ್ಲೇಖಿಸಿದ್ದಾನೆ. ಹಾಗೆಯೇ ರಾಘುವಾಂಕ ಕವಿ ತನ್ನ ವೀರೇಶ ಚರಿತೆ

> ''....ನಕ್ಷಿತ್ರಯನುಕ್ಷಧ್ವಜ
> ರಕ್ಷಾದಕ್ಷಕ್ಷೇಮಿ ಕ್ಷೇಡಾ ಕ್ಷೋಣಾ
> ಧೃಕ್ಷಾಭಕ್ಷಂ ಕ್ಷುದ್ರಕ್ಷೂರಂ ಕ್ಷಮನತಪಕ್ಷಂ ಮೋಕ್ಷಪ್ರದನು''[೩೧೨]

ಎಂದೂ ವರ್ಣಿಸಿದ್ದಾರೆ. ಹರಿಹರ ವಿರೂಪಾಕ್ಷನನ್ನು ಶರಭಮೂರ್ತಿ, ದಕ್ಷಯಾಗಧ್ವಂಸಿ, ದಕ್ಷನ ಯಾಗವನ್ನು ಸುಟ್ಟವನೆಂದು ದಕ್ಷಯಾಗನಾಶ ಮಾಡಿದವನೆಂದು ಹೇಳಿದರೆ ವೀರಭದ್ರನನ್ನು ಹಂಪಿಯರಸನೆಂದು ಕರೆದಿದ್ದಾನೆ. ರಾಘುವಾಂಕ ವೀರಭದ್ರನನ್ನು ಮೂರು ಕಣ್ಣುಗಳುಳ್ಳವನೂ, ವೃಷಭಧ್ವಜನೂ, ಶರಣರನ್ನು ಕಾಪಾಡತಕ್ಕವನೂ ಕಾಲಕೂಟ ವಿಷವನ್ನು ಕುಡಿದವನೆಂದು ಹೇಳಿದ್ದಾನೆ. ನಮಗೆ ಪುರಾಣಗಳಿಂದ ತಿಳಿದುಬರುವಂತೆ ದಕ್ಷನ ಯಾಗವನ್ನು ಧ್ವಂಸ ಮಾಡಿದವನು, ಶರಭ ರೂಪ ತಾಳಿದವನು, ವೀರಭದ್ರ ಹಾಗೂ ಕಾಲಕೂಟ ವಿಷವನ್ನು ಕುಡಿದವನು ಶಿವ. ಆದರೆ ವಿರೂಪಾಕ್ಷ ದಕ್ಷಯಾಗ ನಾಶಕ, ಶರಭಮೂರ್ತಿ ಎಂದು ಚಿತ್ರಿತವಾಗಿರುವುದು ವೀರಭದ್ರ ವಿರೂಪಾಕ್ಷರು ಭಿನ್ನ ಭಿನ್ನ ಅಲ್ಲವೆಂದು ತೋರಿಸಲ್ಪಡುತ್ತದೆ. ಆರಂಭದಲ್ಲಿ ವೀರಭದ್ರ ಲಿಂಗರೂಪಿಯಾಗಿದ್ದು ನಂತರ ವ್ಯಕ್ತಿರೂಪ ಪಡೆದಿರುವನೆಂಬುದಕ್ಕೆ ಹಂಪಿಯ ಮತಂಗಪರ್ವತದ ವೀರಭದ್ರ ದೇವಾಲಯದಲ್ಲಿ ಮತಂಗೇಶ್ವರ ಲಿಂಗವಿದೆ. ಇದು ಮೂಲತಃ ವೀರಭದ್ರ ಲಿಂಗವಾಗಿರುವಂತೆ ತೋರುತ್ತದೆ. ಅದು ಮತಂಗಪರ್ವತದ ಮೇಲಿರುವುದರಿಂದ ಮೂಲತಃ ವೀರಭದ್ರ ಲಿಂಗವನ್ನು ಮತಂಗೇಶ್ವರನೆಂದು ಕರೆದಿರುವ ಸಾಧ್ಯತೆ ಇದೆ. ಇದಲ್ಲದೆ ಮತಂಗ ಪರ್ವತದ ವೀರಭದ್ರ ಮತ್ತು ಉದ್ದಾನ ವೀರಭದ್ರ ಮೂರ್ತಿಶಿಲ್ಪದ ಎದುರು ನಂದಿಶಿಲ್ಪಗಳಿರುವುದೇ ಸಾಕ್ಷಿ. ಮತಂಗಪರ್ವತದ ವೀರಭದ್ರನಿಗೆ ಮತಂಗಪರ್ವತ ಶಾಸನ ''ಮಾದಂಣನು ಮತಂಗ ಪರ್ವತಕೆ ಬಂದು ವಿರೂಪಾಕ್ಷ ದೇವರ ಕಂಡು ಕೃತಾರ್ಥನಾದನು''[೩೧೩] ''ಸಾಯಂಣನೂ ಮಾತಂಗ ಪರ್ವತನಂ ವಿರೂಪಾಕ್ಷದರ್ಷರಾಗಿ ಕುತಾರ್ಥನಾದ''[೩೧೪] ಎಂದು ದಾಖಲಿಸಿವೆ. ಈ ಶಾಸನಗಳು

ಬಹುಶಃ ವೀರಭದ್ರಶಿಲ್ಪಕ್ಕೆ ವಿರೂಪಾಕ್ಷನೆಂದು ಕರೆದಿರುವ ಸಾಧ್ಯತೆ ಇದೆ. ಹಂಪಿಯ ವಿರೂಪಾಕ್ಷ ದೇವಾಲಯ ಬಳಿ ನದಿ ದಂಡೆಯ ಸ್ನಾನಘಟ್ಟದ ನಂದಿ ಮತ್ತು ಲಿಂಗ ಶಿಲ್ಪಗಳ ಕೆಳಗೆ ಇರುವ ಶಾಸನವು "ಶ್ರೀ...ವೀರಬತ್ರಡ ಲಿಂಗಂ ಶ್ರಿ ವಿರೂಪಾಕ್ಷ ದೇವ...."[೩೧೫] ಎಂದು ಕರೆದಿದೆ. ಹೀಗೆ ವೀರಭದ್ರ ವಿರೂಪಾಕ್ಷ ಇಬ್ಬರೂ ಒಂದೇ ಎಂಬುದರಲ್ಲಿ ಅನುಮಾನವಿಲ್ಲ. ಹಂಪಿ ಮೂರು ವಿರೂಪಾಕ್ಷ ದೇವಾಲಯದ ವಿರೂಪಾಕ್ಷ ಲಿಂಗಗಳ ಎದುರು ಮತ್ತು ಮತಂಗ ಪರ್ವತದ ಮತ್ತು ಉದ್ದಾನ ವೀರಭದ್ರ ದೇವಾಲಯಗಳಲ್ಲಿ ವೀರಭದ್ರನ ಶಿಲ್ಪಗಳ ಎದುರು ನಂದಿಶಿಲ್ಪಗಳಿರುವುದನ್ನು ಗಮನಿಸಿದರೆ ವಿರೂಪಾಕ್ಷ ವೀರಭದ್ರನು ಒಂದೇ ಎಂದು ಧ್ವನಿತವಾಗುತ್ತದೆ. (ಕೃಷಿಪಾಲನ ಅಥವಾ ಕೃಷಿಕಾಯಕ ಸಮುದಾಯದವರು ಹೆಚ್ಚು ಆರಾಧನೆ ಮಾಡಲು ಆರಂಭಿಸಿದ್ದಾಗಿನಿಂದ ವೀರಭದ್ರನ ಮುಂದೆ ನಂದಿ ಇರುವಂತೆ ಕಂಡುಬರುತ್ತದೆಂದು ಊಹಿಸಬಹುದಾಗಿದೆ.) ವೀರಭದ್ರನ ಕಿರೀಟದಲ್ಲಿ ಶಿವಲಿಂಗ ಇರುವುದು ಮೂಲತಃ ವೀರಭದ್ರ ಲಿಂಗರೂಪಿ ಎಂದು ಸೂಚಿಸುವಂತಿದೆ.

ಉ. ಹಂಪಿಯ ವೀರಭದ್ರ ಮತ್ತು ವೀರಶೈವ ಧರ್ಮ : ವೀರಭದ್ರನ ಉಪಾಸನೆ ವಿಜಯನಗರ ಪೂರ್ವದಲ್ಲಿಯೇ ನಡೆಯುತ್ತಿತ್ತೆಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. ವೀರಭದ್ರನ ಆರಾಧನೆ ತೀವ್ರಗೊಂಡದ್ದು ಮಾತ್ರ ವಿಜಯನಗರ ಕಾಲದಲ್ಲಿಯೇ ಎಂಬುದರಲ್ಲಿ ಅನುಮಾನವಿಲ್ಲ. ವಿಜಯನಗರ ಪೂರ್ವದ ವೀರಶೈವ ಕವಿಗಳಾದ ಹರಿಹರ ರಾಘವಾಂಕರು, ವಿಜಯನಗರ ಕಾಲದ ಲಕ್ಕಣದಂಡೇಶ, ಚಾಮರಸ, ಕರಸ್ಥಲದ ನಾಗಿದೇವ ಎಂಬ ವೀರಶೈವ ಕವಿಗಳು ವೀರಭದ್ರನ ಶೌರ್ಯ, ಸಾಹಸದ ಬಗ್ಗೆ ಶೋಷಣೆ, ಮೂಢನಂಬಿಕೆಗಳ ವಿರುದ್ಧ ಹೋರಾಡಿರುವುದನ್ನು ಚಿತ್ರಿಸಿದ್ದಾರೆ. ಬಹುಶಃ ಈ ಕವಿಗಳು ೧೨ನೇ ಶತಮಾನದ ಶಿವಶರಣರು ರೂಪಿಸಿದ ವೀರಶೈವ ಸಿದ್ಧಾಂತವನ್ನು ರಕ್ಷಿಸಿ ಉಳಿಸುವಂತೆ ಮಾಡಲು ಜನರಲ್ಲಿ ವೀರಭದ್ರನ ಕೆಚ್ಚು ಸಾಹಸ ಒಡಮೂಡುವಂತೆ ಪರಧರ್ಮೀಯರಿಂದ ಈ ಸಿದ್ಧಾಂತ ರಕ್ಷಿಸಲು ಸಿದ್ಧರಾಗುವಂತೆ ಮಾಡುವ ಉದ್ದೇಶ ಹೊಂದಿದಂತೆ ತೋರುತ್ತದೆ.

ಹರಿಹರಾದಿ ಕವಿಗಳು ವೀರಭದ್ರನಿಗೂ ವೀರಶೈವಧರ್ಮಕ್ಕೂ ಇರುವ ಸಂಬಂಧ ಕುರಿತು ತಮ್ಮ ಕಾವ್ಯಗಳಲ್ಲಿ ವಿವರಿಸಿದ್ದಾರೆ.

ಹರಿಹರ : "ಏಕಜಡೆ ಲಿಂಗಂ....."
ತಗೆಶಿಶು ದಕ್ಷಯಾಗಕ್ಕೆ ಪುಟ್ಟಿದ ಮಾರಿ"[೩೧೬]

ರಾಘವಾಂಕ : "ವೀರಕುಲಾಧೀಶ್ವರನು....
ನಡುನೆತ್ತಿಯ ಲಿಂಗಂ ಮುಕುಟಂ..........
ಹೋಮದ ಹಿರಿಯರನೊದೆದರು ಕುಂಡದ ಕೆಂಡವನು"[೩೧೭]

ಲಕ್ಕಣ್ಣ ದಂಡೇಶ : ''ನೆಟ್ಟನುರುಲಿಂಗವಳವಟ್ಟು.....

ದಕ್ಷಮಖಶಿಕ್ಷನಂತ ಕಾಂತಕನೆ....''[೩೮]

ಕರಸ್ಥಲದ ನಾಗಿದೇವ : ''ವೀರೇಶ್ವರ ನೆಡೆಗೊಂಡು ದಕ್ಷಾಧ್ವರಕೆ ಮುಖವಾದನು....

ಶಿವನ ಶ್ರೀಚರಣವಿಡಿದು ವೀರಭದ್ರನು

ಅವನಿಯೊಳಗೆ ವೀರಶೈವಾಚಾರವ ನಾನು

ಹವಣಿಸಿ ಬಹೆನೆಂದು ಹರಗೆ ವಂದಿಸಿದನು''[೩೯] ಎಂದು ವರ್ಣಿಸಿದ್ದಾರೆ.

ಈ ಕವಿಗಳು ಹೇಳುವಂತೆ ವೀರಭದ್ರನಿಗೆ ನೆತ್ತಿಯ ಮೇಲೆ ಅಂದರೆ ಕಿರೀಟದಲ್ಲಿ ಶಿವಲಿಂಗವಿದೆ. ಅವನು ದಕ್ಷಬ್ರಹ್ಮನ ಯಜ್ಞಧ್ವಂಸಕ, ವೀರಕುಲಾಧೀಶ್ವರ (ವೀರಶೈವ ಕುಲಾಧೀಶ್ವರ)ನಾಗಿದ್ದಾನೆ. ಕರಸ್ಥಲದ ನಾಗಿದೇವ ಹೇಳಿದಂತೆ ವೀರಭದ್ರನು ಶಿವನ ಪಾದವಿಡಿದು ಭೂಮಿಯ ಮೇಲೆ ವೀರಶೈವ ಆಚಾರ ಸಿದ್ಧಾಂತವನ್ನು (ಸೃಷ್ಟಿಸಿ) ಸ್ಥಿರಪಡಿಸಿ ಬರುವೆನೆಂದು ನಮಸ್ಕರಿಸಿ ಭೂಮಿಗೆ ಬಂದನು.

ಶಿವಲಿಂಗ ವೀರಶೈವದ ಪ್ರತೀಕ ಅಷ್ಟಾವರಣಗಳಲ್ಲಿ ಒಂದಾಗಿದೆ. ಇದನ್ನು ವೀರಭದ್ರ ಧರಿಸಿದ್ದಾನೆ. ಯಜ್ಞ ವೀರಶೈವ ವಿರೋಧಿ ಚಟುವಟಿಕೆ. ಯಜ್ಞಕ್ಕೆ ಮುಗ್ಧ ಪ್ರಾಣಿಗಳ ಬಲಿ ನೀಡಲಾಗುತಿತ್ತು. ಅಪಾರ ಮಂಗಳ ದ್ರವ್ಯಗಳನ್ನು ಆಹುತಿ ಮಾಡಲಾಗುತ್ತಿತ್ತು. ಅಲ್ಲದೆ ಯಜ್ಞ ಮಾಡುವುದೆಂದರೆ ಶಿವದ್ರೋಹದ ಕೆಲಸ. ವೀರಶೈವರಿಗೆ ಶಿವನೇ ಪರಮದೈವ. ಅಂಥ ಶಿವದ್ರೋಹದ ಪ್ರತೀಕವಾಗಿರುವ ಯಜ್ಞಧ್ವಂಸ ಮಾಡಿದ ವೀರಭದ್ರ ವೀರಶೈವರಿಗೆ ಪೂಜ್ಯನೀಯ. (ಇಂದಿಗೂ ವೀರಭದ್ರನ ಉತ್ಸವದಲ್ಲಿ ಕೆಂಡ ಹಾಯುವ ಸಂಪ್ರದಾಯವಿದೆ. ಇದು ಯಜ್ಞ ನಾಶದ ಪ್ರತೀಕವಾಗಿದೆ) ವೀರಕುಲವೆಂದರೆ ವೀರಯೋಧರ ವಂಶ ಎಂದರ್ಥ. ೧೨ನೇ ಶತಮಾನದ ಕಲ್ಯಾಣದ ಕ್ರಾಂತಿಯಲ್ಲಿ ಶರಣರು ವೀರಶೈವ ಸಿದ್ಧಾಂತ ರಕ್ಷಣೆಗೋಸ್ಕರ ವೀರಯೋಧರಂತೆ ಹೋರಾಡಿದರು ಅವರಿಗೆ ಸ್ಫೂರ್ತಿದಾಯಕ ಈ ವೀರಭದ್ರ. ಅಂಥ ವೀರಯೋಧರ ಕುಲಕ್ಕೆ ಒಡೆಯ ಈ ವೀರಭದ್ರನಾಗಿದ್ದಾನೆ. ವೀರಶೈವ ಆಚಾರ ಸಂಸ್ಕೃತಿಯನ್ನು ವೀರಭದ್ರ ಭೂಮಿಯ ಮೇಲೆ (ಸೃಷ್ಟಿಸಿ) ಸ್ಥಿರಪಡಿಸಿ ಬರುವೆನೆಂದಿರುವುದು ವೀರಭದ್ರನೇ ವೀರಶೈವ ಸಿದ್ಧಾಂತ ಪ್ರತಿಪಾದಕನೆಂದು ಹೇಳಬಹುದು.

ಈ ಹಿಂದೆ ವೀರಶೈವ ಧರ್ಮ ಸ್ಥಾಪಕರ ವಿಚಾರದಲ್ಲಿ ಪ್ರತಿಪಾದಿಸಿದಂತೆ ವೀರಶೈವರೆಂದರೆ ವೀರಭದ್ರನ ಆರಾಧಕರು. ಶಿವನನ್ನು ವೀರಭದ್ರನ ರೂಪದಲ್ಲಿ ಆರಾಧಿಸುವವರು. ವೀರಭದ್ರ ಪ್ರತಿಪಾದಿಸಿದ ಸಿದ್ಧಾಂತದ (ಯಜ್ಞವಿರೋಧಿ, ಪ್ರಾಣಿವಧೆ, ಅನ್ಯಾಯ ಶೋಷಣೆ ವಿರುದ್ಧ ಹೋರಾಡುವ ತತ್ತ್ವ, ಮೌಢ್ಯ ಆಚರಣೆಗಳ ನಿರ್ಮೂಲನೆ, ಮನುಷ್ಯತ್ತ್ವದ ಕಲ್ಪನೆ ಇತ್ಯಾದಿ) ಅನುಯಾಯಿಗಳು. ಇವರೇ ಮುಂದೆ ವೀರಭದ್ರ ಶೈವರೆನಿಸಿದರು. ವೀರಭದ್ರಶೈವ ಉಚ್ಚಾರಣೆಯಲ್ಲಿ ಭದ್ರ ಪದ ಲೋಪವಾಗಿ ವೀರಶೈವವಾಯಿತು. ಡಾ.ಜಚನಿಯವರು ಪ್ರತಿಪಾದಿಸುವಂತೆ ''ವೀರಶೈವವೆಂದರೆ ವೀರಶಿವನಿಂದಾದ

ಮತವೆಂದು, ವೀರರಸವುಳ್ಳ ಶಿವ(ಭದ್ರ)ನಿಂದಾದ ತತ್ತ್ವವೆಂದು, ಸಿದ್ಧಾಂತವೆಂದು ಅರ್ಥ. ವೀರಶಿವನೆಂದರೆ ವೀರಭದ್ರ. ಶಿವ-ಭದ್ರ ಎರಡೂ ಒಂದೇ ಅರ್ಥದ ಪರ್ಯಾಯ ಪದಗಳು. ವೀರಭದ್ರನೆಂದರೂ ವೀರಶಿವನೆಂದರೂ ಒಂದೇ. ಶಿವನಿಂದಾದುದು ಶೈವ ಮತ. ವೀರಶಿವನಿಂದಾದುದು ವೀರಶೈವ ಮತ.[೩೨೦] ಭದ್ರತೆ (ಸ್ಥಿರತೆ-ಶುಭತೆ)ಯಿಲ್ಲದ ಬಾಳು ಬಾಳಲ್ಲ. ವೀರಶ್ರಿಯಿಲ್ಲದ ಬದುಕು ಬದುಕಲ್ಲ. ವೀರತನ ಭದ್ರಜೀವನಕ್ಕೆ ಸಹಕಾರಿಯಾಗಬೇಕು ಎಂಬುದೇ ಆತನ ಆಶಯ. ವೀರಶೈವದ ರಕ್ಷಣೆಯೇ ವೀರೇಶನ ಮಣಿಹವಾಗಿತ್ತು. ದೇವಗಣದ ಅನ್ಯಾಯ, ಅನೀತಿ, ಅಧಿಕಾರದಾಹ, ಅಪೇಯಪಾನ, ಯಜ್ಞನೆಪದಲ್ಲಿ ಪ್ರಾಣಿವಧೆ, ಮಾಂಸಭಕ್ಷಣ ಮೊದಲಾದವುಗಳನ್ನು ವೀರೇಶನು ಸಹಿಸುತ್ತಿರಲಿಲ್ಲ. ಇವನ್ನೆಲ್ಲ ಸರಿಪಡಿಸುವುದಕ್ಕಾಗಿಯೇ ಆತನ ಅವತಾರವಾಗಿತ್ತು. ಅದಕ್ಕಾಗಿಯೇ ಅಂದೆ ಆತನು ವೀರಶೈವ ಧರ್ಮವನ್ನು ಸ್ಥಾಪಿಸಿದನು. ವೀರಶೈವರನ್ನು ರೂಪಿಸಿದನು''[೩೨೧] ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಕುರಿತು ಇನ್ನೂ ಹೆಚ್ಚಿನ ಶೋಧನೆಯ ಅಗತ್ಯವಿದೆ.

**೬. ವೀರಭದ್ರನ ಶಿಲ್ಪಗಳು :** ಒಂದು ಮೂರ್ತಿಶಿಲ್ಪವೆಂದರೆ ಅದು ತನ್ನದೇ ಆದ ಸ್ವರೂಪ ಹೊಂದಿರುತ್ತದೆ. ಅದು ಶಿಲ್ಪಿಯ ಕೈಯಿಂದ ಕೆತ್ತಲ್ಪಟ್ಟ ನಂತರ ತನ್ನ ಸ್ವರೂಪ ಕಾಂತಿಯಿಂದ ಎಲ್ಲರ ಗಮನ ಸೆಳೆಯುತ್ತದೆ. ಸ್ವರೂಪದಲ್ಲಿ ಸ್ವಲ್ಪ ವ್ಯತ್ಯಾಸ ಕಂಡುಬಂದರೂ ಕಾಂತಿಹೀನವಾಗುತ್ತದೆ. ಹೀಗಾಗಿ ಶಿಲ್ಪಕೆತ್ತುವ ಶಿಲ್ಪಿ ತುಂಬಾ ಸೂಕ್ಷ್ಮಮತಿ ಮತ್ತು ಚಾಣಾಕ್ಷನಾಗಿರಬೇಕಾಗುತ್ತದೆ. ಶಿಲ್ಪಿ ಶಿಲ್ಪವನ್ನು ಕೆತ್ತುವಾಗ ತುಂಬಾ ತಾಳ್ಮೆ ಮತ್ತು ಎಚ್ಚರವಹಿಸಬೇಕಾಗುತ್ತದೆ. ಹಂಪಿಯಲ್ಲಿ ಅನೇಕ ವೀರಭದ್ರ ಶಿಲ್ಪಗಳು ಕಂಡುಬರುತ್ತವೆ. ಬಹುತೇಕ ಶಿಲ್ಪಗಳು ತಮ್ಮ ಸ್ವರೂಪದ ಮೂಲಕ ಕಾಂತಿಯುತವಾಗಿದ್ದು, ಎಲ್ಲರ ಗಮನ ಸೆಳೆದಿವೆ. ಹಂಪಿಯಲ್ಲಿ ವೀರಭದ್ರ ಶಿಲ್ಪಗಳು ಮತಂಗ ಪರ್ವತ, ಉದ್ದಾನ ವೀರಭದ್ರ ದೇವಾಲಯ, ವಿರೂಪಾಕ್ಷ ದೇವಾಲಯ ಇನ್ನೂ ಮುಂತಾದ ಕಡೆಗಳಲ್ಲಿ ಕಂಡುಬರುತ್ತವೆ. ಹಾಗೂ ಹಂಪಿಯ ಅನೇಕ ಕಡೆ ಬಿಡಿಶಿಲ್ಪಗಳಾಗಿಯೂ ಕಂಡುಬರುತ್ತವೆ. ಈ ವೀರಭದ್ರ ಶಿಲ್ಪಗಳ ಸ್ವರೂಪ, ವೈಶಿಷ್ಟ್ಯ ಮುಂತಾದ ಅಂಶಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ಹಂಪಿ ವಿರೂಪಾಕ್ಷ ಕ್ಷೇತ್ರ, ವಿರೂಪಾಕ್ಷ ಸೀಮೆ, ವಿರೂಪಾಕ್ಷ ತೀರ್ಥ ಆಗಿರುವಂತೆ ವೀರಭದ್ರಕ್ಷೇತ್ರ, ವೀರಭದ್ರಸೀಮೆ, ವೀರಭದ್ರ ತೀರ್ಥವೂ ಆಗಿತ್ತು ಎನ್ನುವುದರಲ್ಲಿ ಅನುಮಾನವಿಲ್ಲ. ಕಾರಣ ಹಂಪಿಯಲ್ಲಿ ಸಿಗುವಷ್ಟು ವೀರಭದ್ರ ಶಿಲ್ಪಗಳು ಮತ್ತೆ ಬೇರೆ ಯಾವ ಕಡೆಯಲ್ಲಿಯೂ ಕಾಣಸಿಗುವುದಿಲ್ಲ. ಹಂಪಿ ಪರಿಸರದಲ್ಲಿ ಸಿಗುವ ವೀರಭದ್ರ ಶಿಲ್ಪಗಳನ್ನು ೧. ದೇವಾಲಯಗಳ ಗರ್ಭಗೃಹದ ಶಿಲ್ಪಗಳು ೨. ದೇವಾಲಯ ಕಂಬಗಳ ಮೇಲಿನ ಶಿಲ್ಪಗಳು ೩. ಹೆಬ್ಬಂಡೆಗಳ ಮೇಲಿನ ಶಿಲ್ಪಗಳು ೪. ಹೆಬ್ಬಂಡೆಗಳ ಮಂಟಪದೊಳಗಿನ ಶಿಲ್ಪಗಳೆಂದು ವಿಭಾಗಿಸಿಕೊಂಡು ಅವುಗಳ ಸ್ವರೂಪ ಕುರಿತು ವಿಶ್ಲೇಷಿಸಬಹುದಾಗಿದೆ. ಇದಲ್ಲದೆ ೧. ವಿಜಯನಗರ ಪೂರ್ವದ ವೀರಭದ್ರ ಶಿಲ್ಪಗಳು ೨. ವಿಜಯನಗರ ಕಾಲದ ವೀರಭದ್ರ

ಶಿಲ್ಪಗಳು ಎಂದೂ ವಿಂಗಡಿಸಿ ಅಧ್ಯಯನ ಮಾಡಬಹುದಾಗಿದೆ. ಆದರೆ ವೀರಭದ್ರನ ಈ ಮೇಲಿನ ಎಲ್ಲಾ ತರಹದ ಶಿಲ್ಪಗಳ ಸ್ವರೂಪವು ಅಲ್ಪಸ್ವಲ್ಪ ಮಾತ್ರ ವ್ಯತ್ಯಾಸ ಹೊಂದಿರುವ ಹಿನ್ನಲೆಯಲ್ಲಿ ಎಲ್ಲವನ್ನೂ ಏಕಕಾಲಕ್ಕೆ ವಿಶ್ಲೇಷಿಸಲಾಗಿದೆ.

ಹಂಪಿಯ ವೀರಭದ್ರಶಿಲ್ಪಗಳ ಉದ್ದ, ಗಾತ್ರ, ಭಂಗಿ ಎಲ್ಲಾ ವೀರೋಚಿತ ವರ್ಣನೆಯದೇ ಆಗಿದೆ. ಸುಂದರ ಮತ್ತು ಒರಟು ಕೆತ್ತನೆಗಳಿಂದ ಕೂಡಿವೆ. ಶ್ರೀತತ್ತ್ವನಿಧಿಯ ವರ್ಣನೆಯಲ್ಲಿ ವೀರಭದ್ರ ಚತುರ್ಭುಜ ಅಥವಾ ಅಷ್ಟಭುಜ ತ್ರಿನೇತ್ರ, ಹುರಿಮೀಸೆ, ಬಿಲ್ಬಾಣ, ಖಡ್ಗ, ಗದಾಧಾರಿ, ರುಂಡ ಮಾಲಾಧರ, ಹಾವುಗೆ ಮೇಲೆ ನಿಂತವನೆಂದಿದೆ. ಬಲಕ್ಕೆ ಪ್ರಣಾಮಭಂಗಿಯ ಟಗರುದಲೆಯ ಸ್ಥಾನಕ ದಕ್ಷನಿರಬೇಕೆಂದಿದೆ. ಅದೇ ಕಾರಣಕಾಗಮದಲ್ಲಿ ಅಗ್ನಿಜ್ವಾಲಾ ಜಟಾಮಕುಟಧಾರಿ ಅಥವಾ ಕಿರೀಟಮಕುಟಧಾರಿ, ನಡುಗಂಟ ಸರ್ಪಯಜ್ಞೋಪವೀತ, ಖಡ್ಗ, ಖೇಟಕ, ಧನುರ್ಬಾಣ ಧಾರಿ ಎಂದು ಉಳಿದ ಮೇಲಿನ ಲಕ್ಷಣಗಳ ಜೊತೆಗೆ ಹೇಳಿದೆ. ಶಿಲ್ಪ ಸಂಗ್ರಹ, ಶಿಲ್ಪರತ್ನಗ್ರಂಥಗಳು ಅವನನ್ನು ವರ್ಣಿಸಿ, ಸಾತ್ವಿಕ, ರಾಜಸಿಕ, ತಾಮಸಿಕ, ಹಾಗೂ ಅಷ್ಟಭುಜ ವೀರಭದ್ರನೆಂದು ವಿಂಗಡಿಸಿ ಲಕ್ಷಣಗಳನ್ನು ನಿರೂಪಿಸಿವೆ. ವಿಜಯನಗರ ಕಾಲದ ವೀರಭದ್ರ ಶಿಲ್ಪಗಳನ್ನು ಗಮನಿಸಿದರೆ ಈ ಕೃತಿಗಳನ್ನು ಅನುಸರಿಸಿ ಶಿಲ್ಪವನ್ನು ರಚಿಸಿರುವಂತೆ ತೋರುತ್ತದೆ.''[೨೨]

ಸಾಮಾನ್ಯವಾಗಿ ಹಂಪಿಯಲ್ಲಿನ ವಿಜಯನಗರ ಕಾಲದ ವೀರಭದ್ರ ಮೂರ್ತಿಗಳು ತ್ರಿಭಂಗ ಸ್ಥಾನಕ ಹಾವುಗೆಧಾರಿ, ಚತುರ್ಭುಜ ಮೂರ್ತಿಗಳಾಗಿರುತ್ತವೆ. ಖಡ್ಗ, ಬಾಣ, ಬಿಲ್ಲು ಹಾಗೂ ಖೇಟಕ (ಡಾಲು-ಗುರಾಣಿ)ಗಳನ್ನು ಅನುಕ್ರಮವಾಗಿ ವೀರಭದ್ರನ ಬಲ ಮತ್ತು ಎಡಗೈಗಳು ಹೊಂದಿರುತ್ತವೆ. ಯಜ್ಞೋಪವೀತ ಅಥವಾ ಛನ್ನವೀರ, ರುಂಡಮಾಲೆ, ಕಾಲ್ಕಡಗ(ಕಂಕಣ), ಕೇಯೂರ, ಭೂಜಕೀರ್ತಿಹಾರ, ಉದರಬಂಧ, ಕಟಿಬಂಧ, ಇಳಿವಸ್ತ್ರಹೊಂದಿದ್ದು, ಕರಂಡ ಮಕುಟಧಾರಿ, ಕೆಲವು ವೇಳೆ ಕಿರೀಟಮಕುಟ ಶಿರೋವೇಷಿಯಾಗಿರುತ್ತಾನೆ. ಕಿರೀಟದ ಪೂರಿತ ಭಾಗದಲ್ಲಿ ಕಿರುಶಿವಲಿಂಗವಿರುತ್ತದೆ. ನಡುವಿನಲ್ಲಿ ಬಾಗಿದ ಕಿರುಭರ್ಚಿ ಇದ್ದು ಸಾಮಾನ್ಯವಾಗಿ ಆಯತಾಕಾರದ ಡಾಲುವಿನ ಮೇಲೆ ಊರಿದ ಹಸ್ತ ಹೊಂದಿರುತ್ತಾನೆ. ಅವನು ತ್ರಿನೇತ್ರ, ಹುರಿಮೀಸೆಯವ, ಕೋರೆದಾಡೆಯುಳ್ಳವನು, ಕೀರ್ತಿಮುಖ ಕೇಂದ್ರನೆತ್ತಿಯ ಪ್ರಭಾವಳಿಯೊಳಗಿರುವವ, ಸೊಂಟದಲ್ಲಿಯೂ ಕೀರ್ತಿಮುಖ ಮಾದರಿ ಶಿಲ್ಪ ಬಿಡಾಣಿ ಹೊಂದಿರುವಂಥವನು. ಬಲಕ್ಕೆ ಪ್ರಣಾವ ಭಂಗಿಯ ಸ್ಥಾನಕ ಟಗರುದಲೆ ದಕ್ಷನ ಕಿರುವಿಗ್ರಹವಿರುತ್ತದೆ.''[೨೩] ಅಲ್ಲದೆ ಕೆಲವು ಶಿಲ್ಪಗಳಲ್ಲಿ ದಕ್ಷನ ಶಿಲ್ಪವಿಲ್ಲ. ಕೆಲವು ಶಿಲ್ಪಗಳಲ್ಲಿ ದಕ್ಷನಿಗೆ ಟಗರಿನ ತಲೆ, ಮೇಕೆ(ಹೋತ)ಯ ತಲೆ ಇರುತ್ತದೆ. ಒಂದು ಶಿಲ್ಪದಲ್ಲಿ ವೀರಭದ್ರನಿಗೆ ಮೀಸೆಯೇ ಇಲ್ಲ. ಮತ್ತೊಂದು ಶಿಲ್ಪದಲ್ಲಿ ವೀರಭದ್ರನ ಎಡಪಾದದ ಬಳಿ ದಕ್ಷನಿದ್ದಾನೆ. ಇವೆಲ್ಲವೂ ಹಂಪಿ ವೀರಭದ್ರ ಶಿಲ್ಪಗಳ ವೈಶಿಷ್ಟ್ಯಗಳಾಗಿವೆ.

**ಮತಂಗ ಪರ್ವತ ಪರಿಸರದ ವೀರಭದ್ರ ಶಿಲ್ಪಗಳು**

ವಿಜಯನಗರ ಪೂರ್ವದೆಂದು ಹೇಳಲಾಗುವ ವೀರಭದ್ರ ಶಿಲ್ಪ ಮತಂಗ ಪರ್ವತದ ದೇವಾಲಯದಲ್ಲಿದೆ. ಇದು ವಿಜಯನಗರ ಪೂರ್ವದ ವೀರಭದ್ರಶಿಲ್ಪವೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ದೇವಾಲಯದ ಗರ್ಭಗೃಹದಲ್ಲಿ ೨ ವೀರಭದ್ರ ಶಿಲ್ಪಗಳಿವೆ. ಈ ಎರಡೂ ಶಿಲ್ಪಗಳು ಸು.೫ ಅಡಿ ಎತ್ತರವಿದ್ದು ಪುಷ್ಟವಾಗಿವೆ. ಮೂಲ ವೀರಭದ್ರನನ್ನು ಪಶ್ಚಿಮಾಭಿಮುಖವಾಗಿ ಪೂಜೆಗೊಳ್ಳುತ್ತಿರುವ ವೀರಭದ್ರನನ್ನು ಉತ್ತರಾಭಿಮುಖವಾಗಿ ನಿಲ್ಲಿಸಲಾಗಿದೆ. ಮೂಲ ವೀರಭದ್ರ ತ್ರಿಭಂಗದಲ್ಲಿ ನಿಂತಿದ್ದು ನಾಲ್ಕು ಕೈಗಳನ್ನು ಹೊಂದಿದೆ. ಬಲಗೈಯಲ್ಲಿ ಬಾಣ ಖಡ್ಗ, ಎಡಗೈಯಲ್ಲಿ ಬಾಣ-ಗುರಾಣಿಗಳಿವೆ. ತ್ರಿನೇತ್ರ ಹೊಂದಿದ್ದು, ತಲೆಯ ಮೇಲಿನ ಕಿರೀಟದಲ್ಲಿ ಶಿವಲಿಂಗವಿದೆ. ಕಂಠ, ಕರ್ಣಾಭರಣಗಳ ಜೊತೆಗೆ ರುಂಡಮಾಲೆಯನ್ನು ಧರಿಸಲಾಗಿದೆ. ಮುಂಗಾಲು ಮುಂಗೈಗಳಲ್ಲಿ ಜೋಡಿ ಕಡಗಳಿವೆ. ರೌದ್ರಾಕಾರ ಮುಖ ಹೊಂದಿದ ವೀರಭದ್ರನ ಬಲಭಾಗದಲ್ಲಿ ದಕ್ಷಬ್ರಹ್ಮನ ಶಿಲ್ಪವಿದ್ದು, ಅಂಜಲಿ ಮುದ್ರೆಯಲ್ಲಿದೆ.

ಈಗ ಪೂಜೆಗೊಳ್ಳುತ್ತಿರುವ ವೀರಭದ್ರ ಷಡಾಶ್ರಪೀಠದ ಮೇಲೆ ತ್ರಿಭಂಗದಲ್ಲಿ ನಿಂತಿದೆ. ಶಿಲ್ಪದ ಮೇಲೆ ಪ್ರಭಾವಳಿ ಇದೆ. ಪ್ರಭಾವಳಿಯು ಎರಡು ಸ್ತಂಭಗಳ ಮೇಲೆ ಸ್ಥಾಪಿತವಾಗಿವೆ. ವೀರಭದ್ರನ ಬಲಭಾಗದಲ್ಲಿ ಕೈಮುಗಿದು ಕುಳಿತಿರುವ ದಕ್ಷನ ಶಿಲ್ಪವಿದೆ. ನವರಂಗ ಮತ್ತು ಮೊದಲನೇ ದ್ವಾರದ ಬಳಿ ವೀರಭದ್ರನ ಎದುರಿಗೆ ಮಲಗಿರುವ ನಂದಿ ಶಿಲ್ಪವಿದೆ. ಉಳಿದಂತೆ ಮೂಲ ವೀರಭದ್ರ ಶಿಲ್ಪದ ಲಕ್ಷಣ ಹೊಂದಿದೆ.

ದಕ್ಷಿಣಾಭಿಮುಖವಾಗಿ ಮತಂಗಪರ್ವತವನ್ನು ಇಳಿಯುವಾಗ ಮಾರ್ಗಮಧ್ಯೆ ಬಲಗಡೆಯ ಮೆಟ್ಟಿಲುಗಳ ಪಕ್ಕದ ಪ್ರಾಕೃತಿಕ ಗುಹೆಯಲ್ಲಿ ವೀರಭದ್ರನನ್ನು ಹೋಲುವ ಶಿಲ್ಪವಿದೆ. ಇದನ್ನು ಟಿ.ಎಂ.ಮಂಜುನಾಥಯ್ಯನವರು ವೀರಭದ್ರಶಿಲ್ಪವೆಂದು ಕರೆದಿದ್ದಾರೆ. ಆದರೆ ಇದು ವೀರಭದ್ರನ ಲಕ್ಷಣವನ್ನು ಹೊಂದಿಲ್ಲ.

ಸಂಪೂರ್ಣವಾಗಿ ದಕ್ಷಿಣಾಭಿಮುಖವಾಗಿ ಮತಂಗಪರ್ವತ ಇಳಿದರೆ ಅಥವಾ ದಕ್ಷಿಣ ದಿಕ್ಕಿನಿಂದ ಮತಂಗಪರ್ವತ ಏರುವ ಪ್ರಾರಂಭದಲ್ಲೇ ಪ್ರಾಕೃತಿಕ ಹೆಬ್ಬಂಡೆಯ ಪಾರ್ಶ್ವದಲ್ಲಿ ವೀರಭದ್ರ, ದಕ್ಷಬ್ರಹ್ಮ, ಶಿವಲಿಂಗ, ನಂದಿ ಹಾಗೂ ವಿನಾಯಕನ ಶಿಲ್ಪಪಟ್ಟಿಕೆ ಇದೆ. ಇದರ ಕೆಳಗೆ ಶಾಸನೋಕ್ತ ವೀರಾಯಮ್ಮನೆಂಬ ಭಕ್ತೆಯ ಶಿಲ್ಪವಿದೆ. ಈಕೆಯೇ ಈ ದೇವತಾ ಶಿಲ್ಪಗಳನ್ನು ನಿರ್ಮಿಸಿ ಇದಕ್ಕೆ ಮಂಟಪ ಕಟ್ಟಿಸಿರುವ ಸಾಧ್ಯತೆ ಇದೆ. ಬಹುಶಃ ಮತಂಗ ಪರ್ವತ ಮೇಲಿರುವ ಶಿಲ್ಪಗಳನ್ನೇ ಇಲ್ಲಿ ಕೆತ್ತಿಸಿ ಪರ್ವತವನ್ನು ಏರಲಾಗದವರಿಗೆ ಈ ದೇವರ ದರ್ಶನ ಪಡೆಯಲು ಅನುಕೂಲವಾಗುವ ಉದ್ದೇಶದಿಂದ ಈ ಮಂಟಪದಲ್ಲಿ ಶಿಲ್ಪಗಳನ್ನು

ಕೆತ್ತಿಸಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಇಲ್ಲಿರುವ ವೀರಭದ್ರನಿಗೆ ಎಡ ಭಾಗದಲ್ಲಿ ದಕ್ಷನಿರುವುದು ಈ ಶಿಲ್ಪದ ವೈಶಿಷ್ಟ್ಯವಾಗಿದೆ. ಉಳಿದಂತೆ ಮತಂಗ ವೀರಭದ್ರನ ಎಲ್ಲಾ ಸ್ವರೂಪ ಹೊಂದಿದೆ.

ಕಮಲಮಹಲ್ ನಿಂದ ಮತಂಗ ಪರ್ವತಕ್ಕೆ ಹೋಗುವ ದಾರಿಯಲ್ಲಿ ಕಾಲುವೆಯ ಬಂಡೆಯ ಮೇಲೆ 'ಶ್ರೀ ವಿರೂಪಾಕ್ಷ' ಎಂಬ ಶಾಸನವಿದೆ. ಇಲ್ಲಿ ಶಿವಲಿಂಗ ವೀರಭದ್ರ ಶಿಲ್ಪಗಳಿವೆ. ವೀರಭದ್ರ ತ್ರಿಭಂಗದಲ್ಲಿದ್ದು ದ್ವಿಭುಜಗಳಿವೆ. ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ತ್ರಿಶೂಲ, ಮುಂಗೈಯಲ್ಲಿ ನೇತಾಡುವ ಕಪಾಲವಿದೆ. ವಿಶಾಲವಾದ ಮುಖವಿದ್ದು ತ್ರಿನೇತ್ರವಿದೆ. ಉದ್ದನೆಯ ಕಿವಿಗಳಿದ್ದು ಕರ್ಣಾಭರಣ ಹೊಂದಿದೆ. ಕೊರಳು, ಭುಜ, ಕೈತೋಳು ಹಾಗೂ ಮುಂಗೈಗಳಲ್ಲಿ ರುದ್ರಾಕ್ಷಿ ಮಾಲೆಗಳನ್ನು ಧರಿಸಿದೆ. ಹೃದಯಬಂಧ ಕಟೀಹಾರಗಳಿವೆ. ಕಟೀಹಾರದಲ್ಲಿ ಕಠಾರಿಯೊಂದನ್ನು ಸಿಕ್ಕಿಸಲಾಗಿದೆ. ಪಂಚೆ ಉಟ್ಟಿದ್ದು ವೀರಗಚ್ಚೆ ಹಾಕಲಾಗಿದೆ. ಮುಂಗಾಲುಗಳಲ್ಲಿ ಜೋಡಿ ಕಡಗಗಳಿವೆ."[೩೭೪]

ಮಂಡಿಯೂರಿ ಕುಳಿತಿರುವ ವೀರಭದ್ರನ ಶಿಲ್ಪ ಮತಂಗ ಪರ್ವತದ ಪೂರ್ವಕ್ಕೆ ಪೂರ್ವಾಭಿಮುಖವಾದ ಒಂದು ಮಂಟಪದಲ್ಲಿ ಇರುವುದು. ಈ ಶಿಲ್ಪವು ವೀರಾಸನದ ಭಂಗಿಯಲ್ಲಿದ್ದು ಎಡಗಾಲ ಮೊಣಕಾಲೂರಿ, ಬಲಪಾದವನ್ನು ನೆಲದ ಮೇಲಿಟ್ಟು ತನ್ನ ಎರಡೂ ಕೈಗಳಲ್ಲಿ ಬಿಲ್ಲು ಬಾಣವಿಡಿದು, ಬಾಣಬಿಡುವ ಮಾದರಿಯಲ್ಲಿ ಕೆತ್ತಲಾಗಿದೆ. ಸೊಂಟಕ್ಕೆ ಪಟ್ಟಿ, ಕಂಠಹಾರ ಹಾಗೂ ಉಳಿದ ಆಭರಣಗಳನ್ನು ಸ್ಪಷ್ಟವಾಗಿ ಕಾಣುವ ಹಾಗೆ ಕೆತ್ತಲಾಗಿದೆ.[೩೭೫]ತಲೆಯಲ್ಲಿ ಕಿರೀಟವಿದ್ದು ಅದರಲ್ಲಿ ಶಿವಲಿಂಗವಿದೆ.

**ಕಮಲಮಹಲ್ ಉತ್ತರಕ್ಕೆ ಬೆಟ್ಟದ ಮೇಲಿರುವ ವೀರಭದ್ರ**

ಕಮಲಮಹಲ್ ಉತ್ತರಕ್ಕೆ ಇರುವ ಬೆಟ್ಟದ ಮೇಲೆ ಎರಡು ವೀರಭದ್ರ ಶಿಲ್ಪಗಳಿವೆ. ಎರಡೂ ವಿಭಿನ್ನವಾಗಿವೆ. ಸಣ್ಣ ಮಂಟಪದ ಒಳಗೆ ಇರುವ ವೀರಭದ್ರ ಸು.೫ ಅಡಿ ಎತ್ತರವಿದ್ದು ಮಂಡಿ ಮಡಿಚಿ ವೀರಾಸನದಲ್ಲಿದ್ದಾನೆ. ಕಾಲಲ್ಲಿ ಹಾವುಗೆ ಇವೆ. ಮಂಡಿಯ ತನಕ ರುಂಡಮಾಲೆ ಜೋತುಬಿದ್ದಿವೆ. ನಾಲ್ಕು ಕೈಗಳಿದ್ದು ಬಲಗೈಯಲ್ಲಿ ಖಡ್ಗ-ಬಾಣ ಹಿಡಿದಂತೆ ಎಡಗೈಯಲ್ಲಿ ಬಿಲ್ಲು ಗುರಾಣಿ ಹಿಡಿದಿದ್ದಾನೆ. ಈ ಗುರಾಣಿಯನ್ನು ನೆಲಕ್ಕೆ ಊರಲಾಗಿದೆ. ಹಿಂಬದಿಯ ಕೈಗಳು ಮೇಲಕ್ಕೆತ್ತಿದ್ದು. ಬಿಲ್ಲಿಗೆ ಬಾಣ ಹೂಡುವ ಸಿದ್ಧತೆಯಲ್ಲಿದ್ದಂತೆ ತೋರುತ್ತದೆ. ಕೋರೆ ಮೀಸೆ ಕೋರೆ ಹಲ್ಲುಗಳಿವೆ. ತ್ರಿನೇತ್ರ ತಲೆಯ ಮೇಲೆ ಉದ್ದನೆಯ ಕಿರೀಟವಿದ್ದು ಮಧ್ಯದಲ್ಲಿ ಶಿವಲಿಂಗವಿದೆ. ಸೊಂಟಪಟ್ಟಿಯಿದ್ದು ಅದರಲ್ಲಿ ಬಲ ತೊಡೆಯ ಹತ್ತಿರ ಚಿಕ್ಕಬಾಕು ಇದೆ. ಕೊರಳಲ್ಲಿ ರುದ್ರಾಕ್ಷಿಸರ ಶಿವಲಿಂಗ ಧರಿಸಿದೆ. ಅಲ್ಲದೆ ಜನಿವಾರದಂತಹ ಹಾರ ಹಾಕಿಕೊಂಡಂತೆ ತೋರುತ್ತದೆ. ಬಲ ಕೈ ಮುಗಿದು ನಿಂತಿರುವ ದಕ್ಷ ಟಗರಿನ ತಲೆ ಹೊಂದಿದ್ದಾನೆ.

ಅಲ್ಲೇ ಸ್ವಲ್ಪ ಕೆಳಗೆ ಇರುವ ಬಂಡೆಯ ಪಾರ್ಶ್ವದಲ್ಲಿ ಇನ್ನೊಂದು ವೀರಭದ್ರ ಶಿಲ್ಪವಿದೆ. ಇದು ಸಹ ೫ ಅಡಿ ಎತ್ತರವಿದೆ. ನಾಲ್ಕು ಕೈಗಳನ್ನು ಹೊಂದಿದ್ದು ಖಡ್ಗ ಬಾಣ ಬಿಲ್ಲು ಗುರಾಣಿ ಹಿಡಿದಿದೆ. ಕಾಲು, ಮುಂಗೈ ಮತ್ತು ತೋಳುಗಳಲ್ಲಿ ಬಳೆ ಹಾಕಿಕೊಂಡಿದೆ. ಭುಜಗಳಲ್ಲಿ ಆಭರಣ ಧರಿಸಿದೆ. ತ್ರಿನೇತ್ರ, ಕೋರೆಮೀಸೆ, ಕೋರೆಹಲ್ಲುಗಳು, ಕೊರಳಲ್ಲಿ ರುದ್ರಾಕ್ಷಿ ಹಾರ ಹಾಕಿದೆ. ತಲೆಯ ಮೇಲೆ ಕಳಸದಂತಹ ಕಿರೀಟವಿದ್ದು ಮಧ್ಯದಲ್ಲಿ ಶಿವಲಿಂಗವಿದೆ. ಈ ಕಿರೀಟಕ್ಕೆ ಹಿಂಬದಿಯಲ್ಲಿ (ಕಿವಿಗಳ ಹಿಂದೆ) ಚಕ್ರವಿದೆ. ಮೊಣಕಾಲಿನ ತನಕ ರುಂಡಮಾಲೆ ಇದೆ. ಬಾಗಿದ ಸೊಂಟದಲ್ಲಿ ಪಟ್ಟಿಯಿದ್ದು ಅದರಲ್ಲಿ ಚಿಕ್ಕ ಬಾಕು ಇದೆ. ಬಲಪಾದದ ಬಳಿ ಸೊಂಟದ ತನಕ ಕೈಮುಗಿದು ನಿಂತಿರುವ ಆಡಿನ (ಹೋತದ) ತಲೆಯ ದಕ್ಷನಿದ್ದಾನೆ. ತಲೆಯ ಕೋಡುಗಳು ಚೂಪಾಗಿ ಮೇಲಕ್ಕೆ ಸೆಟೆದು ನಿಂತಿವೆ.

ರಾಜಮಾನ್ಯರ ವಸತಿಗೃಹಗಳ ಉತ್ತರಕ್ಕೆ ಒಂದು ಸಣ್ಣ ಬಂಡೆಯ ದಕ್ಷಿಣ ಪಾರ್ಶ್ವದಲ್ಲಿ ಸು.೪ ಅಡಿ ಎತ್ತರದ ವೀರಭದ್ರ ಶಿಲ್ಪ ಕೆತ್ತಲಾಗಿದ್ದು, ಇದಕ್ಕೆ ಸು.೨೫ ಕಂಬಗಳ ಮಂಟಪ ನಿರ್ಮಿಸಲಾಗಿದೆ. (ಈಗ ಇದನ್ನು ಜೀರ್ಣೋದ್ಧಾರ ಮಾಡಲಾಗಿದೆ) ಈ ಮಂಟಪದ ಎದುರಿಗೆ ಎರಡು ನಂದಿಶಿಲ್ಪಗಳನ್ನು ನಿಲ್ಲಿಸಲಾಗಿದೆ. ಮಂಟಪದ ಎಡಪಕ್ಕದಲ್ಲಿ ಚಿಕ್ಕಬಾವಿ ಇದೆ. ಈ ವೀರಭದ್ರ, ವೀರಭದ್ರನ ಸಾಮಾನ್ಯ ಲಕ್ಷಣ ಹೊಂದಿದ್ದಾನೆ.

### ಕೃಷ್ಣಾಪುರ ಪೇಟೆ ಪರಿಸರದ ವೀರಭದ್ರ ಶಿಲ್ಪಗಳು

ಉದ್ದಾನ ವೀರಭದ್ರ, ಕೃಷ್ಣದೇವಾಲಯ ಕಂಬದ ವೀರಭದ್ರ ಶಿಲ್ಪ ಮತ್ತು ಸಾಸಿವೆ ಕಾಳು ಗಣಪತಿ ಎದುರು ಬೆಟ್ಟದ ಅಂದರೆ ಕೃಷ್ಣದೇವಾಲಯದಿಂದ ವಿರೂಪಾಕ್ಷ ದೇವಾಲಯಕ್ಕೆ ಹೋಗುವ ಹಳೆ ದಾರಿಯ ಎಡಭಾಗದ ಹೆಬ್ಬಂಡೆಯ ಪೂರ್ವ ಪಾರ್ಶ್ವದ ಶಿವಲಿಂಗ ಪಟ್ಟಿಕೆಯಲ್ಲಿಯ ವೀರಭದ್ರ. ಈ ವೀರಭದ್ರ ಶಿಲ್ಪ ಒಂದೇ ತೆರನಾಗಿಲ್ಲ.

ಉದ್ದಾನ ವೀರಭದ್ರ : ಸು.೧೬ ಅಡಿ ಎತ್ತರವಿದ್ದು ಕಪ್ಪು ಕಲ್ಲಿನಿಂದ ನಿರ್ಮಾಣವಾಗಿದೆ. ಕ್ರಿ.ಶ.೧೫೪೫ರ ಸದಾಶಿವರಾಯನ ಕಾಲದಲ್ಲಿ ದಳವಾಯಿ ಜಂಗಮಯ್ಯ ಈ ದೇವಾಲಯ ಕಟ್ಟಿಸಿ ವೀರಭದ್ರಶಿಲ್ಪವನ್ನು ಪ್ರತಿಷ್ಠಾಪಿಸಿದಂತೆ ಶಾಸನದಿಂದ ತಿಳಿದುಬರುತ್ತದೆ. ಶಾಸನದಲ್ಲಿ ಇದನ್ನು "ಹಿರಿಯ ಕಾಲುವೆಯ ಛತ್ರದ ಬಳಿಯಲ್ಲೂ ಕಟಿಸ್ತಂಥಾ ಮುದುವೀರಂಣನ ಪ್ರತಿಷ್ಠೆಯನ್ನೂ ಮಾಡಿ"[೨೨] ಎಂದು ದಾಖಲಿಸಿದೆ. ಹಿರಿಯ ಕಾಲುವೆಯ ಛತ್ರದ ಬಳಿ ಮುದುವೀರಣ್ಣನನ್ನು ಪ್ರತಿಷ್ಠಾಪಿಸಿದಂತೆ, ಈ ವೀರಭದ್ರ ದೇವರ ನೈವೇದ್ಯಕ್ಕೆ ಹಬ್ಬಗಳಿಗೆ ಪರಿಕರಗಳನ್ನು ದಾನಬಿಟ್ಟಂತೆ ತಿಳಿಸುತ್ತದೆ. ಮುದುವೀರಣ ಉದ್ದವಿದ್ದ ಕಾರಣ ಜನವಾಡಿಕೆಯಲ್ಲಿ ಉದ್ದಾನ ವೀರಭದ್ರ ಆಗಿದ್ದಂತೆ ತೋರುತ್ತದೆ.

ಏಕಶಿಲಾ ಉಬ್ಬುಶಿಲ್ಪವಾಗಿ ಕಡೆಯಲ್ಪಟ್ಟಿದ್ದಾನೆ. ಗುಂಗುರು ಕಿರೀಟ ಮುಕುಟನಾದ ಇವನ ಹಿಂಬದಿ ದೀರ್ಘವೃತ್ತ ಜಟಾಮಂಡಲ(ಯಕ್ಷಗಾನದ ಮಾದರಿ)ದಂತಿದೆ. ಪ್ರತಿಮಾ ಕೋಶದ ಚಿತ್ರಗಳಲ್ಲೂ

ಶಿರದ ಲಕ್ಷಣ ಈ ಬಗೆಯದಿರುವ ಒಂದು ಶಿಲ್ಪ ಚಿತ್ರ ಕಾಣಬರುತ್ತದೆ. ಉದ್ಧಾನವೀರಭದ್ರನ ಕಿರೀಟದಲ್ಲಿ ಶಿವಲಿಂಗ ಲಾಂಛನ, ಹಣೆಯಲ್ಲಿ ಮೂರನೇ ಕಣ್ಣು, ತುಟಿಯ ಮೇಲೆ ಗಿರಿಜಾ ಮೀಸೆಯಂತಹ ಸುರುಳಿ ಮೀಸೆ, ಕೋರೆಹಲ್ಲು, ಎದ್ದು ಕಾಣುತ್ತದೆ.''[೩.೨೭] ನಾಲ್ಕು ಕೈಗಳನ್ನು ಹೊಂದಿದ್ದು ಬಲಗೈಗಳಲ್ಲಿ ಭುಜಕ್ಕೆ ಆನಿಸಿದ ನೀಳ ಓರೆಚಪ್ಪೆಗತ್ತಿ ಮತ್ತು ಇನ್ನೊಂದು ಕೈಯಲ್ಲಿ ಉದ್ದನೆಯ ಬಾಣ ಎಡಗೈಗಳಲ್ಲಿ, ನೀಳ ಪಾರ್ಶ್ವಮುಖಿ ಗುರಾಣಿಯ ಮೇಲೆ ಊರಿರುವ ಪೂರ್ವಹಸ್ತ, ಇನ್ನೊಂದು ಕೈಯಲ್ಲಿ ಬಿಲ್ಲು ಹಿಡಿದಿದ್ದಾನೆ. ಬಲ ಮೊಳಕಾಲ ಬಳಿ ಸು.೨ ಅಡಿ ಎತ್ತರದ ಟಗರು ತಲೆಯ ದಕ್ಷನ ವಿನೀತ ಭಂಗಿ, ಸ್ವಲ್ಪ ಸೊಂಟ ಬಾಗಿದರೂ ಪಾದಗಳು ಸಮವಾಗಿವೆ. ಇವೆಲ್ಲ ವೀರಭದ್ರನ ವೀರಗಂಭೀರ ಭಾವವನ್ನು ಶಿಲ್ಪದಲ್ಲಿ ತಂದುಕೊಟ್ಟಿದೆ ಎಂದು ಹೇಳಬಹುದಾಗಿದೆ. ಇದಲ್ಲದೆ ಪ್ರವೇಶದ್ವಾರದ ಮಂಟಪದಲ್ಲಿ ಎರಡು ಮಲಗಿರುವ ನಂದಿಶಿಲ್ಪಗಳು ಮತ್ತು ಗರ್ಭಗೃಹ ಪ್ರವೇಶದ್ವಾರದ ಬಳಿ ಮಲಗಿರುವ ನಂದಿಶಿಲ್ಪ ವೀರಭದ್ರನಿಗೆ ಅಭಿಮುಖವಾಗಿದೆ. ಪ್ರವೇಶದ್ವಾರ ದಾಟಿದ ತಕ್ಷಣ ಬಲಭಾಗದಲ್ಲಿ ಕಟ್ಟೆಯ ಮೇಲೆ ಬನ್ನಿಮರವಿದೆ. ಅದರ ಪಕ್ಕ ಪವಳಿಗೋಡೆ ಇದೆ. ಇದಕ್ಕೆ ಆನಿಸಿ ಪೂರ್ವಾಭಿಮುಖವಾಗಿ ೧ ೧/೨ ಅಡಿ ಕಪ್ಪುಶಿಲೆಯ ವೀರಭದ್ರನ ಶಿಲ್ಪವನ್ನು ಇಡಲಾಗಿದೆ. ಈ ದೇವಾಲಯ ಎದುರಿನ ದೀಪಸ್ತಂಭದ ಬಳಿ ಲಿಂಗಧಾರಿ ಆಂಜನೇಯನ ಶಿಲ್ಪವಿದೆ.

ಕೃಷ್ಣದೇವಾಲಯದ ಮುಖಮಂಟಪದ ಎಡಬದಿಯ ೨ನೇ ಸ್ತಂಭದ ಬ್ರಹ್ಮಕಾಂತ ರಚನೆಯ ಪಿಂಡಿಭಾಗದಲ್ಲಿ (ಬುಡಮುಖ) ವಿಜಯನಗರ ಕಾಲದ ಸಾಮಾನ್ಯ ಶೈಲಿಯ ಸುಂದರ ಚತುರ್ಭುಜ ಸ್ಥಾನಕ ದ್ವಿಭಂಗಿ ವೀರಭದ್ರ ವಿಗ್ರಹವಿದೆ. ನಾಲ್ಕು ಕೈಗಳಿದ್ದು ಹಿಂಗೈಗಳಲ್ಲಿ ಬಾಣಬಿಲ್ಲು ಎತ್ತಿದ ಮುಂಗೈ ಬೆರಳಲ್ಲಿ ಹಿಡಿದ ಕಲಾತ್ಮಕ ಬಳುಕಿನ ಕಿರುಗತ್ತಿ, ಎಡಮುಂಗೈಯನ್ನು ಅಗಲಿಸಿ ಪೂರ್ಣವಾಗಿ ಮಧ್ಯತಗ್ಗಿನ ಬಿಲ್ಲಿನಂತಿರುವ ಎಡಮುಖಿ ಗುರಾಣಿಯ ಮೇಲೆ ಇಟ್ಟಿರುವ ಭಂಗಿ ಚೆಂದವೆನಿಸುತ್ತದೆ. ಗುರಾಣಿಯ ಕೆಳತುದಿ ಎಡಪಾದದ ಕಿರುಬೆರಳನ್ನು ತಾಗಿದೆ. ರುಂಡಮಾಲೆ ಎಡಭುಜದಿಂದ ಸಾಗಿಬಂದು ಬಲಮಂಡಿಯಲ್ಲಿ ಮುಕ್ತಾಯವಾಗುವಲ್ಲಿ, ಮಂಡಿಗಳ ನಡುವಣ ಮೂರು ರುಂಡ ಶಿಲ್ಪಗಳು ಮಾತ್ರ ಎದ್ದು ಕಾಣುತ್ತವೆ. ಜನಿವಾರದಂತಹ ರಚನೆಯೂ ಕಾಣುತ್ತದೆ. ಕಿರೀಟ ಮಕುಟವಿದ್ದು, ಮಕುಟದಲ್ಲಿ ಶಿವಲಿಂಗ ಲಾಂಛನವಿದೆ. ನೀಳಕರ್ಣಕುಂಡಲ ವೃತ್ತವು ಕತ್ತಿನವರೆಗೂ ಇಳಿಬಿದ್ದಿವೆ. ಹಾವುಗೆ ಪಾದಗಳಲಿಲ್ಲ. ಎಡ ಹಿಂಗೈಯಲ್ಲಿ ಹಿಡಿದಿರುವ ಬಿಲ್ಲಿನ ಶೈಲಿ ವಿಜಯನಗರ ಕಾಲದಲ್ಲಿನ ಒಂದು ಮಾದರಿಯಾಗಿದೆ.[೩.೨೮] ಈ ಶಿಲ್ಪವು ಧರ್ಮಸಮನ್ವಯದ ಪ್ರತೀಕವಾಗಿದೆ.

ಕೃಷ್ಣದೇವಾಲಯದಿಂದ ವಿರೂಪಾಕ್ಷ ದೇವಾಲಯಕ್ಕೆ ಹೋಗುವ ಹಳೆದಾರಿಯ ಎಡಗಡೆ ಮೊದಲ ಹೆಬ್ಬಂಡೆಯ ಮೇಲೆ ಸಾಲುಕೋಷ್ಠಗಳಲ್ಲಿ ಭದ್ರಕಾಳೀ, ಲಿಂಗ, ನಂದಿ, ಸ್ಥಾನಕ ಪ್ರಣಾಮಭಂಗಿ, ಭಕ್ತ, ದಕ್ಷಸಹಿತ ವೀರಭದ್ರ ಶಿಲ್ಪಗಳನ್ನು ಕೆತ್ತಲಾಗಿದೆ. ಈ ವೀರಭದ್ರ ಸಾಮಾನ್ಯ ಲಕ್ಷಣ ಹೊಂದಿದ್ದು

ಬಲಭಾಗದಲ್ಲಿರುವ ದಕ್ಷ ವೀರಭದ್ರನ ಕಡೆ ತಿರುಗಿ ಕೈಮುಗಿಯುತ್ತಾ ನಿಂತಿದ್ದಾನೆ. ಈ ವೀರಭದ್ರ ಶಿಲ್ಪಕ್ಕೆ ಚಿಕ್ಕ ಮಂಟಪ ನಿರ್ಮಿಸಲಾಗಿದೆ. ಹಾಗೆಯೇ ಜೈನರತ್ನಕೂಟ ಮಠದ ಮರದ ಬೀಳಲುಗಳ ನಡುವೆ ಒಂದೇ ರುಂಡವನ್ನೊಳಗೊಂಡ ರುಂಡಮಾಲೆ ಹಾಕಿಕೊಂಡ ವೀರಭದ್ರ ಶಿಲ್ಪ ಕೆತ್ತಲಾಗಿದೆ.

**ವಿರೂಪಾಕ್ಷ ದೇವಾಲಯ ಪರಿಸರದ ವೀರಭದ್ರ ಶಿಲ್ಪಗಳು**

ವಿರೂಪಾಕ್ಷ ದೇವಾಲಯ ಪರಿಸರದಲ್ಲಿ ಕನಿಷ್ಠ ೬-೮ ವೀರಭದ್ರ ಶಿಲ್ಪಗಳು ಕಾಣಸಿಗುತ್ತವೆ. ವಿರೂಪಾಕ್ಷ ದೇವಾಲಯದ ಪ್ರವೇಶ ಮಹಾದ್ವಾರ ಬಂಧದ ಎಡಕಟ್ಟೆಯ ಮೇಲೆ ನಿಲ್ಲಿಸಲಾದ ವೀರಭದ್ರ ಬಿಳಿಕಲ್ಲಿನಲ್ಲಿ ಕೆತ್ತಲ್ಪಟ್ಟಿದ್ದು ೫ ಅಡಿ ಎತ್ತರವಿದೆ. ನಾಲ್ಕು ಕೈಗಳಿದ್ದು ಖಡ್ಗ, ಬಿಲ್ಲು ಬಾಣ, ಗುರಾಣಿ ಹಿಡಿದೆ. ತ್ರಿನೇತ್ರ, ಕೋರೆಹಲ್ಲು, ಕೋರೆಮೀಸೆ, ಕರ್ಣಾಭರಣ ಹೊಂದಿದ್ದು ವೀರಭಾವ ಹೊಂದಿದೆ. ತಲೆಯ ಮೇಲೆ ಕಿರೀಟವಿದ್ದು, ಅದರಲ್ಲಿ ಶಿವಲಿಂಗವಿದೆ. ಕೈ-ಕಾಲುಗಳಲ್ಲಿ ರುದ್ರಾಕ್ಷಿ ಆಭರಣ ಧರಿಸಿದೆ. ಕೊರಳಲ್ಲಿಯೂ ಸಹ ರುದ್ರಾಕ್ಷಿ ಸರ ಹಾಕಿದೆ. ಬಲಗಡೆ ಇರುವ ಟಗರಿನ ತಲೆ ದಕ್ಷ ತಲೆ ಎತ್ತಿ ಮೇಲ್ಮುಖ ಮಾಡಿದ್ದಾನ. ಸ್ವಲ್ಪ ಸೊಂಟ ಬಾಗಿದರೂ ಪಾದಗಳು ಸಮಭಂಗಿಯಲ್ಲಿವೆ.

ವಿರೂಪಾಕ್ಷ ದೇವಾಲಯ ೨ನೇ ದ್ವಾರ ಬಾಗಿಲ ಬಳಿ ಎಡಭಾಗದಲ್ಲಿ ೨ ಅಡಿ ಎತ್ತರದ ಕಪ್ಪು ಕಲ್ಲಿನ ವೀರಭದ್ರ ಶಿಲ್ಪ ನಿಲ್ಲಿಸಲಾಗಿದೆ. ಇದಕ್ಕೆ ೪ ಕೈಗಳಿದ್ದು ವೀರಭದ್ರನ ಸಾಮಾನ್ಯ ಶೈಲಿಯ ಲಕ್ಷಣ ಹೊಂದಿದ್ದಾನೆ. ಇದು ಪಾಣಿಪೀಠದ ಮೇಲೆ ನಿಂತಿದೆ. ಈ ದೇವಾಲಯದ ೧ ಮತ್ತು ೨ನೇ ಪ್ರವೇಶದ್ವಾರದ ನಡುವೆ ಬಲ ಮೂಲೆಗೆ ಹತ್ತಿಕೊಂಡಿರುವ ನೃತ್ಯ ಮಂಟಪದ ಕಂಬದ ಮೇಲೆ ಸು.೧ ೧/೨ ಅಡಿ ಎತ್ತರದ ಪಂಚೆ ಉಟ್ಟ ಸಾಮಾನ್ಯ ಲಕ್ಷಣ ಹೊಂದಿದ ವೀರಭದ್ರನ ಶಿಲ್ಪವಿದೆ. ಹಾಗೆಯೇ ವಿರೂಪಾಕ್ಷ ದೇವಾಲಯದ ಉತ್ತರಾಭಿಮುಖ ದ್ವಾರಬಾಗಿಲ ಎದುರಿಗಿರುವ ಕಟ್ಟೆಯ ನವಗ್ರಹ ಮಂಟಪದ ಬಳಿ ಗೋಡೆಯಲ್ಲಿರುವ ೧ ಅಡಿ ಎತ್ತರದ ಚಿಕ್ಕ ಕಪ್ಪುಕಲ್ಲಿನ ವೀರಭದ್ರನ ಶಿಲ್ಪವಿದೆ. ಇದು ಹಂಪಿಯಲ್ಲಿರುವ ವೀರಭದ್ರ ಶಿಲ್ಪಗಳಲ್ಲಿಯೇ ಅತ್ಯಂತ ಹಳೆಯದೆಂದು ತೋರುತ್ತದೆ. ನಾಲ್ಕು ಕೈಗಳಿವೆ. ಬಲಗೈಯಲ್ಲಿ ಉದ್ದವಾದ ನೇರವಾದ ಖಡ್ಗ, ಡಮರು, ಎಡಗೈಯಲ್ಲಿ ಗುರಾಣಿ ಬಾಣ ಹಿಡಿದಿದೆ ಕಿರೀಟ ಹೊಂದಿದ್ದರೂ ಅದರಲ್ಲಿ ಶಿವಲಿಂಗ ಕಾಣುತ್ತಿಲ್ಲ.

ಇದೇ ದೇವಾಲಯದ ಮೊದಲನೇ ಮಹಾದ್ವಾರದ ದಕ್ಷಿಣಾಭಿಮುಖ ಗೋಪುರದ ನಗ್ನ ಸ್ತ್ರೀ ಶಿಲ್ಪದ ಬಲಭಾಗದ ಪಟ್ಟಿಕೆಯಲ್ಲಿ ಸು.೨ ಅಡಿ ಎತ್ತರದ ಸಾಮಾನ್ಯ ಲಕ್ಷಣ ಹೊಂದಿದ ದಕ್ಷನಿಲ್ಲದ ವೀರಭದ್ರಶಿಲ್ಪವಿದೆ. ಇದು ಕೈ-ಕಾಲುಗಳಲ್ಲಿ ರುದ್ರಾಕ್ಷಿ ಸರ ಹಾಕಿಕೊಂಡಿದೆ. ಎದೆಯ ಮೇಲೆ ಫಲಕದ ಹಾರ ಹಾಕಿಕೊಂಡಿದೆ. ಎಲ್ಲಾ ಅಂತಸ್ತುಗಳಲ್ಲಿಯೂ ಒಂದೇ ಸಮಾನವಾದ ಪಟ್ಟಿಕೆಗಳಲ್ಲಿ ಈ ವೀರಭದ್ರ ಶಿಲ್ಪಗಳನ್ನು ನಿಲ್ಲಿಸಲಾಗಿದೆ. ಈ ಶಿಲ್ಪಗಳನ್ನು ಇಟ್ಟಿಗೆ ಗಾರೆಯಿಂದ ನಿರ್ಮಿಸಲಾಗಿದೆ. ಈ ದ್ವಾರಬಾಗಿಲಿನಿಂದ

ದಕ್ಷಿಣಾಭಿಮುಖವಾಗಿ ಹೇಮಕೂಟಕ್ಕೆ ಹೋಗುವಾಗ ಹೇಮಕೂಟದ ದ್ವಾರಬಾಗಿಲ ಉತ್ತರಾಭಿಮುಖ ಗೋಡೆಯಲ್ಲಿ ೨ ಅಡಿ ಎತ್ತರದ ವೀರಭದ್ರಶಿಲ್ಪ ಕೆತ್ತಲಾಗಿದೆ. ಇದನ್ನು ಪಾಣಿಪೀಠದ ಮೇಲೆ ನಿಲ್ಲಿಸಲಾಗಿದೆ. ದಕ್ಷನನ್ನು ಗೆರೆಯಿಂದ ಕೊರೆಯಲಾಗಿದೆ. ಇದು ಸಹ ಸಾಮಾನ್ಯ ಲಕ್ಷಣ ಹೊಂದಿದೆ.

ಈ ದೇವಾಲಯದ ಉತ್ತರಕ್ಕೆ ನದಿ ದಂಡೆಯ ಸ್ನಾನಘಟ್ಟದ ಮಂಟಪದ ಮುಂಭಾಗದ ಬಂಡೆಯ ಮೇಲೆ ಶಿವಲಿಂಗ, ನಂದಿ, ವಿನಾಯಕ, ಸರ್ಪ ಮತ್ತು ವೀರಭದ್ರ ಶಿಲ್ಪವನ್ನು ಕಂಡರಿಸಲಾಗಿದೆ. ಈ ವೀರಭದ್ರ ನಾಲ್ಕು ಕೈಹೊಂದಿದ್ದು ಸಾಮಾನ್ಯ ಲಕ್ಷಣ ಹೊಂದಿದೆ. ಮೀಸೆ ಇರುವುದಿಲ್ಲ. ಎದೆಯ ಮೇಲೆ ಲಿಂಗಕಟ್ಟಿದ ಹಾರಧರಿಸಿದೆ. ಈ ಶಿಲ್ಪದ ಮೇಲ್ಭಾಗದಲ್ಲಿ "ಶ್ರೀ ವೀರಬತ್ರಡ ಲಿಂಗಂ ಶ್ರೀ ವಿರೂಪಾಕ್ಷದೇವ" ಎಂದು, ಇದೇ ಬಂಡೆಯ ಮೇಲೆ ನಂದಿ, ಲಿಂಗದ ಕೆಳಭಾಗದಲ್ಲಿರುವ ಸ್ತ್ರೀ ಶಿಲ್ಪಗಳ ಎರಡೂ ಬದಿಯಲ್ಲಿ ಶ್ರೀ ವೀರಭದ್ರುಡಲಿಂಗಂ"[೩೯] ಎಂದು ವೀರಭದ್ರಲಿಂಗವನ್ನು ಶಾಸನಗಳು ದಾಖಲಿಸಿವೆ. ಮೀಸೆ ಇಲ್ಲದಿರುವುದು ಈ ಶಿಲ್ಪದ ವೈಶಿಷ್ಟ್ಯವಾಗಿದೆ. ಹಾಗೆಯೇ ಕೋದಂಡ ರಾಮದೇವಾಲಯದ ಕಂಬಗಳಲ್ಲಿ ೨ ವೀರಭದ್ರ ಶಿಲ್ಪಗಳಿವೆ. ಎರಡೂ ಪಾಣಿ ಪೀಠದ ಮೇಲೆ ಇದ್ದು ಒಂದು ದಕ್ಷನನ್ನು ಹೊಂದಿದ್ದರೆ ಇನ್ನೊಂದು ದಕ್ಷನನ್ನು ಹೊಂದಿಲ್ಲ. ಎರಡೂ ಸಾಮಾನ್ಯ ಲಕ್ಷಣ ಹೊಂದಿವೆ. ಬಹುಶಃ ಈ ದೇವಾಲಯ ಹಿಂದೆ ಶೈವ ಅಥವಾ ವೀರಭದ್ರ ದೇವಾಲಯವಾಗಿದ್ದಂತೆ ತೋರುತ್ತದೆ. ಇದಲ್ಲದೆ ಪ್ರಸನ್ನ ವಿರೂಪಾಕ್ಷ ದೇವಾಲಯದ ಬಲಪಕ್ಕದ ಮಂಟಪದ ಕಂಬಗಳಲ್ಲಿ ಸಾಮಾನ್ಯ ಲಕ್ಷಣ ಹೊಂದಿದ ವೀರಭದ್ರ ಶಿಲ್ಪಗಳಿವೆ.

ಹಂಪಿ, ಕಾಮಲಾಪುರ, ಕನ್ನಡ ವಿಶ್ವವಿದ್ಯಾಲಯ ಪ್ರಾಚ್ಯವಸ್ತು ಮತ್ತು ಪುರಾತತ್ವ ವಸ್ತು ಸಂಗ್ರಹಾಲಯಗಳಲ್ಲಿ ವಿಜಯನಗರ ಕಾಲದ ಅನೇಕ ವೀರಭದ್ರ ಶಿಲ್ಪಗಳಿವೆ. ಇವುಗಳ ಸ್ವರೂಪದ ಮೂಲಕ ಇದು ವಿಜಯನಗರ ಕಾಲದೆಂದು ಹೇಳಬಹುದು. ಇವುಗಳಲ್ಲಿ ಸಾಮಾನ್ಯ ಲಕ್ಷಣಗಳು ಕಂಡುಬರುತ್ತವೆ. ಕಪ್ಪು ಮತ್ತು ಬಿಳಿ ಕಲ್ಲಿನಲ್ಲಿ ಈ ಶಿಲ್ಪಗಳನ್ನು ಕೆತ್ತಲಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ವೀರಭದ್ರ ವಿಜಯನಗರ ಪೂರ್ವದಲ್ಲಿ ಧಾರ್ಮಿಕ ದೈವವಾಗಿ ವಿಜಯನಗರ ಕಾಲದಲ್ಲಿ ಧಾರ್ಮಿಕ ಮತ್ತು ಯುದ್ಧ ದೇವತೆಯಾಗಿ ಕಂಡುಬರುತ್ತಾನೆ. ನಯಗಾರಿಕೆ ಶಿಲ್ಪಗಳಿಗಿಂತ ಒರಟುಗಲ್ಲಿನ ಶಿಲ್ಪಗಳು ಹೆಚ್ಚಾಗಿ ಕಂಡುಬರುತ್ತವೆ. ವಿಜಯನಗರ ಪೂರ್ವದ ವೀರಭದ್ರ ಶಿಲ್ಪದ ಮೇಲೆ ವಚನಕಾರರ ವೀರಭದ್ರನ ಕುರಿತ ವಚನಗಳ ಪ್ರಭಾವವಿದ್ದಂತೆ ತೋರುತ್ತದೆ. ಹಿಂದೂ ಧರ್ಮ ರಕ್ಷಣೆಗಾಗಿಯೇ ಹುಟ್ಟಿದ ವಿಜಯನಗರ ಸಾಮ್ರಾಜ್ಯ ಜನರಲ್ಲಿ ಮತ್ತು ಸೈನಿಕರಲ್ಲಿ ವೀರ ವ್ಯಕ್ತಿತ್ವ, ಶೌರ್ಯ ಸಾಹಸ ತುಂಬಲು ವೀರಭದ್ರನ ಆರಾಧನೆ ಆರಂಭಗೊಂಡಂತೆ ಕಂಡುಬರುತ್ತದೆ. ಶೈವ ವೈಷ್ಣವರ ನಡುವೆ ಧರ್ಮಸಮನ್ವಯದ ದೇವತೆಯಾಗಿ ರೂಪಿಸಲು ವೈಷ್ಣವ ದೇವಾಲಯಗಳ ಕಂಬಗಳಲ್ಲಿ ವೀರಭದ್ರನ ಶಿಲ್ಪ ಕೆತ್ತಲಾಗಿದೆ. ಅಲ್ಲದೆ ವೀರಭದ್ರನಿಗೆ ಜನಿವಾರ(?) ಶಿವಲಿಂಗ ಎರಡನ್ನೂ

ಹಾಕಿರುವುದೊಂದು ವಿಶೇಷವಾಗಿ ಕಂಡುಬರುತ್ತದೆ. ವೀರಭದ್ರನ ಬಲಭಾಗದಲ್ಲಿ ಕುರಿತಲೆಯ ದಕ್ಷನನ್ನು ನಿಲ್ಲಿಸಿರುವುದು ಅಹಂಕಾರಿ ವೈರಿಗಳನ್ನು ಕುರಿಯಂತೆ ಮುಗ್ಧವಾಗಿಸುವ ತಂತ್ರ ಅಡಿಗರುವ ಸಾಧ್ಯತೆ ಇದೆ.

**ಅಡಿಟಿಪ್ಪಣಿಗಳು**

೧. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೩೮

೨. ಅದೇ

೩. ಹಿರೇಮಠ ಆರ್.ಸಿ., ಮಹಾಯಾತ್ರ, ಪು.೮೬

೪. ಶ್ರೀಕಂಠಶಾಸ್ತ್ರಿ ಎಸ್., ಭಾರತೀಯ ಸಂಸ್ಕೃತಿ, ಪು.೧೨೨

೫. ಹಿರೇಮಠ ಆರ್.ಸಿ.,(ಸಂ), ವೀರಶೈವಾಮೃತ ಪುರಾಣ, ಪು.೧೧೯೩

೬. ನರಸಿಂಹಾಚಾರ್ ಆರ್., ಕರ್ನಾಟಕ ಕವಿಚರಿತೆ, ಸಂಪುಟ-೧, ಪು.೪೭೯

೭. ಎಫಿಗ್ರಾಫಿಯಾ ಕರ್ನಾಟಿಕಾ, VI, KP.39

೮. ಪೂರ್ವೋಕ್ತ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೪೩

೯. ಅದೇ, ಪು.೧೪೩

೧೦. ಹನುಮಾಕ್ಷಿಗೋಗಿ(ಸಂ), ಕಲಬುರ್ಗಿ ಜಿಲ್ಲೆಯ ಶಾಸನಗಳು, ಪು.೪೩೨

೧೧. ಕಲಬುರ್ಗಿ ಎಂ.ಎಂ., ಸಂಸ್ಕೃತಿ-ವಿಕೃತಿ, ಪು.೧೬೮

೧೨. ಅದೇ ಪು.೧೬೮-೧೬೯

೧೩. ಅದೇ ಪು.೧೬೯

೧೪. ಪೂರ್ವೋಕ್ತ, ಭಾರತೀಯ ಸಂಸ್ಕೃತಿ, ಪು.೧೨೧

೧೫. ಶೇಷಶಾಸ್ತ್ರಿ ಆರ್., ಶಾಸನ ಪರಿಚಯ, ಸಂಖ್ಯೆ.೪೯

೧೬. ನಂಜುಂಡಾರಾಧ್ಯ ಎಂ.ಜಿ., ಹರಿಹರ ಕವಿಯ ಗಿರಿಜಾಕಲ್ಯಾಣ ಮಹಾಪ್ರಬಂಧಂ, ಪು.೨೮

೧೭. ಅದೇ

೧೮. ವಿವೇಕ ರೈ ಬಿ.ಎ.(ಸಂ), ರಾಘವಾಂಕನ ಸಮಗ್ರ ಕಾವ್ಯ, ಪು.೪

೧೯. ಪೂರ್ವೋಕ್ತ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೪೪

೨೦. ಅದೇ, ಪು.೧೪೪

೨೧. ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪು.೨೩

೨೨. ಅದೇ ಪು.೨೨

೨೩. EC VIII, Sb.೩೭೫

೨೪. ಪೂರ್ವೋಕ್ತ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪು.೨೩

೨೫. ಸತೀಶ ಕೆ., ವಿಜಯನಗರ ಕಾಲದ ಶೈವ ದೇವಾಲಯಗಳು, ಪು.೪೪

೨೬. ಪೂರ್ವೋಕ್ತ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪು.೨೩

೨೭. ದೇವಿರಪ್ಪ ಎಲ್.(ಪ್ರ.ಸಂ.), ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೧

೨೮. ಪೂರ್ವೋಕ್ತ, ವಿಜಯನಗರ ಕಾಲದ ಶೈವ ದೇವಾಲಯಗಳು, ಪು.೪೫

೨೯. ವಿರೂಪಾಕ್ಷ ಕುಲಕರ್ಣಿ(ಅನುವಾದ), ಕಾಪಾಲಿಕರು ಮತ್ತು ಕಾಳಾಮುಖರು, ಪು.೧೭

೩೦. ಅದೇ, ಪು.೨೮

೩೧. ಅದೇ, ಪು.೮

೩೨. ಹಿರೇಮಠ ಆರ್.ಪಿ., ಮಹಾಯಾತ್ರೆ, ಪು.೮೬

೩೩. ಪೂರ್ವೋಕ್ತ, ಕಾಪಾಲಿಕರು ಮತ್ತು ಕಾಳಮುಖರು, ಪು.೧೮

೩೪. ರಹಮತ್ ತರೀಕೆರೆ, ಕರ್ನಾಟಕದ ನಾಥಪಂಥ, ಪು.೬೦

೩೫. ಅದೇ, ಪು.೬೧

೩೬. ದೇವರ ಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಡಿ.ವಿ.ಪರಮಶಿವಮೂರ್ತಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಪು.೪೬-೪೭, ಶಾ.ಸಂಖ್ಯೆ ೫೫

೩೭. ಅದೇ, ಪು.೨೫೭ ಶಾ.ಸಂಖ್ಯೆ.೩೫೨

೩೮. ಕಲಬುರ್ಗಿ ಎಂ.ಎಂ.(ಸಂ), ಹರಿಹರನ ರಗಳೆಗಳು, ಪುಟ.೨೬೫

೩೯. ಅದೇ, ಪು.೨೦೫

೪೦. ಅದೇ, ಪು.೨೮೫

೪೧. ಅದೇ

೪೨. ಅದೇ

೪೩. ಪುರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೨೦೭

೪೪. ವಿದ್ಯಾಶಂಕರ ಎಸ್.(ಸಂ), ಚಾಮರಸನ ಪ್ರಭುಲಿಂಗಲೀಲೆ, ಪು.೨೬೩

೪೫. ಅದೇ

೪೬. ಕಲಬುರ್ಗಿ ಎಂ.ಎಂ.(ಸಂ), ಶುದ್ಧಶೈವ ಮತ್ತು ಗೋಳಕಿಮಠ ಸಂಪ್ರದಾಯ, ಪು.೭

೪೭. ಅದೇ, ಪು.೫

೪೮. ಅದೇ, ಪು.೧೯

೪೯. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೩೨

೫೦. ಅದೇ, ಪು.೨೯೭

೫೧. ಅದೇ, ಪು.೨೫೮, ೩೪೧

೫೨. ಅದೇ, ಪು.೨೫೭

೫೩. ಅದೇ, ಪು.೩೧೭

೫೪. ಅದೇ, ಪು.೩೨೮

೫೫. ಪುರ್ವೋಕ್ತ, ರಾಘವಾಂಕನ ಸಮಗ್ರಕಾವ್ಯ, ಪು.೨೮೧

೫೬. ಅದೇ, ಪು.೩೩೩

೫೭. ಅದೇ, ಪು.೩೦೦

೫೮. ಅದೇ, ಪು.೩೫೧

೫೯. ಬಸವಾರಾಧ್ಯ ಎನ್.(ಸಂ), ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೧೭೭

೬೦. ಅದೇ, ಪು.೧೧೭೬

೬೧. ಅದೇ, ಪು.೧೨೧೧

೬೨. ಅದೇ, ಪು.೧೧೭೭

೬೩. ಷಣ್ಮುಖಯ್ಯ ಅಕ್ಕೂರಮಠ, ಶಿವಾಗಮಗಳಲ್ಲಿ ವೀರಶೈವಧರ್ಮ ಮತ್ತು ಸಂಸ್ಕೃತಿ, ಪು.೬

೬೪. ಮಲ್ಲೇಪುರಂ ಜಿ.ವೆಂಕಟೇಶ(ಸಂ), ಶಂಬಾ ಕೃತಿ ಸಂಪುಟ-೧, ಪು.೩೯೦

೬೫. ಚಿದಾನಂದಮೂರ್ತಿ ಎಂ., ಸ್ಥಾವರ-ಜಂಗಮ, ಪುಟ.೫೫೮

೬೬. ಬಸವನಾಳ ಶಿ.ಶಿ., ವೀರಶೈವದ ಹುಟ್ಟು-ಬೆಳವಣಿಗೆ, ಪು.೩

೬೭. ಸುಂಕಾಪುರ ಎಂ.ಎಸ್.(ಪ್ರ.ಸಂ), ವೀರಶೈವ ಧರ್ಮತತ್ತ್ವ, ಸಿದ್ಧಾಂತ, ಪು.೨

೬೮. ಶಿವಮೂರ್ತಿಶಾಸ್ತ್ರಿ ಬಿ.(ಸಂ), ವೀರೇಶ ಚರಿತೆ, ಪು.೨೫

೬೯. ಪೂರ್ವೋಕ್ತ, ವೀರಶೈವದ ಹುಟ್ಟು, ಬೆಳವಣಿಗೆ, ಪು.೫

೭೦. ಪೂರ್ವೋಕ್ತ, ವೀರಶೈವಾಮೃತ ಪುರಾಣ, ಭಾಗ-೨, ಪು.೧೨೦೦

೭೧. ಮಲ್ಲೇದೇವರು ಎಚ್.ಪಿ. (ಸಂ), ಅರ್ಚನ, ಸುತ್ತೂರು ಶಿವರಾತ್ರಿ ರಾಜೇಂದ್ರ ಶ್ರೀಗಳ ಅಭಿನಂದನಾಗ್ರಂಥ ಪು.೬೫೮

೭೨. ಚನ್ನಪ್ಪ ಎರಿಸೀಮೆ ಮತ್ತು ಟಿ.ಆರ್.ಮಹಾದೇವಯ್ಯ(ಸಂ), ಸಿದ್ಧಗಂಗಾಶ್ರೀ, ಸಿದ್ಧಗಂಗಾಶ್ರೀಗಳ ಅಭಿನಂದನಾಗ್ರಂಥ, ಪು.೫೫೦

೭೩. ಪೂರ್ವೋಕ್ತ, ಅರ್ಚನ, ಪು.೬೫೮

೭೪. ಪೂರ್ವೋಕ್ತ, ಅರ್ಚನ, ಪು.೬೫೯

೭೫. ಪೂರ್ವೋಕ್ತ, ಅರ್ಚನ, ಪು.೬೨೯

೭೬. ಪೂರ್ವೋಕ್ತ, ಅರ್ಚನ, ಪು.೬೩೧

೭೭. ಪುರ್ವೋಕ್ತ, ಶಂಬಾ ಕೃತಿ ಸಂಪುಟ-೧, ಪು.೩೭೫-೩೭೬

೭೮. ಅದೇ ಶಂಬಾಕೃತಿ ಸಂಪುಟ-೧, ಪು.೩೩೮

೭೯. ಅದೇ, ಪು.೩೮೭

೮೦. ಅದೇ, ಪು.೩೮೮

೮೧. ಅದೇ, ಪು.೩೮೯-೯೦

೮೨. ಅದೇ, ಪು.೩೮೮

೮೩. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೨೬

೮೪. ಅದೇ

೮೫. ಅದೇ, ಪು.೧೨೧೦

೮೬. ಜಾಡಗೌಡ ಎನ್.ಜಿ., ಶ್ರೀನೀಲಕಂಠೇಶ್ವರ ಪುರಾಣ (ಪರಿಷ್ಕರಣೆ) ಪು.೫-೬

೮೭. ಅದೇ, ಪು.೧೩

೮೮. ಅದೇ, ಪು.೬

೮೯. ಪೂರ್ವೋಕ್ತ, ವೀರಶೈವಧರ್ಮ ತತ್ತ್ವ-ಸಿದ್ಧಾಂತ, ಪು.೩

೯೦. ಅದೇ, ಪು.೩-೪

೯೧. ಅದೇ, ಪು.೫

೯೨. ಪೂರ್ವೋಕ್ತ, ಶಂಬಾ ಕೃತಿ ಸಂಪುಟ.೧, ಪು.೩೯೩

೯೩. ಅದೇ, ಪು.೩೯೪

೯೪. ಅದೇ, ಪು.೪೦೬

೯೫. ಪೂರ್ವೋಕ್ತ, ವೀರಶೈವದ ಹುಟ್ಟು, ಬೆಳವಣಿಗೆ, ಪು.೭

೯೬. ಅದೇ, ಪು.೮-೯

೯೭. ನಂದಿಮಠ ಎಸ್.ಸಿ.(ಮೂಲ) ಪ್ರೇಮಾದೇವಿ ಮಳಿಮಠ(ಅನು), ವೀರಶೈವಧರ್ಮದ ಕೈಪಿಡಿ, ಪು.೫-೬

೯೮. ಕಲಬುರ್ಗಿ ಎಂ.ಎಂ.(ಸಂ), ಶುದ್ಧ ಶೈವ ಮತ್ತು ಗೋಲಕಿಮಠ ಸಂಪ್ರದಾಯ ಪು.೪

೯೯. ಪೂರ್ವೋಕ್ತ, ವೀರಶೈವಧರ್ಮದ ಕೈಪಿಡಿ, ಪು.೯

೧೦೦. ಚಿದಾನಂದಮೂರ್ತಿ ಎಂ., ಬಸವಣ್ಣ : ಕರ್ನಾಟಕ-ಭಾರತ, ಪು.೩೭೮

೧೦೧. ಕಲಬುರ್ಗಿ ಎಂ.ಎಂ., ಮಾರ್ಗ-೪, ಪು.೨೮೭

೧೦೨. ಅದೇ, ಪು.೨೯೧

೧೦೩. ಪೂರ್ವೋಕ್ತ, ವೀರಶೈವದ ಹುಟ್ಟು-ಬೆಳವಣಿಗೆ, ಪು.೧೦

೧೦೪. ಪೂರ್ವೋಕ್ತ, ವೀರಶೈವ ಧರ್ಮದ ಕೈಪಿಡಿ-೧೧, ಪು.೧೧

೧೦೫. ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು, ವೀರಶೈವ ಪಂಚಪೀಠ ಪರಂಪರೆ, ಪು.೪

೧೦೬. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೨೯೭

೧೦೭. ಅದೇ, ಪು.೨೯೮

೧೦೮. ಅದೇ, ಪು.೨೯೧

೧೦೯. ಅದೇ, ಪು.೨೯೬

೧೧೦. ಪೂರ್ವೋಕ್ತ, ಮಾಗ-೪, ಪು.೨೪೬

೧೧೧. ಚಿದಾನಂದಮೂರ್ತಿ ಎಂ., ವಚನಶೋಧ II, ಪು.೧೨-೫೩

೧೧೨. ಚಿದಾನಂದಮೂರ್ತಿ ಎಂ., ಬಸವಣ್ಣ:ಕರ್ನಾಟಕ:ಭಾರತ, ಪು.೩೭೦

೧೧೩. ಚಿದಾನಂದಮೂರ್ತಿ ಎಂ., ಸ್ಥಾವರ ಜಂಗಮ, ಪು.೨೨೦

೧೧೪. ಹಿರೇಮಠ ಆರ್.ಸಿ., ಮಹಾಯಾತ್ರೆ, ಪು.೧೬೩

೧೧೫. ಪೂರ್ವೋಕ್ತ, ವೀರಶೈವ ಪಂಚಪೀಠ ಪರಂಪರೆ, ಪು.೨೩

೧೧೬. ಅದೇ, ಪು.೨೪

೧೧೭. ಮಹಾದೇವ ಬಣಕಾರ, ವಿಶ್ವಬಂಧು ಮರುಳಸಿದ್ಧಕಾವ್ಯ, ಪ್ರಸ್ತಾವನೆ, ಪು.೧೦-೨೮

೧೧೮. ಪೂರ್ವೋಕ್ತ, ಮಹಾಯಾತ್ರೆ, ಪು.೧೬೬

೧೧೯. ಪೂರ್ವೋಕ್ತ, ವೀರಶೈವ ಪಂಚಪೀಠ ಪರಂಪರೆ, ಪು.೪೭-೪೭

೧೨೦. ಪೂರ್ವೋಕ್ತ, ವೀರಶೈವ ಧರ್ಮದ ಕೈಪಿಡಿ, ಪು.೧೨

೧೨೧. ಪೂರ್ವೋಕ್ತ, ಮಾರ್ಗ-೪, ಪು.೨೪೫

೧೨೨. ಪೂರ್ವೋಕ್ತ, ವೀರಶೈವ ಪಂಚಪೀಠ ಪರಂಪರೆ, ಪು.೬೯

೧೨೩. ಪೂರ್ವೋಕ್ತ, ಅದೇ, ಪು.೭೨

೧೨೪. ಪೂರ್ವೋಕ್ತ, ವೀರಶೈವ ಧರ್ಮದ ಕೈಪಿಡಿ, ಪು.೧೩

೧೨೫. ಪೂರ್ವೋಕ್ತ, ಮಾರ್ಗ-೪, ಪು.೨೪೭

೧೨೬. ಅದೇ, ಪು.೨೫೦

೧೨೭. ಪೂರ್ವೋಕ್ತ, ವೀರಶೈವ ಪಂಚಪೀಠ ಪರಂಪರೆ, ಪು.೮೫

೧೨೮. ಪೂರ್ವೋರಕ್ತ, ವೀರಶೈವ ಧರ್ಮದ ಕೈಪಿಡಿ, ಪು.೧೩

೧೨೯. ಅದೇ, ಪು.೧೩

೧೩೦. ಪೂರ್ವೋಕ್ತ, ಮಾರ್ಗ ೪, ಪು.೨೪೮-೨೫೦

೧೩೧. ಪೂರ್ವೋಕ್ತ, ವೀರಶೈವದ ಹುಟ್ಟು-ಬೆಳವಣಿಗೆ, ಪು.೧೩

೧೩೨. ಅದೇ, ಪು.೧೧

೧೩೩. ಅದೇ, ಪು.೧೪

೧೩೪. ಕಲಬುರ್ಗಿ ಎಂ.ಎಂ., ಶಾಸನಗಳಲ್ಲಿ ಶಿವಶರಣರು, ಪು.೧೬೮

೧೩೫. ಮಹಾದೇವಪ್ಪ ಎನ್.ಜಿ.(ಸಂ), ಲಿಂಗಾಯತ, ಪು.೧೧

೧೩೬. ಕಲಬುರ್ಗಿ ಎಂ.ಎಂ., ಬಸವಣ್ಣನವರ ಸಮಗ್ರ ವಚನಸಂಪುಟ-೧, ಪು.೩೩೩, ವಚನ-೧೨೦೨

೧೩೭. ಅದೇ, ಪು.೨೯೯, ವಚನ-೧೯೯೮

೧೩೮. ಅದೇ, ಪು.೪೦, ವಚನ-೧೫೧

೧೩೯. ಅದೇ, ಪು.೧೬೪, ವಚನ-೬೫೩

೧೪೦. ಅದೇ, ಪು.೧೬೨, ವಚನ-೬೮೫

೧೪೧. ವೀರಣ್ಣ ರಾಜೂರು, ಶಿವಶರಣೆಯರ ವಚನ ಸಂಪುಟ ೭, ಪು.೧೪, ವ.೩೦

೧೪೨. ಭೂಸನೂರ ಮಠ ಸಂ.ಶಿ.(ಸಂ), ವಚನ ಸಾಹಿತ್ಯ ಸಂಗ್ರಹ, ಪು.೪೪೦

೧೪೩. ಮಲ್ಲಾಪುರ ಬಿ.ವಿ.(ಸಂ), ಚೆನ್ನಬಸವಣ್ಣನವರ ವಚನಗಳು, ಸಂಪುಟ ೩, ಪು.೨೯೩, ವಚನ.೯೩೧

೧೪೪. ಪೂರ್ವೋಕ್ತ, ಶಿವಶರಣೆಯರ ವಚನಗಳು, ಸಂಪುಟ ೫, ಪು.೧೯೬, ವ.೧೦೭

೧೪೫. ಪೂರ್ವೋಕ್ತ, ಚೆನ್ನಬಸವಣ್ಣನವರ ವಚನಗಳು, ಸಂಪುಟ ೩, ಪು.೨೨೮, ವ.೯೫

೧೪೬. ಪೂರ್ವೋಕ್ತ, ಮಾರ್ಗ-೪, ಪು.೧೮೬-೧೮೯

೧೪೭. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೨೯

೧೪೮. ಅದೇ, ಪು.೩೪೩

೧೪೯. ಅದೇ, ಪು.೩೬೧

೧೫೦. ಅದೇ, ಪು.೩೭೧

೧೫೧. ಅದೇ, ಪು.೪೧೧

೧೫೨. ಅದೇ, ಪು.೨೭೪

೧೫೩. ಅದೇ, ಪು.೨೭೫

೧೫೪. ಅದೇ, ಪು.೨೫೯

೧೫೫. ಅದೇ, ಪು.೩೧೬

೧೫೬. ಶಿವಮೂರ್ತಿಶಾಸ್ತ್ರಿ ಬಿ.(ಸಂ), ವೀರೇಶ ಚರಿತೆ, ಪು.೨೫

೧೫೭. ಅದೇ, ಪು.೨೭

೧೫೮. ವಿದ್ಯಾಶಂಕರ ಎಸ್.(ಗದ್ಯಾನುವಾದ), ಚಾಮರಸನ ಪ್ರಭುಲಿಂಗಲೀಲೆ, ಪು.೧೮

೧೫೯. ಅದೇ, ಪು.೩೪೭

೧೬೦. ಭೂಸನೂರಮಠ ಸಂ.ಶಿ.(ಸಂ), ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೧

೧೬೧. ಜಯಾ ರಾಜಶೇಖರ(ಸಂ), ಲಿಂಗಲೀಲಾ ವಿಲಾಸ ಚಾರಿತ್ರ ಸಂಗ್ರಹ, ಪು.೨

೧೬೨. ಅದೇ, ಪು.೧೧೨

೧೬೩. ದೇವೀರಪ್ಪ ಎಚ್.(ಪ್ರ.ಸಂ), ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೩೭೧

೧೬೪. ಅದೇ, ಪು.೪೦೨

೧೬೫. ಅದೇ, ಪು.೩೭೯

೧೬೬. ಅದೇ, ಪು.೪೭೯

೧೬೭. ಅದೇ, ಪು.೪೩೦

೧೬೮. ಅದೇ, ಪು.೪೩೫

೧೬೯. ಅದೇ, ಪು.೪೩೦

೧೭೦. ಅದೇ, ಪು.೪೫೪

೧೭೧. ಚನ್ನಮಲ್ಲಿಕಾರ್ಜುನ(ಸಂ), ಮೊಗ್ಗೆಯ ಮಾಯಿದೇವಯ್ಯಗಳು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೧೮೯

೧೭೨. ಅದೇ, ಪು.೧೭೦

೧೭೩. ಅದೇ, ಪು.೧೮೯

೧೭೪. ಅದೇ, ಪು.೧೮೦

೧೭೫. ಚಿದಾನಂದಮೂರ್ತಿ ಎಂ., ಸ್ಥಾವರ-ಜಂಗಮ, ಪು.೫೫೮-೫೫೯

೧೭೬. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೦೬

೧೭೭. ಪೂರ್ವೋಕ್ತ, ಸ್ಥಾವರ-ಜಂಗಮ, ಪು.೫೫೮

೧೭೮. ಪೂರ್ವೋಕ್ತ, ಬಸವಣ್ಣ : ಕರ್ನಾಟಕ : ಭಾರತ, ಪು.೩೮೦

೧೭೯. ದೇವೀರಪ್ಪ ಎಚ್.(ಸಂ), ಹರಿಹರ ವಿರಚಿತ ಬಸವರಾಜದೇವರ ರಗಳೆ, ಪು.೯೭

೧೮೦. ಅದೇ, ಪು.೧೦೧

೧೮೧. ಅದೇ, ಪು.೧೦೨

೧೮೨. ಸುಂಕಾಪುರ ಎಂ.ಎಸ್.(ಸಂ), ನೂತನ ಪುರಾತನರ ರಗಳೆಗಳು, .ಪು.೪೫

೧೮೩. ಜವಳಿ ಬಿ.ಸಿ.ಮತ್ತು ದೇವೇಂದ್ರ ಕುಮಾರ ಹಕಾರಿ(ಸಂ), ಹರಿಹರದೇವನ ಬಸವರಾಜ ದೇವರ ರಗಳೆ, ಪು.೨೪

೧೮೪. ದೇಜಗೌ, ಶ್ರೀಬಸವೇಶ್ವರರು, ಪು.೨೩

೧೮೫. ಭೂಸನೂರ ಮಠ ಸಂ.ಶಿ.(ಸಂ), ವಚನ ಸಾಹಿತ್ಯ ಸಂಗ್ರಹ, ಪು.೯೧

೧೮೬. ಪೂರ್ವೋಕ್ತ, ನೂತನ ಪುರಾತನರ ರಗಳೆಗಳು, ಪು.೭೫

೧೮೭. ಬಸವರಾಜ ಮಲಶೆಟ್ಟಿ ಮತ್ತು ಇತರರು(ಸಂ), ಹರಿದ ಹೆದ್ದೊರೆ (ಅಭಿನಂದನ ಗ್ರಂಥ), ಪು.೫೯೩

೧೮೮. ಪೂರ್ವೋಕ್ತ, ವಚನ ಸಾಹಿತ್ಯ ಸಂಗ್ರಹ, ಪು.೨೯

೧೮೯. ಅದೇ, ಪು.೩೫

೧೯೦. ಮಲ್ಲಾಪುರ ಬಿ.ವಿ.(ಪ್ರ.ಸಂ), ಸುಕುಮಾರ (ತ್ರೈಮಾಸಿಕ), ಸಂಪುಟ-೧, ಸಂಚಿಕೆ-೪, ಪುಟ.೩೨, ಮೇ ೨೦೦೩

೧೯೧. ಪೂರ್ವೋಕ್ತ, ವಚನ ಸಾಹಿತ್ಯ ಸಂಗ್ರಹ, ಪು.೮೨

೧೯೨. ಅಮರೇಶ ನುಗಡೋಣಿ, ಬಸವಣ್ಣನ ವಚನಗಳು - ಸಾಂಸ್ಕೃತಿಕ ಮುಖಾಮುಖಿ, ಪು.೬೫

೧೯೩. ಪೂರ್ವೋಕ್ತ, ವಚನ ಸಾಹಿತ್ಯ ಸಂಗ್ರಹ, ಪು.೫೧೪

೧೯೪. ಅದೇ, ಪು.೧೫೩

೧೯೫. ದೇಜಗೌ, ಶ್ರೀಬಸವೇಶ್ವರರು, ಪು.೬೮

೧೯೬. ಪೂರ್ವೋಕ್ತ, ವಚನ ಸಾಹಿತ್ಯ ಸಂಗ್ರಹ, ಪು.೫೨೫

೧೯೭. ಅದೇ, ಪು.೩೩

೧೯೮. ಅದೇ, ಪು.೩೪

೧೯೯. ವಿದ್ಯಾಶಂಕರ ಎಸ್.(ಸಂ), ಸ್ವಪ್ನಲೋಕ(ಮಾಸಿಕ), ಪು.೪೮

೨೦೦. ಪೂರ್ವೋಕ್ತ, ವಚನ ಸಾಹಿತ್ಯ ಸಂಗ್ರಹ, ಪು.೧೪೬

೨೦೧. ಅದೇ, ಪು.೫೩೮

೨೦೨. ಅದೇ, ಪು.೨೯೭

೨೦೩. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೨೯೩

೨೦೪. ಅದೇ, ಪು.೨೯೬

೨೦೫. ಚಿದಾನಂದಮೂರ್ತಿ ಎಂ., ವೀರಶೈವಧರ್ಮ, ಭಾರತೀಯ ಸಂಸ್ಕೃತಿ, ಪು.೪೪

೨೦೬. ಪೂರ್ವೋಕ್ತ, ವಚನ ಸಾಹಿತ್ಯ ಸಂಗ್ರಹ, ಪು.೫೧೦

೨೦೭. ಪೂರ್ವೋಕ್ತ, ವಚನ ಸಾಹಿತ್ಯ ಸಂಗ್ರಹ, ಪು.೨೩೦

೨೦೮. ಪೂರ್ವೋಕ್ತ, ವೀರಶೈವದ ಹುಟ್ಟು-ಬೆಳವಣಿಗೆ, ಪು.೨೩

೨೦೯. ಪೂರ್ವೋಕ್ತ, ವಚನ ಸಾಹಿತ್ಯ ಸಂಗ್ರಹ, ಪು.೫೦೭-೫೦೮

೨೧೦. ಅದೇ, ಪು.೫೦೧

೨೧೧. ಅದೇ, ಪು.೩೧೮

೨೧೨. ಅದೇ, ಪು.೩೨೧

೨೧೩. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ, ಪು.೧೭

೨೧೪. ಅದೇ, ಪು.೧೪೭

೨೧೫. ಶ್ರೀ ಚನ್ನಮಲ್ಲಿಕಾರ್ಜುನರ ಮೊಗ್ಗೆಯ ಮಾಯಿದೇವ ಪ್ರಭುವಾಣಿ, ಪು.೧೪೯

೨೧೬. ಪೂರ್ವೋಕ್ತ, ವೀರಶೈವದ ಹುಟ್ಟು-ಬೆಳವಣಿಗೆ, ಪು.೨೦

೨೧೭. ಅದೇ, ಪು.೨೧

೨೧೮. ಪೂರ್ವೋಕ್ತ, ಚಾಮರಸನ ಪ್ರಭುಲಿಂಗ ಲೀಲೆ, ಪು.೩೪೮

೨೧೯. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೨೫೫

೨೨೦. ಅದೇ, ಪು.೨೫೧

೨೨೧. ಬಸವರಾಜ ಮಲಶೆಟ್ಟಿ ಮತ್ತು ಇತರರು(ಸಂ), ಹರಿದ ಹೆದ್ದೊರೆ(ಅ.ಗ್ರಂ), ಪು.೭೯೮

೨೨೨. ದೇವರಕೊಂಡಾರೆಡ್ಡಿ, ಭಟ್‌ಸೂರಿ ಕೆ.ಜಿ., ಕಲವೀರ ಮನ್ನಾಚರ, ಡಿ.ವಿ.ಪರಮಶಿವಮೂರ್ತಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ

೨೨೩. ಪೂರ್ವೋಕ್ತ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಪು.೪೫

೨೨೪. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೧೬೫

೨೨೫. ನಂಜುಂಡಾರಾಧ್ಯ ಎಂ.ಜಿ.(ಗದ್ಯಾನುವಾದ), ಹರಿಹರ ಕವಿಯ ಗಿರಿಜಾ ಕಲ್ಯಾಣ ಮಹಾಪ್ರಬಂಧಂ, ಪು.೨೫೬

೨೨೬. ಶ್ರೀಗುರು ಓಂ ಸಿದ್ಧಲಿಂಗೇಶ್ವರ ಸ್ವಾಮಿಗಳು, ಪಂಪಾ ಮಹಾತ್ಮೆ, ಪು.೨೮

೨೨೭. ಪೂರ್ವೋಕ್ತ, ಕ.ವಿ.ವಿ. ಶಾ.ಸಂಪುಟ-೩ ಹಂಪಿ ಶಾಸನಗಳು, ಪು.೪೫

೨೨೮. ಪೂರ್ವೋಕ್ತ, ಹರಿಹರ ಕವಿಯ ಗಿರಿಜಾ ಕಲ್ಯಾಣ ಮಹಾಪ್ರಬಂಧಂ, ಪು.೧೯

೨೨೯. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೧೯೪

೨೩೦. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೧-೨

೨೩೧. ಅದೇ, ಪು.೩೯೫

೨೩೨. ಪೂರ್ವೋಕ್ತ, ಚಂದ್ರಕವಿಯ ಪಂಪಾಸ್ಥಾನವರ್ಣನಂ, ಪು.೧೫

೨೩೩. ಪೂರ್ವೋಕ್ತ, ಶಿವತತ್ತ್ವ ಚಿಂತಾಮಣಿ, ಪು.೪೩೮

೨೩೪. ಅದೇ, ಪು.೪೪೦

೨೩೫. ಎಪಿಗ್ರಫಿಯಾ ಕರ್ನಾಟಿಕ ಸಂಪುಟ-XII, ಗುಬ್ಬಿ ಶಾ.ಸಂ.೩೦

೨೩೬. ಕೃಷ್ಣಪ್ಪ ಎಂ.ವಿ. ಮತ್ತು ಚೆನ್ನಬಸಪ್ಪ ಎಸ್. ಪಾಟೀಲ್ (ಸಂ), ವಿಜಯನಗರ ಅಧ್ಯಯನ ಸಂ.೪, ಪು.೩

೨೩೭. ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ V, ಚೆನ್ನರಾಯಪಟ್ಟಣ ಶಾ.ಸಂಖ್ಯೆ-೨೫೬

೨೩೮. ಪೂರ್ವೋಕ್ತ, ವಿಜಯನಗರ ಅಧ್ಯಯನ ಸಂ.೪, ಪು.೩

೨೩೯. ಪೂರ್ವೋಕ್ತ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೩, ಹಂಪಿ ಶಾಸನಗಳು, ಪು.೪೫

೨೪೦. ಅದೇ, ಶಾ.ಸಂ.೫೪, ಪು.೩೯-೪೦

೨೪೧. ಅದೇ, ಶಾ.ಸಂ.೫೩, ಪು.೩೪

೨೪೨. ಪೂರ್ವೋಕ್ತ, ಹರಿಹರನ ಗಿರಿಜಾ ಕಲ್ಯಾಣ ಮಹಾಪ್ರಬಂಧ, ಪು.೧೬

೨೪೩. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೮೮

೨೪೪. ಅದೇ, ಪು.೪೯೮

೨೪೫. ಅದೇ, ಪು.೫೦೧

೨೪೬. ಅದೇ, ಪು.೫೦೮

೨೪೭. ಪೂರ್ವೋಕ್ತ, ರಾಘವಾಂಕನ ಸಮಗ್ರಕಾವ್ಯ, ಪು.೬೪

೨೪೮. ಅದೇ, ಪು.೬೮

೨೪೯. ಪೂರ್ವೋಕ್ತ, ಹರಿಹರನ ಗಿರಿಜಾ ಕಲ್ಯಾಣ ಮಹಾಪ್ರಬಂಧಂ, ಪು.೩೩೧

೨೫೦. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೯೯

೨೫೧. ಅದೇ, ಪು.೫೧೧

೨೫೨. ಅದೇ, ಪು.೪೯೫

೨೫೩. ಅದೇ, ಪು.೪೯೨

೨೫೪. ಅದೇ, ಪು.೪೯೭

೨೫೫. ಅದೇ, ಪು.೪೮೯

೨೫೬. ಪೂರ್ವೋಕ್ತ, ರಕ್ಷಾಶತಕ ಮತ್ತು ಪಂಪಾಶತಕ, ಪು.೨೫

೨೫೭. ಅದೇ, ಪುಟ.೪೩

೨೫೮. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೬೮

೨೫೯. ಪೂರ್ವೋಕ್ತ, ಪಂಪಾಸ್ಥಾನ ವರ್ಣನಂ, ಪು.೧೮-೧೯

೨೬೦. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ ೩, ಹಂಪಿ ಶಾಸನಗಳು, ಶಾ.ಸಂ.೫೧, ಪು.೩೧

೨೬೧. ಅದೇ ಶಾ.ಸಂ.೫೪, ಪು.೪೦

೨೬೨. ಅದೇ. ಶಾ.ಸಂ.೬೦, ಪು.೫೧

೨೬೩. ಅದೇ, ಶಾ.ಸಂ.೨೨೯, ಪು.೧೭೬

೨೬೪. ಅದೇ, ಶಾ.ಸಂ.೨೩೫, ಪು.೧೮೪

೨೬೫. ಅದೇ, ಶಾ.ಸಂ.೨೫೦, ಪು.೧೯೧

೨೬೬. ಅದೇ, ಶಾ.ಸಂ.೧೫, ಪು.೮

೨೬೭. ಅದೇ, ಶಾ.ಸಂ.೨೩, ಪು.೧೧

೨೬೮. ಅದೇ, ಶಾ.ಸಂ.೧೭೨, ಪು.೧೨೭

೨೬೯. ಅದೇ, ಶಾ.ಸಂ.೧೭, ಪು.೯

೨೭೦. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೮೯

೨೭೧. ಪೂರ್ವೋಕ್ತ, ವೀರೇಶ ಚರಿತೆ, ಪು.೨೫

೨೭೨. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿ, ಪು.೧೨೧

೨೭೩. ಹಳ್ಳಿಕೇರಿ ಎಫ್.ಟಿ.(ಸಂ), ಕರಸ್ಥಲ ಸಾಹಿತ್ಯ, ಪು.೧೦೪

೨೭೪. ಪೂರ್ವೋಕ್ತ, ವೀರೇಶ ಚರಿತೆ, ಪು.೫೧

೨೭೫. ಸುಂಕಾಪುರ ಎಂ.ಎಸ್.(ಪ್ರ.ಸಂ), ವೀರಶೈವ ಧರ್ಮ-ತತ್ತ್ವಸಿದ್ಧಾಂತ, ಪು.೨

೨೭೬. ಅದೇ, ಪು.೫

೨೭೭. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೧೯

೨೭೮. ಪೂರ್ವೋಕ್ತ, ವೀರೇಶ ಚರಿತೆ, ಪು.೨೭

೨೭೯. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೧೨೨

೨೮೦. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೧೦೪-೧೦೫

೨೮೧. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೧೯

೨೮೨. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿ, ಪು.೧೨೨

೨೮೩. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೨೦

೨೮೪. ಪೂರ್ವೋಕ್ತ, ವೀರೇಶ ಚರಿತೆ, ಪು.೪೨

೨೮೫. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೧೨೫

೨೮೬. ಪೂರ್ವೋಕ್ತ, ವೀರೇಶ ಚರಿತೆ, (ವೀರೇಶ ಚರಿತೆ ಕಥಾಸಾರ), ಪು.೫೫

೨೮೭. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೨೦-೪೨೧

೨೮೮. ಪೂರ್ವೋಕ್ತ, ವೀರೇಶ ಚರಿತೆ, ಪು.೩೫-೩೬

೨೮೯. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೧೨೬

೨೯೦. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೧೦೫

೨೯೧. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೨೧

೨೯೨. ಪೂರ್ವೋಕ್ತ, ವೀರೇಶ ಚರಿತೆ, ಪು.೪೦-೪೧

೨೯೩. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೧೨೬-೧೨೭

೨೯೪. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೧೦೫-೧೦೬

೨೯೫. ಕಲವೀರ ಮನ್ವಾಚಾರ, ಮಾತೃದೇವತಾ ಆರಾಧನೆ, ಪು.೧೮೩

೨೯೬. ಎಪಿಗ್ರಾಫಿಯಾ ಕರ್ನಾಟಿಕ, ಮಂಡ್ಯ ೬೧, ಮುದ್ದನಗೆರೆ(ಕ್ರಿ.ಶ.೧೧೬೬), ಮಂಡ್ಯ ೬೨, ದಾಯಿಶೆಟ್ಟಿಪುರ, ಗ್ರಾಮ(ಕ್ರಿ.ಶ.೧೧೮೫)

೨೯೭. ನಾಗರಾಜ್ ಎಂ.ಜಿ., ಸಾಂಸ್ಕೃತಿಕ ವೀರಭದ್ರಸ್ವಾಮಿ, ಪು.೨೨

೨೯೮. ಅದೇ, ಪು.೨೩

೨೯೯. ರಾಮಕೃಷ್ಣ ಕೆ.ಆರ್. ಮತ್ತು ಇತರರು(ಸಂ), ವಿಜಯನಗರ ಅಧ್ಯಯನ ಸಂಪುಟ-೮, ಪು.೨೧೫

೩೦೦. ಕೃಷ್ಣಪ್ಪ ಎಂ.ವಿ. ಮತ್ತು ಎಚ್.ಟಿ.ತಳವಾರ(ಸಂ), ವಿಜಯನಗರ ಅಧ್ಯಯನ ಸಂಪುಟ-೬, ಪು.೪

೩೦೧. ಪೂರ್ವೋಕ್ತ, ಕನ್ನಡ ವಿ.ವಿ. ಶಾ.ಸಂಪುಟ-೩, ಶಾ.ಸಂ.-೮೪, ಪು.೮೪-೮೫

೩೦೨. ಅದೇ, ಶಾ.ಸಂ.೧೧೧, ಪು.೯೫

೩೦೩. ಪೂರ್ವೋಕ್ತ, ವಿಜಯನಗರ ಅಧ್ಯಯನ ಸಂಪುಟ-೬, ಪು.೧೩೬

೩೦೪. ಪೂರ್ವೋಕ್ತ, ಕನ್ನಡ ವಿ.ವಿ.ಶಾ.ಸಂಪುಟ-೩, ಶಾ.ಸಂ.೧೧೧, ಪು.೯೫

೩೦೫. ಅದೇ, ಶಾ.ಸಂ.೧೧೩, ಪು.೯೬

೩೦೬. ಅದೇ, ಶಾ.ಸಂ.೧೭-೧೮, ಪು.೮-೯

೩೦೭. ಎಂ.ಎಂ.ಕಲಬುರ್ಗಿ, ಮಾರ್ಗ೩, ಪು.೨೨೦

೩೦೮. ಪೂರ್ವೋಕ್ತ, ಹರಿಹರನ ಗಿರಿಜಾ ಕಲ್ಯಾಣ ಮಹಾಪ್ರಬಂಧಂ, ಪು.೩೩೧

೩೦೯. ಪೂರ್ವೋಕ್ತ, ರಕ್ಷಾಶತಕ ಮತ್ತು ಪಂಪಾಶತಕ, ಪು.೪೨

೩೧೦. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೮೯

೩೧೧. ಅದೇ, ಪು.೪೯೮

೩೧೨. ಪೂರ್ವೋಕ್ತ, ವೀರೇಶ ಚರಿತೆ, ಪು.೨

೩೧೩. ಪೂರ್ವೋಕ್ತ, ಕನ್ನಡ ವಿ.ವಿ.ಶಾ.ಸಂಪುಟ-೩, ಹಂಪಿ ಶಾಸನಗಳು ಶಾ.ಸಂಖ್ಯೆ-೧೧೯, ಪು.೯೪

೩೧೪. ಅದೇ, ಶಾ.ಸಂ.೧೧೭, ಪು.೯೯

೩೧೫. ಅದೇ, ಶಾ.ಸಂ.೧೭, ಪು.೯

೩೧೬. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೧೯-೪೨೦

೩೧೭. ಪೂರ್ವೋಕ್ತ, ವೀರೇಶ ಚರಿತೆ, ಪು.೨೫, ೨೭, ೪೦

೩೧೮. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೧೨೨, ೧೨೭

೩೧೯. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೧೦೫, ೧೦೯

೩೨೦. ಪೂರ್ವೋಕ್ತ, ವೀರಶೈವಧರ್ಮ ತತ್ತ್ವಸಿದ್ಧಾಂತ, ಪು.೨

೩೨೧. ಅದೇ, ಪು.೧೦

೩೨೨. ಪೂರ್ವೋಕ್ತ, ವಿಜಯನಗರ ಅಧ್ಯಯನ, ಸಂ.೭, ಪು.೮

೩೨೩. ಪೂರ್ವೋಕ್ತ, ಸಾಂಸ್ಕೃತಿಕ ವೀರಭದ್ರಸ್ವಾಮಿ, ಪು.೭೫

೩೨೪. ಪೂರ್ವೋಕ್ತ, ವಿಜಯನಗರ ಅಧ್ಯಯನ ಸಂ.೮, ಪು.೨೨೨

೩೨೫. ಸುರೇಶ ಕೆ.ಎಂ., ವೀರಶೈವ (ಸ್ಮರಣ ಸಂಚಿಕೆ), ಪು.೧೭

೩೨೬. ಪೂರ್ವೋಕ್ತ, ಕನ್ನಡ ವಿ.ವಿ.ಶಾ.ಸಂಪುಟ-೩, ಶಾ.ಸಂ.೮೪, ಪು.೮೫

೩೨೭. ಪೂರ್ವೋಕ್ತ, ಸಾಂಸ್ಕೃತಿಕ ವೀರಭದ್ರಸ್ವಾಮಿ, ಪು.೭೬

೩೨೮. ಅದೇ, ಪು.೮೦

೩೨೯. ಪೂರ್ವೋಕ್ತ ಕನ್ನಡ ವಿ.ವಿ.ಶಾ.ಸಂಪುಟ-೩, ಶಾ.ಸಂ.೧೭-೧೮, ಪು.೯

ಅಧ್ಯಾಯ ೪

# ಧರ್ಮವಾಗಿ ವೀರಶೈವ

೧. ಧರ್ಮದ ಅರ್ಥ ಮತ್ತು ಸ್ವರೂಪ

೨. ಪ್ರೇರಣೆ ಮತ್ತು ಕಾರಣಗಳು

೩. ವೀರಶೈವ ಧರ್ಮದ ತತ್ತ್ವಸಿದ್ಧಾಂತಗಳು

೪. ರಾಜಧರ್ಮ

೪

# ಧರ್ಮವಾಗಿ ವೀರಶೈವ

ಒಂದು ಧಾರ್ಮಿಕ ಪಂಥ ಸಿದ್ಧಾಂತವಾಗಿ, ಸಿದ್ಧಾಂತ ಧರ್ಮವಾಗಿ ರೂಪುಗೊಂಡು ಚರಿತ್ರೆಯ ಕಾಲಗರ್ಭದಲ್ಲಿ ಅಡಗಿರುವುದು ತಿಳಿದಿರುವ ವಿಷಯವಾಗಿದೆ. ಯಾವುದೇ ಧಾರ್ಮಿಕ ಪಂಥ ಸಿದ್ಧಾಂತವಾಗಿ ರೂಪುಗೊಂಡ ತಕ್ಷಣ ಧರ್ಮವಾಗಿ ರೂಪುಗೊಳ್ಳುವುದಿಲ್ಲ. ಆ ಧಾರ್ಮಿಕ ಪಂಥದ ಪ್ರವರ್ತಕರು ಗತಿಸಿ ಹೋದ ಎಷ್ಟೋ ವರ್ಷಗಳ ನಂತರ ಅವರ ಸಿದ್ಧಾಂತವನ್ನು ಅವರ ಅನುಯಾಯಿಗಳು ಒಂದು (ಸಿದ್ಧಾಂತವನ್ನು) ಚೌಕಟ್ಟಿಗೆ ಒಳಪಡಿಸಿ ಧರ್ಮವಾಗಿ ರೂಪಿಸುತ್ತಾರೆ ಅಥವಾ ಪರಿವರ್ತಿಸಿರುವುದು ಕಂಡುಬರುತ್ತದೆ. (ಉದಾ : ಬುದ್ಧ, ಮಹಾವೀರ, ಏಸು, ಪೈಗಂಬರ್ ಇತ್ಯಾದಿಗಳು ಬದುಕಿರುವಾಗಲೇ ಅವರ ಧರ್ಮಸ್ಥಾಪಿತವಾಗಲಿಲ್ಲ ಅವರು ಗತಿಸಿದ ಎಷ್ಟೋ ವರ್ಷಗಳ ನಂತರ ಇವರ ತತ್ತ್ವ ಬೋಧನೆ ಸಿದ್ಧಾಂತಗಳನ್ನು ಕ್ರೋಡೀಕರಿಸಿದ ಇವರ ಅನುಯಾಯಿಗಳು ಅದನ್ನು ಧರ್ಮವಾಗಿ ರೂಪಿಸಿದರು.) ಇದರಂತೆ ಬಸವಪೂರ್ವದ ಶರಣರು, ಸಾಧಕರು, ಬಸವಯುಗದ ಶರಣರು ರೂಪಿಸಿದ ವರ್ಗರಹಿತ ಲಿಂಗಾಯತ ಸಿದ್ಧಾಂತವನ್ನು ೧೪ನೇ ಶತಮಾನದಲ್ಲಿ ಹಂಪಿ ಪರಿಸರದಲ್ಲಿ ಬಸವಾದಿ ಶರಣರ ಅನುಯಾಯಿಗಳು ಧರ್ಮದ ಚೌಕಟ್ಟು ಹಾಕಿ ಧರ್ಮವಾಗಿ ಪರಿವರ್ತಿಸಿರುವುದು ಕಂಡುಬರುತ್ತದೆ. ಧರ್ಮವೆಂದ ಮೇಲೆ ಒಂದು ತತ್ತ್ವಸಿದ್ಧಾಂತ ಇರಲೇಬೇಕು. ಆ ತತ್ತ್ವ ಸಿದ್ಧಾಂತಗಳನ್ನು ವೀರಶೈವನಾದವನು ಹೇಗೆ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕು. ಹೇಗೆ ಅವುಗಳನ್ನು ಅನುಸರಿಸಬೇಕು ಎಂಬಿತ್ಯಾದಿ ಅಂಶಗಳನ್ನು ಧರ್ಮದ ಚೌಕಟ್ಟಿನಲ್ಲಿ ರೂಪಿಸಲಾಯಿತು. 'ಎಂತಹವನಾದರೇನು ಶಿವಲಿಂಗವಿದ್ದ ಬಳಿಕ ಕುಲಜನು' ಎಂಬ ತತ್ತ್ವ ಮರೆಯಾಯಿತು. ಒಂದು ಕಡೆ ವಚನಗಳನ್ನು ಸಂದರ್ಭಕ್ಕನುಸಾರವಾಗಿ ಹೊಂದಿಸಿ ಶೂನ್ಯಸಂಪಾದನೆಗಳನ್ನಾಗಿ ಮಾಡಿದರೆ ಮತ್ತೊಂದು ಕಡೆ ಅದೇ ವಚನಗಳನ್ನು ಷಟ್‌ಸ್ಥಲ, ಏಕೋತ್ತರ ಶತಸ್ಥಲಗಳಿಗನುಸಾರವಾಗಿ ಹೊಂದಿಸಲಾಯಿತು. ಹಾಗೆಯೇ ವಚನಗಳಿಗೆ ಟೀಕು, ವ್ಯಾಖ್ಯಾನ ರಚಿಸಲಾಯಿತು.

ಪ್ರಸ್ತುತ ಅಧ್ಯಾಯದಲ್ಲಿ ವೀರಶೈವವು ಧರ್ಮವಾಗಿ ರೂಪುಗೊಳ್ಳಲು ಪ್ರೇರಣೆ ಮತ್ತು ಕಾರಣಗಳು, ವೀರಶೈವ ಧರ್ಮದ ಸ್ವರೂಪ ಅಂದರೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳನ್ನು

ಕುರಿತು ಅಧ್ಯಯನಕ್ಕೊಳಪಡಿಸಿ ವಿಶ್ಲೇಷಿಸಲಾಗಿದೆ. ಇದಲ್ಲದೆ ವೀರಶೈವ ಧರ್ಮದ ಆಚರಣೆಗಳನ್ನೂ ಸಹ ವಿಶ್ಲೇಷಿಸಲಾಗಿದೆ. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಪರಿಕಲ್ಪನೆಯನ್ನು ನಿಗದಿತ ಸಾಹಿತ್ಯ ಕೃತಿಗಳು ಮತ್ತು ಪೂರಕ ಆಕರಗಳ ಹಿನ್ನಲೆಯಲ್ಲಿ ಅರ್ಥೈಸಲಾಗಿದ್ದು, ವೀರಶೈವ ಧರ್ಮದಲ್ಲಿ ಈ ತತ್ತ್ವ-ಸಿದ್ಧಾಂತಗಳ ಮಹತ್ವವನ್ನು ಸಹ ವಿವೇಚಿಸಲಾಗಿದೆ. ಈ ಅಧ್ಯಾಯದಲ್ಲಿ ಹರಿಹರನ ಕನ್ನಡನಾಡಿನ ಶರಣರ ರಗಳೆಗಳು, ಗಿರಿಜಾಕಲ್ಯಾಣ, ರಾಘವಾಂಕನ ಸಿದ್ಧಾರಾಮ ಚಾರಿತ್ರ, ಸೋಮನಾಥ ಚಾರಿತ್ರ, ಚಾಮರಸನ ಪ್ರಭುಲಿಂಗಲೀಲೆ, ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿ, ಕಲ್ಲುಮಠದ ಪ್ರಭುದೇವನ ಲಿಂಗಲೀಲಾ ವಿಲಾಸಚಾರಿತ್ರ, ಮಹಾಲಿಂಗದೇವನ ಏಕೋತ್ತರ ಶತಸ್ಥಲ, ಮೊಗ್ಗೆಯ ಮಾಯಿದೇವನ ಷಟ್ಸ್ಥಲಗದ್ಯ, ಏಕೋತ್ತರ ಶತಸ್ಥಲ, ಕರಸ್ಥಲದ ನಾಗಿದೇವ ಮುಂತಾದವರ ಕರಸ್ಥಲ ಸಾಹಿತ್ಯ ಇಂಥ ಪ್ರಮುಖ ಕೃತಿಗಳ ಹಿನ್ನೆಲೆಯಲ್ಲಿ ವೀರಶೈವ ಧರ್ಮವಾಗಿ ರೂಪಗೊಂಡ ಬಗೆ, ಅದರ ಸ್ವರೂಪವನ್ನು ವಿಶ್ಲೇಷಿಸಲಾಗಿದೆ.

## ಅ. ಧರ್ಮದ ಅರ್ಥ ಮತ್ತು ಸ್ವರೂಪ

ವ್ಯಕ್ತಿ ಹುಟ್ಟಿದಾಗ ಸ್ವತಂತ್ರ ಮುಕ್ತ ಜೀವಿ. ಯಾವುದೇ ಧರ್ಮ ಪಂಥಕ್ಕೆ ಸೇರಿರುವುದಿಲ್ಲ. ಅವನು ವಿಶ್ವಮಾನವನಾಗಿರುತ್ತಾನೆ. ಹುಟ್ಟಿದ ಕೆಲವಾರು ದಿನಗಳ ನಂತರ ತಂದೆತಾಯಿಗಳ ಧರ್ಮಕ್ಕೆ ಸೇರುತ್ತಾನೆ. ಅಥವಾ ತಂದೆ-ತಾಯಿಗಳ ಧರ್ಮಕ್ಕೆ ಸೇರಿಸಿಕೊಳ್ಳಲಾಗುತ್ತದೆ. ಹಾಗಾದರೆ ಧರ್ಮವೆಂದರೇನು? ಎಂದು ಪ್ರಶ್ನಿಸಿಕೊಂಡರೆ, ಅದಕ್ಕೆ ನಿರ್ದಿಷ್ಟ ಅರ್ಥನೀಡುವುದು ಕಷ್ಟವೆನಿಸುತ್ತದೆ. ಧಾರ್ಮಿಕ ನೆಲೆಯಲ್ಲಿ ಅಥವಾ ಸಂಪ್ರದಾಯದ ನೆಲೆಯಲ್ಲಿ ಅರ್ಥೈಸುವುದಾದರೆ ಅದೊಂದು ನಂಬಿಕೆ, ಜೀವನ ವಿಧಾನ ಎಂದು (ಸರಳವಾಗಿ) ಹೇಳಬಹುದಾಗಿದೆ. ಈ ಹಿನ್ನಲೆಯಲ್ಲಿ ಧರ್ಮದ ಅರ್ಥಸ್ವರೂಪವನ್ನು ವಿಶ್ಲೇಶಿಸಲಾಗಿದೆ.

ಮಾನವ ವಿಕಾಸದ ಇತಿಹಾಸದೊಂದಿಗೆ ತಳಕು ಹಾಕಿಕೊಂಡು ಬಂದಿರುವ ಪದವೆಂದರೆ 'ಧರ್ಮ', 'ಧರ್ಮ' ಎನ್ನುವ ಪದಕ್ಕೆ ಸಂವಾದಿಯಾಗಿ 'ರಿಲಿಜನ್' (Religion) ಎನ್ನುವ ಪದವನ್ನು ಇಂಗ್ಲೀಷ್ ಭಾಷೆಯಲ್ಲಿ ಬಳಸಲಾಗುತ್ತಿದೆ. ಲ್ಯಾಟಿನ್ ಭಾಷೆಯಲ್ಲಿ ಬಳಕೆಯಲ್ಲಿರುವ 'ರಿಲಿಗೋ' ಎನ್ನುವ ನಾಮಪದದಿಂದ ಇದು ನಿಷ್ಪತ್ತಿ ಹೊಂದಿದೆ. 'ರಿಲಿಗೋ' ಪದಕ್ಕೆ ಒಂದಕ್ಕಿಂತ ಹೆಚ್ಚು ಅರ್ಥಗಳಿವೆ. ಭಕ್ತಿಯಿಂದ ಕೂಡಿದ ಪೂಜಾ ಕೈಂಕರ್ಯ (ಪವಿತ್ರ) ಒಂದು ಅರ್ಥವಾದರೆ, 'ರಿಲಿಗೇರ್ (Religare) (Re : Back and ligare : bind) ಹಿಂದಿನದನ್ನು ಒಟ್ಟುಗೂಡಿಸು ಎನ್ನುವ ಅರ್ಥವನ್ನೂ, 'ರೆಲಿಗೇರ್' (Religare) ಎನ್ನುವುದು ಹತ್ತಿರದ ಸಂಬಂಧ ಹೊಂದು ಎನ್ನುವ ಅರ್ಥವನ್ನೂ, 'ರಿ ಎಲಿಗೇರ್' (R-eligare) ಪದವು ಆಯ್ಕೆಯಾಗು ಎನ್ನುವ ಅರ್ಥವನ್ನು ಕೊಡುತ್ತಿದೆ. ರಿಲಿಜನ್ ಪದಕ್ಕೆ ಲ್ಯಾಟೀನ್ ಭಾಷೆಯಲ್ಲಿ 'ಪೂಜ್ಯ' 'ಪವಿತ್ರ' ಎಂಬ ಅರ್ಥಗಳಿರುವುದರಿಂದ ಈ ಪದವೇ ಹೆಚ್ಚು ಬಳಕೆಯಲ್ಲಿದೆ.

‘ಧರ್ಮ’ ಎಂಬ ಪದ ಸಂಸ್ಕೃತ ಜನ್ಯವಾಗಿದ್ದು, ಇದರ ಮೂಲಧಾತು ‘ಧೃ’ ಆಗಿದೆ. ಸಂಸ್ಕೃತದಲ್ಲಿ ‘ಧೃ’ ಎಂದರೆ ಬೆಂಬಲಿಸುವ ಅಥವಾ ಎತ್ತಿ ಹಿಡಿ(uphold) ಧರಿಸು (Hold) ಎನ್ನುವ ಅರ್ಥಗಳಿವೆ. ಪ್ರಕೃತಿದತ್ತ ವ್ಯತ್ಯಾಸಗಳಲ್ಲೂ ಸರ್ವಜೀವಿಗಳ ಏಳಿಗೆ ಮತ್ತು ಒಳಿತನ್ನು ಬಯಸುವ ಅರ್ಥವನ್ನು “ಧರ್ಮ” ಎನ್ನುವ ಪದ ಧ್ವನಿಸುತ್ತದೆ. ಭಾರತೀಯ ಸಂದರ್ಭದಲ್ಲಿ ‘ಧರ್ಮ’ ಎನ್ನುವ ಪದಕ್ಕೆ ’ಧಾರಣ ಮಾಡಿದದು’, ‘ನೀತಿ’ (ನಿಯಮ) ‘ನ್ಯಾಯ’, ‘ಕರ್ತವ್ಯ’ ಅಥವಾ ‘ಪವಿತ್ರ ಕರ್ತವ್ಯ’, ‘ವರ್ತನೆ’ ಅಥವಾ ‘ನಡವಳಿಕೆ’, ‘ಸದ್ಗುಣ’, ‘ಪುಣ್ಯ’, ‘ಅಹಿಂಸೆ’, ‘ಭಿಕ್ಷೆ’, ‘ಸ್ವಭಾವ’, ‘ಆಚರಣೆ’, ‘ಹಕ್ಕು’, ‘ಸಮದೃಷ್ಟಿ’, ‘ಸ್ವರೂಪ’, ‘ಪುರುಷಾರ್ಥ’, ‘ದಯೆ ಅಥವಾ ಕರುಣೆ’ ಇನ್ನೂ ಮುಂತಾದ ಅನೇಕ ಅರ್ಥಗಳು ಕಂಡುಬರುತ್ತವೆ.”[೧]

ಕನ್ನಡದ ಸಂದರ್ಭದಲ್ಲಿ ‘ಮತ-ಧರ್ಮ’ ಎಂಬ ಪದಗಳು ಬಹುತೇಕ ಒಂದೇ ಅರ್ಥದಲ್ಲಿ ಬಳಕೆಯಾಗುತ್ತಿರುವಂತೆ ಕಂಡುಬರುತ್ತದೆ. ಧರ್ಮವೆಂದರೆ “ನಿಯಮ ಆಚಾರ”, ಗುಣ-ಸ್ವಭಾವ, ಮತ, ದರ್ಶನ, ರೀತಿ, ಕ್ರಮ,”[೨] ಎಂದರ್ಥ. ಮತವೆಂದರೆ “ಅಭಿಪ್ರಾಯ, ಆಶಯ, ಉದ್ದೇಶ; ಗುರಿ, ಆಲೋಚನೆ ವಿಚಾರ, ತತ್ತ್ವ-ಸಿದ್ಧಾಂತ, ಆಯಾ ಧರ್ಮಗಳಲ್ಲಿ ವಾಡಿಕೆಯಾಗಿರುವ ಧರ್ಮ ಸಂಬಂಧವಾದ ಆಚಾರ-ಸಂಪ್ರದಾಯ”[೩] ಎಂದರ್ಥವಾಗುತ್ತದೆ. ಅಂದರೆ ಮತ-ಧರ್ಮವೆಂದರೆ ಒಂದು ಧಾರ್ಮಿಕ ಪಂಥದ ‘ನಿಯಮ, ಆಚಾರ, ರೀತಿ, ಕ್ರಮ, ಆಶಯ, ತತ್ತ್ವ-ಸಿದ್ಧಾಂತ ಎಂದು ಅರ್ಥೈಸಲಾಗಿದೆ. ಹಾಗೆಯೇ ವೀರಶೈವ (ಲಿಂಗಾಯತ) ಧರ್ಮಕ್ಕೂ ಒಂದು ರೀತಿ ನಿಯಮ ಆಚಾರ, ತತ್ತ್ವ ಸಿದ್ಧಾಂತಗಳಿರುವುದು ಕಂಡುಬರುತ್ತದೆ. ಅವುಗಳೆಂದರೆ ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳು. ಇವುಗಳು ೧೨ನೇ ಶತಮಾನದ ವಚನಕಾರರ ಸೃಷ್ಟಿಯಾದರೂ ಅಥವಾ ಅವರ ವಚನಗಳಲ್ಲಿ ಕಂಡುಬರುತ್ತವೆಯಾದರೂ ಅವುಗಳ ಒಳ ಅರ್ಥಗಳು, ಆಚರಿಸುವ ಕ್ರಮಗಳು ಅಥವಾ ಈ ತತ್ತ್ವ ಸಿದ್ಧಾಂತಗಳ ಸ್ವರೂಪ ಆಚರಣಾ ನಿಯಮಗಳನ್ನು ರೂಪಿಸಿದ್ದು, ೧೩ನೇ ಶತಮಾನದಿಂದ ೧೫ನೇ ಶತಮಾನದ ಅವಧಿಯಲ್ಲಿದ್ದ ಹಂಪಿ ಪರಿಸರದ ವೀರಶೈವ ಕವಿಗಳು. ಕೆಲವು ಕವಿಗಳು ೧೨ನೇ ಶತಮಾನದ ಶರಣರ ವಚನಗಳನ್ನು ಷಟ್‌ಸ್ಥಲಗಳಿಗನುಸಾರವಾಗಿ ಹೊಂದಿಸಿರುವುದನ್ನು ಕಾಣಬಹುದಾಗಿದೆ. ಇದಲ್ಲದೆ ವೀರಶೈವ (ಲಿಂಗಾಯತ) ಧರ್ಮಿಯನು ಇಂಥ ತತ್ತ್ವ-ಸಿದ್ಧಾಂತಗಳನ್ನು ಕಡ್ಡಾಯವಾಗಿ ಅನುಸರಿಸಬೇಕೆಂದು ನಿಯಮಗಳನ್ನು ಸೃಷ್ಟಿಸಿದಂತೆ ತೋರುತ್ತದೆ.

ಹಂಪಿ ಪರಿಸರದ ವೀರಶೈವ ಕವಿಗಳು ವೀರಶೈವ ಧರ್ಮ ತತ್ತ್ವ-ಸಿದ್ಧಾಂತವನ್ನು ಶರಣ ಮಾರ್ಗ, ಷಟ್‌ಸ್ಥಲ ಮಾರ್ಗ”[೪], “ವೀರಶೈವ ವ್ರತಾಚಾರಪೂರಿತ ಷಟ್ಸ್ಥಲಬ್ರಹ್ಮ”[೫] “ಏಕನಿಷ್ಠಾಚಾರ ಮಾರ್ಗ, ವೀರಶೈವಾಚಾರ ಷಟ್‌ಸ್ಥಲಂಗಳ ಪಥ”[೬] “ವೀರಶೈವಾಚಾರಮಾರ್ಗ”[೭] ಎಂಬಿತ್ಯಾದಿ ಹೆಸರುಗಳಿಂದ ಕರೆದಿದ್ದಾರೆ. ಅಂದರೆ ಈ ಕವಿಗಳು ವೀರಶೈವ ಧರ್ಮ ಮತ್ತು ಸ್ವರೂಪವನ್ನು ಏಕನಿಷ್ಠಾಚಾರ ಮಾರ್ಗ,

ಷಟ್ಸ್ಥಲ ಮಾರ್ಗ, ಷಟ್ಸ್ಥಲಪಥ ಎಂದು ಅರ್ಥೈಯಿಸಿದ್ದಾರೆ. ವೀರಶೈವಧರ್ಮವೆಂದರೆ ಅದು ಆಚಾರ ಮಾರ್ಗ, ಷಟ್ಸ್ಥಲ ಮಾರ್ಗವಾಗಿದೆ. ವೀರಶೈವ ಧರ್ಮವು ವೈದಿಕ (ಹಿಂದೂ), ಜೈನ, ಬೌದ್ಧ, ಕ್ರೈಸ್ತ, ಇಸ್ಲಾಂ ಹಾಗೂ ಸಿಖ್ ಧರ್ಮಗಳಂತೆ ಸ್ವತಂತ್ರ ಧರ್ಮವಾಗಿ ರೂಪಗೊಂಡಿದ್ದು, ತನ್ನದೇ ಆದ ಧಾರ್ಮಿಕ ಸಿದ್ಧಾಂತಗಳು, ತತ್ತ್ವಗಳನ್ನು ಹೊಂದಿದೆ. ತನ್ನದೇ ಆದ ಧರ್ಮಗ್ರಂಥಗಳನ್ನು, ಧಾರ್ಮಿಕ ಆಚರಣೆಗಳನ್ನು ಹೊಂದಿರುವುದನ್ನು ಕಾಣಬಹುದು.

### ಆ. ಪ್ರೇರಣೆ ಮತ್ತು ಕಾರಣಗಳು

ಪ್ರತಿಯೊಂದು ಧಾರ್ಮಿಕ ಪಂಥ ಅಥವಾ ಸಿದ್ಧಾಂತ ಹುಟ್ಟಲು ಪ್ರೇರಣೆ ಕಾರಣಗಳಿರುವಂತೆ, ಅದೇ ಧಾರ್ಮಿಕ ಸಿದ್ಧಾಂತ ಧರ್ಮವಾಗಿ ರೂಪಗೊಳ್ಳಲು ತನ್ನದೇ ಪ್ರೇರಣೆ ಕಾರಣಗಳಿರುತ್ತವೆ. ೧೨ನೇ ಶತಮಾನದ ಶರಣರಿಗೆ ಹೊಸ ಸಾಮಾಜಿಕ (ಲಿಂಗಾಯತ) ಸಿದ್ಧಾಂತ ಹುಟ್ಟು ಹಾಕಲು ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಜಾರಿಯಲ್ಲಿದ್ದ ವರ್ಣಾಶ್ರಮ ಜಾತಿಪದ್ಧತಿಯೇ ಪ್ರಧಾನಕಾರಣವಾಗಿತ್ತು. ಮನುಸ್ಮೃತಿ, ವೇದ ಆಗಮಗಳಲ್ಲಿ ಇದ್ದ ಉಚ್ಚ-ನೀಚ, ಸ್ತ್ರೀ ಶೋಷಣೆ ಜಾತಿ ಪದ್ಧತಿ ಮುಂತಾದವುಗಳ ನಿರ್ಮೂಲನೆಗೆ ಬಸವಣ್ಣ ಪಣತೊಟ್ಟಿದ್ದು ಸಂಸ್ಕೃತ ಶಾಸ್ತ್ರಗ್ರಂಥಗಳ ಪ್ರೇರಣೆ ಮತ್ತು ಶರಣರ ಅಧಿಕಾರದ ಪ್ರೋತ್ಸಾಹದಿಂದ ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿಯಾಗಿದೆ. ಈ ಬಸವಾದಿ ಶರಣರು ರೂಪಿಸಿದ ಲಿಂಗಾಯತ ತತ್ತ್ವ-ಸಿದ್ಧಾಂತಗಳು ಹಂಪಿ ಪರಿಸರದಲ್ಲಿ ಧರ್ಮವಾಗಿ ರೂಪುಗೊಳ್ಳಲು ಇಲ್ಲಿನ ಧಾರ್ಮಿಕ, ಸಾಮಾಜಿಕ, ರಾಜಕೀಯ ಅಂಶಗಳು ಪ್ರಧಾನ ಪ್ರೇರಣೆ ಮತ್ತು ಕಾರಣಗಳಾಗಿದ್ದವೆಂದು ಊಹಿಸಬಹುದಾಗಿದೆ.

ಹುಟ್ಟಿನಿಂದಲೇ ಶೈವಧಾರ್ಮಿಕ ಕ್ಷೇತ್ರವಾಗಿದ್ದ ಹಂಪಿ ಶೈವದಿಂದ ವೀರಶೈವಕ್ಕೆ ತಿರುಗಿದುದು ಹರಿಹರ-ರಾಘವಾಂಕ ಕವಿಗಳಿಂದ ಎಂಬುದು ಅವರ ಕಾವ್ಯಗಳಿಂದ ತಿಳಿದು ಬರುತ್ತದೆ. ಅವರು ಮೊದಲು ಶೈವರಾಗಿದ್ದು ನಂತರ ವೀರಶೈವರಾದರೆಂದು ವಿದ್ವಾಂಸರ ಅಭಿಮತವಾಗಿದೆ. ಆಗ ತಾನೆ ಮಾಸುತ್ತಿದ್ದ ಕಲ್ಯಾಣ ಕ್ರಾಂತಿಯ ಪ್ರೇರಣೆಯಿಂದ ಸ್ಫೂರ್ತಿಗೊಂಡು ವೀರಶೈವರಾಗಿ ವೀರಶೈವ ಶರಣರನ್ನು ಕಥಾನಾಯಕರನ್ನಾಗಿ ಮಾಡಿ ಕಾವ್ಯರಚಿಸಿದ್ದಾರೆ. ಇದರಲ್ಲಿ ವೀರಶೈವ ಕೆಲ ತತ್ತ್ವ-ಸಿದ್ಧಾಂತಗಳನ್ನು ಸಹ ವಿಶ್ಲೇಷಿಸಿದ್ದಾರೆ. ಇದಕ್ಕೆ ಕಾರಣ ೧೨ನೇ ಶತಮಾನದ ಶರಣ ಚಳುವಳಿ ಮತ್ತು ಕಲ್ಯಾಣ ಕ್ರಾಂತಿ ಪ್ರೇರಣೆಯಾಗಿದ್ದಂತೆ ತೋರುತ್ತದೆ. ಹರಿಹರನ ಕಾವ್ಯಗಳಿಂದ ಪ್ರಭಾವಿತರಾಗಿ ಹಕ್ಕ-ಬುಕ್ಕರು ತಾವು ಕಟ್ಟಿದ ವಿಜಯನಗರ ಸಾಮ್ರಾಜ್ಯಕ್ಕೆ ವಿರೂಪಾಕ್ಷನೇ ಒಡೆಯನೆಂದು ಸಾರಿ ತಾವು ಆತನ ಪ್ರತಿನಿಧಿಗಳೆಂಬಂತೆ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ವಿಜಯನಗರ ಸಾಮ್ರಾಜ್ಯಕ್ಕೆ ವಿರೂಪಾಕ್ಷನೇ ಚಕ್ರವರ್ತಿಯೆಂದು ಒಪ್ಪಿಕೊಂಡು ಅಳ್ವಿಕೆ ನಡೆಸಿದ ಸಂಗಮ ಅರಸರೆಲ್ಲರೂ ವೀರಶೈವ ಮತಾವಲಂಬಿಗಳಾಗಿ ವೀರಶೈವ ಧರ್ಮ ರೂಪುಗೊಂಡು ವಿಕಾಸ ಹೊಂದಲು ಕಾರಣೀಭೂತರಾದರೆಂದು ತರ್ಕಿಸಬಹುದಾಗಿದೆ.

ಕಲ್ಯಾಣ ಕ್ರಾಂತಿಯ ಪ್ರೇರಣೆಯ ಜೊತೆಗೆ ಕಲ್ಯಾಣ ಕ್ರಾಂತಿಯಲ್ಲಿ ಪಾಲ್ಗೊಂಡು ನಂತರ ಧರ್ಮರಕ್ಷಣೆಗೆ ಹಂಪಿಗೆ ಆಗಮಿಸಿದ ಒಂದು ಶರಣರ ತಂಡದ ಪರಂಪರೆಯ ಪ್ರಭಾವಕ್ಕೆ ಒಳಗಾದವರಲ್ಲಿ ಮುಖ್ಯನೆನಿಸಿದ್ದಾನೆ ಹರಿಹರ. ಹಂಪಿಯ ಹತ್ತಿರದಲ್ಲಿದ್ದ ಕುರುಗೋಡು ಅರಸರು ವೀರಶೈವಕ್ಕೆ ಬಲವನ್ನು ತೋರುವವರಾಗಿದ್ದರು. ಆ ಕಾರಣಗಳಿಂದಾಗಿ, ಕಲ್ಯಾಣದಿಂದ ಹೊರಬಿದ್ದ ಬಸವಣ್ಣನ ಹಲವು ಅನುಯಾಯಿಗಳನ್ನು ಹಂಪಿಯೂ ಆಕರ್ಷಿಸಿತು. ಅವರು ಹಂಪಿಯನ್ನು ಅರಸಿ ಬರುವುದಕ್ಕೆ ಮತ್ತೊಂದು ಪ್ರಬಲ ಕಾರಣವೆಂದರೆ ಕುರುಗೋಡ ಸಿಂಧ ಅರಸರಲ್ಲಿ ಪ್ರಸಿದ್ಧರಾದ ಮೊದಲನೆಯ ರಾಚಮಲ್ಲ ಮತ್ತು ಇಮ್ಮಡಿ ರಾಚಮಲ್ಲರು ಸ್ವತಃ ವೀರಶೈವರಾಗಿದ್ದರು."[೮]

ಸಂಗಮ ಅರಸರ ಕಾಲದಲ್ಲಿ ಅಂದರೆ ಪ್ರೌಢದೇವರಾಯನ ಆಳ್ವಿಕೆಯ ಕಾಲದಲ್ಲಿ ವೀರಶೈವಧರ್ಮ ಕುರಿತ ನೂರಾರು ಗ್ರಂಥಗಳು ರಚನೆಯಾದವು. ಇದಕ್ಕೆ ಕಾರಣ ಪ್ರೌಢದೇವರಾಯನ ಪ್ರೇರಣೆ ಪ್ರೋತ್ಸಾಹ ದೊರಕಿದ್ದು. ಈತನ ಕಾಲದಲ್ಲಿ ವೀರಶೈವಧರ್ಮಕ್ಕೆ ಒಂದು ಚೌಕಟ್ಟು ನಿರ್ಮಿಸಿ ಸಾಂಸ್ಥೀಕರಣಗೊಳಿಸ ಲಾಯಿತು. ನೂರೊಂದು ವಿರಕ್ತರು, ಹಲವು ಮಠಾಧೀಶರು, ಕವಿಗಳು ರಾಜಪ್ರತಿನಿಧಿಗಳು ವೀರಶೈವವನ್ನು ಧರ್ಮವಾಗಿ ರೂಪಿಸಲು ಶ್ರಮಿಸಿದರು ಮತ್ತು ಪ್ರಮುಖ ಪಾತ್ರವಹಿಸಿದರು.

ಸಾಮಾಜಿಕ, ರಾಜಕೀಯ ಅಂಶಗಳಷ್ಟೇ ವೀರಶೈವವನ್ನು ಧರ್ಮವಾಗಿ ರೂಪಿಸಲು ಕಾರಣೀಭೂತವಾಗಲಿಲ್ಲ. ಬದಲಾಗಿ ಅಂದು ಪ್ರಚಲಿತವಿದ್ದ ಜೈನ ವೈಷ್ಣವ ಧರ್ಮಗಳೂ ಅಷ್ಟೇ ಪ್ರೇರಣೆ ನೀಡಿವೆ ಎಂದು ಹೇಳಬಹುದಾಗಿದೆ. ಹರಿಹರನ ಕಾಲದಲ್ಲಿ ಜೈನ ವೈಷ್ಣವ ಧರ್ಮೀಯರು ಪ್ರಬಲರಾಗಿದ್ದರು ಎಂಬುದು ಆತನ ಅನೇಕ ರಗಳೆಗಳಲ್ಲಿ ಕಂಡುಬರುತ್ತದೆ. ಬಸವರಾಜದೇವರ ರಗಳೆಯಲ್ಲಿ ಈ ಕುರಿತು

> "ಬಿಜ್ಜಳನ ಗುರುವಪ್ಪನಾರಣಕ್ರಮಿತಂ ಸೌರಿಭಟ್ಟಂ ವಿಷ್ಣುಪೆದ್ದಿಗಳು ಮೊದಲಾದ
> ವೈಷ್ಣವರೆಲ್ಲಂ ಕಂಡುಕಡು ಅಸೂಯೆಯೊಳು ನಡೆದಹಂಕಾರದೊಳುಬ್ಬಿ, ಮಚ್ಚರ
> ದೊಳು ಬಿರಿದು, ಹರಭಕ್ತರ ಸಂಪದಮಂ ನೋಡಲಾರದೆ ಬಿಸುಸುಯ್ಯು,
>
> ......................................
>
> ಜಿನನಂ ಕಿತ್ತು ಬಿಸುಡುವರೆಂದಡೆ ಜೈನರ ಸುದ್ದಿಯೆಲ್ಲಿಯದು?"[೯]

ಎಂದು ಶಿವಭಕ್ತರ ಜೊತೆಗೆ ಜೈನ ವೈಷ್ಣವರು ಸಂಘರ್ಷಕ್ಕಿಳಿದ ಬಗೆಯನ್ನು ಕವಿ ವರ್ಣಿಸಿದ್ದಾನೆ. ಹಾಗೆಯೇ ರಾಘವಾಂಕ ತನ್ನ ಸೋಮನಾಥ ಚಾರಿತ್ರ ಕಾವ್ಯದಲ್ಲಿ " .....ಶಿವಾಚಾರಲತೆ

> ನನೆಯೊತ್ತೆ ಜೈನರೆದೆ ನಡುಗೆ ಹುಲಿಗೆಜೆಯ ಸುರಹೊನ್ನೆಯ ಮಹಾಬಸದಿಯ
> ಜಿನನ ಹಣೆ ಛಟಛಟನೆ ಮಿಡಿಯೆ ಸೌರಾಷ್ಟ್ರದರ
> ದನು ನಂದಿಯಂ ತಳೆಯೆ....."[೧೦]

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವ ಚಿಂತಾಮಣಿ ಕಾವ್ಯದಲ್ಲಿ

ಅಗಜೆಯರಸನ ನಿಂದಿಸುವ ಜೈನವಂಶಮಂ....

ಮಿಗಿಲೆನಿಪ ಜಿನಧರ್ಮಮಂ ಹಾನಿಮಾಡಿ ಪ.....''೧೧

ಕರಸ್ಥಲದ ನಾಗಿದೇವ ತನ್ನ ಮಡಿವಾಳ ಮಾಚಯ್ಯಗಳ ತಾರಾವಳಿಯಲ್ಲಿ

''ಶ್ರವಣ-ಚಾರ್ವಾಕ-ವೈಷ್ಣವ-ವೇದ ವಿಪ್ರರು

ನೆವದಿ ನಿಂದಿಸಲು ಸಂಹರಿಸಿ ಮಹಿಮೆಯನು''೧೨

ಎಂದು ಹೇಳಿದ್ದಾನೆ.

ಈ ಮೇಲಿನ ಎಲ್ಲಾ ಕವಿಗಳ ಕಾವ್ಯಗಳು ದಾಖಲಿಸುವಂತೆ ೧೨ ರಿಂದ ೧೫ನೇ ಶತಮಾನದ ತನಕ ಕರ್ನಾಟಕದಲ್ಲಿ ಜೈನಧರ್ಮ ತನ್ನ ಅಸ್ತಿತ್ವ ಉಳಿಸಿಕೊಳ್ಳಲು, ವೈಷ್ಣವಧರ್ಮ ಪ್ರಬಲವಾಗಲು ವೀರಶೈವರೊಂದಿಗೆ ಸಂಘರ್ಷಕ್ಕೆ ಇಳಿದಿರುವುದು ತಿಳಿದುಬರುತ್ತದೆ. ಏಕೆಂದರೆ ಜೈನ, ವೈಷ್ಣವ ಧರ್ಮೀಯರು ವೀರಶೈವಕ್ಕೆ ಮತಾಂತರವಾಗುತ್ತಿದ್ದರು. ಈ ಮತಾಂತರ ತಡೆಗಟ್ಟಲು ಈ ಧರ್ಮೀಯರು ವೀರಶೈವರೊಂದಿಗೆ ಸಂಘರ್ಷಕ್ಕೆ ಇಳಿದಿರುವುದು ಕಂಡುಬರುತ್ತದೆ. ಆ ಹಿನ್ನಲೆಯಲ್ಲಿ ವೀರಶೈವ ನಿಷ್ಠರು, ದಾರ್ಶನಿಕರು, ಕವಿಗಳು ಜೈನ, ವೈಷ್ಣವ ಮೊದಲಾದ ಧರ್ಮೀಯರಿಗೆ ತಮ್ಮ ಧರ್ಮ ಸಿದ್ಧಾಂತವೇನು ಕಡಿಮೆಯಿಲ್ಲ ಎಂದು ತೋರಿಸಲು ಹಂಪಿಯಲ್ಲಿ ನೆಲೆನಿಂತು ೧೨ನೇ ಶತಮಾನದ ವಚನಕಾರರ ಆದರ್ಶ ತತ್ತ್ವ-ಸಿದ್ಧಾಂತಗಳನ್ನು ಅವರ ಜೀವನ ಚರಿತ್ರೆ ಬರೆಯುವುದರ ಮೂಲಕ ಬಿತ್ತರಿಸಲು ಹರಿಹರ ರಾಘವಾಂಕಾದಿಗಳು ಪ್ರಯತ್ನಿಸಿದರೆ, ೧೪-೧೫ನೇ ಶತಮಾನದಲ್ಲಿ ಪ್ರೌಢದೇವರಾಯನ ಪ್ರೋತ್ಸಾಹದಿಂದ ಚಾಮರಸ, ಲಕ್ಕಣ್ಣದಂಡೇಶ ಕವಿಗಳು ಶರಣರ ಚರಿತ್ರೆ, ವೀರಶೈವ ತತ್ತ್ವ-ಸಿದ್ಧಾಂತಗಳನ್ನು ಕಾವ್ಯದಲ್ಲಿ ಹೇಳಿದರೆ, ಮಹಲಿಂಗದೇವ, ಜಕ್ಕಣಾರ್ಯ, ಕಲ್ಲುಮಠದ ಪ್ರಭುದೇವ, ಶ್ರೀಗಿರೀಂದ್ರ, ಬಂಕನಾಥ, ಸಪ್ತಕಾವ್ಯದ ಗುರುಬಸವ ಮೊಗ್ಗೆಯಮಾಯಿದೇವ ಮೊದಲಾದವರು ಶರಣರ ವಚನಗಳನ್ನು ಷಟ್ಸ್ಥಲಗಳಿಗನುಸಾರವಾಗಿ ಸಂಗ್ರಹಿಸುವ, ಅವುಗಳಿಗೆ ಅರ್ಥವ್ಯಾಖ್ಯಾನ ಬರೆಯುವ ಕಾರ್ಯ ಮಾಡಿದರು, ವೀರಶೈವ ಧರ್ಮವನ್ನು ಒಂದು ತಾತ್ತ್ವಿಕ ಚೌಕಟ್ಟಿಗೆ ಒಳಪಡಿಸಿದರು.

೧೩-೧೫ನೇ ಶತಮಾನದಲ್ಲಿ ಕರ್ನಾಟಕದಲ್ಲಿ ನೆಲೆಯೂರಿ ಮತಾಂತರದಲ್ಲಿ ತೊಡಗಿದ ಇಸ್ಲಾಂ ಧರ್ಮದಿಂದಲೂ ತಮ್ಮ ಧಾರ್ಮಿಕ ಸಿದ್ಧಾಂತವನ್ನು ಉಳಿಸುವ ಮತ್ತು ಇಸ್ಲಾಂಗೆ ಮತಾಂತರ ಆಗುವುದನ್ನು ತಪ್ಪಿಸಲು ವೀರಶೈವ ದಾರ್ಶನಿಕರು ವೀರಶೈವಕ್ಕೆ ಚೌಕಟ್ಟು ರೂಪಿಸಿ ಧರ್ಮವಾಗಿ ರೂಪಿಸಿದರೆಂದು ಹೇಳಬಹುದು.

## ೯. ವೀರಶೈವ ಧರ್ಮದ ತತ್ತ್ವಸಿದ್ಧಾಂತಗಳು

ಪ್ರತಿಯೊಂದು ಧರ್ಮಕ್ಕೂ ತನ್ನದೇ ಆದ ತತ್ತ್ವ-ಸಿದ್ಧಾಂತಗಳಿರುವಂತೆ ವೀರಶೈವಧರ್ಮಕ್ಕೂ ತನ್ನದೇ ಆದ ತತ್ತ್ವ-ಸಿದ್ಧಾಂತಗಳಿವೆ. ೧೨ನೇ ಶತಮಾನದ ವಚನಕಾರರಿಂದ ತತ್ತ್ವಸಿದ್ಧಾಂತ ರೂಪಿಸಲ್ಪಟ್ಟಿದ್ದರೂ ಅವುಗಳು ತಾತ್ವಿಕ ಸ್ವರೂಪ ಪಡೆದದ್ದು ೧೩ ರಿಂದ ೧೫ನೇ ಶತಮಾನದಲ್ಲಿ ಹಂಪಿ ಪರಿಸರದಲ್ಲಿದ್ದ ವೀರಶೈವ ಕವಿಗಳಿಂದ. ಈ ಕವಿಗಳು ೧೨ನೇ ಶತಮಾನದ ಶರಣರ ವಚನಗಳಲ್ಲಿ ಕಂಡುಬರುವ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಅರ್ಥಸ್ವರೂಪ, ಮಹತ್ವ ಅವುಗಳನ್ನು ವೀರಶೈವನಾದವನು ಆಚರಿಸುವ ಕ್ರಮ ಮುಂತಾದ ಅಂಶಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ವೀರಶೈವ ತತ್ತ್ವ-ಸಿದ್ಧಾಂತಗಳಾದ ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳ ಸ್ವರೂಪ, ಪರಿಕಲ್ಪನೆ, ವೀರಶೈವಧರ್ಮದಲ್ಲಿ ಇವುಗಳ ಮಹತ್ವ ಮುಂತಾದ ಅಂಶಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಇಲ್ಲಿ ತತ್ತ್ವ-ಸಿದ್ಧಾಂತವೆಂದರೆ ವೀರಶೈವಧರ್ಮದ ಸಾರ, ತಿರುಳು, ನಿಯಮ, ನಿರ್ಣಯಾತ್ಮಕ ತತ್ತ್ವ. ಅಂದರೆ ವೀರಶೈವ ಧರ್ಮೀಯನು ಪ್ರತಿನಿತ್ಯ ತನ್ನ ಜೀವನದಲ್ಲಿ ಅನುಸರಿಸಿದ ಧಾರ್ಮಿಕ ಕ್ರಿಯಾ ವಿಧಾನಗಳು, ಧಾರ್ಮಿಕ ಜೀವನ ಕ್ರಮ, ನಿಯಮಗಳು ಎಂದರ್ಥ.

### ೧. ಅಷ್ಟಾವರಣ

'ಆವರಣ' ಎಂದರೆ 'ಹೊದಿಕೆ', 'ಮುಸುಕು: ಪ್ರಾಕಾರ : ಸುತ್ತು ಗೋಡೆ; ಮುಸುಕು ಹಾಕುವುದು. ಎಲ್ಲೆಕಟ್ಟು; ಪರಿಧಿ, ಚೌಕ,[೧೩] ವೃತ್ತ ಎಂಬಿತ್ಯಾದಿಯಾಗಿ ಅರ್ಥೈಯಿಸಬಹುದಾಗಿದೆ. ಅಷ್ಟಾವರಣ ಎಂದರೆ ಎಂಟು ರೀತಿಯ ಹೊದಿಕೆ, ಪರಿಧಿ ಎಂದು ಹೇಳಬಹುದು. ಈ ಅಷ್ಟಾವರಣಗಳನ್ನು ಕುರಿತು ಚನ್ನಬಸವಣ್ಣ ತನ್ನ ವಚನವೊಂದರಲ್ಲಿ

> ''ಶಿವಕುಲದಲ್ಲಿ ಹುಟ್ಟಿ ಶಿವಸಂಸ್ಕಾರವ ಹೊಂದಿ,
> ಸದ್ಗುರುವಿನಿಂದ ಲಿಂಗಸಾಮರಸ್ಯವ ಪಡೆದು,
> ಅಷ್ಟಾವರಣವೇ ಅಂಗ ಪಂಚಾಚಾರವೇ ಪ್ರಾಣವಾಗಿ ನಡೆದು''[೧೪]

ಎಂದು ಹೇಳಿದ್ದಾನೆ.

ಅಂದರೆ ಸದ್ಗುರುವಿನಿಂದ ಲಿಂಗಾಂಗ ಸಾಮರಸ್ಯ ಪಡೆದ ಭಕ್ತನಿಗೆ ಅಷ್ಟಾವರಣ ಅಂಗವಾಗಿದೆ.

ಜೀವಾತ್ಮನಲ್ಲಿ ಬೀಜರೂಪದಲ್ಲಿರುವ ಶಿವಭಕ್ತಿ(=ಭಕ್ತಿ), ದಳದಳವಾಗಿ ಬೆಳೆಯಲು ಅದಕ್ಕೆ ಬೇಕಾದ ಸಂಸ್ಕರಣ, ಸಂರಕ್ಷಣ, ಪರೀಕ್ಷಣಗಳ ವ್ಯವಸ್ಥೆಯೊಂದನ್ನು ತನ್ನ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ವೀರಶೈವವು ರೂಪಿಸಿದೆ, ಅದೇ 'ಅಷ್ಟಾವರಣ'. ಅದನ್ನು ವೀರಶೈವದ ಅಂಗವೆಂದು ಹೇಳಿರುವಲ್ಲಿಯೇ ವೀರಶೈವರಲ್ಲಿ ಅದಕ್ಕಿರುವ ಸ್ಥಾನಮಾನದ ಸೂಚನೆಯೂ ಧ್ವನಿತವಾಗುತ್ತದೆ.

ಸಮಾಜೋ-ಧಾರ್ಮಿಕವಾದ ಈ ಬಾಹ್ಯ ಅಷ್ಟಾವರಣಗಳಲ್ಲಿ ಶ್ರದ್ಧಾಯುತ ಆಚರಣೆ ಇರಿಸಿಕೊಳ್ಳುವ ಮೂಲಕ ಸಾಧಕನು ತತ್ತ್ವರೂಪದಲ್ಲಿ ಅವನ್ನು ತನ್ನಂತರಂಗದಲ್ಲಿ ಸ್ವಾಯತ ಮಾಡಿಕೊಳ್ಳಬೇಕು. ಆಗ ಅವು ಅಂತರಷ್ಟಾವರಣಗಳೆನಿಸಿಕೊಳ್ಳುತ್ತವೆ. ಲಿಂಗಾಂಗ ಸಾಮರಸ್ಯಕ್ಕೆ ಇದು ಮುಖ್ಯವಾದ''[೧೫] ಅಂಶವಾಗಿದೆ. ಅಷ್ಟಾವರಣಗಳು ವೀರಶೈವಧರ್ಮೀಯನ ಜೀವನ ಅಂಗವಾಗಿವೆ.

ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಎಂಬ ಎಂಟು ಅಷ್ಟಾವರಣಗಳನ್ನು ವೀರಶೈವ ಧರ್ಮೀಯನು ತನ್ನ ದಿನನಿತ್ಯದ ಬದುಕಿನಲ್ಲಿ ಹೇಗೆ ಅಳವಡಿಸಿಕೊಂಡು ಆಚರಿಸುತ್ತಾನೆ. ಇವುಗಳ ಪರಿಕಲ್ಪನೆ ಏನು? ಎಂಬುದನ್ನು ಹಂಪಿ ಪರಿಸರದ ಕವಿಗಳು ತಮ್ಮ ಕಾವ್ಯಗಳಲ್ಲಿ ತಮ್ಮದೇ ಆದ ನೆಲೆಯಲ್ಲಿ ಚಿತ್ರಿಸಿದ್ದಾರೆ.

### ೧.೧. ಗುರು

ಪರಮಾತ್ಮನೇ ಗುರು ಸ್ವರೂಪನೆಂದು ವೀರಶೈವರು ಭಾವಿಸಿರುವರು. ಗುರುವೆಂದರೆ ಧರ್ಮವನ್ನು ಬೋಧಿಸುವವನು; ಆಧ್ಯಾತ್ಮವಿದ್ಯೆಯನ್ನು ಉಪದೇಶಿಸುವವನು, ಮಂತ್ರೋಪದೇಶ ಮಾಡುವವನು; ದೀಕ್ಷೆ ಕೊಡುವವನು; ಧಾರ್ಮಿಕ ಸಂಸ್ಕಾರಗಳನ್ನು ಮಾಡಿಸುವವನು''[೧೬] ಧಾರ್ಮಿಕ ಮಾರ್ಗದರ್ಶಕ ಎಂಬಿತ್ಯಾದಿಯಾಗಿ ಅರ್ಥೈಯಿಸಬಹುದಾಗಿದೆ. 'ಗುರು'ವು ಜ್ಞಾನಿ, ಶಿಷ್ಯನಿಗೆ ಲಿಂಗೋಪದೇಶವನ್ನು ಮಾಡಿ ಜ್ಞಾನ ದಾನವನ್ನು ಮಾಡುವವನು. ನಿರಾಕಾರವಾದ ಪರವಸ್ತುವನ್ನು ಗುರುವು ಸಾಕಾರವಾದ ಇಷ್ಟಲಿಂಗದಲ್ಲಿ ಘನೀಕರಿಸಿ ಸಾಧಕನಿಗೆ ಕೊಡುತ್ತಾನೆ. ಸಾಧಕ ಆ ಇಷ್ಟಲಿಂಗದ ಮೂಲಕ ನಿರಾಕಾರದತ್ತ ಸಾಗುತ್ತಾನೆ. ಅಂತಿಮವಾಗಿ ಅ ನಿರಾಕಾರದಲ್ಲಿ ಒಂದಾಗುತ್ತಾನೆ. ಇದು ಆಧ್ಯಾತ್ಮಿಕದೃಷ್ಟಿಯಿಂದ ನೋಡಿದಾಗಿನ ಗುರುವಿನ ಪರಿಕಲ್ಪನೆ. ಸಾಮಾಜಿಕವಾಗಿ ನೋಡಿದರೆ, ಭವಿಯಾಗಿದ್ದ ವ್ಯಕ್ತಿಯನ್ನು 'ಭಕ್ತ'ನನ್ನಾಗಿ, ವೀರಶೈವನನ್ನಾಗಿ ಮಾಡುವವನು ಗುರು''[೧೭] ಎನಿಸಿಕೊಳ್ಳುತ್ತಾನೆ. ವೀರಶೈವಧರ್ಮದಲ್ಲಿ ಗುರುವೇ ಭಕ್ತನಿಗೆ ಲಿಂಗದೀಕ್ಷೆ ನೀಡುತ್ತಾನೆ.

ಗುರುವಿನ ಕಾರ್ಯ ಮಹತ್ವ ಕುರಿತು ಏಕೋತ್ತರ ಶತಸ್ಥಲದಲ್ಲಿ ಈ ಕೆಳಕಂಡಂತೆ ನಿರೂಪಿತವಾಗಿದೆ.

ಉರಿಲಿಂಗಪೆದ್ದಿ : "...ಗುರುರೂಪಾಗಿ ವರ್ತಿಸುತ್ತಿದ್ದನು ಪರಶಿವಮೂರ್ತಿ
ಶಿಷ್ಯದೀಕ್ಷಾದಿ ಕಾರಣಾತ್ ಎಂದುದಾಗಿ, ಶಿಷ್ಯಂಗೆ
ದೀಕ್ಷೆಯ ಮಾಡಿ ಕರುಣಿಸಬಂದ ಮಹಾ ಕರುಣಾಮೂರ್ತಿ..."[೧೮]

ಬಸವಣ್ಣ : "ಗುರುಕಾರುಣ್ಯವೆ ಸದಾಚಾರ
ಗುರುಕಾರುಣ್ಯವೆ ಶಿವಾಚಾರ

ಗುರುಕಾರುಣ್ಯವೆ ಪ್ರಸಾದರುಚಿ

ಮುಂದೆಗುರು, ಹಿಂದೆಲಿಂಗ ಕೂಡಲಸಂಗಮದೇವ''[೧೯]

ಎಂದು ಹೇಳಿದ್ದಾರೆ.

ಗುರು ಪರಶಿವನ ಸ್ವರೂಪ ಅವನೇ ದೈವ, ತಂದೆ, ತಾಯಿ, ಆತ್ಮಬಲ ತುಂಬುವವನು ಶಿಷ್ಯನಿಗೆ ದೀಕ್ಷೆ ನೀಡುವ ಕಾರುಣ್ಯಮೂರ್ತಿಯಾಗಿದ್ದಾನೆ. ಅವನ ಕಾರುಣ್ಯದಿಂದ ಸದಾಚಾರ, ಶಿವಾಚಾರ ಪ್ರಸಾದ ಲಭಿಸುತ್ತದೆ.

ಗುರುವಿನ ಸ್ವರೂಪ ಮಹತ್ವ ಕುರಿತು ಹಂಪಿ ಪರಿಸರದ ಕವಿಗಳು ತಮ್ಮ ಕಾವ್ಯಗಳಲ್ಲಿ ಚಿತ್ರಿಸಿರುವುದನ್ನು ಕಾಣಬಹುದು.

ಹರಿಹರ : ''ರುದ್ರಮುನಿ ದೇವರಿಂ ಕರುಣಮಂ ಮಾಡಿಸುತೆ

ರುದ್ರನಣುಗಂ ಶೈವದೀಕ್ಷೆಯಂ ನೀಡಿಸುತೆ''[೨೦]

ರಾಘವಾಂಕ : ''ಧರಣಿಪನ ಕಟಕವೆಲ್ಲವಮಾಡಿದಪ್ರತಿಮ

ಗುರು ರೇವಣಾಚಾರ್ಯನಾವೂರ ಸೀಮೆಯೊಳು....''[೨೧]

ಚಾಮರಸ : ''ನೆರೆಹುವಂತಿರೆ ದಿವ್ಯಲಿಂಗವ

ಕೊರಳಿನಲಿಯವ ಧರಿಸಿ ಕರುಣಾ

ಕರ ಸದಾಶಿವನಾ ಮಹಾತ್ಮಂಗೆ ತಾನೇ ಗುರುವಾದ''[೨೨]

''ಗುರುವೆ ಕರುಣಿಸು ಭಕ್ತಿಭಾವದ

ಕರುವೆ ಕರುಣಿಸು ಲಿಂಗನಿಷ್ಠೆಯ

ಗುರುವ ಕರುಣಿಸು ಕರುಣಿಸೆನುತನಿಮಿಷನ ಕೊಂಡಾಡಿ...''[೨೩]

ಲಕ್ಕಣ್ಣದಂಡೇಶ : ''....ಗುರುಕಟಾಕ್ಷದಿ ದೀಕ್ಷೆಯಾದ ತದನಂತರಂ

ಗುರುವಿನನುಪಮಮೂರ್ತಿ ತದ್ಧ್ಯಾನಪರನಾಗ

ಉರುಹೃದಯದಿಂ ಗುರುವಿಗದು ಸೇವೆಯೆಂಬವನ....''[೨೪]

ಕರಸ್ಥಲದ ವೀರಣ್ಣೊಡೆಯ: ''ತನುವಿನೊಳುಂ ಸುಚಿತ್ತದೊಳುಮೊಳ್ಪಿನ ಭಾವದೊಳೆಯ್ದೆ ಲಿಂಗಮಂ

ಘನಗುರುನಾಥನೊಲ್ದಿರಿಸಲಾ ಪರಮೈಕ್ಯಮನೈದದನ್ಯ ಭಾವನೆಯೊಳೆ

ಪೂಜೆಗೆಯ್ವ ಜಡರಾ ನಿಜದಿಂ...''[೨೫]

ಕರಸ್ಥಲದನಾಗಿದೇವ : ''ಗುರುಶಾಂತಲಿಂಗ ಮೂರೇಳು ದೀಕ್ಷೆಯನಿತ್ತಾ

ತೆರನ ಪೇಳುವುದೆನ್ನ ಮತಿಗೆ......''[೨೬]

ಹರಿಹರ ಹಾವಿನಾಳ ಕಲ್ಲಯ್ಯನ ರಗಳೆಗಳಲ್ಲಿ ರುದ್ರಮುನಿ ದೇವರಿಂದ ಹಾವಿನಾಳ ಕಲ್ಲಯ್ಯನಿಗೆ ಲಿಂಗದೀಕ್ಷೆಯಾಗುತ್ತದೆ. ಅವನೇ ಕಲ್ಲಯ್ಯನಿಗೆ ಗುರು ಎನ್ನುತ್ತಾರೆ.

ರಾಘವಾಂಕ ಕವಿ ಸಿದ್ಧರಾಮಚಾರಿತ್ರದಲ್ಲಿ ರೇವಣಸಿದ್ಧನೇ ಅಪ್ರತಿಮಗುರುವೆಂದು ಹೇಳಿದರೆ, ಚಾಮರಸ ಕವಿ ಬಸವಣ್ಣನಿಗೆ ಶಿವನೇ ಲಿಂಗದೀಕ್ಷೆ ನೀಡಿ ಗುರುವಾಗುತ್ತಾನೆ. ಅನಿಮಿಷನ ಮನಬದಲಿಸಿದ ಅಲ್ಲಮಪ್ರಭು ಲಿಂಗದೀಕ್ಷೆ ನೀಡಿ ಗುರುವಾಗುತ್ತಾನೆ. ಲಕ್ಕಣ್ಣದಂಡೇಶ, ಗುರುವಿನಿಂದ ದೀಕ್ಷೆಯಾಗುತ್ತದೆ. ಆತ ತೋರಿದ ಮಾರ್ಗದಲ್ಲಿ ಶಿಷ್ಯನಡೆಯಬೇಕೆಂದು ಹೇಳಿದರೆ, ಕರಸ್ಥಲದ ನಾಗಿದೇವ ಗುರು ಮೂರು ಬಗೆಯ ದೀಕ್ಷೆ ನೀಡುತ್ತಾನೆ ಎನ್ನುತ್ತಾನೆ.

ಹೀಗೆ ಈ ಎಲ್ಲಾ ಕವಿಗಳು ಗುರುವಿನಿಂದಲೇ ಶಿಷ್ಯನಿಗೆ ದೀಕ್ಷೆಯಾಗುತ್ತದೆ ಗುರುತೋರಿದ ಸನ್ಮಾರ್ಗದಲ್ಲಿ ನಡೆಯಬೇಕು. ಎಲ್ಲಾ ಆಧ್ಯಾತ್ಮಿಕ ಸಾಧನೆಗೂ ಗುರುವೇ ಮೂಲ. ವ್ಯಕ್ತಿ ಸ್ವಂತ ಸಾಧನೆಯಿಂದ ಎಷ್ಟೇ ಜ್ಞಾನಾರ್ಜನೆಯನ್ನು ಮಾಡಿದರೂ ಅದು ಗುರುವಿನ ಮಾರ್ಗದರ್ಶನದಷ್ಟು ಫಲಕಾರಿಯಾಗದು. ಹೀಗೆ ಗುರುವಿನ ಮಹತ್ವ ಕುರಿತು ಹೇಳಿದ್ದಾರೆ. ಗುರು ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಾಗುರು ಎಂಬ ರೂಪದಲ್ಲಿಯೂ ಇರುತ್ತಾನೆಂಬ ಸುಳಿಹು ಈ ಕಾವ್ಯಗಳಲ್ಲಿ ದೊರೆಯುತ್ತದೆ.

## ೧.೨. ಲಿಂಗ

ಸದಾ ಅಂಗದ ಮೇಲೆ ಲಿಂಗ ಧರಿಸುವುದು ವೀರಶೈವನ ಪ್ರಧಾನ ಲಕ್ಷಣ. ವ್ಯಕ್ತಿ ಲಿಂಗಧರಿಸದಿದ್ದರೆ ಅವನು ಭವಿಯಾಗುತ್ತಾನೆ. ಲಿಂಗವೆಂದರೆ ಚಿಹ್ನೆ, ಗುರುತು, ಶಿವನ ಒಂದು ಪ್ರತೀಕ''[೨೭] ಅವ್ಯಕ್ತ ಪರಬ್ರಹ್ಮದ ವ್ಯಕ್ತಿ ರೂಪವೇ ಲಿಂಗ. ಶಿವಚೈತನ್ಯದ ಪ್ರತೀಕ''[೨೮] ಚನ್ನಬಸವಣ್ಣ ಹೇಳುವಂತೆ ಲಿಕಾರವೆ ಶೂನ್ಯ, ಬಿಂದುವೆ ಲೀಲೆ, ಗಕಾರವೆ ಬಿತ್ತು. ಈ ತ್ರಿವಿಧದೊಳಗಿದೆ ಲಿಂಗವೆಂಬ ಸಕೀಲ ಮುಕ್ತಿಯನ್ನು ಹೊಂದಬೇಕಾದರೆ ಅಂಗದಲ್ಲಿ ಹೆರಹಿಂಗದೆ ಲಿಂಗವನ್ನು ಧರಿಸಬೇಕು. ಹದಿನಾಲ್ಕು ಲೋಕಗಳನ್ನು ತನ್ನ ಒಡಲೊಳಗೆ ಇಂಬಿಟ್ಟುಕೊಂಡು ಲಿಂಗ ರೂಪಾಗಿ ಭಕ್ತನ ಕರಸ್ಥಲಕ್ಕೆ ಬಂದ ಅದು ಭಕ್ತನಿಂದ ಪೂಜೆಗೊಂಡಿತ್ತು.[೨೯]

ಅಲ್ಲಮ ಪ್ರಭುದೇವ ಲಿಂಗವನ್ನು ಕುರಿತು

"ಲಿಂಗವೇ ಪ್ರಾಣ ಪ್ರಾಣವೇ ಲಿಂಗವಾಯಿತ್ತು
ಆ ಲಿಂಗವೇ ಲಿಂಗಾಂಗವಾಯಿತ್ತು
ಗೊಹೇಶ್ವರ ಲಿಂಗದಲ್ಲಿ ಸರ್ವಾಂಗ ಪ್ರಾಣ
ಲಿಂಗ ಸ್ವಾಯತವಾಯಿತ್ತು ಕಾಣಾ ಚೆನ್ನಬಸವಣ್ಣಾ|''[೩೦]

ಎಂದಿದ್ದಾರೆ.

ಅಂದರೆ ವೀರಶೈವನಿಗೆ ಲಿಂಗವೇ ಪ್ರಾಣ ಪ್ರಾಣವೇ ಲಿಂಗವಾಗಿದೆ. ಅದುವೆ ಸರ್ವಾಂಗ ಪ್ರಾಣವಾಗಿದೆ. ಆ ಲಿಂಗವಿಲ್ಲದಿದ್ದರೆ ವ್ಯಕ್ತಿ ಶವಕ್ಕೆ ಸಮಾನ ಎಂಬುದು ಈ ವಚನದ ಅರ್ಥ. ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ಲಿಂಗವನ್ನು ಕುರಿತು ಈ ರೀತಿ ವಿಶ್ಲೇಷಿಸಿದ್ದಾರೆ.

**ಹರಿಹರ :** ''ವೃಷಭರಾಜಂ ಪಶುಪತಿಯನುಜ್ಞೆಯೊಡನೆ ಬಸವರಾಜನ ಹಸ್ತದೊಳು
ಸಂಗಮೇಶ್ವರ ಲಿಂಗಮಂ ಬಿಜಯಂಗೆಯ್ಸಿಕೊಟ್ಟು.....
ವೃಷಭರಾಜಂ ಮುಖಮಂಡಲಮಂ ಬಸವನ ಮಸ್ತಕದೊಳಿಟ್ಟು
ಪಂಚಾಕ್ಷರಿಯ ಸಂಚವನರುಪಿ...... ಸತ್ಯೋಪದೇಶಮಂ ಶಾಂತಮಯಂಗೆ ಮಾಡಿ''[೩೧]

''ಎಡಬಲದ ಮಾಹೇಶ್ವರರ್ಭೀತಯೊಳ್ನೊಡೆ
ಕಂಡು ದಣ್ಣಾಯಕರು ಭೋಂಕನೆ ಕಠಾರಿಯಂಕೊಂಡು''[೩೨]

''ಅತಿ ನಿಬಿಡವತಿಸಾಂದ್ರವತಿ ಸುಖಂ ಲಿಂಗದೊಳು
ಅತಿಮಾತ್ರವತಿ ಸೂಕ್ಷ್ಮವತಿಭರಂ ಲಿಂಗದೊಳು''[೩೩]

**ರಾಘವಾಂಕ :** ''.............ಗೂಢಲಿಂಗಮಂ ತೋಱು ಪಂಚಾಕ್ಷರಿಯ
ಹೃದಯಮಂ ತಿಳಿಪಿ ನಿಜಭಕ್ತಿಯಂ ·ಗುರುಪೂಜೆಯಾಗಿ ಕೈಕೊಂಡು ಬಳಿಕ
ಮೊದಲ ನಾಮವನೆ ದೀಕ್ಷಾನಾಮವಿತ್ತು''[೩೪]
......... ಹೊರಗೆ ಮಠಮಂ ಕಟ್ಟಿ
ಹಿಂದುಗೊಂಡೆಯ್ದಿ ಬಂದಣ್ಣ ಬೊಮ್ಮಯ್ಯಂಗೆ ಕರುಣದಿಂ ದೀಕ್ಷೆಯಿತ್ತು''[೩೫]

**ಲಕ್ಕಣ್ಣ ದಂಡೇಶ :** ''ಗುರುವಿನುಪದೇಶವಿಲ್ಲದ ಲಿಂಗಸೇನೆಯಂ
ಚರಿಸಲಾಗದು.........''[೩೬]

''ಗುರುಕೊಟ್ಟಲಿಂಗಮಂ ಹೃತ್ಕಮಲದೊಳ್ ಧರಿಸಿ
ಗುರುಚರಣಮಂ ನೋಡಿ ಹರುಷಿಸುತ್ತಡಿಗಡಿಗೆ
ಗುರುವಿನಾಜ್ಞಾಶಕ್ತಿ ಸುಜ್ಞಾನಪರಶುವಿಂ ಸಂಸಾರಪಾಶಗಳನು
....................
ಬಿಡದೆಚ್ಚಱಕೆಯಿಂ ಶುಚಿಯಾಗಿಯಂಗದೊಳ್
ಬಿಡೆಯದಿಂ ಲಿಂಗದ ವಿಯೋಗಮಂ ಕಂಡಾಗ ತನುವಿಗುಪಹತಿ ತಪ್ಪದ''[೩೭]

**ಚಾಮರಸ** : “ಕೈಯೊಳಗೆ ಶಿವಲಿಂಗವಿರ್ಪೊಡೆ

ಮೆಯ್ಯ ಸೋಂಕಿರಬೇಕು....

................

ಲಿಂಗದೇವಗೆ ತನ್ನಲಿಹ ಮೂ

ರಂಗವೇ ವಸ್ತ್ರಂಗಳಾದೊಡೆ

ಲಿಂಗದೆನಹಿನಲಹುದು ಸಕಲಾರಂಭವನು ಮಜೆದು...”[೩೮]

**ಕರಸ್ಥಲದ ನಾಗಿದೇವ** : “ಅಂಗದೊಳ ಹೊರಗೆ ಬೆಳಗುವ

ಲಿಂಗವ ಕರಕಮಲದಲ್ಲಿಧರಿಸಿ ಲಿಂಗವಾ....”[೩೯]

ಲಿಂಗಮುಕ್ತಿಯ ಸ್ಥಾನಲಿಂಗ ನಿನ್ನಯ ಪ್ರಾಣಲಿಂಗ ಭಾವದಿಯೊಪ್ಪುದು

ಲಿಂಗವಲ್ಲದೆ ಇತರ ದೈವಕ್ಕೆ ಎರಗದಿರು

ಲಿಂಗ ಮುಖವು ಜಂಗಮವೆಂದು ಭಾವಿಸು ನೀನು

ಲಿಂಗದಂಗವೆ ನನ್ನ ಅಂಗವೆಂದರಿಯುತೆ ಧರಿಸೆ ಲಿಂಗಸ್ವಾಯತ ದೀಕ್ಷೆಯು”[೪೦]

ಎಂದು ಈ ಮೇಲಿನ ಎಲ್ಲಾ ಕವಿಗಳು ಲಿಂಗದ ಸ್ವರೂಪ ಅದರ ಆಚರಣೆಯ ಕ್ರಮ, ಮಹತ್ವ ಇನ್ನು ಮುಂತಾದ ಅಂಶಗಳನ್ನು ವಿಶ್ಲೇಷಿಸಿದ್ದಾರೆ. ಹರಿಹರ ಕವಿ ತೆಲುಗು ಜೊಮ್ಮಯನ ರಗಳೆಯಲ್ಲಿ ಲಿಂಗವು ಪ್ರಾಣಲಿಂಗವಾಗಿದ್ದು ಶರಣರಿಗೆ ಮುಕ್ತಿ ನೀಡುವುದಾಗಿದೆ. ಬಸವರಾಜದೇವರ ರಗಳೆಯಲ್ಲಿ ಬಸವಣ್ಣನಿಗೆ ನಂದಿಯೇ ಲಿಂಗವನ್ನು ಕೊಟ್ಟು ಪಂಚಾಕ್ಷರಿ ಮಂತ್ರ ಪಠಿಸಿ ಸತ್ಯೋಪದೇಶ ಮಾಡಿ ದೀಕ್ಷೆ ನೀಡುತ್ತದೆ. ಕೇಶಿರಾಜ ದಣ್ಣಾಯಕರ ರಗಳೆಯಲ್ಲಿ ಕೇಶಿರಾಜ ಲಿಂಗಪೂಜೆ ಮಾಡಿಕೊಳ್ಳುವ ಸಮಯದಲ್ಲಿ ಗರುಡುವೊಂದು ಆ ಲಿಂಗವನ್ನು ಎತ್ತಿಕೊಂಡು ನದಿಗೆ ಹಾಕಿದಾಗ ಲಿಂಗ ತನ್ನಿಂದ ಅಗಲಿದ ಕಾರಣ ದಣ್ಣಾಯಕರು ತಾನು ಇದ್ದರೂ ಸತ್ತಂತೆ ಎಂದು ತಿಳಿದು ಪ್ರಾಣ ಕಳೆದುಕೊಳ್ಳಲು ಮುಂದಾಗುವರು. ಮಹಾದೇವಿಯಕ್ಕನ ರಗಳೆಯಲ್ಲಿ ಭವಿ ಕೌಸಿಕರಾಜನ ಸಂಬಂಧ ತೊರೆದು ಶ್ರೀಶೈಲದಲ್ಲಿ ವಾಸಿಸುತ್ತಿರುವಾಗ ಕೌಸಿಕ ಭಕ್ತನಾಗಿ ಬಂದು ಸುಖದಿಂದ ಇರಲು ಮಹಾದೇವಿಗೆ ಹಿಂತಿರುಗಿ ಬರಲು ಕೇಳಿದಾಗ ಧ್ಯಾನಾಸಕ್ತಳಾದ ಮಹಾದೇವಿಯಕ್ಕ ಲಿಂಗದಲ್ಲಿ ಅತಿನಿವಿಡ, ಅತಿಸಾಂದ್ರ ಅತಿಸುಖವಿದೆ. ಅತಿಮಾತ್ರ, ಅತಿಸೂಕ್ಷ್ಮ, ಅತಿಭರವು ಲಿಂಗದಲ್ಲಿದೆ. ಈ ಲಿಂಗಧ್ಯಾನ ಬಿಟ್ಟು ಬರಲಾರೆ ಎನ್ನುವಳು. ಹರಿಹರನ ಪ್ರಕಾರ ಲಿಂಗವು ಶರಣರಿಗೆ ಪ್ರಾಣಲಿಂಗ ಸರ್ವಸ್ವ, ಮುಕ್ತಿ ಸಾಧನ ಲಿಂಗವು ಕಳೆದು ಹೋದರೆ ಪ್ರಾಣತ್ಯಾಗಕ್ಕೂ ಸಿದ್ಧವಾಗಬೇಕು. ಲಿಂಗಧರಿಸದವನು ಭವಿಯಾಗುತ್ತಾನೆ.

ರಾಘವಾಂಕ ಕವಿ ತನ್ನ ಸಿದ್ಧರಾಮಚಾರಿತ್ರದಲ್ಲಿ ಸಿದ್ಧರಾಮನಿಗೆ ಶಿವನೇ ಗುರುವಾಗಿ ಬಂದು ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯದಲ್ಲಿ ಹುಟ್ಟುವಾಗಲೇ ಉತ್ತಮಾಂಗದಲ್ಲಿ ಮೂಡಿದ್ದ ಲಿಂಗವನ್ನೇ

ತೋರಿ, ಪಂಚಾಕ್ಷರಿಯ ಹೃದಯವನ್ನು ತಿಳಿಸಿ ನಿಜಭಕ್ತಿಯನ್ನೇ ಗುರುಪೂಜೆಯಾಗಿ ಸ್ವೀಕರಿಸಿ ಅವನಿಗೆ ಮೊದಲೇ ಇಟ್ಟಿದ್ದ 'ಸಿದ್ಧರಾಮಯ್ಯ' ಎಂಬ ನಾಮವನ್ನೇ ದೀಕ್ಷಾ ನಾಮವನ್ನಾಗಿ ಇಟ್ಟು, ಭೂತದಯಾ ವಿಚಾರವನ್ನೇ ನೇಮವಾಗಿ ಕೊಟ್ಟು ಲಿಂಗದೀಕ್ಷೆ ನೀಡಿದನು. ಶ್ರೀಶೈಲದಿಂದ ಹಿಂತಿರುಗಿ ತನ್ನ ಊರಿಗೆ ಬಂದಾಗ ತಂದೆ-ತಾಯಿಗಳು ಮನೆದೇವರಿಗೆ (ಧೂಳಿಮಾಕಾಳ) ವ್ರತನೇಮ ಮಾಡುವ ಸಿದ್ಧತೆ ಕಂಡು ಇದನ್ನು ವಿರೋಧಿಸಿ ಅನ್ಯದೈವ ಪೂಜೆ ಸಲ್ಲದೆಂದು ತನ್ನ ಮಲ್ಲಿಕಾರ್ಜುನ ಲಿಂಗವನ್ನು ತೆಗೆದುಕೊಂಡು ಮನೆಬಿಟ್ಟು ಬಂದು ಮಠ ಕಟ್ಟಿಕೊಂಡು ಇದ್ದನು. ತನ್ನ ಜೊತೆಗೆ ಬಂದ ತನ್ನ ಅಣ್ಣ ಬೊಮ್ಮಯ್ಯನಿಗೆ ತಾನೇ ಲಿಂಗದೀಕ್ಷೆ ಕೊಟ್ಟನು. ರಾಘವಾಂಕನ ಪ್ರಕಾರ ಲಿಂಗದೀಕ್ಷೆ ಪಡೆದ ವೀರಶೈವ ವ್ಯಕ್ತಿ ಬೇರೆ ದೇವರಿಗೆ ಪೂಜೆ ಮಾಡಬಾರದು. ಹಾಗೆ ಮಾಡಿದರೆ ಭವಿಗೂ ಭಕ್ತನಿಗೂ ವ್ಯತ್ಯಾಸ ಇಲ್ಲದಂತಾಗುತ್ತದೆ.

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವ ಚಿಂತಾಮಣಿಯಲ್ಲಿ ಗುರುವಿನ ಉಪದೇಶವಿಲ್ಲದೆ ಲಿಂಗವನ್ನು ಪೂಜಿಸಲಾಗದು. ಗುರುಕೊಟ್ಟಲಿಂಗವನ್ನು ಸ್ವೀಕರಿಸಿ ಗುರು ನೀಡಿದ ಜ್ಞಾನ ಶಕ್ತಿಯನ್ನು ಪಡೆದು ಸಂಸಾರ ಪಾಶಗಳಿಂದ ಮುಕ್ತಿ ಹೊಂದಿ ಶಿವನ ಕಳೆಯನ್ನು ಲಿಂಗದಲ್ಲಿ ತಂದು ಲಿಂಗವನ್ನು ಪೂಜಿಸಬೇಕು. ಈ ಸಮಯದಲ್ಲಿ ಮನಸ್ಸು ಶುದ್ಧವಾಗಿರಬೇಕು. ಲಿಂಗವು ದೇಹದಿಂದ ಅಗಲಿದರೆ ಕೇಡಾಗುವುದು. ಲಕ್ಕಣ್ಣ ದಂಡೇಶನ ಪ್ರಕಾರ ಲಿಂಗಪೂಜೆ ಮಾಡಲು ಗುರುವಿನ ಉಪದೇಶ ಮುಖ್ಯ ಲಿಂಗಪೂಜಾ ನಿರತನಾದಾಗ ಬದುಕಿನ ಜಂಜಾಟದಿಂದ ದೂರವಿದ್ದು ಮನಸ್ಸು ಶುಚಿತ್ವದಿಂದ ಕೂಡಿರಬೇಕು. ಲಿಂಗವು ಕಳೆದು ಹೋದರೆ ಆಪತ್ತು ಒದಗುವುದು.

ಚಾಮರಸ ಕವಿ ತನ್ನ ಪ್ರಭುಲಿಂಗ ಲೀಲೆ ಕಾವ್ಯದಲ್ಲಿ ಗುರುವಾದವನು ಶಿಷ್ಯನಿಗೆ ಲಿಂಗವನ್ನು ಕೊಟ್ಟು ಇದು ಪ್ರಾಣಲಿಂಗವು ನೋಡು, ಇದನ್ನು ಪ್ರಾಣದಂತೆ ತಿಳಿದು ಶರೀರದಿಂದ ಅಗಲದಂತೆ ನೋಡಿಕೋ ಎಂದು ಉಪದೇಶ ಮಾಡಿ, ಕಣ್ಣಿಗೆ ಕಾಣಿಸುವ ಆ ಇಷ್ಟಲಿಂಗವನ್ನು ಎಂದಿಗೂ ಬಿಡದೇ ಇರುವ ನಿಷ್ಠಾವಂತನಾಗು. ಕೈಯಲ್ಲಿ ಶಿವಲಿಂಗವಿದ್ದರೆ ಅದು ದೇಹವೆನ್ನೆಲ್ಲಾ ತಾಕಿದಂತಹ ಭಾವನೆ ಇರಬೇಕು. ಮೂರು ಅಂಗಗಳೇ ಲಿಂಗದೇವನಿಗೆ ವಸ್ತ್ರಗಳಾದರೆ ಲಿಂಗಸ್ಮರಣೆಗೆ ಬರುವುದು ಸಕಲಕಾರ್ಯಗಳನ್ನು ಬಿಟ್ಟು ಅಂಗಕ್ಕೆ ಸುಖವನ್ನು ಬಯಸುವುದಾದರೆ ಇಷ್ಟಲಿಂಗಪೂಜೆಯನ್ನು ಮಾಡುತ್ತಿರುವುದು ಎಂದು ಗುರು ಶಿಷ್ಯನಿಗೆ ಲಿಂಗಪೂಜೆಯ ಮಹತ್ವ ತಿಳಿಸುತ್ತಾನೆ. ಚಾಮರಸನ ಪ್ರಕಾರ ಲಿಂಗದಲ್ಲಿ ಪ್ರಾಣಲಿಂಗ, ಭಾವಲಿಂಗ, ಇಷ್ಟಲಿಂಗ ಎಂದು ಮೂರುವಿಧ. ದೇಹದಿಂದ ಲಿಂಗವು ದೂರವಾಗದಂತೆ ನೋಡಿಕೊಳ್ಳಬೇಕು. ಲಿಂಗ ಪೂಜೆಯಿಂದ ಸಕಲ ಕಾರ್ಯಗಳು ಸಿದ್ಧಿಸುವವು ಅಂಗಕ್ಕೆ ಸುಖದೊರಕುವುದು.

ಕರಸ್ಥಲದ ನಾಗಿದೇವ ತನ್ನ ಏಕವಿಂಶತಿ ದೀಕ್ಷಾವಿಧಾನ, ಶಾಂತಶತಕ ಕೃತಿಗಳಲ್ಲಿ ಗುರುವಿನಿಂದ ಶಿಷ್ಯನ ಕರಸ್ಥಲಕ್ಕೆ ಬಂದ ಲಿಂಗವು ಅಂತರಂಗ ಬಹಿರಂಗವನ್ನು ಬೆಳಗಿ ಸುಖ ನೀಡುತ್ತದೆ. ಲಿಂಗದ

ಅಂಗವೇ ತನ್ನ ಅಂಗವೆಂದರಿತು ಲಿಂಗದೀಕ್ಷೆ ಪಡೆಯಬೇಕು. ಲಿಂಗಮುಖವೇ ಜಂಗಮವೆಂದು ಭಾವಿಸಿ ಲಿಂಗವನ್ನಲ್ಲದೆ ಬೇರೆ ದೇವರಿಗೆ ನಮಿಸಬಾರದು. ಲಿಂಗದಿಂದಲೇ ಮುಕ್ತಿ ಅದುವೇ ಸ್ಥಾನಲಿಂಗ, ಪ್ರಾಣಲಿಂಗ, ಭಾವಲಿಂಗ. ನಾಗಿದೇವನ ಪ್ರಕಾರ ಲಿಂಗವು ಅಂತರಂಗ ಬಹಿರಂಗ ಬೆಳಗುವ ಜ್ಯೋತಿರ್ಲಿಂಗವಾಗಿದೆ. ಅಂಗವೇ ಲಿಂಗವೆಂದು ತಿಳಿದು ದೀಕ್ಷೆ ಪಡೆಯಬೇಕು. ಲಿಂಗದಲ್ಲಿ ಮೂರು ವಿಧ. ಲಿಂಗಬಿಟ್ಟು ಬೇರೆ ದೇವರಿಗೆ ನಮಿಸಿದರೆ ಮುಕ್ತಿ ಸಿಗಲಾರದು. ಈ ಹಿನ್ನಲೆಯಲ್ಲಿ ಮಡಿವಾಳ ಮಾಚಿದೇವ "ತನ್ನ ಲಿಂಗವ ಬಿಟ್ಟು ಅನ್ಯಲಿಂಗಕ್ಕೆ ಶರಣೆಂಬ ಕುನ್ನಿಗಳೇನೇನೆಂಬೆನಯ್ಯಾ ಕಲಿದೇವರದೇವ" ಎಂದಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಲಿಂಗವು ವೀರಶೈವನ ಅಂಗ ಮತ್ತು ಪ್ರಾಣ. ಇದು ಗುರುವಿನಿಂದ ಉಪದೇಶದ ಮೂಲಕ ದೊರಕುತ್ತದೆ. ಈ ಲಿಂಗದಲ್ಲಿ ಮೂರು ವಿಧಗಳಿವೆ. ಲಿಂಗವು ದೇಹದಿಂದ ಅಗಲಿದರೆ ಪ್ರಾಣಬಿಡಬೇಕು. ಲಿಂಗಬಿಟ್ಟು ಬೇರೆ ದೇವರಿಗೆ ಮಣಿಯಬಾರದು. ಈ ಲಿಂಗವೇ ವೀರಶೈವನಿಗೆ ಮುಕ್ತಿಯ ಸಾಧನ. ಸಕಲ ಕಾರ್ಯಗಳು ನೆರವೇರಬೇಕಾದರೆ ಇಷ್ಟಲಿಂಗ ಪೂಜೆ ಮಾಡಬೇಕು. ಯಾವಾಗಲೂ ಅಂಗದ ಮೇಲೆ ಲಿಂಗಧರಿಸಿರಬೇಕು. ಅಂಗದೊಳಗಿನ ಲಿಂಗ ಸ್ವರೂಪ ಕಂಡುಕೊಳ್ಳುವುದೇ ಭಕ್ತಿ. ಆ ಲಿಂಗ ಹಿಂಗಿದವನೇ ಭವಿ. ಲಿಂಗದ ಆರಾಧನೆಯು ಏಕದೇವೋಪಾಸನೆಯ ಮೂಲ ಉದ್ದೇಶವೆಂದು ಹೇಳಬಹುದು.

### ೧.೩. ಜಂಗಮ

ವೀರಶೈವ ಧಾರ್ಮಿಕ ಆಚರಣೆಗಳನ್ನು, ತತ್ತ್ವಗಳನ್ನು ಪ್ರಚಾರ ಮಾಡುವವನೇ ಜಂಗಮ. ಜಂಗಮನೆಂದರೆ "ಚಲನೆಯುಳ್ಳದ್ದು, ಸಂಚಾರವುಳ್ಳದ್ದು, ಲೋಕಸಂಚಾರಿ, ವಿರಕ್ತ, ಅಯ್ಯ"[೪೧] ಲೋಕಜ್ಞಾನಿ, ವೀರಶೈವ ಧರ್ಮಸಾರ ತಿಳಿದವನು, ವೀರಶೈವಧರ್ಮ ಪ್ರಚಾರಕ, ವೀರಶೈವ ಸನ್ಯಾಸಿ ಎಂಬಿತ್ಯಾದಿಯಾಗಿ ಅರ್ಥೈಯಿಸಬಹುದು. ಜಂಗಮವೆಂಬುದು ಜಾತಿ ವಾಚಕವಲ್ಲ. ಜಂಗಮಕ್ಕೆ ಜಾತಿ ಎಲ್ಲೆಗಳಿಲ್ಲ. ವೀರಶೈವ ಧರ್ಮದಲ್ಲಿ ಜಂಗಮ ಎಂಬ ಜಾತಿಯಿಲ್ಲ ಅದೊಂದು ಅಧ್ಯಾತ್ಮಿಕ ಸಾಧನೆಯಾಗಿದೆ. ಗುರುವಿನಿಂದ ದೀಕ್ಷೆ ಪಡೆದ ಭಕ್ತ ತನ್ನ ಸಾಧನೆ ಸಿದ್ಧಿಯ ಮೂಲಕ ಜಂಗಮನಾಗುತ್ತಾನೆ.

ಜಂಗಮ ಪದವನ್ನು ಹೀಗೂ ಅರ್ಥೈಯಿಸಬಹುದು. "ಜ ಎಂದರೆ ಜನನ ನಾಸ್ತಿಯಾಗಿ, ಗ ಎಂದರೆ ಗಮನ ನಾಸ್ತಿಯಾಗಿ, ಮ ಎಂದರೆ ಮರಣ ನಾಸ್ತಿಯಾಗಿ ಜ್ಞಾನಿಯಾಗಿ ಒಂದೆಡೆ ನಿಲ್ಲದೆ ತಿರುಗುವುದು ಸ್ವಯಂ ಚರ ಪರ"[೪೨] ಗಮನವುಳ್ಳದ್ದು ಜಂಗಮ. ಜಂಗಮವು ಒಂದೆಡೆ ನಿಲ್ಲದೆ ಸದಾಚರಿಸುವವನು. 'ಅಯ್ಯ', 'ವೀರಮಾಹೇಶ್ವರ', 'ಶಿವಮಾಹೇಶ್ವರ' ಹಿರಿಯ ಹರಿಕಾರ ಎಂದೆಲ್ಲಾ ಕರೆಯಲ್ಪಡುವ ಜಂಗಮವೆ ಲಿಂಗ, 'ಲಿಂಗವೆ ಜಂಗಮ' ಜಂಗಮಕ್ಕೆ ಜಾತಿಯಿಲ್ಲ. ೧೨ನೇ ಶತಮಾನದ

ಜಂಗಮರು ಹುಟ್ಟಿನಿಂದ ಯಾವುದೇ ಜಾತಿಗೆ ಸೇರಿದವರಾಗಬಹುದಿತ್ತು. ಭವಿಯೊಬ್ಬನು ಗುರುವಿನಿಂದ ದೀಕ್ಷೆ ಸ್ವೀಕರಿಸಿದ ಮೇಲೆ ತನ್ನ ವೈಯಕ್ತಿಕ ಸಾಧನೆ ಸಿದ್ಧಿಗಳ ಮೂಲಕ ಜಂಗಮನಾಗುವ ಅರ್ಹತೆ ಪಡೆಯುತ್ತಿದ್ದನು. ಉತ್ತಮರೇ ಜಂಗಮರಾಗಬೇಕೆಂಬ ನಿಯಮವೇನಿರಲಿಲ್ಲ. ಬಹುತೇಕ ವಚನಕಾರರು ಜಂಗಮನಲ್ಲಿ ಜಾತಿ ಕುಲವನ್ನರಸುವವರನ್ನು ಆಕ್ಷೇಪಿಸಿರುವರು.''[೪೩] ಅಂದರೆ ಜಂಗಮವೆಂಬುದು ವೀರಶೈವ ಆಧ್ಯಾತ್ಮಿಕ ಸಿದ್ಧಿ, ಜ್ಞಾನ ಸೂಚಕ ಎಂದು ಹೇಳಬಹುದಾಗಿದೆ. ಅದಕ್ಕಾಗಿಯೇ ಬಸವಣ್ಣನವರು ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಎಂದಿದ್ದಾರೆ.

ಜಂಗಮದ ಪರಿಕಲ್ಪನೆ ಕುರಿತು ಬಸವಣ್ಣ ತನ್ನ ವಚನಗಳಲ್ಲಿ

``ಕುಲದೈವ ಮನೆದೈವ ಎನಗೆ ಜಂಗಮವಯ್ಯಾ
ತನುಮೀಸಲು, ಮನಮೀಸಲು, ಧನಮೀಸಲು
........................''[೪೪]

``ಜಂಗಮವೆ ಲಿಂಗವೆನಗೆ, ಜಂಗಮವೆ ಪ್ರಾಣವೆನಗೆ
ಎನಗೆಯೂ ನಿನಗೆಯೂ ಜಂಗಮ ಪ್ರಸ್ತಾವನೆ ಪ್ರಾಣ''[೪೫]

ಬಸವಣ್ಣನವರಿಗೆ ಮನೆ ದೇವರು ಕುಲದೇವರು ಜಂಗಮವಾಗಿದೆ. ಆ ಜಂಗಮಕ್ಕೆ ಅವರು ದೇಹ ಮನಸ್ಸು, ಕಣ್ಣು ಹಣವನ್ನು ಮೀಸಲಿರಿಸಿದ್ದಾರೆ. ಅಲ್ಲದೆ ಜಂಗವೇ ಪ್ರಾಣಲಿಂಗವಾಗಿದೆ ಎಲ್ಲರಿಗೂ ಜಂಗಮ ಪ್ರಸಾದವೇ ಪ್ರಾಣ ಎಂದಿದ್ದಾರೆ. ಬಸವಣ್ಣನವರು ಮತ್ತೊಂದು ಕಡೆ ಜಂಗಮಕ್ಕೆ ಕುಲವುಂಟೆ? ಎಂದು ಪ್ರಶ್ನಿಸಿದ್ದಾರೆ.

ಅರುಹುವುಳ್ಳದೆ ಜಂಗಮ ಎಂದಿರುವ ಚನ್ನಬಸವಣ್ಣ

``ಗುರುವಿನ ಗುರು ಪರಮಗುರು ಜಂಗಮವೆಂದೆನಿಸಿ ಕೊಂಡಬಳಿಕ
ಗುರುವಾಗಿ ಮುಂದೆ ಉಪದೇಶವ ಮಾಡಲಾಗದು''[೪೬]

``ಜಂಗಮ ಬರಬೇಕೆಂದು ಲಿಂಗಾರ್ಚನೆಯ ಮಾಡುವುದು
ಆ ಜಂಗಮ ಬಂದರೆ, ತನ್ನ ಲಿಂಗಾರ್ಚನೆ ಮಾಣ್ದು
ಜಂಗಮಾರ್ಚನೆಯ ಮಾಡುವುದು....''[೪೭]

ಗುರುವಿನ ಗುರು ಜಂಗಮ. ವ್ಯಕ್ತಿ ಗುರುವಿನಿಂದ ದೀಕ್ಷೆ ಪಡೆದ ಮೇಲೆ ಭಕ್ತನಾಗಿ ಲೋಕ ಸಂಚಾರ ಮಾಡಿ ಜಂಗಮನಾದ ಮೇಲೆ ತನಗೆ ದೀಕ್ಷೆಕೊಟ್ಟ ಗುರುವಿನ ಮಠಕ್ಕೆ ಬಂದಾಗ ಗುರು ಆ ಜಂಗಮ ತನ್ನ ಶಿಷ್ಯನೆಂಬು ಅಹಂಕರಿಸದೆ ಇರಬೇಕು. ಜಂಗಮನು ತನ್ನ ಗುರುವೆಂದು ಭಾವಿಸಿ ಅವನ ಪಾದ ಪೂಜೆ ಮಾಡಬೇಕು. ಜಂಗಮನೂ ನಾಚಿ ತನ್ನ ಗುರುವಿನಿಂದ ಪಾದಪೂಜೆ ಮಾಡಿಸಿಕೊಳ್ಳದಿದ್ದರೆ

ಅದು ಅಪಚಾರವಾಗುತ್ತದೆ. ಭಕ್ತಲಿಂಗಾರ್ಚನೆ ಮಾಡುವಾಗ ಜಂಗಮ ಬಂದರೆ ಲಿಂಗಾರ್ಚನೆಯನ್ನು ಅಲ್ಲಿಗೆ ನಿಲ್ಲಿಸಿ ಜಂಗಮಾರ್ಚನೆ ಮಾಡಬೇಕು. ಅಂದರೆ ಜಂಗಮ ಗುರುವಿಗಿಂತ ಲಿಂಗಕ್ಕಿಂತ ಶ್ರೇಷ್ಠವೆಂದು ಚನ್ನಬಸವಣ್ಣನ ಅಭಿಪ್ರಾಯವಾಗಿದೆ.

ಹರಿಹರಾದಿ ಕವಿಗಳು ಜಂಗಮ ಪರಿಕಲ್ಪನೆಯನ್ನು ತಮ್ಮ ಕಾವ್ಯಗಳಲ್ಲಿ ಕೆಳಗಿನಂತೆ ವಿಶ್ಲೇಷಿಸಿದ್ದಾರೆ.

**ಹರಿಹರ :** "ಭವಪೂಜೆ ಬಲಿದು ಪುರುಷಾಕಾರವಾದಂತೆ
ಲಿಂಗ ಜಂಗಮವೋ ಮೇಣ್ ಜಂಗಮವೆ ಲಿಂಗವೋ
ಲಿಂಗ ಜಂಗಮವೆರಡು ಇಳೆಯೊಳು ವಿಭೇದವೋ"[೪೮]
"ಜಂಗಮದಲ್ಲಿ ಜಾತಿಯನರಸೆ"[೪೯]

ಪಲಂಬರ್ಮಾಹೇಶ್ವರರ್ದೂದ ದೇಶಾಂತರದಿಂ ಬಳಲ್ದು ಬಂದು
ಒಳಗೊಂಡು ಬಂದುಚ್ಚಾಸನತೊಳ್ಬಿಜಯಂಗೆಯ್ಸಿ ಪಾದಪ್ರಕ್ಷಾಲನದೊಡನೆ
ಪಾದೋದಕ ಸಂಪನ್ನೆಯಾಗಿ ದೇವಾರ್ಚನೆಗೆಡೆ ಮಾಡಿಸಿ....."[೫೦]

**ರಾಘವಾಂಕ :** "......ಪರಿಪರಿಯ ಶಿವಲಾಂಛನ
ನಂಗಳಿಂದುಬ್ಬಟೆಸಯ ಭಾಷೆಯ ವಿವಿಧ ನೇ
ಮಂಗಳಿಂ ಬಹಳ ಭಕ್ತಿಜ್ಞಾನ ವೈರಾಗ್ಯದಿಂದ ಬಲಿದ ತನುಗಳಾದ
ಜಂಗಮರಿನೆಸೆಯುತ್ತ ಬಹ ಪುರುಷೆಯೊಳಗೆ"[೫೧]
"ಹುಲಿಗೆಜೆಯ ಬಸದಿಯೊಳು ನಿಂದು ನಿನೆನೆದುದಂ
ಸಲಿಸುವೆನೆನಲು ಲಿಂಗ ನುಡಿವುದೇ ನೋಡುವುದೆ ಬೇಡ ಬೇಡೀ ಹುಸಿಗಳ
ಗೆಲವೆನಲು ಜಂಗಮಾಕಾರದಿಂದಂ ಬಂದು....."[೫೨]

**ಚಾಮರಸ :** "ಕರತಳದೊಳೆಡೆಗೊಂಡು ಪೂಜಾ
ತುರತೆಯಿಂದಿರುತೊಲಿದು ತಾನೇ
ಚರವನಂಗೀಕರಿಸಿ ಬಂದೊಡೆ ಲೇಸು ಲೇಸೆನುತೆ"[೫೩]

"ತನ್ನ ಕಾಯವೆ ಲಿಂಗ ನೆಟ್ಟನೆ
ತನ್ನ ಜೀವವೇ ಚಾರುಜಂಗಮ
ತನ್ನ ತಾನೇ ತಿಳಿದ ಬಸವಣ್ಣಂಗೆ ನಿಮ್ಮಡಿಗೆ
ಭಿನ್ನಭಾವನೆ ಯಾವುದೈ"[೫೪]

ಲಕ್ಕಣ್ಣದಂಡೇಶ : "...ಮುದ್ದೆನ್ನ ಗುರು ಸಂಗಯ್ಯನರ್ಚನೆಯ
ಮುದ್ದು ಮುದ್ದೆ ಸುಳಿವ ಜಂಗಮಾರಾಧನೆಗೆ ಸಿದ್ಧಗುರು ಪೂಜೆಗಳಿಗೆ"[೫೫]

"ಗುರುವು ಲಿಂಗಂ ಜಂಗಮಂ ಪಾದತೀರ್ಥಮಂ
ಪರಮಪ್ರಸಾದ ಸದ್ಭಕ್ತಿಯೆಂಬೀಯಾಱು"[೫೬]

ಕರಸ್ಥಲದ ವೀರಣ್ಣೊಡೆಯ : "ಜಂಗಮವೆಂತವನೆಂದಡೆ
ನಿಜಸ್ವರೂಪವಾದಾತನೀಗ ಜಂಗಮ
ಅಧೀನವುಳ್ಳಾತನು ಅಲ್ಲ, ಅಧೀನವಿಲ್ಲದಾತನು ಅಲ್ಲ
ಸಾಕಾರನು ಅಲ್ಲ, ನಿರಾಕಾರನು ಅಲ್ಲ"[೫೭]

ಹೀಗೆ ಹರಿಹರಾದಿ ಕವಿಗಳು ಜಂಗಮ ಪರಿಕಲ್ಪನೆಯನ್ನು ತಮ್ಮ ಕಾವ್ಯಗಳಲ್ಲಿ ಚಿತ್ರಿಸಿದ್ದಾರೆ. ಹರಿಹರ ಬಸವರಾಜದೇವರ ರಗಳೆಯಲ್ಲಿ ಜಂಗಮದಲ್ಲಿ ಜಾತಿಯನ್ನು ಹುಡುಕಬಾರದು. ಲಿಂಗವು ಜಂಗಮ, ಜಂಗಮ ಲಿಂಗವೋ ಎಂದರೆ ಇವೆರಡರಲ್ಲಿ ಭಿನ್ನತೆ ಕಾಣಲಾಗದೆಂದು ಬಸವಣ್ಣ ಪೂಜಿಸುತ್ತಾನೆ. ಜಂಗಮ, ಲಿಂಗವು ಎಲ್ಲ ಶರಣರ ಹೃದಯ ಗೆದ್ದಿದೆ. ಶಿವಜ್ಞಾನ ಸಂಪತ್ತನ್ನು ಒಳಗೊಂಡವುಗಳಾಗಿವೆ. ಹಾಗೆಯೇ ಮಹಾದೇವಿಯಕ್ಕನ ರಗಳೆಯಲ್ಲಿ ಕವಿ ಅಕ್ಕಮಹಾದೇವಿಯ ಅರಮನೆಗೆ ದೇಶಸಂಚಾರಿಯಾಗಿ ಜಂಗಮರು (ಮಾಹೇಶ್ವರರು) ಬಂದಾಗ ಅವರಿದ್ದಲ್ಲಿಗೆ ಹೋಗಿ ಅವರ ಪಾದಕ್ಕೆರಗಿದ ಅಕ್ಕಮಹಾದೇವಿ ಉನ್ನತ ಆಸನದಲ್ಲಿ ಕುಳ್ಳಿರಿಸಿ ಪಾದಪೂಜೆ ಮಾಡಿ ಪಾದೋದಕ ಸ್ವೀಕರಿಸಿ, ಅವರಿಗೆ ಲಿಂಗಪೂಜೆ ಮಾಡಿಕೊಳ್ಳಲು ಪ್ರಸಾದ ಸ್ವೀಕರಿಸಲು ವ್ಯವಸ್ಥೆ ಮಾಡಿದಳು. ಹರಿಹರನ ಪ್ರಕಾರ ಲಿಂಗ ಜಂಗಮ ಒಂದೇ. ಜಂಗಮಕ್ಕೆ ಕುಲವಿಲ್ಲ, ಜಂಗಮವು ಜ್ಞಾನ ನೀಡುವಂಥದ್ದು, ದೇಶಸಂಚಾರಿಯಾಗಿ ಬಂದ ಜಂಗಮರ ಪಾದಪೂಜೆ ಮಾಡಿ ಸತ್ಕರಿಸಬೇಕು. ಅದು ಜಂಗಮಕ್ಕೆ ನೀಡುವ ಪ್ರಾಶಸ್ತ್ಯವಾಗಿದೆ.

ರಾಘವಾಂಕ ಕವಿ ತನ್ನ ಸಿದ್ಧರಾಮ ಚಾರಿತ್ರ್ಯದಲ್ಲಿ ಜಂಗಮವೆಂದರೆ ವಿವಿಧ ಶಿವಲಾಂಛನಗಳನ್ನು ಧರಿಸಿ ಅನೇಕ ನೇಮಗಳನ್ನು ಅನುಸರಿಸುವವರು ಭಕ್ತಿ ಜ್ಞಾನ ವೈರಾಗ್ಯದಿಂದ ಕೂಡಿದವರೂ ಆಗಿದ್ದು ಆನೆಯಿಂದ ಇರುವೆಯ ತನಕ ಯಾವ ಪ್ರಾಣಿಯನ್ನೂ ನೋಯಿಸದ ದಯಾಸಂಗಿಗಳಾಗಿದ್ದಾರೆ. ಇದೇ ಕವಿ ಸೋಮನಾಥ ಚಾರಿತ್ರದಲ್ಲಿ "ಆದಯ್ಯನ ಇಷ್ಟದೈವ ಸೌರಾಷ್ಟ್ರ ಸೋಮೇಶ್ವರ ಪುಲಿಗೆರೆ ಬಸದಿಯಲ್ಲಿ ಜಂಗಮಾಕಾರದಿಂದ ಬಂದು ಲಿಂಗರೂಪಿಯಾಗಿ ನಿಲ್ಲುವನು ಆ ಮೇಲೆ ಆದಯ್ಯನೊಡನೆ ಮಾತಾಡುವನು. ರಾಘವಾಂಕನ ಪ್ರಕಾರ ಜಂಗಮಕ್ಕೆ ಅಹಿಂಸಾಪರವಾದ ಭಕ್ತಿಜ್ಞಾನ ವೈರಾಗ್ಯವಿರಬೇಕು. ಶಿವನ ಸ್ವರೂಪಿ ಜಂಗಮ ಆಗಿದ್ದಾನೆ.

ಚಾಮರಸ ಕವಿ ತನ್ನ ಪ್ರಭುಲಿಂಗ ಲೀಲೆಯಲ್ಲಿ ಬಸವಣ್ಣ ಕರಸ್ಥಲದಲ್ಲಿ ಲಿಂಗವಿಟ್ಟು ಪೂಜಾ ನಿರತನಾದಾಗ ಮಹಾಮನೆಯ ಹೊರಗಡೆ ಇದ್ದ ಅಲ್ಲಮನನ್ನು ನೆನೆದು, ಕರಸ್ಥಲದ ಲಿಂಗವೇ ಜಂಗಮ

ರೂಪತಾಳಿ ಬಂದರೆ ಒಳ್ಳೆಯದು ಎಂದು ಮನದಲ್ಲಿ ಅಂದುಕೊಂಡನು. ಬಸವಣ್ಣ ಅಲ್ಲಮನನ್ನು ಬೇರೊಬ್ಬರ ಮೂಲಕ ಮಹಾಮನೆಯ ಒಳಗಡೆ ಕರೆಸಿದಾಗ ಸಿಟ್ಟಾಗಿದ್ದ ಅಲ್ಲಮ ಬಸವಣ್ಣನೇ ಬಂದು ಪಾದಕ್ಕೆ ಬಿದ್ದು ಕ್ಷಮೆ ಕೇಳಿ ಒಳಗೆ ಕರೆ ತಂದಾಗ ಅಲ್ಲಮ ಇನ್ನೂ ಸಿಟ್ಟಿನಲ್ಲಿದ್ದುದನ್ನು ಕಂಡು ಕಿನ್ನರಿ ಬೊಮ್ಮಯ್ಯ ಬಸವಣ್ಣ ತನ್ನ ದೇಹವೇ ಲಿಂಗ ತನ್ನ ಜೀವವೇ ಜಂಗಮ ಎಂದು ತಿಳಿದುಕೊಂಡಿದ್ದಾನೆ. ಇದರಲ್ಲಿ ಯಾವುದು ಭಿನ್ನವಿಲ್ಲ ಅದನ್ನು ಮನ್ನಿಸಬೇಕು ಎನ್ನುತ್ತಾನೆ. ಚಾಮರಸನ ಪ್ರಕಾರ ಜಂಗಮವೆಂದರೆ ಲಿಂಗವೇ ಜಂಗಮ ರೂಪ ತಾಳಬೇಕು. ಭಕ್ತ ಲಿಂಗ ಪೂಜಾ ನಿರತನಾದ ಸಮಯದಲ್ಲಿ ಜಂಗಮ ಬಂದರೆ ಪೂಜೆ ಅಷ್ಟಕ್ಕೇ ನಿಲ್ಲಿಸಿ ಜಂಗಮನನ್ನು ಸ್ವಾಗತಿಸಿ ಪಾದ ಪೂಜೆಯನ್ನು ಮಾಡಿ ಸತ್ಕರಿಸಬೇಕು. ಜಂಗಮವೆಂದರೆ ದೇಹವೇ ಲಿಂಗ, ಪ್ರಾಣವೇ ಜಂಗಮವಾಗಿದೆ.

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವ ಚಿಂತಾಮಣಿಯಲ್ಲಿ ಲಿಂಗಪೂಜೆಯ ಜೊತೆಗೆ ಜಂಗಮ ಪಾದ ಪೂಜೆಯನ್ನು ಭಕ್ತ ಮಾಡಬೇಕು. ಗುರುಲಿಂಗ ಜಂಗಮ ಪಾದತೀರ್ಥವೇ ಪರಮ ಪ್ರಸಾದವಾಗಿದೆ ಅದರಿಂದ ಸದ್ಭಕ್ತಿ ದೊರಕುತ್ತದೆ. ಲಕ್ಕಣ್ಣನ ಪ್ರಕಾರ ಲಿಂಗಜಂಗಮವು ಒಂದೇಯಾಗಿದೆ ಎನ್ನಬಹುದು.

ಕರಸ್ಥಲದ ವೀರಣ್ಣೊಡೆಯ ತನ್ನ ಒಂದು ವಚನದಲ್ಲಿ ಪ್ರಾಕೃತಿಕ ಸ್ವರೂಪ ಹೊಂದಿದವನು ಜ್ಞಾನ ವೈರಾಗಿಯಾಗಿದ್ದು ನಿಷ್ಕಾಮಿಯಾದವನು ಜಂಗಮ. ಅವನು ಯಾರ ಅಧೀನವೂ ಅಲ್ಲದ ಸಾಕಾರ ನಿರಾಕಾರನೂ ಅಲ್ಲದವನು. ಸಿಟ್ಟು ಮಾಡಿಕೊಳ್ಳದವನು ಜಂಗಮ. ಅಂದರೆ ಜಂಗಮನಿಗೆ ಜ್ಞಾನ ವೈರಾಗ್ಯ ಇದ್ದು ಒಂದು ಕಡೆ ನೆಲೆ ಇಲ್ಲದಿರಬೇಕು.

ಜಂಗಮನೆಂಬುದು ಒಂದು ಆಧ್ಯಾತ್ಮ ಸಾಧನೆಯ ಸಿದ್ಧಿ, ಈ ಸಿದ್ಧಿ ಪಡೆದ ವ್ಯಕ್ತಿ ಸದಾ ಸಂಚಾರಿಯಾಗಿದ್ದು, ಭಕ್ತರ ಸತ್ಕಾರ ಸ್ವೀಕರಿಸಬೇಕು. ಜಂಗಮತ್ವಕ್ಕೆ ಕುಲ ಜಾತಿಗಳಿಲ್ಲ. ಭಕ್ತಿ ಜ್ಞಾನ ವೈರಾಗ್ಯಗಳ ಸಕಾರ ಮೂರ್ತಿಯೇ ಜಂಗಮ ಎಂಬ ಅಂಶ ತಿಳಿದುಬರುತ್ತದೆ. ದೀಕ್ಷೆ ಪಡೆದುಕೊಂಡ ಭಕ್ತ ಸರ್ವಾಂಗ ಪರಿತ್ಯಾಗಿಯಾಗಿ ಸಾಧನೆ ಸಿದ್ಧಿಗಳ ಮೂಲಕ ಜಂಗಮನಾಗುತ್ತಾನೆ. ಪರಶಿವನ ಪ್ರತಿರೂಪ ಜಂಗಮ ಎಂಬುದು ಗಮನಾರ್ಹ ಅಂಶವಾಗಿದೆ.

### ೧.೪. ಪಾದೋದಕ

ವೀರಶೈವ ಧರ್ಮದಲ್ಲಿ ಗುರು-ಜಂಗಮರ ಪಾದಗಳನ್ನು ತೊಳೆದ ನೀರು ಪಾದೋದಕವಾಗುತ್ತದೆ. ಅದು ಪವಿತ್ರವಾದ ಅರ್ಘ್ಯವಾಗಿದೆ. ಇದನ್ನು ಕರುಣ ಪ್ರಸಾದ ಎನ್ನುತ್ತಾರೆ. ಅಲ್ಲದೆ ಇದನ್ನು ಹೀಗೂ ಅರ್ಥೈಸಬಹುದು ಗುರುಲಿಂಗ ಜಂಗಮರನ್ನು ತನು-ಮನ-ಭಾವಗಳನ್ನು ಪ್ರಕಟಿಸಿಕೊಂಡು ಸಾಮರಸ್ಯ ಸ್ಥಿತಿಯನ್ನು ಹೊಂದಿದ ಜ್ಞಾನಾಮೃತವೇ ಪಾದೋದಕ. ಪಾದೋದಕ ಶಬ್ದದಲ್ಲಿನ ನಾಲ್ಕು ಅಕ್ಷರಗಳು ಕ್ರಮವಾಗಿ ಪಾವನವಾದ ಜ್ಞಾನ, ದೋಷನಾಶನ, ದಯೆ ಹಾಗೂ ಕರ್ಮನಾಶನುಗಳನ್ನು ಸೂಚಿಸುತ್ತವೆಂದು

ಸಿದ್ಧರಾಮ ತನ್ನ ಒಂದು ವಚನದಲ್ಲಿ ಹೇಳಿದ್ದಾನೆ.''[೫೮] ಅಂದರೆ ಅನೇಕ ದೋಷಗಳ ನಿವಾರಕ ಪಾದೋದಕವಾಗಿದೆ.

ಪಾದೋದಕದ ಮಹತ್ವ ಕುರಿತು ಅಮರಗುಂಡದ ಮಲ್ಲಿಕಾರ್ಜುನ ತನ್ನ ವಚನದಲ್ಲಿ

''ಗುರು ಪಾದೋದಕವು ಪರಮ ಪಾವನವೆಂದಱಿದು
ಗುರು ಪಾದೋದಕವ ಧರಿಸುವುದು
ಧರಿಸಿದಾತಂಗೆ ಅಷ್ಟಾಷಷ್ಠಿತೀರ್ಥಗಳು ತನ್ನೊಳಗಿಹವಯ್ಯಾ...''[೫೯]

ಗುರುವಿನ ಪಾದದ ಅಡಿಯಲ್ಲಿ ಸಕಲ ತೀರ್ಥಗಳಿರುವ ಕಾರಣ ಭಕ್ತನ ಗುರುವಿನ ಪಾದೋದಕ ಪಡೆದು ಸ್ವೀಕರಿಸಿದರೆ ಆತನಲ್ಲಿ ಅಷ್ಟಾಷಷ್ಠಿ ತೀರ್ಥಗಳು ನೆಲೆಗೊಳ್ಳುವವು. ಅಲ್ಲದೆ ಸಕಲ ಇಷ್ಟಾರ್ಥ ಸಿದ್ಧಿಗಳು ಸಿದ್ಧಿಸುವವು.

ಚನ್ನಬಸವಣ್ಣ ೧೦ ರೀತಿಯ ಪಾದೋದಕ ಕುರಿತು ತನ್ನ ವಚನದಲ್ಲಿ ಹೀಗೆ ಹೇಳಿದ್ದಾನೆ.

''ಪ್ರಥಮದಲ್ಲಿ ಪರುಷವೆಂಬ ಪರುಷನ ಗುಣದಿಂದ ಪಾದೋದಕ;
...............................................
...............................................
ದಶಮದಲ್ಲಿ ಹುಸಿಯಿಲ್ಲವಾಗಿ ನಿತ್ಯೋದಕ; ಇಂತೀ ದಶವಿಧ ಪಾದೋದಕವ
ತಿಳಿದುಕೊಳ್ಳಬಲ್ಲ ಕೂಡಲಚೆನ್ನಸಂಗಾ ನಿಮ್ಮ ಶರಣ''[೬೦]

ಗುರು ಪಾದೋದಕ-ಲಿಂಗಪಾದೋದಕ-ಜಂಗಮ ಪಾದೋದಕಗಳಿಗೆ ಕರುಣ ಜಲ ವಿನಯಜಲ-ಸಮತಜಲ ಎಂದೂ ಕರೆಯುತ್ತಾರೆ. ಈ ಮೂರು ಪಾದೋದಕಗಳಲ್ಲದೆ, ಕ್ರಿಯಾಭೇದದಿಂದ ಸ್ಪರ್ಶನೋದಕ-ಅವಧಾನೋದಕ-ಅಪ್ಯಾಯನೋದಕ-ಹಸ್ತೋದಕ, ಪರಿಣಾಮೋದಕ - ನಿರ್ನಾಮೋದಕ - ಸತ್ಯೋದಕಗಳೆಂದು ಏಳು ಪ್ರಕಾರಗಳಿರುತ್ತವೆ. ಹೀಗೆ ಪರಿದೋದಕದಲ್ಲಿ ೧೦ ಪ್ರಕಾರಗಳಿರುತ್ತವೆ. ಭಕ್ತನು ತನ್ನ ತರ್ಜನಿ ಬೆರಳಿನಿಂದ ಜಂಗಮನ ಬಲಪಾದದ ಹೆಬ್ಬೆರಳನ್ನು ಮೂರು ಬಾರಿ ಸ್ಪರ್ಶಿಸಿ ನಾಲ್ಕನೆಯ ಬಾರಿ ಅದೇ ಕಾಲಿನ ಮಿಕ್ಕ ನಾಲ್ಕು ಬೆರಳುಗಳನ್ನು ಒಟ್ಟಿಗೆ ಸೇರಿಸಿ ಮಾಡುವುದು ಗುರು ಪಾದೋದಕ. ಇದೇ ರೀತಿ ಎಡ ಪಾದದಿಂದ ಮಾಡಿದುದು ಲಿಂಗೋದಕ. ಇವೆರಡನ್ನು ಒಟ್ಟಿಗೆ ಮಾಡುವುದು ಜಂಗಮ ಪಾದೋದಕ. ಭಕ್ತನು ತನ್ನ ಹಸ್ತದಿಂದ ಜಂಗಮ ಪಾದಗಳನ್ನು ಸ್ಪರ್ಶಿಸಿ ಮಾಡುವುದೇ ಸ್ಪರ್ಶನೋದಕ. ಅ ಪಾದಗಳ ಮೇಲಿನ ನೀರನ್ನು ತೆಗೆದು ಮಾಡಿದುದೇ ಅವಧಾನೋದಕ. ಅದನ್ನು ವಿಶೇಷ ಅಪೇಕ್ಷೆಯಿಂದ ತಯಾರಿಸುವುದೇ ಅಪ್ಯಾಯನೋದಕ. ಕೈಗಳಿಂದ ಸ್ಪರ್ಶಿಸಿ ತಯಾರಿಸುವುದೇ ಹಸ್ತೋದಕ. ಪಾದೋದಕದ ಭಾಜನವನ್ನು ಕೈಯಲ್ಲಿ ತೆಗೆದುಕೊಂಡು ಜಂಗಮಕ್ಕೆ ನಮಸ್ಕರಿಸಿದಾಗ ಅದನ್ನು

ನಿರ್ನಾಮೋದಕವೆನ್ನುವರು. ಈ ರೀತಿ ಪಡೆದುದನ್ನು ಭಕ್ತನು ತನ್ನ ಆಚರಣೆಗಳಿಗೆ ಇಟ್ಟುಕೊಂಡಾಗ ಅದು ಸತ್ಯೋದಕ.

ಹೀಗೆ ಚನ್ನಬಸವಣ್ಣ ನಾನಾ ಪಾದೋದಕಗಳ ತಯಾರಿಕೆಯ ವಿಧಾನ ತಿಳಿಸಿದ್ದಾನೆ. ಇದರಿಂದ ಪಾದೋದಕ ತಯಾರಿಕೆ ಅದರ ಮಹತ್ವ ತಿಳಿದುಬರುತ್ತದೆ.

ಹರಿಹರಾದಿ ಕವಿಗಳು ಪಾದೋದಕದ ಮಹತ್ವ ಕುರಿತು ತಮ್ಮ ಕಾವ್ಯಗಳಲ್ಲಿ ಚಿತ್ರಿಸಿದ್ದಾರೆ.

**ಹರಿಹರ :** "ಲಿಂಗ ಮುಖದೊಳು ಕಂದೆರೆದ ಕಂದನಂ ಗಂಗಾದೇವಿಯರ್ಭಾವಿಸಿ
ನೋಡಿ ಪಾದೋದಕದಿಂದ ಮಜ್ಜನಕ್ಕೆರೆದು..."
ಬಂದು ಬಸವಣ್ಣನರಮನೆಯನೊಲವಿಂ ಪೊಕ್ಕು
ತಂದುನ್ನತಾಸನದೊಳಿರಿಸುತೆ ಮನಂ ಮಿಕ್ಕು
ಪಾದಂಗಳಂ ತೊಳೆದು ತೀರ್ಥಜಲಮಂ ತಳೆದು"[೬೧]

"ಕೈಯಂ ಮುಗಿದು ಒಳಗೊಂಡು ಬಂದುಚ್ಚಾಸನತೊಳ್ಬಿಜಯಂ
ಗೆಯ್ಸಿ ಪಾದಪ್ರಕ್ಷಾಲನದೊಡನೆ ಪಾದೋದಕ ಸಂಪನ್ನೆಯಾಗಿ"[೬೨]

**ರಾಘವಾಂಕ :** ".....ಸುಕ್ಷೇತ್ರಂಗಳೊಳಗವಱ ಪರಿಯಲ್ಲ ಸುಖವುಂಟು ಪುಣ್ಯವುಂಟ
ಕುಡಿವ ಪಾದೋದಕಂ ಪನ್ನೀರ ಪಾನವಾದಡೆ..."[೬೩]

**ಚಾಮರಸ :** "ಅದು ನಿಮಿತ್ತದಲಂತರಂಗದ
ಪದರದೊಳು ಗುರುಲಿಂಗ ಜಂಗಮ
ದೊದವನಾ ಪಾದೋದಕಾಮೃತ ಸುಪ್ರಸಾದವನು...."[೬೪]
"ಎನಲು ಪನ್ನೀರಿನಲಿ ಪಾದಾ
ರ್ಚನೆಯ ಮಲಯಜಹಿಮಗಳನು...."[೬೫]

**ಲಕ್ಕಣ್ಣದಂಡೇಶ :** "ದುರುಳ ಭೂತಪ್ರೇತಗಳು ಪಿಶಾಚಗ್ರಹಗ
ಳುಱುವ ಮುನ್ನೂಱು ರೋಗಂಗಳಪಮೃತ್ಯು ಕಂ
ದೆಡೆದು ನೋಡದೆ ತೊಲಗಿ ಹೋಹವೈ ತಮತಮಗೆ ಮತ್ತೆ ಕೇಳಾ ಮಹಿಮೆಯ
ಚಿರಕಾಲ ಪಾದತೀರ್ಥವ ಸೇವಿಸದ ಫಲವ..."[೬೬]

**ಕರಸ್ಥಲ ನಾಗಿದೇವ :** "ಗುರುಕೃಪೆಯ ಪಡದು ವರಲಿಂಗ ಕರದೊಳಗಿರಲು
ನಿರುತ ಸಂಪದವೆನಿಸಿ ತೀರ್ಥಪ್ರಸಾದತ್ರಯದೊರಕಲದು ತನ್ಮೋಕ್ಷವು"[೬೭]

ಈ ಮೇಲಿನ ಎಲ್ಲಾ ಕವಿಗಳು ಪಾದೋದಕ ಕುರಿತು ಹೇಳಿದ್ದಾರೆ. ಹರಿಹರ ಬಸವರಾಜದೇವರ ರಗಳೆಯಲ್ಲಿ ಗಂಗಾದೇವಿಯ ಗರ್ಭದಿಂದ ಹುಟ್ಟಿದ ಸಿದ್ಧರಸನಿಗೆ ಪಾದೋದಕದಿಂದ ಸ್ನಾನ ಮಾಡಿಸಿ ಜಾತಕರ್ಮ ಮಾಡಿದರು. ಅಲ್ಲದೆ ಲೋಕ ಸಂಚಾರದಿಂದ ಬಂದ ಕಿನ್ನರಿಬೊಮ್ಮಯನನ್ನು ಬಸವಣ್ಣ ತನ್ನ ಮಹಾಮನೆಗೆ ಕರೆತಂದು ಉನ್ನತ ಆಸನದಲ್ಲಿ ಕುಳ್ಳಿರಿಸಿ ಹೃನ್ಮನದಿಂದ ಪಾದತೊಳೆದು ತೀರ್ಥ ಜಲವನ್ನು ಪಡೆದುಕೊಂಡನು. ಹಾಗೆಯೇ 'ಮಹಾದೇವಿಯಕ್ಕನ ರಗಳೆ'ಯಲ್ಲಿ ಒಂದು ದಿನ ಹಲವು ಮಾಹೇಶ್ವರರು ಮಹಾದೇವಿಯಕ್ಕನ ಅರಮನೆಗೆ ಬಂದಾಗ ಅವರನ್ನು ನಿಂದಿಸಿದ ಕೌಸಿಕನನ್ನು ಬೈದು ಮಹೇಶ್ವರರಿಗೆ ಕೈಮುಗಿದು ಕಾಲಿಗೆ ಬಿದ್ದು ಒಳಗೆ ಕರೆದು ತಂದು ಉಚ್ಚ ಆಸನದಲ್ಲಿ ಕುಳ್ಳಿರಿಸಿ ಪಾದ ಪೂಜೆ ಮಾಡಿ ಪಾದೋದಕ ಪಡೆದಳು ಎಂದು ಕವಿ ಹೇಳುತ್ತಾನೆ. ಅಂದರೆ ಜಂಗಮರು ಬಂದಾಗ ಅವರನ್ನು ಮನೆಯೊಳಗೆ ಆಹ್ವಾನಿಸಿ ಅವರಿಗೆ ಉನ್ನತ ಸ್ಥಾನ ನೀಡಿ ಪಾದ ತೊಳೆದು ಪೂಜೆ ಮಾಡಿ ಪಾದೋದಕ ಸ್ವೀಕರಿಸಬೇಕು.

ರಾಘವಾಂಕ ತನ್ನ ಹರಿಶ್ಚಂದ್ರ ಚಾರಿತ್ರದಲ್ಲಿ ಪಾದೋದಕ ಕುಡಿಯುವವರಿಗೆ ಸುಖ ಪುಣ್ಯದೊರಕುತ್ತದೆ ಎಂದಿದ್ದಾನೆ. ಅಂದರೆ ಪಾದೋದಕ ಸೇವನೆಯಿಂದ ಪಾಪಗಳು ನಾಶವಾಗುತ್ತವೆ.

ಚಾಮರಸ ತನ್ನ ಪ್ರಭುಲಿಂಗಲೀಲೆಯಲ್ಲಿ ''ಪುರಾತನ ಭಕ್ತರು ತಮ್ಮೆದುರಿಗೇ ಪ್ರತಿನಿಧಿಯನ್ನು ನೇಮಿಸಿ ಅಂತರಂಗದ ಪದರದಲ್ಲಿ ಗುರು, ಲಿಂಗ, ಜಂಗಮ ಪಾದೋದಕಾಮೃತ ಸುಪ್ರಸಾದಗಳನ್ನು ಹೃದಯದಲ್ಲಿ ಕಾಣುವವರಿಗೆ ಪೂಜಿಸುವವರು. ಪ್ರಭುದೇವರು ಆರೋಗಣೆ ಮಾಡಿದಾಗ ಬಸವಣ್ಣ ಅವರ ಪಾದಗಳನ್ನು ಪನ್ನೀರಿನಿಂದ ತೊಳೆದು ಪೂಜೆ ಮಾಡಿ ಪಾದೋದಕ ಪಡೆದ. ಅಂದರೆ ಪಾದೋದಕವನ್ನು ಭಕ್ತ ಸ್ವೀಕರಿಸಿದಾಗ ಅವನಿಗೆ ಮುಕ್ತಿ ಎಂದರ್ಥ.

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವಚಿಂತಾಮಣಿ ಕಾವ್ಯದಲ್ಲಿ ಪಾದೋದಕ ಕುರಿತು ಹೀಗೆ ಹೇಳಿದ್ದಾನೆ. ಕೆಟ್ಟ ಭೂತ ಪ್ರೇತ ಪಿಶಾಚಿಗಳು ಅಲ್ಲದೆ ಮೃತ್ಯುರೂಪದ ರೋಗಗಳು ಪಾದೋದಕ ಸೇವನೆಯಿಂದ ತಾವಾಗಿಯೇ ನಾಶವಾಗುವವು. ದುಷ್ಟಗ್ರಹಗಳ ಪೀಡೆ ತೊಲಗುವುದು. ಪಾದೋದಕ ಸೇವನೆಯ ಫಲದಿಂದ ಪರಶಿವನ ಸಾಯುಜ್ಯ ದೊರೆಯುವುದು. ಅಂದರೆ ಎಲ್ಲಾ ರೋಗ ಬಾಧೆಗಳ ನಿವಾರಕ ಈ ಪಾದೋದಕವಾಗಿದೆ ಎಂದು ಹೇಳಬಹುದು.

ಕರಸ್ಥಲದ ನಾಗಿದೇವ ತನ್ನ ಏಕವಿಂಶತಿ 'ದೀಕ್ಷವಿಧಾನ ಕಾವ್ಯದಲ್ಲಿ' ಗುರುಕೃಪೆಯಿಂದ ಪಾದೋದಕ ತ್ರಯ ದೊರೆಯುವುದರಿಂದ ಮೋಕ್ಷ ಲಭಿಸುತ್ತದೆ. ಅಂದರೆ ಪಾದೋದಕದಿಂದ ಮೋಕ್ಷ ದೊರೆಯುತ್ತದೆ(ಗುರುಪಾದೋದಕ, ಕ್ರಿಯಾಪಾದೋದಕ, ಜ್ಞಾನಪಾದೋದಕ, ಇವು ಪಾದೋದಕತ್ರಯಗಳು).

ಪಾದೋದಕ ಪಾಪ ನಿವಾರಕ, ಹಲವು ರೋಗ ನಿವಾರಕ, ಮುಕ್ತಿ ಸಾಧಕವಾಗಿದೆಂದು ಹೇಳಬಹುದು.

೧.೫. ಪ್ರಸಾದ

ಪ್ರಸಾದವೆಂದರೆ ನೈವೇದ್ಯ ಮಾಡಿದ ಪದಾರ್ಥ : ದೇವರಿಗೆ ಅರ್ಪಿಸಿ ಪಡೆದುದು, ರುಚಿಕರವಾದ ಆಹಾರ, ಅನ್ನ[೬೮] ದೇವರಿಗೆ ಎಡೆ ಹಿಡಿದ ಆಹಾರ ಪದಾರ್ಥಗಳು ಎಂಬಿತ್ಯಾದಿಯಾಗಿ ಅರ್ಥೈಸಬಹುದು. ವೀರಶೈವರು ಲಿಂಗಕ್ಕೆ ಅರ್ಪಿಸಿದ ಆಹಾರ ಪದಾರ್ಥವನ್ನು ಸಾಮಾನ್ಯಾರ್ಥದಲ್ಲಿ ಪ್ರಸಾದವೆಂದು ಕರೆಯುವರು. ಚನ್ನಬಸವಣ್ಣ ಪ್ರಸಾದದ ಲಕ್ಷಣ ಕುರಿತು ತನ್ನ ವಚನದಲ್ಲಿ

"ಲಿಂಗಕ್ಕೆ ಕೊಟ್ಟು ಕೊಂಡಡೆ ಪ್ರಸಾದಿ
ಜಂಗಮವರೋಗಣೆಯ ಮಾಡಿ ಮಿಕ್ಕುದು ಪ್ರಸಾದ
ಇದೇ ಪ್ರಸಾದದಾದಿ ಕಂಡಯ್ಯಾ"

"ಶುದ್ಧ ಪ್ರಸಾದ ಲಿಂಗಮುಖದಿಂದ ಬಂದುದು
ಸಿದ್ಧಪ್ರಸಾದ ಜಂಗಮಮುಖದಿಂದ ಬಂದುದು
ಪ್ರಸಿದ್ಧಪ್ರಸಾದ ಗುರುಮುಖದಿಂದ ಬಂದುದು
..................................................
ಗುರುಪ್ರಸಾದ ತನುಶುದ್ಧ, ಲಿಂಗಪ್ರಸಾದ ಮನ ಶುದ್ಧ,
ಜಂಗಮ ಪ್ರಸಾದ ಪ್ರಾಣ ಶುದ್ಧವಾಯಿತ್ತು.
ಶರಣರ ಸಂಗದಿಂದ ಪ್ರಸಾದ ಸಾಧ್ಯವಾಯಿತ್ತು.
.................................................."[೬೯]

ಚನ್ನಬಸವಣ್ಣ ಪ್ರಸಾದದ ಪರಿಕಲ್ಪನೆ ಕುರಿತು ಈ ಮೇಲಿನ ವಚನಗಳಲ್ಲಿ ಹೇಳಿದ್ದಾರೆ. ಅವರ ಪ್ರಕಾರ ಲಿಂಗಕ್ಕೆ ಅರ್ಪಿಸಿದ್ದು ಜಂಗಮಕ್ಕೆ ನೈವೇದ್ಯ ಮಾಡಿ ಮಿಕ್ಕದ್ದು ಪ್ರಸಾದವೆನಿಸಿಕೊಳ್ಳುತ್ತದೆ ಎಂದಿದ್ದಾರೆ. ಶುದ್ಧ ಪ್ರಸಾದ ಲಿಂಗಮುಖದಿಂದ, ಸಿದ್ಧಪ್ರಸಾದ ಜಂಗಮ ಮುಖದಿಂದ, ಪ್ರಸಿದ್ಧ ಪ್ರಸಾದ ಗುರು ಮುಖದಿಂದ ಬಂದಿವೆ. ಇವುಗಳಲ್ಲಿ ಯಾವುದು ಶ್ರೇಷ್ಠವಲ್ಲ, ಯಾವುದು ಕನಿಷ್ಠವಲ್ಲ. ಈ ಮೂರು ಪ್ರಸಾದಗಳೇ ಗುರುಪ್ರಸಾದ, ಲಿಂಗಪ್ರಸಾದ ಜಂಗಮ ಪ್ರಸಾದವಾಗಿ ತನು, ಮನ, ಪ್ರಾಣವನ್ನು ಶುದ್ಧಗೊಳಿಸುತ್ತವೆ. ಈ ಮೂರು ಪ್ರಸಾದಗಳಿಂದ ದೇಹ ಪಾವನಗೊಳ್ಳುತ್ತದೆ. ಬದುಕು ಸಾರ್ಥಕಗೊಳ್ಳುತ್ತದೆ.

ಬಸವಣ್ಣನವರು "ಗುರುವಾದಡೂ ಆಗಲಿ, ಲಿಂಗವಾದಡೂ ಆಗಲಿ, ಜಂಗಮವಾದಡೂ ಆಗಲಿ, ಪಾದೋದಕ ಪ್ರಸಾದವಿಲ್ಲದ ಪಾಪಿಯ ಮುಖವ ನೋಡಲಾಗದು."[೭೦] ಎಂದಿದ್ದಾರೆ. ಅಂದರೆ ಭಕ್ತನಾದವನಿಗೆ ಪಾದೋದಕದಷ್ಟೇ ಪ್ರಸಾದ ಬಹಳ ಮುಖ್ಯವಾದದ್ದು ಎಂದು ಅರ್ಥ.

ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ತಮ್ಮದೇ ನೆಲೆಯಲ್ಲಿ ಪ್ರಸಾದ ಕುರಿತು ಚಿತ್ರಿಸಿದ್ದಾರೆ.

**ಹರಿಹರ :** "ಎಡೆ ಮಾಡಿದೆಡೆಗಳೊಳೆ ಲಿಂಗಾರ್ಚನೆಗೆ ಮಿಕ್ಕು

..........................................

ಸಂಗಡಂ ಲಿಂಗಪ್ರಸಾದಮಂ ಕೈಕೊಂಡು

ಹಿಂಗದಾನಂದ ಸುಖಮಂ ಮನದೊಳೆಡೆಗೊಂಡು"[೨೧]

"ಶಿವಲಿಂಗದಾರೋಗಣೆಯ ಸಮಯ............

ನಾಗಿದೇವನೆಂಬ ಹಿರಿಯ ಮಾಹೇಶ್ವರರ ಮನೆಯಂ ಪೊಕ್ಕು,

ಸಂಗ ಪ್ರಸಾದದಲವರ ಪ್ರಸಾದಮಂ ಬೆರೆಸಿ....."[೨೨]

"ಲಿಂಗಾರ್ಚನಂಗೆಯ್ದೂರೋಗಣೆಗೆಡೆಮಾಡಿ, ಸಪಙ್ತಿಯಲ್ಲಿ

ಪ್ರಸಾದಮಂ ಕೈಕೊಂಬಲ್ಲಿ ...."[೨೩]

**ರಾಘವಾಂಕ :** "ಗುರುಗಳೆಂಬುದು ದೇವರವರೆಂದ ವರಗಣೇ

ಶ್ವರನೀತನಾ ಪೆಸರನಿಟ್ಟು ಲಿಂಗವ ತೋಱಿ

ಪರಮ ಪ್ರಸಾದಮಂ ಬಾಯ್ವೆಣ್ಣೆಯಿಕ್ಕೆ...."[೨೪]

**ಚಾಮರಸ :** ".....ಗುರು ಲಿಂಗ ಜಂಗಮ

ಕಱುಣಿಸಿದ ಪಾದೋದಕವನಾ ಸುಪ್ರಸಾದವನು

ಧರಿಸುತಿರ್ದೊಡೆ ಸತ್ಯಭಕ್ತಿಯ...."[೨೫]

**ಲಕ್ಕಣ್ಣದಂಡೇಶ :** "ಚರಲಿಂಗ ಬಾಣಲಿಂಗಂ ಲೋಹಮಯಲಿಂಗ

ವರರತ್ನಲಿಂಗಂ ಸ್ವಯಂಭುಲಿಂಗಂಗಳಿಂ

ದೊರೆವಡೆದ ಪರಮಪ್ರಸಾದಂಗಳಂ ಭುಂಜಿಸಲ್ಪಹುದು ಮಾನುಷ್ಯರು

ಗುರುಪ್ರತಿಷ್ಠಿತವಾದ ಲಿಂಗ ಪ್ರಸಾದದಿಂ..."[೨೬]

"ನಿರುತ ಪ್ರಸಾದವುಂ ಮೂಱು ವಿಧವುಂಟಲ್ಲಿ

ಉರುಶುದ್ಧ ಸಿದ್ಧ ಪ್ರಸಿದ್ಧಮೆನಲದಱೊಳಂ

ವರ ಲಿಂಗಮುಖಸಮರ್ಪಿತ ಶುದ್ಧವೆನಿಸುವುದು ಚರಲಿಂಗಕರ್ಪಿಸಿದುದು..."[೨೭]

ಈ ಮೇಲಿನ ಎಲ್ಲಾ ಕವಿಗಳು ಪ್ರಸಾದದ ಮಹತ್ವ ಕುರಿತು ವಿಶ್ಲೇಷಿಸಿದ್ದಾರೆ. ಹರಿಹರ ಕವಿ ತನ್ನ ತೆಲುಗು ಬೊಮ್ಮಯ್ಯನ ರಗಳೆಯಲ್ಲಿ ಲಿಂಗಕ್ಕೆ ಅರ್ಪಿಸಿ ಉಳಿದದ್ದು ಪ್ರಸಾದ. ಅದನ್ನು ಬೊಮ್ಮಯ್ಯ ಶಿವಲಿಂಗ ಪೂಜೆ ಮುಗಿದ ಮೇಲೆ ಕೇಶಿರಾಜ ದಣ್ಣಾಯಕರ ಜೊತೆ ಲಿಂಗಪ್ರಸಾದವನ್ನು ಸ್ವೀಕರಿಸಿದನು. ಇದರಿಂದ ಆತನಿಗೆ ಮನಸಿನಲ್ಲಿ ಹಿಂಗದ ಆನಂದ ಮತ್ತು ಸುಖದೊರಕಿತು. ಇದೇ

ಕವಿ ಬಸವರಾಜ ದೇವರ ರಗಳೆಯಲ್ಲಿ ಕಿನ್ನರಿ ಬೊಮ್ಮಯನನ್ನು ಗುರುವಿನೋಪಾದಿಯಲ್ಲಿ ಸತ್ಕರಿಸಿ ದೇವರ ಪೂಜೆಗೆ ವ್ಯವಸ್ಥೆ ಮಾಡಿ ಪೂಜೆ ಮುಗಿದ ಮೇಲೆ ಆತನೊಂದಿಗೆ ಪ್ರಸಾದ ಮಾಡಿದ ಇದು ಗುರುಕರುಣಿಸಿದ ಪ್ರಸಾದ ಮತ್ತೊಂದು ದಿನ ಬಸವಣ್ಣ ಶಿವಲಿಂಗ ಪೂಜೆಯ ಸಮಯದಲ್ಲಿ ಸಂಬೋಳಿ ನಾಗಿದೇವನ ಮನೆಗೆ ಹೋಗಿ ತಾನು ತಂದಿದ್ದ ಸಂಗಮದೇವನ ಪ್ರಸಾದದೊಂದಿಗೆ ನಾಗಿದೇವನ ಪ್ರಸಾದ ಬೆರೆಸಿ ಇಬ್ಬರೂ ಪ್ರಸಾದ ಸ್ವೀಕರಿಸಿದರು. ಮತ್ತೊಂದು ಸಂದರ್ಭದಲ್ಲಿ ಬಸವಣ್ಣ ಮನೆಗೆ ಬಂದ ಮಹಾದೇವಿ ಶೆಟ್ಟಿಯೊಂದಿಗೆ ಲಿಂಗಪೂಜೆಯಿಂದ ಮಿಕ್ಕ ಪ್ರಸಾದ ಸೇವಿಸಿದನು ಎಂದಿದ್ದಾರೆ. ಅಂದರೆ ಇಲ್ಲಿ ಪ್ರಸಾದವೆಂಬುದು ಲಿಂಗಕ್ಕೆ ಅರ್ಪಿಸಿದುದು, ಗುರುಕರುಣಿಸಿದುದು ಎಂದರ್ಥ.

ರಾಘವಾಂಕ ತನ್ನ ಸೋಮನಾಥ ಚಾರಿತ್ರದಲ್ಲಿ ಗುರು ಮತ್ತು ದೇವರು ಗಣೇಶ್ವರರೆಂದು ಹೆಸರಿಟ್ಟು ಲಿಂಗ ತೋರಿ ಅದಕ್ಕೆ ಹಿಡಿದ ಎಡೆ ಪರಮ ಪ್ರಸಾದವಾಗುತ್ತದೆ. ಗುರು ಮತ್ತು ದೇವರ ಸಮ್ಮುಖದಲ್ಲಿ ಲಿಂಗಕ್ಕೆ ಅರ್ಪಿಸಿದ ಬೋನ ಪ್ರಸಾದವಾಗುತ್ತದೆ ಎಂದಿದ್ದಾನೆ ಕವಿ.

ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ ಗುರುಲಿಂಗ ಜಂಗಮಗಳು ಅನುಗ್ರಹಿಸಿದ ಪಾದೋದಕ ಪ್ರಸಾದಗಳನ್ನು ಸ್ವೀಕರಿಸುತ್ತಿದ್ದರೆ ಸತ್ಯ ಹಾಗೂ ಭಕ್ತಿಗಳ ಅಭಿವೃದ್ಧಿಗೆ ಅವನು ಅಧಿಕಾರಿಯಾಗಿ ಕೈವಲ್ಯವನ್ನು ಪಡೆಯುವನು. ಅಂದರೆ ಸತ್ಯ, ಭಕ್ತಿ, ಕೈವಲ್ಯ ಪಡೆಯಲು ಪ್ರಸಾದ ಅವಶ್ಯಕ.

ಲಕ್ಕಣ್ಣ ದಂಡೇಶ ತನ್ನ ಶಿವತತ್ತ್ವ ಚಿಂತಾಮಣಿಯಲ್ಲಿ ಪ್ರಸಾದವು ಚರಲಿಂಗ, ಬಾಣಲಿಂಗ, ಲೋಹಮಯುಲಿಂಗ, ವರರತ್ನಲಿಂಗ ಸ್ವಯಂಭುಲಿಂಗಗಳಿಂದ ದೊರಕುವುದು. ಇದನ್ನು ಶರಣರು ಸ್ವೀಕರಿಸುತ್ತಾರೆ. ಗುರುವಿನಿಂದ ಅನುಗ್ರಹಿಸಲ್ಪಟ್ಟ ಲಿಂಗ ಪ್ರಸಾದವು ಒಂದು ಸಂಪತ್ತು ಇದ್ದ ಹಾಗೆ. ಇದು ಭೂತ ಪಿಶಾಚಿಗಳನ್ನು ಓಡಿಸುವ ಮದ್ದು ಇದ್ದ ಹಾಗೆ. ಈ ಪ್ರಾಸದದಲ್ಲಿ ಮೂರು ವಿಧಗಳಿವೆ. ಶುದ್ಧ-ಸಿದ್ಧ-ಪ್ರಸಿದ್ಧ ಎಂದು. ಲಿಂಗ ಮುಖದಲ್ಲಿ ಸಮರ್ಪಿತವಾದದ್ದು ಶುದ್ಧ ಪ್ರಸಾದ, ಚರಲಿಂಗಕ್ಕೆ ಅರ್ಪಿಸಿದುದು ಸಿದ್ಧ ಪ್ರಸಾದ ಹಾಗೂ ಗುರುಭಕ್ತದಿಂದ ಎಳೆದದ್ದು ಪ್ರಸಿದ್ಧ ಪ್ರಸಾದವಾಗುತ್ತದೆ ಎಂದಿದ್ದಾನೆ. ಅಂದರೆ ಇಲ್ಲಿ ಪ್ರಸಾದದಲ್ಲಿ ಮೂರುವಿಧ ಅವುಗಳ ಸೇವನೆಯಿಂದ ದುಷ್ಟಗ್ರಹಗಳ ಭಾದೆ ತಪ್ಪುತ್ತದೆ ಎಂದು ಅರ್ಥೈಸಲಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಪ್ರಸಾದವು ಗುರು ಕರುಣೆಯಿಂದ ಸಿಗುವುದು. ಲಿಂಗಕ್ಕೆ ಅರ್ಪಿಸಿ ಮಿಕ್ಕದ್ದು ಪ್ರಸಾದವೆನಿಸುತ್ತದೆ. ಗುರು, ಜಂಗಮರು ಮನೆಗೆ ಬಂದಾಗ ಅವರನ್ನು ಸ್ವಾಗತಿಸಿ ಸತ್ಕರಿಸಿ ಪೂಜೆ ಮಾಡಿಸಿ ಪ್ರಸಾದ ಪಡೆಯಬೇಕು. ಪ್ರತಿನಿತ್ಯ ಲಿಂಗಪೂಜೆ ಮಾಡಿ ಅದಕ್ಕೆ ನಾವು ತಿನ್ನುವ ಅಹಾರವನ್ನು ಎಡೆಹಿಡಿದು (ನೈವೇದ್ಯ) ಅದನ್ನೇ ಪ್ರಸಾಸದವೆಂದು ಸ್ವೀಕರಿಸಬೇಕು. ಈ ಪ್ರಸಾದದಲ್ಲಿ ಶುದ್ಧ-ಸಿದ್ಧ ಪ್ರಸಿದ್ಧ ಎಂಬ ಮೂರು ವಿಧ. ಇವೇ ಗುರುಪ್ರಸಾದ, ಲಿಂಗಪ್ರಸಾದ, ಜಂಗಮ

ಪ್ರಸಾದಗಳಾಗುತ್ತವೆ. ಈ ಪ್ರಸಾದಗಳ ಸೇವನೆಯಿಂದ ಭೂತ ಪಿಶಾಚಿಗಳ ಪೀಡೆ, ಪಾಪಗಳು ನಾಶ, ರೋಗಗಳು ನಿವಾರಣೆಯಾಗುತ್ತವೆ ಎಂದು ಹರಿಹರಾದಿ ಕವಿಗಳ ಕಾವ್ಯಗಳಲ್ಲಿ ಅಭಿವ್ಯಕ್ತಗೊಂಡಿದೆ.

## ೧.೬. ವಿಭೂತಿ

ವಿಭೂತಿ ಧಾರಣೆ ವೀರಶೈವನ ಲಕ್ಷಣಗಳಲ್ಲಿ ಒಂದು. ವಿಭೂತಿ ಎಂದರೆ 'ಮಹಿಮೆ ಸಿರಿಸಂಪತ್ತು, ಕೀರ್ತಿ, ಯಶಸ್ಸು, ಮಹಿಮಾಶಾಲಿ, ಹಸುವಿನ ಸಗಣಿಯ ಬೂದಿ, ಭಸ್ಮ''[೭೮] ಆಕಳ ಸಗಣಿಯನ್ನು ಸುಟ್ಟು ಉಳಿದ ಬೂದಿ ಎಂಬಿತ್ಯಾದಿಯಾಗಿ ಅರ್ಥೈಸಬಹುದು. ಇಲ್ಲಿ ವಿಭೂತಿ ಎಂದರೆ ಆಕಳ ಸಗಣಿಯನ್ನು ಸುಟ್ಟು ಉಳಿದ ಬೂದಿಯಿಂದ ತಯಾರಿಸಿದ ಭಸಿತವೇ ವಿಭೂತಿಯಾಗಿದೆ. ಇದನ್ನು ವೀರಶೈವನು ದೇಹದ ಅಂಗಾಂಗಗಳಿಗೆ ಲೇಪಿಸಿಕೊಳ್ಳುತ್ತಾನೆ. ಮುಖ್ಯವಾಗಿ ಹಣೆಯ ಮೇಲೆ ಯಾವಾಗಲೂ ತ್ರಿಪುಂಡ ಭಸ್ಮಧರಿಸುತ್ತಾನೆ. ಇದು ವೀರಶೈವನ ಪಾಲಿಗೆ ಸಿರಿ, ಸಂಪತ್ತೇ ಆಗಿದೆ. ವಿಭೂತಿ ಬಹಿರಂಗದ ಲೇಪನದ ವಸ್ತುವಾದರೂ ಅದನ್ನು ಅಂತರಂಗದ ಅನುಭವಕ್ಕೆ ಪ್ರೇರಕವಾಗುವಂತೆ ಶರಣರು ಅಳವಡಿಸಿದ್ದಾರೆ. ಗೋವಿನ ಸಗಣಿಯನ್ನು ಸ್ವಚ್ಛವಾದ ಸ್ಥಳದಲ್ಲಿ ಚೂರ್ಣ ಮಾಡಿ ಒಣಗಿಸಿ, ಕ್ರಿಯಾಗ್ನಿಯಿಂದ ದಹಿಸಿದ ಬೂದಿಯ ಧೂಳಪಾದೋದಕದಲ್ಲಿ ಶೋಧಿಸಿ, ಅದರ ತಿಳಿಯನ್ನು ತೆಗೆದು ಘಟ್ಟಿಯ ಮಾಡಿ ಅದನ್ನು ಧರಿಸಿದ ಲಿಂಗ ಭಕ್ತನಿಗೆ ಗುರು ದೀಕ್ಷೆಯುಂಟಾಗುವುದು; ಉಪಾಧಿಭಕ್ತನಿಗೆ ಗುರು-ಲಿಂಗ-ಜಂಗಮದ ಸದ್ಭಕ್ತಿ ದೊರೆಯುವುದು; ನಿರುಪಾಧಿ ಭಕ್ತನಿಗೆ ತ್ರಿವಿಧ ಪಾದೋದಕ ಪ್ರಸಾದ ದೊರೆಯುವುದು; ಸಹಜ ಭಕ್ತನಿಗೆ ಸಚ್ಚಿದಾನಂದಪದ ದೊರೆಯುವುದು.''[೭೯] ಕೂಡಲಸಂಗನ ಶರಣರಿಗೆ ನೊಸಲ ವಿಭೂತಿಯೇ ಶೃಂಗಾರವೆಂದೂ, ಅಡ್ಡವಿಭೂತಿಯಿಲ್ಲದವರ ಮುಖವ ನೋಡಲಾಗದೆಂದು ಬಸವಣ್ಣ ಹೇಳಿದ್ದಾನೆ.

ಆದಯ್ಯ ವಿಭೂತಿಯ ಉತ್ಪತ್ತಿ ಮತ್ತು ಮಹತ್ವ ಕುರಿತು ತನ್ನ ವಚನದಲ್ಲಿ ಹೀಗೆ ಹೇಳಿದ್ದಾನೆ.

''ಪಂಚಬ್ರಹ್ಮದಿಂದುದಯವಾದ ನಂದಿ, ಭದ್ರೆ, ಸುರಭಿ, ಸುಶೀಲೆ ಸುಮನೆ
ಎಂಬ ಪಂಚ ಗೋವಿನಿಂದಾದ ಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷೆ
ಎಂಬ ಪಂಚ ನಾಮವಾಯಿತ್ತು....''[೮೦]

ಆದಯ್ಯ ಹೇಳುವಂತೆ ವಿಭೂತಿಯು ನಂದಿ, ಭದ್ರೆ, ಸುರಭಿ, ಸುಶೀಲೆ, ಸುಮನೆ ಎಂಬ ಐದು ಗೋವುಗಳಿಂದ ಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷೆ ಎಂಬ ಐದು ರೀತಿಯ ವಿಭೂತಿಗಳು ಹುಟ್ಟಿದವು. ಅವುಗಳು ಶಿವಜ್ಞಾನ ಸುಖದ ಮಹದೈಶ್ವರ್ಯ ಸ್ವರೂಪ ಭೂತಿ, ಸಕಲ ಕಾಮ-ಬಯಕೆಗಳನ್ನು ಸುಟ್ಟು ನಿಷ್ಕಾಮ ರೂಪ, ಭಸಿತ, ಹಳೆಯ ಕರ್ಮವನ್ನು ಕಳೆಯುವುದರಿಂದ ಭಸ್ಮವಾಯಿತು. ಅಮೇಧ್ಯ ಮಾಯೆ ಜಾಲವನ್ನು ಕಳೆಯುವುದರ ಮೂಲಕ ಕ್ಷಾರವಾಯಿತು. ಭೂತ ಪ್ರೇತ ಪಿಶಾಚಿ ರಾಕ್ಷಸಗಳನ್ನು ಓಡಿಸುವುದರ ಮೂಲಕ ರಕ್ಷೆಯಾಯಿತು. ಇಂತಹ ಮಹಿಮೆ ವಿಭೂತಿಯಲ್ಲಿ ಅಡಗಿದೆ ಎಂದು ಆದಯ್ಯ

ಹೇಳುತ್ತಾನೆ. ಈ ವಚನದಲ್ಲಿ ಐದು ಆಕಳುಗಳಿಂದ ಐದು ರೀತಿಯ ವಿಭೂತಿಗಳ ಹುಟ್ಟು ಅವುಗಳ ಮಹತ್ವ ತಿಳಿಸಲಾಗಿದೆ.

ಹಡಪದ ಅಪ್ಪಣ್ಣ ವಿಭೂತಿಯ ಮಹತ್ವ ಕುರಿತು ಹೀಗೆ ಹೇಳಿದ್ದಾನೆ.

"ಶ್ರೀ ವಿಭೂತಿಯ ಬಿಟ್ಟು ತಪಸ್ಸು ಮಾಡಿದಡೆ, ಆ ತಪಸ್ಸಿನ ಸಿದ್ಧಿ ಬಯಲು
ಶ್ರೀ ವಿಭೂತಿಯ ಬಿಟ್ಟು ದೀಕ್ಷೆಯ ಕೊಂಡಡೆ, ಆ ದೀಕ್ಷೆಯೆಲ್ಲಾ ಬಯಲು
......................"[೮೧]

ಶ್ರೀವಿಭೂತಿಯ ಬಿಟ್ಟು ತಪಸ್ಸು ಮಾಡಿದರೆ, ದೀಕ್ಷೆ ಕೊಂಡರೆ, ದೇವರಪೂಜೆ ಮಾಡಿದರೆ, ಅವುಗಳ ಸಿದ್ಧಿ ಬಯಲಾಗುತ್ತದೆ. ಅಂದರೆ ಅದರ ಫಲ ದೊರಕುವುದಿಲ್ಲ. ಹಾಗಾಗಿ ಇಂಥ ಮಹೋನ್ನತ ಭಸಿತ ಬಿಟ್ಟ ಮಹಾಪಾತಕನಿಗೆ ಯಾವ ಕಾರ್ಯವೂ ಸಿದ್ಧಿಸುವುದಿಲ್ಲ. ಆ ಕಾರ್ಯಗಳಲ್ಲಿ ಭಸ್ಮ ಬಿಟ್ಟು ಕೆಲಸ ಮಾಡುವವನಿಗೆ ಯಶಸ್ಸು ದೊರಕುವುದಿಲ್ಲ.

ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ವಿಭೂತಿಯ ಮಹತ್ವ ಕುರಿತು ದಾಖಲಿಸಿದ್ದಾರೆ.

**ಹರಿಹರ :** "ಪರಮಜ್ಞಾನಂ ತ್ರಿಪುಂಡ್ರಂ ಪರಮಗುರುತರಾಯುಷ್ಕರಂ ಶ್ರೀತ್ರಿಪುಂಡ್ರಂ
....................
ಬಾಲಕರ್ಗೆ ಭಯವಿದರ್ಗೆ ಭೂತ(ಪ್ರೇತ) ಸೋಂಕಿದರ್ಗೆ
ಬಾಳತಿಗೆ ರುಜಾಧಿಕಗೆಯುಗ್ರದೈವ ಪಿಡಿದವರ್ಗೆ
ಸಂಚಿಸಿರ್ದ ಪೂರ್ವಜನ್ಮದುಃಖ(ತಾಪ)ವಡಿಸಿದವರ್ಗೆ
ಪಂಚ ಪಾತಕಂಗಳೊಳ್ ಪೊರಳ್ವಪಾರ ಪಾತಕರ್ಗೆ
..........................................
ಶಿಕ್ಷೆಗಾಗಿ ದೀಕ್ಷೆಗಾದಿ ಮೋಕ್ಷಗಾದಿಯೀ ವಿಭೂತಿ....."[೮೨]

**ಲಕ್ಕಣ್ಣದಂಡೇಶ :** ".....ಧರೆಗೆ ಮಂಗಳವಾಗಿ
ಉಱುವ ಭೂತಪ್ರೇತಗಳ್ ನಿವಾರಣವಾಗಿ
ನರರು ಮಾಡಿದ ಸರ್ವಪಾಪಂಗಳ ನಿತುಮಂ ಪರಿಹಾರಣಾರ್ಥಮಾಗಿ
..........................................
ವರವಿಭೂತಿರ್ಭಸಿತ ಭಸ್ಮಕ್ಷಾರಂ ರಕ್ಷೆ
..........................................
ಸಿರಿಯುಂ ವಿಭೂತಿ ಸುಜ್ಞಾನಮಯ ಭಸಿತದಿಂ

ದುರು ಮಹಾಪಾತಕವ ಸಂಹರಿಪುದಾ ಭಸ್ಮ

ಪರಿಪರಿಕು ದುಷ್ಕೃತದ ಕ್ಷಾರಮೆಂದಱುಪುವನ......"[೮೩]

**ಚಾಮರಸ :** "ಪರಮ ನೀನಹೆಯೆಂದು ನೊಸಲಲಿ

ಬರೆವನಂತಿರಲಿಟ್ಟು ಭೂತಿಯ ನಿರುತ...."[೮೪]

**ಕರಸ್ಥಲದ ವೀರಣ್ಣೊಡೆಯ :** "ಭಸ್ಮ ಭೂಸಿತ ಪ್ರಸಾದ ಮಂತ್ರ ಓಂ ನಮಃಶಿವಾಯ

......................

ಭೂತಿ ಭಸಿತಾಂಗ ಯಜಸುಸಿಶೇಖ ಓಂ ನಮಃ ಶಿವಾಯ"[೮೫]

**ಕರಸ್ಥಲದ ನಾಗಿದೇವ :** "ವರಭಸ್ಮ ಚಿತ್ಕರುಣದೃಗ್ಬಿಂದು ರುದ್ರಾಕ್ಷ ಶಿವಮಂತ್ರ ಮಾತೃಸ್ಥಾನ"[೮೬]

ಹೀಗೆ ಹರಿಹರಾದಿ ಕವಿಗಳು ವಿಭೂತಿ ಕುರಿತು ದಾಖಲಿಸಿದ್ದಾರೆ. ಹರಿಹರ ತನ್ನ ವಿಭೂತಿ ರಗಳೆಯಲ್ಲಿ ವಿಭೂತಿ ಆಯುಷ್ಯ, ಜ್ಞಾನ, ಗುರು (ತ್ರಿಪುಂಡ್ರ) ಪ್ರತೀಕವಾಗಿದೆ. ಅದು ಭಕ್ತ (ಶರಣ) ಕುಲದ (ವೀರಶೈವ) ಬಾಳ ತಳಹದಿಯ ತಿಲಕ ಮುಕ್ತಿಫಲದ ಚೆಲುವು. ಅಂತರಂಗದ ಕೊಳೆಯನ್ನು ತೊಳೆಯುವ ಪವಿತ್ರ ತೀರ್ಥ. ಇದು ಶಿವನಿಂದ ಹುಟ್ಟಿ ಆತನ ಸ್ಪರ್ಶದಿಂದ ಕೀರ್ತಿ ಪಡೆದದ್ದಾಗಿದೆ. ಈ ವಿಭೂತಿಯು ಬಾಲಕರಿಗೆ ಭಯವಿದ್ದವರಿಗೆ ಭೂತ ಪ್ರೇತ ಹಿಡಿದವರಿಗೆ, ರೋಗ-ರುಜಿನ ಬಂದವರಿಗೆ, ದುಃಖ, ದುಮ್ಮಾನ ಬಂದವರಿಗೆ, ಪಂಚಪಾಪ ಕರ್ಮ ಮಾಡಿದವರಿಗೆ ಇದೇ ಮದ್ದು ಇದೇ ವ್ರತ, ಹಿತ ಶ್ರುತವಾದದ್ದಾಗಿದೆ. ದೀಕ್ಷೆ, ಶಿಕ್ಷೆ, ಮೋಕ್ಷಕ್ಕೆ ಇದು ಹಾದಿ. ಮಂಗಳಕ್ಕೆ ಮುಖ್ಯ ಮಂಗಳ. ವಿಭೂತಿಧಾರಣೆಯಿಂದ ಕಷ್ಟಗಳನ್ನು ನಿವಾರಿಸಿ ಬದುಕಿನ ಎಲ್ಲಾ ಕಾರ್ಯಗಳಲ್ಲಿ ಯಶಸ್ಸು ಸಿಗುವಂತೆ ಮಾಡುತ್ತದೆ. ಶರಣರ ಹುಟ್ಟನ್ನು ಅಡಗಿಸಿ ಮೋಕ್ಷ ದೊರಕಿಸುವುದು. ವಿಭೂತಿ ಧಾರಣೆಯಿಂದ ಪರಮ ಸುಖಃ ದೊರಕುತ್ತದೆ. ಹರಿಹರ ಭೂತಿ, ಭಸ್ಮ, ಭಸಿತ, ಕ್ಷರಾ, ರಕ್ಷೆ ಎಂಬ ಐದು ರೀತಿಯ ವಿಭೂತಿಯ ವಿಧಗಳನ್ನು ತಿಳಿಸಿದ್ದಾನೆ.

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವ ಚಿಂತಾಮಣಿಯಲ್ಲಿ ವಿಭೂತಿ ಭೂಮಿಯಲ್ಲಿ ಮಂಗಳಕರವಾದದ್ದು. ಇದನ್ನು ಪರಮ ಶಿವನು ಗುರುತ್ವ ಬೋಧನೆಗೆ, ಪರಮರಕ್ಷಣೆಗಾಗಿ ಸೃಷ್ಟಿಸಿದನು. ಇದು ಭೂತ ಪ್ರೇತ ನಿವಾರಣೆಗಾಗಿ, ಮಾನವರು ಮಾಡಿದ ಸರ್ವಪಾಪಗಳನ್ನು ನಾಶ ಮಾಡುವ ಗುಣ ಹೊಂದಿದೆ. ಸರ್ವಜನ ಭೂಷಣ ಪ್ರಾಯವಾದದ್ದು, ಈ ವಿಭೂತಿಯಲ್ಲಿ ವಿಭೂತಿ, ಭಸಿತ ಭಸ್ಮ, ಕ್ಷಾರ, ರಕ್ಷೆ ಎಂಬ ಐದು ವಿಧಗಳಿವೆ. ಸಂಪತ್ತು ತಂದುಕೊಡುವುದು ವಿಭೂತಿ, ಸುಜ್ಞಾನ ದೊರೆಯುವುದು ಭಸಿತದಿಂದ, ಮಹಾಪಾಪಗಳು ಕಳೆಯುವುದು ಭಸ್ಮದಿಂದ, ದುಷ್ಕೃತನ ಕಳೆಯುವುದು ಕ್ಷಾರ, ಭೂತಪ್ರೇತ ಪೀಡೆ ತೊಲಗುವುದು ರಕ್ಷೆಯಿಂದ ಎಂದು ಮುಂತಾಗಿ ಹೇಳಿದ್ದಾನೆ.

ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ ಬಸವಣ್ಣ ಜನಿಸಿದಾಗ ಶಿವನೇ ಬಸವಣ್ಣನಿಗೆ ಪ್ರಣವ ಸ್ವರೂಪಿ ನೀನಾಗುವೆಯೆಂದು ಹಣೆಯಲ್ಲಿ ಬರೆಯುವವನಂತೆ ವಿಭೂತಿಯನ್ನು ಇಡುತ್ತಾನೆ. ಇಲ್ಲಿ ವಿಭೂತಿ ಪ್ರಣವ ಸ್ವರೂಪವಾಗಿದೆ. ಕರಸ್ಥಲದ ವೀರಣ್ಣೊಡೆಯ ಮಂತ್ರೋತ್ಪತ್ತಿ ರಗಳೆಯಲ್ಲಿ ವೀರಶೈವನು ಬೆಳಗಿನ ಸಮಯದಲ್ಲಿ ಲಿಂಗಪೂಜೆ ಮಾಡುತ್ತಾ ದೇಹದ ಅಂಗಾಂಗಗಳಿಗೆ ಹಣೆಯ (ಶಿರೋಭಾಗ) ಮೇಲೆ ಭೂತಿ ಭಸಿತ ಹಚ್ಚಿಕೊಳ್ಳುತ್ತಾ ಷಡಕ್ಷರಿ ಮಂತ್ರ ಹೇಳಬೇಕು. ಅದೇ ಭೂಷಣವಾದದ್ದು ಎಂದು ಹೇಳಿದ್ದಾನೆ. ಕರಸ್ಥಲ ನಾಗಿದೇವ ತನ್ನ ಏಕವಿಂಶತಿ ದೀಕ್ಷಾ ವಿಧಾನ ಕಾವ್ಯದಲ್ಲಿ ವಿಭೂತಿಯು ಮನಸ್ಸನ್ನು ಶುದ್ಧವಾಗಿಡುತ್ತದೆ. ಅಋ ದುಃಖವನ್ನು ಕಳೆಯುತ್ತದೆ ಎಂದಿದ್ದಾನೆ.

ವಿಭೂತಿ ಧರಿಸುವ ವಿಧಾನ ಕುರಿತು ಲಕ್ಕಣ್ಣದಂಡೇಶ ಶಿವತತ್ತ್ವ ಚಿಂತಾಮಣಿಯಲ್ಲಿ

"…..ಭಸಿತ ಲೇಪನ ಸ್ನಾನಮಂ
ಧರಿಸುವಾತಂ ಕ್ರಮದೆ ಶೌಚಾಚಮನವ ವಿ
ಸ್ತರಿಸಿ ಕರಚರಣಮಂ ತೊಳೆದು ಮೃದುಗದ್ದುಗೆಯೊಳಾಸನಂ ಶುದ್ಧಾಂಗದಿಂ
ಗುರುಕೊಟ್ಟ ಶೈವ ಪಂಚಾಕ್ಷರಿಯ ಮಂತ್ರದಿಂ…."
"ಶಿರಕೆ ತರ್ಜನಿಯ ಬೆರಳಿಂ ಮೂಲಮಂತ್ರದಿಂ
ಧರಿಸುವುದು ಭಾಳದಲಿ ಮಧ್ಯಮಾಂಗುಷ್ಠದಿಂ
ವರಮಹೇಶ್ವರ ಎನುತ ರೇಖಾತ್ರಯಂಗಳಿಂದಿಡಲು ತ್ರಿಪುಂಡ್ರವಹುದು….."
"ಹೃದಯಕೀಶಂ ಮಹಾದೇವಾಯ ನಾಭಿಗಂ
ವಿದಿತವಾ ಕಟಿಗೆ ಪಶುಪತಿ ಕಿವಿಗೆ ಶಂಕರಂ
ಮುದದಿ ವೃಷಭಧ್ವಜಂ ಕಂಗಳಿಗೆ….."[೮೭]

ಎಂದು ಹೇಳಿದ್ದಾನೆ.

ಭಸ್ಮ(ವಿಭೂತಿ) ಧರಿಸುವ ಭಕ್ತನು ಮಲ ಮೂತ್ರ ವಿಸರ್ಜನೆ ಮಾಡಿ ಕೈ ಕಾಲುಗಳನ್ನು ಸ್ವಚ್ಛವಾಗಿ ತೊಳೆದು ಶುದ್ಧ ಮನಸ್ಸಿನಿಂದ ಗದ್ದುಗೆಯ ಮೇಲೆ ಪದ್ಮಾಸನದಲ್ಲಿ ಕುಳಿತು ವಿಭೂತಿಯನ್ನು ಕೈಯಲ್ಲಿ ಹಿಡಿದು ಗುರು ಉಪದೇಶಿಸಿದ ಪಂಚಾಕ್ಷರಿ ಮಂತ್ರವನ್ನು ಜಪಿಸಿ ದೇಹದ ಅಂಗಾಂಗಗಳಿಗೆ ಭಸ್ಮ ಲೇಪಿಸಿ ಕೊಳ್ಳಬೇಕು. ತಲೆಗೆ ತರ್ಜನಿ ಬೆರಳಿನಿಂದ ಮೂಲ ಮಂತ್ರವನ್ನು (ನಮಃ ಶಿವಾಯ) ಉಚ್ಚರಿಸುತ್ತಾ ಧರಿಸಬೇಕು. ಹಣೆಗೆ ಮಧ್ಯ ಬೆರಳನ್ನು ಪ್ರಧಾನೀಕರಿಸಿ ವರಮಹೇಶ್ವರ ಎನುತ ಮೂರು ರೇಖೆಗಳ ತ್ರಿಪುಂಡ್ರ ಎಳೆಯಬೇಕು. ಇದೇ ರೀತಿ ಎದೆ, ಕಣ್ಣು, ಕಿವಿಗಳಿಗೆ ವಿಭೂತಿ ಹಚ್ಚಿಕೊಳ್ಳಬೇಕು. ಭುಜಗಳಿಗೆ ಹೊಟ್ಟೆ, ತೋಳುಗಳಿಗೆ ವರರುದ್ರ, ಶ್ರೀಕಂಠ, ಶಂಭು ಎಂದು ಸ್ಮರಿಸುತ್ತಾ ಭಸ್ಮ ಲೇಪಿಸಿಕೊಳ್ಳಬೇಕು. ಹೊಕ್ಕಳಿಗೆ ಮಹಾದೇವ ಎಂದು, ಸೊಂಟಕ್ಕೆ ಪಶುಪತಿ, ಕಿವಿಗೆ ಶಂಕರ, ವೃಷಭಧ್ವಜ, ಕಣ್ಣುಗಳಿಗೆ ಪರಮಾತ್ಮ ಕೊರಳಿಗೆ ನೀಲಕಂಠ ಎಂದು ಶಿವನ ನಾಮೋಚ್ಚರಣೆ ಮಾಡುತ್ತಾ, ತ್ರಿಕಾಲದಲ್ಲಿ ತ್ರಿಪುಂಡ್ರ

ಭಸ್ಮ ಧರಿಸಬೇಕು. ಒಟ್ಟು ೧೧ ಸ್ಥಾನದಲ್ಲಿ ಭಸ್ಮ ಧರಿಸಬೇಕು. ಹೀಗೆ ಭಸ್ಮ ಧರಿಸುವುದರಿಂದ ದೇಹಕ್ಕೆ ಅಂಟಿದ ರೋಗ-ಪೀಡೆ ನಾಶವಾಗುವುದು. ಪಾಪಗಳು ಕಳೆಯುವವು. ಸುಖ, ಸಂವೃದ್ಧಿ, ಐಶ್ವರ್ಯ, ಆರೋಗ್ಯ ದೊರೆತು ನೆಮ್ಮದಿ ಸಿಗುವುದು.

ವಿಭೂತಿ ಮಂಗಳಕರ, ದುಷ್ಟ ಪೀಡೆಗಳ ನಾಶಕ, ಸುಖ ಸಂವೃದ್ಧಿ, ಸಂಪತ್ತು ದೊರೆಯುವಂತೆ ಮಾಡುವುದು. ಮೋಕ್ಷ ಪ್ರದಾಯಕವಾದದ್ದು ಎಂದು ತಿಳಿದುಬರುತ್ತದೆ.

## ೧.೭. ರುದ್ರಾಕ್ಷಿ

ರುದ್ರಾಕ್ಷಿ ಧರಿಸುವುದು ವೀರಶೈವನ ಲಕ್ಷಣಗಳಲ್ಲಿ ಒಂದು. ರುದ್ರಾಕ್ಷಿ ಎಂದರೆ "ಒಂದು ಬಗೆಯ ಮರ(ಜಪಮಾಲೆಗೆ ಉಪಯೋಗಿಸುವ) ಮತ್ತು ಅದರ ಕಾಯಿ"[೮೮] ರುದ್ರನ ಕಣ್ಣು, ಶಿವನ ಕಣ್ಣಿನಾಕಾರದ ಒಂದು ಕಾಯಿ, ಶಿವನ ಕಣ್ಣಿನಿಂದ ಹುಟ್ಟಿದ ಕಾಯಿ. ರುದ್ರಾಕ್ಷಿ ವೃಕ್ಷದ ಬೀಜ, ಪೂಜನೀಯ ಕಾಯಿ ಎಂಬಿತ್ಯಾದಿಯಾಗಿ ಅರ್ಥೈಸಬಹುದು.

ತ್ರಿಪುರ ಸಂಹಾರ ಸಂದರ್ಭದಲ್ಲಿ ರುದ್ರನ ಸೂರ್ಯ, ಚಂದ್ರ, ಅಗ್ನಿ, ನೇತ್ರಗಳಿಂದ ಜಲಬಿಂದುಗಳು ಉದುರಿದವು. ಅವುಗಳೇ ರುದ್ರಾಕ್ಷಿಗಳಾದವು. ಇವು ಮೂವತ್ತೆಂಟು ಬಗೆಯಾಗಿವೆ. ರುದ್ರನ ಸೂರ್ಯ ನೇತ್ರದಿಂದ ಕಪಿಲವರ್ಣದ ೧೨ ರೂಪದ ರುದ್ರಾಕ್ಷಿಗಳು, ಚಂದ್ರನೇತ್ರದಿಂದ ಬಿಳಿ ಬಣ್ಣದ ೧೬ ರೂಪದ ರುದ್ರಾಕ್ಷಿಗಳು, ಅಗ್ನಿನೇತ್ರದಿಂದ ಕಪ್ಪುಬಣ್ಣದ ೧೦ ರೂಪದ ರುದ್ರಾಕ್ಷಿಗಳು ಉತ್ಪನ್ನವಾದುವು."[೮೯]

ರುದ್ರಾಕ್ಷಿಯ ಮಹತ್ವ ಕುರಿತು ಬಸವಣ್ಣ ತನ್ನ ವಚನದಲ್ಲಿ

"ಅಯ್ಯಾ, ಎನಗೆ ರುದ್ರಾಕ್ಷಿಯೆ ಸರ್ವಪಾವನ
ಅಯ್ಯಾ, ಎನಗೆ ರುದ್ರಾಕ್ಷಿಯೆ ಸರ್ವಸಿದ್ಧಿ
ಅಯ್ಯಾ, ನಿಮ್ಮ ಪಂಚವಕ್ತ್ರಂಗಳೇ ಪಂಚಮುಖ ರುದ್ರಾಕ್ಷಿಗಳಾದವಾಗಿ...."[೯೦]

ಎಂದಿದ್ದಾನೆ.

ಬಸವಣ್ಣನವರ ಪ್ರಕಾರ ಶಿವನ ಪಂಚಮುಖಗಳಿಂದ ಪಂಚಮುಖ ರುದ್ರಾಕ್ಷಿಗಳಾದವು. ಈ ರುದ್ರಾಕ್ಷಿಗಳಿಂದ ಸರ್ವವೂ ಪಾವನ, ಸರ್ವವೂ ಸಿದ್ಧಿ ಪಡೆಯುತ್ತದೆ. ಸರ್ವಪಾಪ ಅಳಿಯುತ್ತದೆ. ಮುಕ್ತಿ ಪಥಕ್ಕೆ ಮುಖ್ಯ ಸಾಧನ ರುದ್ರಾಕ್ಷಿ ಎಂದು ಬಸವಣ್ಣ ಹೇಳುತ್ತಾನೆ. ಉರಿಲಿಂಗಪೆದ್ದಿ ರುದ್ರಾಕ್ಷಿಗಳನ್ನು ಹಸ್ತ, ತೋಳು, ಉರ, ಕರ್ಣ ಕಂಠ ಮಸ್ತಕದಲ್ಲಿ ಧರಿಸಿಪ್ಪ ಶಿವಭಕ್ತನೆ ರುದ್ರನು. ಆತನ ದರ್ಶನ ಸ್ಪರ್ಶನದಿಂದ ಭವರೋಗ ದುರಿತವಿರಲಮ್ಮವು ನೋಡಾ" ಎಂದು ಹೇಳುತ್ತಾನೆ.

ರುದ್ರಾಕ್ಷಿ ಧರಿಸಿದ ಭಕ್ತ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಬಸವಣ್ಣ ತನ್ನ ವಚನದಲ್ಲಿ

"ಹಸ್ತಕಡಗ ಕೈಗಧಿಕ ನೋಡಾ, ಕೊಡಲಹುದು, ಕೊಳಲಾಗದು
ಬಾಹುಬಳೆ ತೋಳಿಂಗಧಿಕ ನೋಡಾ, ಪರವಧುವನಪ್ಪಲಾಗದು
ಕರ್ಣಕುಂಡಲ ಕಿವಿಗಧಿಕ ನೋಡಾ, ಶಿವನಿಂದೆಯ ಕೇಳಲಾಗದು
ಕಂಠಮಾಲೆ ಕೊರಳಿಗಧಿಕ ನೋಡಾ, ಅನ್ಯದೈವಕ್ಕೆ ತಲೆಬಾಗಲಾಗದು...."[೬೧]

ಹಸ್ತದಲ್ಲಿ ರುದ್ರಾಕ್ಷಿ ಧರಿಸಿದರೆ ಕೈಯಿಂದ ಕೆಟ್ಟ ಕೆಲಸ ಮಾಡಬಾರದು, ತೋಳಿನಲ್ಲಿ ರುದ್ರಾಕ್ಷಿ ಧರಿಸಿದರೆ ಪರಸ್ತ್ರೀಗೆ ಕೈಚಾಚಬಾರದು, ಕಿವಿಯಲ್ಲಿ ರುದ್ರಾಕ್ಷಿ ಧರಿಸಿದರೆ ಶಿವನಿಂದೆಯನ್ನು ಕೇಳುವಂತಿಲ್ಲ. ಕೊರಳಲ್ಲಿ ರುದ್ರಾಕ್ಷಿ ಧರಿಸಿದರೆ ಬೇರೆ ದೇವರಿಗೆ ಮಣಿಯಬಾರದೆಂದು ಬಸವಣ್ಣ ಹೇಳುತ್ತಾನೆ. ಅಂದರೆ ಇಲ್ಲಿ ರುದ್ರಾಕ್ಷಿಯೇ ಶಿವ ಎಂದು ತಿಳಿಯಬೇಕು.

ಹರಿಹರಾದಿ ಕವಿಗಳು ರುದ್ರಾಕ್ಷಿಯ ಮಹತ್ವ ಅದನ್ನು ಧರಿಸುವ ವಿಧಾನ ಕುರಿತು ತಮ್ಮ ಕಾವ್ಯಗಳಲ್ಲಿ ವಿಶ್ಲೇಷಿಸಿದ್ದಾರೆ.

ಹರಿಹರ : "ಹಂಪೆಯರಸನ ಲೋಚನೋದ್ಭವಂ ರುದ್ರಾಕ್ಷಿ
ಹಂಪೆಯರಸನ ಮಿಸುಪ ಕಣ್ಣಮಣಿ ರುದ್ರಾಕ್ಷಿ
..................................................
ಉರು ಶಿಖಾಮಣಿಯೊಳಗೆ ಶಶಿಚೂಡನೊಪ್ಪುವಂ
ವರ ಶಿರೋಮಾಲಿಗೆ ಶಿರೋಮಾಲೆಯೊಪ್ಪುವಂ
..................................................
ಅದು ಕಾರಣಂ ಶರೀರದೊಳೆಲ್ಲ ಧರಿಯಿಪುದು
..................................................
ಶರಣ ಸಂಕುಳ ವಜ್ರಪಂಜರಂ ರುದ್ರಾಕ್ಷಿ
ಧರಣೀತಳಕ್ಕೆ ಪಾವನಕರಂ ರುದ್ರಾಕ್ಷಿ.............
ಧರಿಸುತಂ ಮಾಡಿದಡೆ ಸಫಲಮಲ್ಲದಡಫಲ
ಉರುತರಂ ಗುರುತರಂ ಧರಿಯಿಪುದು ಅಮೃತ ಫಲ"[೬೨]

ರಾಘವಾಂಕ : "ತರುಣ ಹುಲಿಯುಗುರ ಹೂಗಣೆ ಕೊರಳ ರುದ್ರಾಕ್ಷಿಗಳ ಮುದ್ರಿಸಿದ ಪುಣ್ಯವೆ
ಕರತಳದ ಕಾಮ ಬಂಡಿಯ ನಂದಿ ಉಡೆವಣೆಗಳರಸ...."[೬೩]

ಚಾಮರಸ : "ಜಡೆಯ ರುದ್ರಾಕ್ಷಿಯ ವಿಭೂತಿಯ ತೊಡೆಯ...."[೬೪]

ಲಕ್ಕಣ್ಣದಂಡೇಶ : “ನೇತ್ರಂಗಳೆವೆಯಂ ಮುಚ್ಚಿ

ತೆಜೆಯಲಾವುದಕದಿಂ ಸಂಭವಿಸಿತೆಂಬವನ......

.......... ರವಿನಯನದಿಂ ಪನ್ನೆರಡು

ಪರಿ ಕಪಿಲವರ್ಣಮವು ಸೋಮನೇತ್ರದೊಳವಂ

ಕುರಿಸಿದವು ಪದಿನಾಱು ವಿಧ ಧವಳ ವರ್ಣ ಮತ್ತೆಮ್ಮ ಭಾಳಾಕ್ಷದಿಂದ

ವರಮಹಾಕೃಷ್ಣತೇಜಸ್ಸಿನಿಂದ ಹತ್ತುವಿಧ

ಪರಿಗಣಿತಗುಣಧಾತು ಮೂವತ್ತಯೆಂಟೆನಿಪ.....”[೯೫]

“ಶಿರ ಕಂಠ ಹೃದಯವಾ ಭುಜಯುಗ್ಮಮಿದರಲ್ಲಿ

ಧರಿಸುವುದು ರುದ್ರಾಕ್ಷಿಯಂ ನಾಭಿಯಿಂ ಕೆಳಗೆ

ಧರಿಸಲಾಗದು ಧರಿಸುವವಗಧಿಕ ಪಾತಕಂ .......”[೯೬]

“ಆವನೋರ್ವಂ ಸದಾ ರುದ್ರಾಕ್ಷಿಯಂ ಧರಿಸೆ

ಪಾವನಂ.....”[೯೭]

ಕರಸ್ಥಲ ನಾಗಿದೇವ : “ಕಂಗೊಳಿಪ ಭಸಿತ ರುದ್ರಾಕ್ಷಿಯ ಧರಿಸಿ ಮಿಗೆ....”[೯೮]

ಹೀಗೆ ನಾನಾ ಕವಿಗಳು ರುದ್ರಾಕ್ಷಿಯ ಉತ್ಪತ್ತಿ ಮಹತ್ವ, ಧಾರಣೆಯ ವಿಧಾನ ಕುರಿತು ತಮ್ಮ ಕಾವ್ಯಗಳಲ್ಲಿ ವಿಶ್ಲೇಷಿಸಿದ್ದಾರೆ. ಹರಿಹರ ತನ್ನ ಗಿರಿಜಾ ಕಲ್ಯಾಣ ಕಾವ್ಯದಲ್ಲಿ ರುದ್ರಾಕ್ಷಿ ಉತ್ಪತ್ತಿ ಮಹತ್ವ ಕುರಿತು “ರುದ್ರಾಕ್ಷಿಗಳು ಸಾಕ್ಷಾತ್ ಶಿವನ ಮುಖವುಳ್ಳವುಗಳು. ಇವುಗಳನ್ನು ಧರಿಸಿದವರಿಗೆ ಅವು ಅಕ್ಷರ ಸುಖ ಕೊಡುತ್ತವೆ. ಪುಣ್ಯ ಫಲವಾಗಿ ಇವು ಲಭಿಸಿವೆ. ಇವುಗಳನ್ನು ಧರಿಸುವವರಿಗೆ ಇವುಗಳು ರಕ್ಷೆಗಳಾಗಿವೆ“[೯೯] ಎಂದಿದ್ದಾನೆ. ಇದೇ ಕವಿ ರುದ್ರಾಕ್ಷಿಯ ರಗಳೆಯಲ್ಲಿ ರುದ್ರಾಕ್ಷಿ ಹಂಪಿಯ ಒಡೆಯ ವಿರೂಪಾಕ್ಷನ ಕಣ್ಣಿನಲ್ಲಿ ಹುಟ್ಟಿದೆ. ಅದು ಅವನ ಕಣ್ಣ ಮಣಿಯಾಗಿದೆ ಎಂದು ಹೇಳಿ ೧ ರಿಂದ ೧೪ ಮುಖದ ರುದ್ರಾಕ್ಷಿಗಳಿರುವ ವಿವರ ನೀಡುತ್ತಾನೆ. ಒಂದೊಂದು ಮುಖದಲ್ಲಿ ಯಾವ ದೇವತೆಗಳು ನೆಲೆಸಿರುತ್ತಾರೆಂಬುದನ್ನು ದಾಖಲಿಸುತ್ತಾನೆ. ಪಂಚಾಕ್ಷರಿ ಮಂತ್ರದಂತೆ ಕಲ್ಪವೃಕ್ಷದಂತೆ ಸತ್ಫಲ ನೀಡುತ್ತದೆ. ಭೂಮಿಯಲ್ಲಿ ಪಾವನ ಕರವಾದದ್ದು, ಭಕ್ತ(ಶರಣ) ಸಮೂಹಕ್ಕೆ ವಜ್ರಪಂಜರ, ಪರಮಸುಖ ನೀಡುವುದಾಗಿದೆ. ರುದ್ರಾಕ್ಷಿಗಳನ್ನು ಎದೆ, ತಲೆ, ಕಿವಿ, ಕೊರಳು, ತೋಳು, ಕೈಗಳಲ್ಲಿ ಅಲ್ಲದೆ ದೇಹದ ಎಲ್ಲಾ ಭಾಗಗಳಲ್ಲಿ ಧರಿಸಬಹುದು. ರಕ್ಷಣಾತಾಯಿತವಾಗಿ ಶಿಕ್ಷೆಗಾಗಿ ಸಕಲಕಾರ್ಯಗಳಲ್ಲಿ, ದೀಕ್ಷಾ ವಿಧಾನದಲ್ಲಿ ಸಕಲ ಕೆಲಸಗಳಲ್ಲಿ ರುದ್ರಾಕ್ಷಿಗಳನ್ನು ಧರಿಸಿದರೆ ಸಫಲತೆ ದೊರೆಯುತ್ತದೆ. ಇದರಿಂದ ಭಕ್ತನಿಗೆ ಶ್ರೇಷ್ಠತೆ, ಮಹೋನ್ನತಿ, ಅಮೃತ ಫಲ ಲಭಿಸುತ್ತದೆ ಎನ್ನುತ್ತಾನೆ ಕವಿ.

ರಾಘವಾಂಕ ತನ್ನ ಸೋಮನಾಥ ಚಾರಿತ್ರದಲ್ಲಿ “ಹುಲಿಯುಗುರನ್ನು ಕೊರಳಲ್ಲಿ ಕಟ್ಟಿದರೆ ಧೈರ್ಯಬರುವಂತೆ, ರುದ್ರಾಕ್ಷಿಗಳನ್ನು ಭಕ್ತ ಕೊರಳಲ್ಲಿ ಧರಿಸಿದರೆ ಕಷ್ಟ ನಿವಾರಣೆಯಾಗಿ ಪುಣ್ಯಫಲ

ಲಭಿಸುತ್ತದೆ ಎಂದು ಕವಿ ಹೇಳುತ್ತಾನೆ. ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ ರುದ್ರಾಕ್ಷಿಯನ್ನು ಜಡೆಯಲ್ಲಿ ಧರಿಸಬಹುದೆನ್ನುತ್ತಾನೆ.

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವಚಿಂತಾಮಣಿಯಲ್ಲಿ ಶಿವನು ತ್ರಿಪುರಸಂಹಾರ ಮಾಡುವ ಸಂದರ್ಭದಲ್ಲಿ ಕಣ್ಣುಗಳನ್ನು ತೆರೆದಾಗ ಕಣ್ಣೀರಿನ ಜೊತೆಯಲ್ಲಿ ರುದ್ರಾಕ್ಷಿಗಳು ಹುಟ್ಟಿದವು. ಶಿವನ ಸೂರ್ಯ ಕಣ್ಣಿನಲ್ಲಿ ಕಂದು ಬಣ್ಣದ ೧೨ ರುದ್ರಾಕ್ಷಿಗಳು, ಚಂದ್ರನೇತ್ರದಲ್ಲಿ ಬಿಳಿಬಣ್ಣದ ೧೬ ರುದ್ರಾಕ್ಷಿಗಳು, ಹಣೆಗಣ್ಣಿನಿಂದ ತೀರಾ ಕಪ್ಪುಬಣ್ಣದ ೧೦ ರುದ್ರಾಕ್ಷಿಗಳು (ಒಟ್ಟು ೩೮ ರುದ್ರಾಕ್ಷಿಗಳು) ಹುಟ್ಟಿದವು. ಈತನೂ ಸಹ ಹರಿಹರನಂತೆ ೧ ರಿಂದ ೧೪ ಮುಖದ ರುದ್ರಾಕ್ಷಿಗಳ ಬಗ್ಗೆ ದಾಖಲಿಸಿ ಅಲ್ಲಿಗೇ ಕೈಬಿಟ್ಟಿಲ್ಲ. ಬದಲಾಗಿ ೧ ಮುಖದ ರುದ್ರಾಕ್ಷಿಯಿಂದ ಹಿಡಿದ ೧೪ ಮುಖಗಳ ರುದ್ರಾಕ್ಷಿಗಳನ್ನು ದೇಹದ ಯಾವ ಯಾವ ಭಾಗದಲ್ಲಿ ಯಾವ ಮಂತ್ರ ಜಪಿಸುತ್ತಾ ಎಷ್ಟು ರುದ್ರಾಕ್ಷಿಗಳನ್ನು ಧರಿಸಬೇಕೆಂದು ವಿಶ್ಲೇಷಿಸಿದ್ದಾನೆ. ವಿಭೂತಿ ಧರಿಸಿಕೊಂಡು ಸದಾಶಿವಾಯನಮಃ ಎಂಬ ಮಂತ್ರ ಉಚ್ಚರಿಸುತ್ತಾ ಜಡೆ(ಜುಟ್ಟು)ಯಲ್ಲಿ ಒಂದು ಮುಖದ ರುದ್ರಾಕ್ಷಿ ಧರಿಸಬೇಕು. ಶಿರದ ಮಧ್ಯೆದಲ್ಲಿ ಸೂರ್ಯ ಸೋಮಾಧಿಪ ನಮೋ ಎನ್ನುತ್ತಾ ಮೂರು ಮುಖದ ಮೂರು ರುದ್ರಾಕ್ಷಗಳನ್ನು ಧರಿಸಬೇಕು. ಷಟ್ತ್ರಿಂಶತ್ ಕಳಾತ್ಮಕಾಯನೆ ನಮಃ ಎಂಬ ಮಂತ್ರ ಉಚ್ಚರಿಸುತ್ತಾ ೧೧ ಮುಖಗಳ ೨೦ ರುದ್ರಾಕ್ಷಿಗಳನ್ನು ಮಾಲೆ ಮಾಡಿ ತಲೆಗೆ ಹಾಕಿಕೊಳ್ಳಬೇಕು. ಸೊಮಾಯನಮಃ ಎನ್ನುತ್ತಾ ೧೦ ಮುಖಗಳುಳ್ಳ ೫ ರಿಂದ ೭ ರುದ್ರಾಕ್ಷಿಗಳನ್ನು ಕಿವಿಯಲ್ಲಿ ಧರಿಸಬೇಕು. ತ್ರಿಯಂಬಕ ಕಳಾತ್ಮಕನೆ ಶ್ರೀಕಂಠಾಯ ನಮಃ ಎಂಬ ಮಂತ್ರ ಉಚ್ಚರಿಸುತ್ತಾ ೮ ಮುಖಗಳ ೩೨ ರುದ್ರಾಕ್ಷಿಗಳನ್ನು ಮಾಲೆ ಮಾಡಿ ಕೊರಳಲ್ಲಿ ಧರಿಸಬೇಕು.

೪ ಮುಖದ ೫೦ ರುದ್ರಾಕ್ಷಿಗಳನ್ನು ಪೋಣಿಸಿ ಶ್ರೀಕಂಠನಾದಿ ಮೂರ್ತ್ಯಾತ್ಮಕಾ ನಮಃ ಸರ್ವಜ್ಞಾಯ ಎಂಬ ಮಂತ್ರ ಪಠಿಸುತ್ತಾ ಎದೆಯಲ್ಲಿ ಧರಿಸಬೇಕು. ಷೋಡಶ ಸಮೂರ್ತ್ಯಾತ್ಮಕಾಯ ನಮಃ ಎಂದು ಮಂತ್ರ ಉಚ್ಚರಿಸುತ್ತಾ ಬಲ ತೋಳಿನಲ್ಲಿ ೧೩ ಮುಖದ ೧೬ ರುದ್ರಾಕ್ಷಿಗಳನ್ನು ಧರಿಸಬೇಕು. ಇದೇ ಸಂಖ್ಯೆ ರುದ್ರಾಕ್ಷಿಗಳನ್ನು ಎಡ ತೋಳಿಗೆ ಶ್ರೀ ಸೋಮ ಕಳೆಯಾತ್ಮ ನಮಃ ಎಂಬ ಮಂತ್ರ ಜಪಿಸುತ್ತಾ ಧರಿಸಬೇಕು. ಬಲ ಮುಂಗೈ ೯ ಮುಖದ ೧೨ ರುದ್ರಾಕ್ಷಿಗಳನ್ನು ದ್ವಾದಶಾದಿತ್ಯಾತ್ಮಕಾಯ ನಮಃ ಎಂದು ಉಚ್ಚರಿಸುತ್ತಾ, ಎಡ ಮುಂಗೈಗೆ ಇದೇ ಸಂಖ್ಯೆಯ ರುದ್ರಾಕ್ಷಿಗಳನ್ನು ಮೂರ್ತ್ಯಾಧಿಪ ನಮಃ ಎಂಬ ಮಂತ್ರ ಪಠಿಸುತ್ತಾ ಧರಿಸಬೇಕು. ೧೪ ಮುಖದ ೧೦೮ ರುದ್ರಾಕ್ಷಿಗಳನ್ನು ಶತರುದ್ರವಿದ್ಯಾಸದಾತ್ಮಕಾಯ ನಮಃ ಎಂಬ ಮಂತ್ರ ಪಠಿಸುತ್ತಾ ಜನಿವಾರ ಧರಿಸುವಂತೆ ದೇಹಕ್ಕೆ ಧರಿಸಿಕೊಳ್ಳಬೇಕು. ಹೀಗೆ ತಲೆ ಕೊರಳು ಕಿವಿ, ಎದೆ ತೋಳು ಮುಂತಾದ ಕಡೆ ರುದ್ರಾಕ್ಷಿಗಳನ್ನು ಧರಿಸಿದರೆ ಪಾಪಗಳು ನಾಶವಾಗಿ ಪುಣ್ಯ ಫಲ ದೊರಕುವುದು ಹಿಡಿದ ಕಾರ್ಯಗಳಲ್ಲಿ ಯಶಸ್ಸು ಸಿಗುತ್ತದೆ. ಆದರೆ ಹೊಕ್ಕಳ ಭಾಗದಿಂದ ಕೆಳಗೆ ರುದ್ರಾಕ್ಷಿಗಳನ್ನು ಧರಿಸಿದರೆ ಘೋರ ಪಾಪ, ಕಷ್ಟಗಳು ಬರುತ್ತವೆ.

ಕರಸ್ಥಲ ನಾಗಿದೇವನು ತನ್ನ ಏಕವಿಂಶತಿ ದೀಕ್ಷಾ ವಿಧಾನ ಕೃತಿಯಲ್ಲಿ ಭಕ್ತನು ವಿಭೂತಿಯಂತೆ ರುದ್ರಾಕ್ಷಿ ಧರಿಸಬೇಕು ಎನ್ನುತ್ತಾನೆ.

ಹೀಗೆ ಈ ಮೇಲಿನ ಎಲ್ಲಾ ಕವಿಗಳು ರುದ್ರಾಕ್ಷಿ ಅಮಂಗಳ ನಿವಾರಕ, ನಾವು ಹಿಡಿದ ಕೆಲಸ ಕಾರ್ಯಗಳು ಸತ್ಫಲ ನೀಡಬೇಕಾದರೆ ಸದಾ ದೇಹದ ಅಂಗಾಂಗಳಲ್ಲಿ ರುದ್ರಾಕ್ಷಿ ಧರಿಸಿರಬೇಕು. ರುದ್ರಾಕ್ಷಿ ಧರಿಸುವುದರಿಂದ ಮೋಕ್ಷ ಲಭಿಸುತ್ತದೆಂದು ಹೇಳಿದ್ದಾರೆ.

೧.೮. ಮಂತ್ರ

ವೀರಶೈವರು ಶಿವನಾಮ ಸ್ಮರಣೆ ಮಾಡುವುದೇ ಮಂತ್ರ. ಮಂತ್ರವೆಂದರೆ ವೇದದಲ್ಲಿರುವ ಛಂದೋಬದ್ಧವೂ ಪವಿತ್ರವೂ ಆದ ದೇವತಾಸ್ತುತಿ. ಇಷ್ಟ ದೇವತೆಗಳನ್ನು ವಶೀಕರಿಸಿಕೊಳ್ಳುವುದಕ್ಕಾಗಿ ಹೇಳುವ, ಆಯಾ ದೇವತೆಯ ಸಾಮರ್ಥ್ಯವುಳ್ಳ ವಾಕ್ಯ ಸಮೂಹ, ರಹಸ್ಯಾಲೋಚನೆ, ವಿಚಾರ''[೧೦೦] ಎಂದು ಅರ್ಥೈಸಬಹುದಾದರೂ, ಇಷ್ಟ ದೇವರ ಸ್ಮರಣೆ, ಧ್ಯಾನಾವಸ್ಥೆಯ ದೇವತಾಸ್ತುತಿ, ದೇವರ ನಾಮಸ್ಮರಣೆ ಎಂದು ಸರಳವಾಗಿ ಅರ್ಥೈಸಬಹುದು. ಮಂತ್ರಕ್ಕೆ ಮನಸ್ಸನ್ನು ಶುದ್ಧೀಕರಿಸುವ, ಕೇಂದ್ರೀಕರಿಸುವ ಶಕ್ತಿ ಇದೆ. ಲಿಂಗ ಲಭಿಸುವುದೇ ಗುರುವಿನಿಂದ ಮಂತ್ರ ಪೂರ್ವಕವಾಗಿ, ಉಪಾಸನೆ ನಡೆಯುವುದು ಮಂತ್ರಮೂಲಕ. ಆದುದರಿಂದ ವಿಭೂತಿ ರುದ್ರಾಕ್ಷಿಗಳ ಧಾರಣೆಯಲ್ಲಿ ಪಾದೋದಕ ಪ್ರಸಾದಗಳ ನಿರ್ವಹಣೆಯಲ್ಲಿ, ಷಟ್ಸ್ಥಲ ಸಾಧನೆಯ ಮುನ್ನಡೆಯಲ್ಲಿ ಮಂತ್ರವೇ ತಾರಕ ಶಕ್ತಿ.''[೧೦೧] ಓಂ ನಮಃ ಶಿವಾಯ' ಎಂಬುದು ವೀರಶೈವರಿಗೆ ಪವಿತ್ರ ಮಂತ್ರವಾಗಿದೆ.

ಪಂಚಾಕ್ಷರಿ ಮಂತ್ರದ ಅರ್ಥವನ್ನು ಚನ್ನಬಸವಣ್ಣ ತನ್ನ ಒಂದು ವಚನದಲ್ಲಿ

"ನ" ಎಂಬಕ್ಷರವೆ ದೇವರ ಚರಣ. 'ಮ' ಎಂಬಕ್ಷರವೆ ದೇವರ ಒಡಲು
'ಶಿ' ಎಂಬಕ್ಷರವೆ ದೇವರ ಹಸ್ತ. 'ವಾ' ಎಂಬಕ್ಷರವೆ ದೇವರ ನಾಶಿಕ
'ಯ' ಎಂಬಕ್ಷರವೆ ದೇವರ ನೇತ್ರ.
ಮತ್ತೆ 'ನ' ಎಂಬಕ್ಷರವೆ ದೇವರ ದಯೆ. 'ಮ' ಎಂಬಕ್ಷರವೆ ದೇವರ ಶಾಂತಿ
'ಶಿ' ಎಂಬಕ್ಷರವೆ ದೇವರ ಕ್ರೋಧ, 'ವಾ' ಎಂಬಕ್ಷರವೆ ದೇವರ ಮನ
'ಯ' ಎಂಬಕ್ಷರವೆ ದೇವರ ಶ(ಮನ)
ಮತ್ತೆ 'ನ' ಎಂಬಕ್ಷರವೆ ಪೃಥ್ವಿ. 'ಮ' ಎಂಬಕ್ಷರವೆ ಅಪ್ಪು
'ಶಿ' ಎಂಬಕ್ಷರವೆ ಅಗ್ನಿ, 'ವಾ' ಎಂಬಕ್ಷರವೆ ವಾಯು

'ಯ' ಎಂಬಕ್ಷರವೆ ಆಕಾಶ

ಮತ್ತೆ 'ನ' ಎಂಬಕ್ಷರವೆ ಬ್ರಹ್ಮ, 'ಮ' ಎಂಬಕ್ಷರವೆ ವಿಷ್ಣು

'ಶಿ' ಎಂಬಕ್ಷರವೆ ರುದ್ರ, 'ವಾ' ಎಂಬಕ್ಷರವೆ ಶಕ್ತಿ

'ಯ' ಎಂಬಕ್ಷರವೆ ಲಿಂಗ"[೧೦೨]

ಎಂದಿದ್ದಾರೆ.

ಹೀಗೆ ಚನ್ನಬಸವಣ್ಣ ನಮಃ ಶಿವಾಯ ಎಂಬ ಪಂಚಾಕ್ಷರಿ ಮಂತ್ರದಲ್ಲಿ ದೇವರ ದೇಹದ ಅಂಗಾಂಗಳು, ದೇವರ ಗುಣಸ್ವಭಾವ, ತ್ರಿಮೂರ್ತಿಗಳು, ಪಂಚಭೂತಗಳು ಅಡಗಿರುವುದನ್ನು ವಿಶ್ಲೇಷಿಸಿದ್ದಾನೆ.

ಹರಿಹರಾದಿ ಕವಿಗಳು ಮಂತ್ರದ ಉತ್ಪತ್ತಿ ಅದರ ಮಹತ್ವ ಕುರಿತು ತಮ್ಮ ಕಾವ್ಯಗಳಲ್ಲಿ ವಿಶ್ಲೇಷಿಸಿದ್ದಾರೆ.

**ಹರಿಹರ :** "ನೋಡೆ ಅಕಾರ ಉಕಾರ ಮಕಾರಂ

ಕೂಡಲ್ ಬಿಂದು ಸಹಿತಮೋಂಕಾರಂ

ತುದಿಯೊಳ್ ನಮಃ ಶ್ಶಿವಾಯೆನುತಿರ್ಪುದು

ವೇದದ ಮಾತೆಪಿತಂ ಪಂಚಾಕ್ಷರಿ ವೇದ ನಿಧಾನಂ ಶ್ರೀ ಪಂಚಾಕ್ಷರಿ

ಸರ್ವಕ್ರಿಯಗಳೊಳುಂ ಜಪಿಯಿಪ್ಪುದು, ಸರ್ವಾರಾಧನೆಯೊಳ್ ಜಪಿಯಿಪ್ಪುದು

ವಿಧಿಯಿಲ್ಲಿಲ್ಲ ನಿಷೇಧಮದಿಲ್ಲಂ..... ಪಂಚಮಹಾಪಾತಕ ದುರಿತಹರಂ

ಸಂಚಿತ ದುಷ್ಕರ್ಮಗಳ ನಿವಾರಂ ... ಸಿದ್ಧಿಗೆ ಸಿದ್ಧಿಕರಂ ಪಂಚಾಕ್ಷರಿ

ಪಂಚಾಕ್ಷರಿಯಲ್ಲದೆ ಬೇರೆ ಮತ್ತೆ ಮಂತ್ರಗಳುಂಟೇ...."[೧೦೩]

**ರಾಘವಾಂಕ :** "ಪಂಚಾಮುದ್ರಾನ್ವಿತಂ ಪಂಚಾಕ್ಷರೀಪ್ರಿಯಂ"[೧೦೪]

"ಗೂಢಲಿಂಗಮಂ ತೋಱು ಪಂಚಾಕ್ಷರಿಯ

ಹೃದಯಮಂ ತಿಳಿಪಿ ನಿಜಭಕ್ತಿಯಂ ಗುರುಪೂಜೆಯಾಗಿ ಕೈಕೊಂಡು ಬಳಿಕ...."[೧೦೫]

"ನುಡಿದುದೇ ಮಂತ್ರ ಹೆಸರಿಟ್ಟದೇ ದೈವ...."[೧೦೬]

"....ಗುರು ಕುಲವೆಯ್ದೆ ಶಿವಕುಲಂ ಗುರುನುಡಿದ ನುಡಿ ಶುದ್ಧ ಪಂಚಾಕ್ಷರಿ"[೧೦೭]

**ಚಾಮರಸ :** "...ಹಸ್ತವನಲ್ಲಿ ಬರೆಸುವುದೆನುತೆ ಕಿವಿಯೊಳಗೆ

ನೆರಹುವಂತಿರೆ ಶೈವ ಪಂಚಾಕ್ಷರಿಯನುಪದೇಶಿಸಿ...."[೧೦೮]

"ನಂಬಗೆಯ ಕೊಡುವಂತೆ ಹಸ್ತವ
ನಿಂಬಿನಲಿ ಮಸ್ತಕದೊಳಿರಿಸುವ
ಲುಂಬ ತಾಣವಿದೆಂದು ಕಿವಿಯಲಿ ಪಚ್ಚಿ ಪೇಳ್ವಂತೆ
ಶಂಭು ಪಂಚಾಕ್ಷರಿಯ ನೇಮಿಸಿ......"[೧೦೯]

ಲಕ್ಕಣ್ಣದಂಡೇಶ : "ವೇದ ಮೊದಲಾಗಮಪುರಾಣ ಪ್ರಣವಸಹಿತ
ವೇದಿಸಲಿಕದು ಷಡಕ್ಷರಿಯೆನಿಪುದುಂ ಸರ್ವ
ಸಾಧುಜನಕಂ ಪ್ರಣವದುತ್ತರಂ ಪೊರಗಾಗಲಾಯಿತಾ ಪಂಚಾಕ್ಷರಿ
ಆದರಿಸಿ ನೋಳ್ಪಡಿದು ಸಕಲಮಂತ್ರ ಮೂಲ
ಇದು ಮುಕ್ತಿ ಸಾಧನಂ ನೆರೆದುದಂ ಸಿದ್ಧಿಪುದು
ಇದು ಸಕಲಜನದ ಚಿತ್ತಾನುರಂಜನವಹುದು ಸೂಕ್ಷ್ಮಶಿವಯೋಗಿಗಳಿಗೆ..."[೧೧೦]
"ಪ್ರಥಮದಿ ನಮಶ್ಶಬ್ದವಂತ್ಯದಿ ಶಿವಾಯ ಎಂ
ಬತಿಶಯದ ಮಂತ್ರವೆನ್ನಯ ಮುಖದಿ ಜನಿಪಿಯುಂ
ಶ್ರುತಿಶಿರೋರತ್ನವಾಗಿಹುದು ಪಂಚಾಕ್ಷರಿಯು ಸಕಲವರ್ಣದ ಮೂಲವು..."[೧೧೧]

ಕರಸ್ಥಲನಾಗಿದೇವ : "ಓಂ ನಮಃ ಶಿವಾಯೆಂಬ ಮಂತ್ರವನು ಕೇಳಿ
ಓಂಕಾರದೊಣರವನು ತಿಳಿದು ಮನಗೇಳಿ
ಓಂಕಾರ ಮೊದಲುಂಟು ಏನದು ಹೇಳಿ
ಓಂಕಾರವೆಂಬುದು ಅದು ತಾನೇನು ಹೇಳಿ"[೧೧೨]

ಈ ಮೇಲಿನ ಎಲ್ಲಾ ಕವಿಗಳು ಪಂಚಾಕ್ಷರಿ ಮಂತ್ರದ ಮಹತ್ವ ಅದರ ಉತ್ಪತ್ತಿ ಕುರಿತು ವಿಶ್ಲೇಷಿಸಿದ್ದಾರೆ. ಪಂಚಾಕ್ಷರಿ ಪಂಚಮುಖದ ಶಿವನಿಂದ ಹುಟ್ಟಿದೆ. ಶಿವಶರಣರಿಂದ ಪೋಷಿಸಲ್ಪಟ್ಟ ಸಂಪತ್ತು. 'ಅ ಉ ಮ' ಎಂಬ ಅಕ್ಷರಗಳಿಗೆ ಬಿಂದು ಸೇರಿ ಓಂಕಾರವಾಗಿದೆ. ಇದರ ಕೊನೆಯಲ್ಲಿ ನಮಃ ಶಿವಾಯ ಸೇರಿ ಷಡಕ್ಷರಿ ಮಂತ್ರವಾಗಿದೆ. ವೇದಕ್ಕೆ ತಂದೆ-ತಾಯಿ, ಸಂಪತ್ತು ಶಾಸ್ತ್ರದ ಸರ್ವಸ್ವ, ಶಿವಭಕ್ತರ ಜೀವನಕ್ಕೆ ಅರ್ಥಪೂರ್ಣವಾದದ್ದು ಪಂಚಾಕ್ಷರಿ ಮಂತ್ರ. ಈ ಮಂತ್ರವನ್ನು ಎಲ್ಲಾ ಕಾರ್ಯಗಳಲ್ಲಿ ಎಲ್ಲಾ ಪೂಜೆಗಳಲ್ಲಿ ಜಪಿಸಬೇಕು. ಇದಕ್ಕೆ ಗಂಡು-ಹೆಣ್ಣು ಎಂಬ ನಿಯಮವಿಲ್ಲ. ಐದು ಮಹಾ ಪಾಪಗಳನ್ನು, ಕೆಟ್ಟ ಕೆಲಸಗಳನ್ನು ನಿವಾರಿಸುತ್ತದೆ. ಸಿದ್ಧಿ ತಂದು ಕೊಡುತ್ತದೆ. ಭಕ್ತರಿಗೆ ಮುಕ್ತಿ, ಶರಣರಿಗೆ ಹೊನ್ನಿನ ಆಗರವಾಗಿದೆ ಈ ಪಂಚಾಕ್ಷರಿ ಮಂತ್ರ. ಇದು ಮಂತ್ರದ ಮಂತ್ರ ಶೈವಕ್ಕೆ ಶೈವ. ಪಂಚಾಕ್ಷರಿ ಮಂತ್ರಕ್ಕಿಂತ ಬೇರೆ ಮಂತ್ರಗಳಿಲ್ಲ ಎಂದಿದ್ದಾನೆ ಹರಿಹರ ತನ್ನ ಪಂಚಾಕ್ಷರಿ ರಗಳೆಯಲ್ಲಿ. ಅಂದರೆ ಅಲ್ಲಿ ವೀರಶೈವರಿಗೆ ಪಂಚಾಕ್ಷರಿ ಮಂತ್ರಕ್ಕಿಂತ ಶ್ರೇಷ್ಠವಾದ ಮಂತ್ರವಿಲ್ಲ.

ರಾಘವಾಂಕ ಕವಿ ತನ್ನ ಸಿದ್ಧರಾಮಚಾರಿತ್ರದಲ್ಲಿ ಸಿದ್ಧರಾಮನನ್ನು ಪಂಚಾಕ್ಷರಿ ಮಂತ್ರಪ್ರಿಯನೆಂದು ಕರೆಯುತ್ತಾನೆ. ಶ್ರೀಶೈಲಕ್ಕೆ ಬಂದ ಸಿದ್ಧರಾಮನಿಗೆ ಮಲ್ಲಿಕಾರ್ಜುನ ಆತನ ತಲೆಯಲ್ಲಿದ್ದ ಲಿಂಗವನ್ನು ತೋರಿ ಆತನಲ್ಲಿದ್ದ ನಿಜಭಕ್ತಿಯನ್ನು ಗುರುಪೂಜೆಯಾಗಿ ಸ್ವೀಕರಿಸಿ ಆತನಿಗೆ ಪಂಚಾಕ್ಷರಿ ಮಂತ್ರ ಬೋಧಿಸಿ ದೀಕ್ಷೆ ನೀಡುತ್ತಾನೆ. ಮತ್ತೊಂದು ಸಂದರ್ಭದಲ್ಲಿ ಕವಿ ಸಿದ್ಧರಾಮ ನುಡಿದದ್ದೇ ಮಂತ್ರ ಹೆಸರಿಟ್ಟುದ್ದೇ ದೈವ ಎಂಬಂತೆ ಹೇಳಿದ್ದಾನೆ. ಇದೇ ಕವಿ ಹರಿಶ್ಚಂದ್ರ ಚಾರಿತ್ರ ಕಾವ್ಯದಲ್ಲಿ ಗುರುವಿನ ಬಳಗ(ಶಿಷ್ಯ ಪರಿವಾರ) ಶಿವನಬಳಗವಾಗಿದೆ. ಆ ಗುರು ನುಡಿದ ನುಡಿ ಶುದ್ಧ ಪಂಚಾಕ್ಷರಿ ಮಂತ್ರವಾಗಿದೆ ಎಂದಿದ್ದಾನೆ. ಅಂದರೆ ಇಲ್ಲಿ ಗುರುವಿನಿಂದ ದೀಕ್ಷಾಸಮಯದಲ್ಲಿ ಉಪದೇಶಿಸಲ್ಪಡುವುದು ಪಂಚಾಕ್ಷರಿ ಮಂತ್ರ ಎಂದು ಅರ್ಥ.

ಚಾಮರಸ ಕವಿ ತನ್ನ ಪ್ರಭುಲಿಂಗ ಲೀಲೆ ಕಾವ್ಯದಲ್ಲಿ ಅಕ್ಕಮಹಾದೇವಿಗೆ ತಂದೆ ನಿರ್ಮಳನು ಮಗಳ ಶಿರದ ಮೇಲೆ ಹಸ್ತವನ್ನಿರಿಸಿ ವೀರಶೈವ ಧರ್ಮದ ಪಂಚಾಕ್ಷರಿ ಮಂತ್ರವನ್ನು ಕಿವಿಯಲ್ಲಿ ಉಪದೇಶಿಸಿ ದೀಕ್ಷೆಯನ್ನಿತ್ತು ಹರಸಿದನು. ಬಸವಣ್ಣನಿಗೆ ಮಹಾದೇವನು ಆಶ್ವಾಸನೆ ಕೊಡುವಂತೆ ಹಸ್ತವನ್ನು ಶಿರದಲ್ಲಿ ನೆಲೆಗೊಳಿಸುತ್ತ ಜ್ಞಾನವನ್ನು ಉಣ್ಣುವ ಸ್ಥಾನವಿದೆಂದು ಕಿವಿಯಲ್ಲಿ ಹೇಳುವಂತೆ ಶಿವ ಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿ, ದೇಹದಲ್ಲಿ ತುಂಬಿ ಬಸವನೆಂಬ ಹೆಸರನಿಟ್ಟು ದೀಕ್ಷೆ ನೀಡಿದನು. ಇಲ್ಲಿಯೂ ಸಹ ಪಂಚಾಕ್ಷರಿ ಮಂತ್ರವು ಗುರುವಿನಿಂದ ಉಪದೇಶಿಸಲ್ಪಡುವುದು.

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವ ಚಿಂತಾಮಣಿ ಕಾವ್ಯದಲ್ಲಿ ಪರಮಶಿವನ ಮುಖದಲ್ಲಿ ಮೊದಲು ನಮಃ ಎಂಬ ಶಬ್ದ, ಕೊನೆಯಲ್ಲಿ ಶಿವಾಯ ಎಂಬ ಶಬ್ದ ಬಂದಿತು. ಇದು ಶ್ರುತಿಯ ಶಿರೋರತ್ನ. ಸಕಲ ವರ್ಣದ ಮೂಲಹಾಗಿದೆ. ವೇದ, ಆಗಮ, ಪುರಾಣಗಳಲ್ಲಿ ಶ್ರೇಷ್ಠವಾದದ್ದು ಓಂ ಸೇರಿ ಷಡಕ್ಷರಿ ಮಂತ್ರವಾಗಿದೆ. ಸರ್ವಸಾಧು ಜನರಿಗೆ ಪ್ರಣವದುತ್ತರ ಸರ್ವಮಂತ್ರಗಳ ಮೂಲ. ಸಾಧಕರಿಗೆ ಸದ್ಭಕ್ತರಿಗೆ ಇಷ್ಟಾರ್ಥ ಸೌಖ್ಯಗಳನ್ನು ನೀಡುವ ಸಿದ್ಧಾಂತ, ಅಲ್ಪ ಅಕ್ಷರಗಳಿದ್ದರೂ ಗೂಡಾರ್ಥ ಹೊಂದಿದೆ. ಇದನ್ನು ಜಪಿಸುವವರಿಗೆ ಮುಕ್ತಿ ದೊರೆಯುತ್ತದೆ. ಸಕಲ ಜನರಿಗೆ ಮನಸ್ಸಿನಲ್ಲಿ ಬೇಡಿದ್ದನ್ನು ಕೊಡುತ್ತದೆ. ತಪನಿರತರಾದ ಶಿವಯೋಗಿಗಳಿಗೆ ಆಲದ ಮರದ ರೀತಿಯಲ್ಲಿ ಸಕಲ ಬ್ರಹ್ಮಾಂಡವನ್ನು ತನ್ನ ಗರ್ಭದಲ್ಲಿ ಇಟ್ಟುಕೊಂಡಂತೆ ಇರುವ ಮಹಾ ಮಂತ್ರವಾಗಿದೆ. ಇದು ಸರ್ವಶ್ರೇಷ್ಠ ಮಂತ್ರವಾಗಿದೆ.

ಕರಸ್ಥಲನಾಗಿದೇವ ಅಕ್ಷರ ಚೌಪದನ ಕೃತಿಯಲ್ಲಿ 'ಓಂ ನಮಃ ಶಿವಾಯ' ಎಂಬ ಮಂತ್ರವು ಭಕ್ತರಿಗೆ ಸಾಧಕರಿಗೆ ಸಕಲವೂ ಆಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಭಕ್ತರಿಗೆ, ಶಿವಯೋಗಿಗಳಿಗೆ, ಸಾಧಕರಿಗೆ ಮಂತ್ರವು ಸರ್ವಶ್ರೇಷ್ಠ ವಾದದ್ದಾಗಿದೆ. ಅದು ವೇದ, ಆಗಮ, ಪುರಾಣ ಶಾಸ್ತ್ರಗಳಿಗಿಂತಲೂ ಶ್ರೇಷ್ಠವಾದದ್ದಾಗಿದೆ. ಈ ಮಂತ್ರ ಜಪಿಸಿದವರಿಗೆ ಸಕಲ ಇಷ್ಟಾರ್ಥಗಳು ಸಿದ್ಧಿಸುವವು. ವೀರಶೈವನಿಗೆ ಪಂಚಾಕ್ಷರಿ ಮಂತ್ರ ಹೊರತುಪಡಿಸಿ

ಭೂಲೋಕದಲ್ಲಿ ಬೇರೆ ಮಂತ್ರಗಳಿಲ್ಲ. ಈ ಮಂತ್ರವನ್ನು ಬಿಟ್ಟು ಬೇರೆ ಮಂತ್ರವನ್ನು ಭಕ್ತ ಜಪಿಸಬಾರದು.

## ೨. ಪಂಚಾಚಾರಗಳು

ಪ್ರತಿಯೊಂದು ಧರ್ಮಕ್ಕೆ ತನ್ನದೇಯಾದ ಆಚಾರ ಸಂಪ್ರದಾಯಗಳಿರುತ್ತವೆ. ಆಚಾರಗಳಿಲ್ಲದ ಧಾರ್ಮಿಕ ಪಂಥಕ್ಕೆ ಧರ್ಮ ಎನ್ನಲಾಗದು. ಪ್ರತಿಯೊಂದು ಧರ್ಮವೂ ತನ್ನದೇಯಾದ ಧಾರ್ಮಿಕ ಆಚಾರಗಳನ್ನು ಹೊಂದಿರುವಂತೆ ವೀರಶೈವ(ಲಿಂಗಾಯತ)ಧರ್ಮವು ಪಂಚಾಚಾರಗಳನ್ನು ಹೊಂದಿದೆ. ವೀರಶೈವ ಭಕ್ತನು ನಿತ್ಯ ಬದುಕಿನಲ್ಲಿ ಇವುಗಳನ್ನು ಚಾಚೂ ತಪ್ಪದೇ ಆಚರಿಸಬೇಕು. ಈ ಪಂಚಾಚಾರಗಳನ್ನು ನಿತ್ಯ ಬದುಕಿನಲ್ಲಿ ಆಚರಿಸಿದಾಗ ಮಾತ್ರ ಭಕ್ತನ ಜೀವನ ಸಾರ್ಥಕ ಪಡೆಯುತ್ತದೆ. "ಆಚಾರವೇ ಸ್ವರ್ಗ ಅನಾಚಾರವೇ ನರಕ" ಎಂಬ ಬಸವಣ್ಣನವರ ವಚನವನ್ನು ನೆನಪಿಸಿಕೊಂಡರೆ ವೀರಶೈವ ಧರ್ಮದಲ್ಲಿ ಆಚಾರಕ್ಕೆ ಎಂಥ ಮಹತ್ವವಿದೆ ಎಂಬುದನ್ನು ಅರಿಯಬಹುದು.

ಪಂಚಾಚಾರಗಳು ವೀರಶೈವಧರ್ಮದ ಪ್ರಾಣ ಸ್ವರೂಪವಾಗಿದೆ. ದೇಹ ಹಾಗೂ ಆತ್ಮಗಳನ್ನು ಕೂಡಿಸುವ ಕೊಂಡಿ ಪ್ರಾಣ. ಹಾಗೆಯೇ ಅಂಗ ಸ್ವರೂಪದ ಅಷ್ಟಾವರಣ ಹಾಗೂ ಆತ್ಮ ಸ್ವರೂಪದ ಷಟ್‌ಸ್ಥಲಗಳನ್ನು ಕೂಡಿಸುವ ಕೊಂಡಿಯೆಂದರೆ ಈ ಪ್ರಾಣಸ್ವರೂಪದ ಪಂಚಾಚಾರಗಳು. ನೈತಿಕ ನಿಷ್ಠೆ, ಧಾರ್ಮಿಕ ಸಾಧನೆಗಳೆರಡನ್ನು ಒಳಗೊಳ್ಳುವ ಪೂರ್ಣ ದೃಷ್ಟಿ ಅದುವೇ ಆಚಾರ. ಅಂತರಂಗದ ಅರಿವು ಹಾಗೂ ಅರಿವಿನ ಆಚರಣೆ ಇವೆರಡರಿಂದ ಮಾತ್ರ ಅದು ಸಿದ್ಧಿಸುತ್ತದೆ."[೧೧೩] ಪ್ರತಿಯೊಂದು ಆಚಾರಕ್ಕೂ ತನ್ನದೇ ಆದ ಸ್ವರೂಪ ಮಹತ್ವವಿದೆ. ಈ ಪಂಚಾಚಾರ ಲಕ್ಷಣ ಮಹತ್ವ ಕುರಿತು ಚನ್ನಬಸವಣ್ಣ ತನ್ನ ವಚನದಲ್ಲಿ ಹೀಗೆ ವ್ಯಾಖ್ಯಾನಿಸಿದ್ದಾನೆ.

"ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರವೆಂಬ
ಪಂಚಾಚಾರದ ಆಚರಣೆಯೆಂತೆಂದರೆ
ಲಿಂಗವಲ್ಲದೆ ಅನ್ಯವನರಿಯದಿಹುದೆ ಲಿಂಗಾಚಾರ
ಸಜ್ಜನ ಕಾಯಕದಲ್ಲಿ ತಂದು ಗುರುಲಿಂಗ ಜಂಗಮಕ್ಕೆ ನೀಡಿ
ಸತ್ಯಶುದ್ಧನಾಗಿಹುದೆ ಸದಾಚಾರ
ಶಿವಭಕ್ತರಲ್ಲಿ ಕುಲಗೋತ್ರ ಜಾತಿ ವರ್ಣಾಶ್ರಮವನರಸದೆ
ಅವರೊಕ್ಕುದು ಕೊಂಬುದೆ ಶಿವಾಚಾರ
ಶಿವಾಚಾರದ ನಿಂದೆಯ ಕೇಳದಿಹುದೆ ಗಣಾಚಾರ
ಶಿವಶರಣರೆ ಹಿರಿಯರಾಗಿ ತಾನು ಕಿರಿಯನಾಗಿ
ಭಯ ಭಕ್ತಿಯಿಂದ ಆಚರಿಸುವುದೆ ಭೃತ್ಯಾಚಾರ...."[೧೧೪]

ಈ ವಚನದಲ್ಲಿ ಚನ್ನಬಸವಣ್ಣ ಪಂಚಾಚಾರಗಳ ಸ್ವರೂಪ ಕುರಿತು ವಿಶ್ಲೇಷಿಸಿದ್ದಾನೆ.

ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ಪಂಚಾಚಾರಗಳನ್ನು ಕುರಿತು ದಾಖಲಿಸಿರುವುದನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ವೈದಿಕರ ಪಂಚಭೂತಗಳಿಗೆ ಸರಿಸಮಾನ ಎಂಬಂತೆ ವೀರಶೈವ ದಾರ್ಶನಿಕರು ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ ಎಂಬ ಐದು ಆಚಾರಗಳನ್ನು ಜಾರಿಗೆ ತಂದು ಅವುಗಳಿಗೆ ಪ್ರಾಮುಖ್ಯತೆ ನೀಡಿದರು.

## ೨.೧. ಲಿಂಗಾಚಾರ

ತಾನೇ ಲಿಂಗಸ್ವರೂಪನಾಗಿ ಪರಿಣಮಿಸುವ ಲಿಂಗಾಂಗ ಸಾಮರಸ್ಯದ ಮಾರ್ಗದಲ್ಲಿ ಲಿಂಗಾಚಾರ ಮೊದಲ ಮೆಟ್ಟಿಲು. ಶಿವನನ್ನು ಲಿಂಗಸ್ವರೂಪನೆಂದು ತಿಳಿದು, ಲಿಂಗೋಪಾಸಕನಾಗಿ, ನಿತ್ಯವೂ ಲಿಂಗದ ಪೂಜಾಜಪಧ್ಯಾನಾದಿಗಳಿಂದ ಲಿಂಗದ ನಡೆ, ನೋಟ, ಕಳೆ, ಗುಣಗಳನ್ನು ಅಂಗನು ಅಥವಾ ಆತ್ಮನು ತನ್ನಲ್ಲಿ ಮೈಗೂಡುವಂತೆ ಮಾಡಿಕೊಳ್ಳುವುದೇ ಅಂದರೆ ಲಿಂಗ ಸಿದ್ಧಿಯಾಗುವುದೇ ಲಿಂಗಾಚಾರದ ಲಕ್ಷಣ. ಲಿಂಗಸ್ವರೂಪ ಪಡೆಯುವುದೇ ಲಿಂಗಾಚಾರದ ಗುರಿ" ಗುರುಲಿಂಗ ಜಂಗಮ ರೂಪವಾದ ಲಿಂಗವನ್ನಲ್ಲದೆ ಸ್ಥಾವರಲಿಂಗಗಳನ್ನು ಹಾಗೂ ಅನ್ಯದೇವತೆಗಳನ್ನು ಉಪಾಸನೆ ಮಾಡಬಾರದು."[೧೧೫] ಇದುವೇ ಲಿಂಗಾಚಾರ.

ಲಿಂಗಾಚಾರ ಕುರಿತು ಬಸವಣ್ಣ ತನ್ನ ವಚನದಲ್ಲಿ

"ಲಿಂಗಕ್ಕೆಂದೇ ನೆನೆವೆ, ಲಿಂಗಕ್ಕೆಂದೆ ಮಾಡುವೆ
ಲಿಂಗಕ್ಕೆಂದೆ ಕೊಡುವೆ ನಾನಯ್ಯ
ಸಕಲ ಪದಾರ್ಥಗಳ ಲಿಂಗಕ್ಕೆಂದೆ ಭಾವಿಸುವೆ....."[೧೧೬]

ಎಂದು ಹೇಳಿದ್ದಾರೆ.

ಲಿಂಗಕ್ಕಾಗಿ ಸರ್ವಸ್ವವನ್ನು ಅರ್ಪಿಸುವ ತಲ್ಲೀನತೆಯ ಆಚಾರ. ಹಾಗಾಗಿ ಎಲ್ಲವೂ ಲಿಂಗಕ್ಕಾಗಿ ಇರಬೇಕು. ಲಿಂಗ ಹೊರತು ಬೇರೆ ಏನೂ ಇಲ್ಲ ಎಂಬುದು ಲಿಂಗಾಚಾರ ಎಂದು ಬಸವಣ್ಣ ಹೇಳುತ್ತಾನೆ.

ಹರಿಹರಾದಿ ಕವಿಗಳು ಲಿಂಗಾಚಾರ ಪರಿಕಲ್ಪನೆ ಕುರಿತು ತಮ್ಮ ಕಾವ್ಯಗಳಲ್ಲಿ ವಿಶ್ಲೇಷಿಸಿದ್ದಾರೆ.

**ಹರಿಹರ :** "ನೋಟದಿಂದಂಗಯ್ಯೊಳಿಕ್ಕಿದಂ ಲಿಂಗಮಂ
ಕೂಟದಚ್ಚಳಿಯದಸುವೆರಸಿ ಶಿವಲಿಂಗನುಂ
ಲಿಂಗದೊಡನೇ ಬೆರಸಿ ಹೋದುದಾತನ ಜೀವ
ಅಂಗಂ ಮಲಂಗಿದುದು ಭಿತ್ತಿಯಂ ಬರಿಭಾವೆ...."[೧೧೭]
"ಜಂಗಮ ಪ್ರಾಣಿಯಾಗಿರ್ಪೆ ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ
ನೋಡೆ ನುಡಿಯೆ ಮುಟ್ಟೆ ಕೇಳೆ....."[೧೧೮]

"ಭಾವದೊಳಗೆ ನಿಂದ ಮೂರ್ತಿಯಂ ಮುಸುಂಕಲರ್ಚಿಸುತ್ತೆ
ತನ್ನ ರೂಪು ಲಿಂಗದೊಳಗೆ ಲಿಂಗ ರೂಪು ಹೃದಯದೊಳಗೆ...."[೧೧೯]

**ರಾಘವಾಂಕ :** "ಪತಿತರಿರ ನಿಮ್ಮ ಮನೆಯೊಳು ನಿಲುವನಲ್ಲೆಂದು
ಲಿಂಗಮಂ ಧರಿಸಿ ಪಿಡಿದು
ಗತಿಗೆಟ್ಟು ಬೇಡಿನ್ನು ದೈವವೆಂದೆನ್ನದಿರಿ
ಧೃತಿಗೆಟ್ಟು ಬೇಡಿನ್ನು ದೈವವೆಂದೆನ್ನದಿರಿ
ಅತನುಹರ ಮಲ್ಲಿಕಾರ್ಜುನನೀವನೆಂದು...."[೧೨೦]

**ಚಾಮರಸ :** "ಲಿಂಗವೇ ಪ್ರಾಣಸ್ವರೂಪೆಂ
ದಂಗವಿಸಿ ತಾನೋತು ಬಳಿಕಾ
ಲಿಂಗವನು ಬೇಡಿರಿಸಲಾಗದು ಭಕ್ತಿಭಾವುಕರ
ಅಂಗಸಂಗದಲಗಲದಂತಿರೆ..."[೧೨೧]

**ಕರಸ್ಥಲದ ವೀರಣ್ಣೊಡೆಯ :** "ನುಡಿವಲ್ಲಿ ನಡೆವಲ್ಲಿ ಕೊಡುವಲ್ಲಿ ಕೊಂಬಲ್ಲಿ
ಒಡಗಲಸಿ ಲಿಂಗದೊಳಗೆರಡಿಲ್ಲದೆ
ದೃಢದಿಂದಾಚರಿಸಲವ ಮುಕ್ತಾ"[೧೨೨]

**ಕರಸ್ಥಲ ನಾಗಿದೇವ :** "ಲಿಂಗವಿದು ನಿರುಪಮನ ಲಿಂಗವಿದು ನಿರ್ಲೇಪ
ಲಿಂಗ ಮುಕ್ತಿಯ ಸ್ಥಾನಲಿಂಗ ನಿನ್ನಯ ಪ್ರಾಣಲಿಮಗ ಭಾವದಿಯೊಪ್ಪುದು
ಲಿಂಗವಲ್ಲದೆ ಇತರ ದೈವಕ್ಕೆ ಎರಗದಿರು
ಲಿಂಗಮುಖವು ಜಂಗಮವೆಂದು ಭಾವಿಸು ನೀನು
ಲಿಂಗದಂಗವೆ ನನ್ನ ಅಂಗವೆಂದರಿಯುತೆ ಧರಿಸೆ...."[೧೨೩]

**ಲಕ್ಕಣ್ಣ ದಂಡೇಶ :** "ನಡೆವಲ್ಲಿ ನಿಲುವಲ್ಲಿ ನಿದ್ರೆಗೆಯ್ವೆಡೆಯಲ್ಲಿ,
ಬಿಡದೆಚ್ಚಱಿಕೆಯಿಂ ಶುಚಿಯಾಗಿಯಂಗದೊಳ್
ಬಿಡಯಂದಿಂ ಲಿಂಗದ ವಿಯೋಗಮಂ
ಕಂಡಾಗ ತನುವಿಗುಪಹತಿ ತಪ್ಪದು"[೧೨೪]

ಹೀಗೆ ಹರಿಹರಾದಿ ಕವಿಗಳು ಲಿಂಗಾಚಾರದ ಪರಿಕಲ್ಪನೆಯನ್ನು ತಮ್ಮ ಕಾವ್ಯಗಳಲ್ಲಿ ವಿಶ್ಲೇಷಿಸಿದ್ದಾರೆ. ಹರಿಹರ ತನ್ನ ಪ್ರಭುದೇವರ ರಗಳೆಯಲ್ಲಿ ಅನಿಮಿಷನ ಕೈಯಿಂದ ಅಲ್ಲಮನ ಕೈಗೆ ಲಿಂಗ ಬಂದಿತು. ನೋಟದಿಂದಲೇ ಅಂಗೈಯಲ್ಲಿ ಶಿವಲಿಂಗವನ್ನರಿಸಿದ ಆ ಶಿವಯೋಗಿಯ ಜೀವ ಲಿಂಗದೊಡನೆ ಬೆರೆತು ಹೋಯಿತು. ಆತನ ಕಾಯ ಮಲಗಿತು. ಇತ್ತ ಲಿಂಗ ಸೋಂಕಿನಿಂದ ಅಲ್ಲಮನ ಶರೀರಕ್ಕೆ ಹೊಸತು

ಭಾವ ಉದಯಿಸಿತು. ಬಸವರಾಜದೇವರ ರಗಳೆಯಲ್ಲಿ ಜಂಗಮ ಪ್ರಾಣಿಯಾದ ಬಸವಣ್ಣ ಶಿವಲಿಂಗಾರ್ಪಿತ ವಲ್ಲದುದನ್ನು ಆಘ್ರಾಣಿಸಲಾರ (ವಾಸನೆ ನೋಡಲಾರು), ಅದನ್ನು ನೋಡಲಾರ, ಶಿವಲಿಂಗಾರ್ಪಿತವಲ್ಲದನ್ನು ನುಡಿಯಲಾರ, ಮುಟ್ಟಲಾರ, ಕೇಳಲಾರ ಅಂದರೆ ಶಿವಲಿಂಗ ಬಿಟ್ಟು ಬೇರೆಯ ದೈವವನ್ನು ಸ್ವೀಕರಿಸಲಾರ ಎಂದರ್ಥ. ಇದೇ ಕವಿ ತನ್ನ ಮಹಾದೇವಿಯಕ್ಕನ ರಗಳೆಯಲ್ಲಿ ಮಹಾದೇವಿ ತನ್ನ ಪ್ರಾಣಸ್ವರೂಪವಾದ ಮಲ್ಲಿನಾಥ ಲಿಂಗವನ್ನು ಪ್ರತಿನಿತ್ಯ ಪೂಜಿಸುತ್ತಿದ್ದಳು. ಅನ್ಯದೈವವನ್ನು ನೆನೆಯುತ್ತಿರಲಿಲ್ಲ. ಅವಳು ಮಲ್ಲಿನಾಥ ಲಿಂಗವನ್ನು ನಿರ್ಮಲ ಉಪಕರಣಗಳ ಕಿರಣಗಳ ಬೆಳಗು ದೇವನಿಗೆ ಮುಸುಕಿ ತನ್ನನ್ನೂ ಮುಸುಕಿಸಿ ಭಾವದಲ್ಲಿ ನಿಂತ ಲಿಂಗಮೂರ್ತಿಗೂ ಮುಸುಕಿ ತನ್ನ ರೂಪು ಲಿಂಗದೊಳಗೆ ಲಿಂಗ ರೂಪು ಹೃದಯದೊಳಗೆ ಭಿನ್ನವಿಲ್ಲದಂತೆ ಉಭಯನಾಗಿ ತೋರಿತು. ಹಾಗೆ ಬೇರೆ ದೈವಕ್ಕೆ ಎರಗದಂತೆ ಪೂಜಿಸುತ್ತಿದ್ದಳು ಎನ್ನುತ್ತಾನೆ ಹರಿಹರ ಕವಿ.

ರಾಘವಾಂಕ ತನ್ನ ಸಿದ್ಧರಾಮ ಚಾರಿತ್ರದಲ್ಲಿ ಶ್ರೀಶೈಲದಿಂದ ಬಂದ ಸಿದ್ಧರಾಮ ಅಲ್ಲಿಂದ ತಂದ ಶಿವಲಿಂಗವನ್ನು ಆರಾಧಿಸುತ್ತಿರುತ್ತಾನೆ. ಒಂದು ದಿನ ಅವನ ತಂದೆ-ತಾಯಿಗಳು ತಮ್ಮ ಮನೆ ದೇವರಾದ ಧೂಳಿಮಾಕಾಳನಿಗೆ ವ್ರತ ನಡೆಸಲು ಸಿದ್ಧರಾದಾಗ ಇದನ್ನು ವಿರೋಧಿಸಿದ ಸಿದ್ಧರಾಮ ಮನೆ ತೊರೆಯಲು ನಿಶ್ಚಯಿಸಿ ಅತ್ಯಂತ ಜಡರಾದ ಈ ಮಾನವರನ್ನು ಇನ್ನೇನೆನ್ನಲಿ? ಸಾಕ್ಷಾತ್ ಶಿವನೇ ಲಿಂಗ ರೂಪದಲ್ಲಿರುವಾಗ ಅನ್ಯದೈವವನ್ನು ಪೂಜಿಸುವರೇ ಎಲೇ ಪಾತಕರಿರಾ? ನಾನಿನ್ನು ನಿಮ್ಮ ಮನೆಯಲ್ಲಿ ಇರುವುದಿಲ್ಲ ಎಂದು ಆ ದಿವ್ಯ ಲಿಂಗವನ್ನು ತೆಗೆದುಕೊಂಡು ಬುದ್ಧಿ ಕೆಟ್ಟು ಬೇರೆ ಮತ್ತೊಂದು ದೈವ ಇದೆ ಎನ್ನದಿರಿ. ಮಲ್ಲಿಕಾರ್ಜುನನ್ನು ಬಿಟ್ಟು ಬೇರೆ ದೈವವಿಲ್ಲ ಎಂದು ಹೇಳಿ ಲಿಂಗನಿಷ್ಠೆ ಮೆರೆಯುತ್ತಾನೆ.

ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ ಭಕ್ತನಿಗೆ ಲಿಂಗವೇ ಪ್ರಾಣ ಸ್ವರೂಪ. ಅದನ್ನು ಅರಿತು ಪ್ರಾಣವನ್ನು ಲಿಂಗದಲ್ಲಿ ಸೇರಿಸಿದ ಮೇಲೆ ಮುಂದೆ ಆ ಲಿಂಗವನ್ನು ಶರೀರದಿಂದ ಅಗಲಿಸಬಾರದು. ಲಿಂಗಕ್ಕೂ ಅಂಗಕ್ಕೂ ಸಂಬಂಧವಾದಂತೆ ಲಿಂಗಧಾರಣೆಯಾದುದಾದರೆ ಆತನೇ ಮಂಗಳಾತ್ಮನೆನಿಸುವನು. ಅಂದರೆ ಇಲ್ಲಿ ಲಿಂಗವೇ ಸರ್ವಸ್ವ ಅದನ್ನು ಬಿಟ್ಟು ಅನ್ಯ ದೈವವಿಲ್ಲ. ಅದನ್ನು ಶರೀರದಿಂದ ಅಗಲಿಸಬಾರದು.

ಕರಸ್ಥಲ ವೀರಣ್ಣೊಡೆಯ ತನ್ನ ಪರಮವಿರಕ್ತನ ಐಕ್ಯಸ್ಥಲ ಕೃತಿಯಲ್ಲಿ ನಾವು ನುಡಿಯುವ ನುಡಿ ಲಿಂಗ ಕುರಿತಾಗಿರಬೇಕು. ನಡೆ ಕೊಡು-ಕೊಳ್ಳುವಿಕೆ ಲಿಂಗ ಹೊರತುಪಡಿಸಿರಬಾರದು. ಇದನ್ನು ಅಂತರಂಗದಲ್ಲಿ ಇಟ್ಟುಕೊಳ್ಳಬೇಕು. ಲಿಂಗದೊಳಗೆ ಅನ್ಯವಿಲ್ಲವೆಂದರಿತು ಏಕೋಭಾವದಿಂದ ಲಿಂಗೋಪಾಸನೆ ಮಾಡುವವನು ಭವ-ಬಂಧನದಿಂದ ಮುಕ್ತನಾಗುತ್ತಾನೆ ಎಂದಿದ್ದಾನೆ.

ಕರಸ್ಥಲ ನಾಗಿದೇವ ತನ್ನ ಏಕವಿಂಶತಿ ದೀಕ್ಷಾವಿಧಾನ ಕೃತಿಯಲ್ಲಿ ಲಿಂಗವು ಉಪಮಾತೀತವಾದದ್ದು. ಅನ್ಯ ದೈವದ ಸಂಗ ಹೊಂದಿರಲಾರದ್ದು, ಇದು ಮುಕ್ತಿಯ ಸ್ಥಾನ ಲಿಂಗವಾಗಿದೆ. ಇದು ಭಕ್ತನಿಗೆ

ಪ್ರಾಣಲಿಂಗ. ಆದ್ದರಿಂದ ಲಿಂಗವಲ್ಲದೆ ಅನ್ಯದೇವರಿಗೆ ನಮಿಸಬಾರದು. ಲಿಂಗವನ್ನು ಜಂಗಮ ಮುಖದಿಂದ ಪಡೆದು ನಿತ್ಯ ಪೂಜಿಸಿ ಲಿಂಗದ ಅಂಗವೇ ನನ್ನ ಅಂಗವೆಂದರಿತು ಧರಿಸಬೇಕು ಎನ್ನುತ್ತಾನೆ. ಇಲ್ಲಿ ಭಕ್ತನಿಗೆ ಲಿಂಗವಿಲ್ಲದೆ ಬೇರೆ ದೈವ ಇಲ್ಲ ಎಂಬುದು ಮುಖ್ಯ ಅಂಶವಾಗಿದೆ.

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವ ಚಿಂತಾಮಣಿಯಲ್ಲಿ ನಮ್ಮ ನಡೆನುಡಿಯಲ್ಲಿ ಲಿಂಗವೇ ಬೆರೆತಿರಬೇಕು. ನಿದ್ರೆಯಲ್ಲಿ ಲಿಂಗವನ್ನಲ್ಲದೆ ಅನ್ಯ ದೈವ ನೆನೆಯಬಾರದು ಬಹು ಶುಚಿಯಾಗಿ ನಿತ್ಯ ಪೂಜೆಯ ನಂತರ ದೇಹದಲ್ಲಿ ಧರಿಸಬೇಕು. ಲಿಂಗವು ದೇಹದಿಂದ ಅಗಲಿದಾಗ ದೇಹಕ್ಕೆ ಆಪತ್ತು ತಪ್ಪದು. ಆ ಕಾರಣದಿಂದ ಲಿಂಗ ಬೇರೆಯಾಗದಂತೆ ನೋಡಿಕೊಳ್ಳಬೇಕೆಂದಿದ್ದಾನೆ.

ಈ ಮೇಲಿನ ಎಲ್ಲಾ ಕವಿಗಳು ಲಿಂಗವೇ ಪರಮದೈವ ಅದನ್ನು ಬಿಟ್ಟು ಭಕ್ತನಿಗೆ ಅನ್ಯ ದೈವವಿಲ್ಲ. ಅನ್ಯ ದೈವಕ್ಕೆ ನಮಿಸಬಾರದು. ಲಿಂಗವೇ ಪ್ರಾಣ ಅದನ್ನು ದೇಹದಿಂದ ಅಗಲದಂತೆ ನೋಡಿಕೊಳ್ಳಬೇಕು ಎಂಬ ಅಭಿಪ್ರಾಯ ವ್ಯಕ್ತಪಡಿಸಿರುವುದು ಕಂಡುಬರುತ್ತದೆ.

### ೨.೨. ಸದಾಚಾರ

ಲಿಂಗಾನುಭವಿಗಳು ಒಪ್ಪುವ ಆಚರಣೆಯೇ ಸದಾಚಾರವೆನಿಸುತ್ತದೆ. ಸತ್ಯ ಶುದ್ಧ ಕಾಯಕ ಮಾಡುತ್ತಾ ಸಚ್ಚಾರಿತ್ರ್ಯವುಳ್ಳವನಾಗಿರುವವನೇ ಸದಾಚಾರಿಯೆನಿಸಿಕೊಳ್ಳುತ್ತಾನೆ. ಪ್ರತ್ಯಕ್ಷವಾಗಿ ಜಂಗಮವೇ ಭಕ್ತನ ಮನೆಗೆ ಬಂದಾಗ ಆ ಜಂಗಮದಲ್ಲಿ ಗುರುಲಿಂಗಗಳುಂಟೆಂದು ಭಾವಿಸಿ ಗುರುಪಾದೋದಕ, ಲಿಂಗ ಪಾದೋದಕ, ಜಂಗಮ ಪಾದೋದಕಗಳನ್ನು ಪಡೆಯುವುದು''[೧೨೫] ಸದಾಚಾರವೆನಿಸಿಕೊಳ್ಳುತ್ತದೆ. ಚನ್ನಬಸವಣ್ಣ ೫೦ ಆಚಾರಗಳನ್ನು ಹೇಳಿದರೆ ಅಕ್ಕಮ್ಮ ೬೪ ಶೀಲಗಳು ೪೬ ನೇಮಗಳು, ೩೨ ಕೃತ್ಯಗಳನ್ನು ಹೇಳುವಳು. ಶಿವಲೆಂಕಮಂಚಣ್ಣ ೬೪ ವ್ರತ, ೫೬ ಶೀಲ, ೩೨ ನೇಮಗಳನ್ನು ತನ್ನ ವಚನದಲ್ಲಿ ಹೇಳಿರುವನು. ಭಕ್ತನು ದಿನನಿತ್ಯದ ಬದುಕಿನಲ್ಲಿ ಸದಾ ಅನುಸರಿಸಬೇಕಾದ ನಿಯಮವೇ ಸದಾಚಾರ ಎಂದು ಹೇಳಬಹುದು.

ಸದಾಚಾರ ಕುರಿತು ಬಸವಣ್ಣ ತನ್ನ ವಚನದಲ್ಲಿ ಹೀಗೆ ಹೇಳಿದ್ದಾನೆ.

"ಸದಾಚಾರ ಸದ್ಭಕ್ತಿ ಇಲ್ಲದವರ ನೊಲ್ಲನಯ್ಯಾ
ಅವರಾಧನೆಯ ದಂಡ
ನಿಚ್ಚನಿಚ್ಚಪ್ರಾಯಶ್ಚಿತ್ತರನೊಲ್ಲ..."[೧೨೬]

ಸದಾಚಾರ ಸದ್ಭಕ್ತಿ ಇಲ್ಲದವರ ಸಂಗಬೇಡ. ಅವರ ಪೂಜೆಯೂ ವ್ಯರ್ಥ, ಇದಕ್ಕೆ ಪ್ರಾಯಶ್ಚಿತ್ತವೆಂಬುದಿಲ್ಲ ಎಂದಿದ್ದಾರೆ. ಅಂದರೆ ಭಕ್ತ ಯಾವಾಗಲೂ ಸದಾಚಾರಿಯಾಗಿರಬೇಕೆಂಬುದೇ ಅವರ ನಿಲುವು.

ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ಸದಾಚಾರ ಕುರಿತು ಈ ಕೆಳಗಿನಂತೆ ವಿಶ್ಲೇಷಿಸಿದ್ದಾರೆ.

**ಹರಿಹರ :** "ಗುರುಲಿಂಗದೊಳೆರಡಿಲ್ಲದಿರ್ಪೆ, ಶರಣರಂ ಸಂಗನೆಂದೆ ಕಾಣ್ಬೆ, ಬಂದ ಭಕ್ತರನತ್ಯಾದರಿಪೆ ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ, ಬೇಡಿದ ಶರಣರ್ಗಿಲ್ಲೆನ್ನದೀವೆ, ಜಾಗ್ರಸ್ವಪ್ನ ಸುಷುಪ್ತಿಯವಸ್ಥಾನತ್ರಯಂಗಳೊಳು ಶರಣರಂ ಸಂಗನೆಂದಲ್ಲದೆ ಕಾಣೆ, ಜಂಗಮಪ್ರಾಣಿಯಾಗಿರ್ಪೆ, ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೋಡೆ ನುಡಿಯೆ ಕೇಳೆ ಜಂಗಮದಲ್ಲಿ ಜಾತಿಯನರಸೆ, ಪ್ರಸಾದದಲ್ಲಿ ಅಪವಿತ್ರನರಿಯೆ, ಪರಾಂಗನೆಯರಂ ಹೆತ್ತ ತಾಯಿಗಳೆಂಬೆ, ಪರದ್ರವ್ಯಮಂ ಕಿಲ್ಬಿಷಮೆಂದು ಮುಟ್ಟೆ......."[೧೭]

............

ಎನ್ನಿಚ್ಛೆಯೊಳು ಶಿವನ ಪೂಜೆಯೊಳು ನಲಿದಿಪ್ಪೆ,
ಎನಿಚ್ಛೆಯೊಳು ಮಹೇಶ್ವರ ಗೋಷ್ಠಿಯಳಿಪ್ಪೆ
ಎನ್ನಿಚ್ಛೆಯೊಳು ಗುರುವಿನಂಘ್ರಿ ಸೇವೆಯೊಳಿಪ್ಪೆ,......"[೧೮]

**ರಾಘವಾಂಕ :** "ರುದ್ರರೊಡಗೂಡಿ ಜಂಗಮಾರ್ಚನೆಯಿಂದ ಸರ್ವಗುಣದೊಳು...."[೧೯]

"ಪ್ರೇಮದಿಂ ಲಿಂಗಪೂಜಾ ಕೌಶಳಂ ಬೆತ್ತು
ಸಾಮರ್ಥ್ಯಭೂಷಣಂ ಶಾಂತಿ ಸಂಪನ್ನಂ ದ
ಯಾಮೇರು ಸುಖಸಂಕಥಾ ವಿನೋದದೊಳಿರಲು ಕೀರ್ತಿವಧು ವೇಗೆಯ್ದಳು"[೨೦]

**ಚಾಮರಸ :** "ಬೇಕು ಬೇಕೆಂಬುದ ನಿರಂತರ ಲಿಂಗ ಜಂಗಮಕೆ
ಸಾಕು ಸಾಕೆನೆ ದಣಿಯೆ ನೀಡುತ
ನೇಕ ವಸ್ತುವ ನಿಚ್ಚನಿಚ್ಚಲಿ
ಲೋಕವನು ಪಾವನವ ಮಾಡಿದ ಬಸವ ಭಕ್ತಿಯಲಿ"[೨೧]

**ಲಕ್ಕಣ್ಣದಂಡೇಶ :** "ಅರಸ ಧನಿಕಂ ವೀರ ಕುಲದಲತ್ಯಧಿಕರೆಂ
ದಿರದೆ ದೂರದಲಿ ಗುರುವಂ ಕಂಡು ಮೈಯಿಕ್ಕಿ
ಗುರುವಿಗಂ ಸಕಲೋಪಚಾರದೊಳಗಧಿಕವುಂಟೆರಡು
ಮೃದು ವಾಕ್ಯದಿಂದ"[೨೨]

**ಕರಸ್ಥಲ ವೀರಣ್ಣೊಡೆಯ :** "ಲಿಂಗದೊಳಾವಗಂ ನೆನಹನೊಂದಿಸಿ ಜಂಗಮದಲ್ಲಿಯರ್ಥಮಂ
ಹಿಂಗದೆ ಕೊಟ್ಟು ಕಾಯಮುವನಾ ಗುರುಸೇವೆಯೊಳಿತ್ತು..."[೨೩]

ಹೀಗೆ ಹರಿಹರಾದಿ ಕವಿಗಳು ಸದಾಚಾರ ಕುರಿತು ವಿಶ್ಲೇಷಿಸಿದ್ದಾರೆ. ಹರಿಹರ ತನ್ನ ಬಸವರಾಜ ದೇವರ ರಗಳೆಯಲ್ಲಿ ಗುರು ಲಿಂಗದಲ್ಲಿ ಬೇಧವಿಲ್ಲ. ಶರಣರನ್ನು ಸಂಗನಂತೆ ಕಾಣುವುದು. ಬಂದ

ಭಕ್ತರನ್ನು ಆರಾಧಿಸುವುದು, ಬರುವ ಭಕ್ತರನ್ನು ಆದರಿಸುವುದು ಮತ್ತು ಎದುರುಗೊಳ್ಳುವುದು. ಬೇಡಿದ ಶರಣರಿಗೆ ಇಲ್ಲೆನ್ನದೆ ಕೊಡುವುದು. ಬೇಡದವರಿಗೆ ಸಂತೃಪ್ತಿಗೊಳ್ಳುವಂತೆ ಆರಾಧಿಸುವುದು, ಜಾಗ್ರತ, ಸ್ವಪ್ನ, ಸುಷುಪ್ತಾವಸ್ಥೆಯಲ್ಲೂ ಶರಣರನ್ನು ಸಂಗನೆಂದೇ ಭಾವಿಸುವುದು. ಜಂಗಮ ಪ್ರಾಣಿಯಾಗಿರುವುದು, ಶಿವಲಿಂಗಾರ್ಪಿತವಲ್ಲದುದನ್ನು ಆಘ್ರಾಣಿಸಲಾಗದು, ನೋಡಲಾಗದು, ನುಡಿಯಲಾಗದು, ಮುಟ್ಟಲಾಗದು, ಕೇಳಲಾಗದು, ಜಂಗಮದಲ್ಲಿ ಜಾತಿ ಎಣಿಸಲಾಗದು. ಪ್ರಸಾದದಲ್ಲಿ ಅಪವಿತ್ರತೆ ಕಾಣಲಾಗದು, ಪರಸ್ತ್ರೀಯರನ್ನು ಹೆತ್ತ ತಾಯಿಯಂತೆ ಕಾಣುವುದು, ಪರರ ಸಂಪತ್ತನ್ನು ವಿಷದಂತೆ ಮುಟ್ಟದಿರುವುದು, ಬುದ್ಧಿ ಒಳ್ಳೆಯದಕ್ಕೆ, ಅಹಂಕಾರ ನಿಗರ್ವಕ್ಕೆ ಎಂಬಿತ್ಯಾದಿಯಾಗಿ ಬಸವಣ್ಣನ ಮೂಲಕ ಸದಾಚಾರ ವಿಶ್ಲೇಷಿಸಿದರೆ, ಇದೇ ಕವಿ ಮಹಾದೇವಿಯಕ್ಕನ ರಗಳೆಯಲ್ಲಿ ''ಭಕ್ತರ ಅಪರಾಧಗಳು ಎಂತಿದ್ದರೂ ರಕ್ಷಿಸುವುದು, ನಾನಾ ವಿಧದಲ್ಲಿ ಶರಣರನ್ನು ಸಲಹುವುದು, ತನ್ನಿಚ್ಛೆಯಲ್ಲಿ ಶಿವಪೂಜೆ, ಮಹೇಶ್ವರಗೋಷ್ಠಿ, ಗುರುಪಾದ ಸೇವೆ ಮಾಡುವುದು, ಶಿವಲಾಂಛನಧಾರಿಗಳನ್ನು ಕಡೆಗಣಿಸದೆ ಸತ್ಕರಿಸುವುದು, ಗಂಡನ ಮೂರು ತಪ್ಪುಗಳನ್ನು ಸಹಿಸುವುದು, ಸಹನೆ ಮೀರಿದಾಗ ತನಗೆ ತಿಳಿದಂತೆ ಬದುಕುವುದು, ಎಂಬಿತ್ಯಾದಿಯಾಗಿ ಅಕ್ಕಮಹಾದೇವಿಯ ಸದಾಚಾರವನ್ನು ವಿಶ್ಲೇಷಿಸಿದ್ದಾನೆ. ಹರಿಹರ ಮುಖ್ಯವಾಗಿ ಭಕ್ತ ಗುರು, ಲಿಂಗ, ಜಂಗಮ ಸೇವೆ ತನ್ನಂತೆ ಇತರರನ್ನು ಕಾಣುವುದು ಜಂಗಮದಲ್ಲಿ ಜಾತಿ ಎಣಿಸಬಾರದೆಂದು, ಇದೇ ಭಕ್ತನಿಗೆ ಶ್ರೇಯಸ್ಸು ಇದೇ ಸದಾಚಾರವೆಂದು ಹೇಳಿದ್ದಾನೆ.

ರಾಘವಾಂಕ ತನ್ನ ಸಿದ್ಧರಾಮ ಚಾರಿತ್ರದಲ್ಲಿ 'ಸಿದ್ಧರಾಮ ಮಲ್ಲಿನಾಥನಿಗೆ ನಿತ್ಯನೇಮಗಳನ್ನು ನಡೆಸುತ್ತಾ, ಜಂಗಮಾರ್ಚನೆ ಮಾಡುತ್ತಾ ಸರ್ವಗುಣ ಸಂಪನ್ನನಾಗಿದ್ದನು. ಹಾಗೆಯೇ ಮತ್ತೊಂದು ದಿನ ಸಿದ್ಧರಾಮ ಲಿಂಗಪೂಜೆ ಮಗ್ನತೆಯಲ್ಲಿ ಸಾಮರ್ಥ್ಯ ಭೂಷಣನೂ, ಶಾಂತ ಸಂಪನ್ನನೂ ದಯಾ ಮೇರುವೂ, ಸುಖ ಸಂಕಥಾ ವಿನೋದದಿಂದಿದ್ದನು. ಇಲ್ಲಿ ಕವಿ ಸಿದ್ಧರಾಮನ ಸದಾಚಾರವು ಲಿಂಗಪೂಜಾ ನಿಷ್ಠತೆ, ಜಂಗಮಾರ್ಚನೆ, ಸರ್ವಗುಣ ಸಂಪನ್ನನಾಗಿರುವುದೆಂದು ಹೇಳಿದ್ದಾನೆ.

ಚಾಮರಸ ಕವಿ ತನ್ನ ಪ್ರಭುಲಿಂಗಲೀಲೆ ಕಾವ್ಯದಲ್ಲಿ ಬಸವಣ್ಣ ಸ್ಪರ್ಶ, ಉಸಿರು, ನುಡಿ, ನೋಟ, ಮನ ಇವು ಏಕೈಕ ಪರುಷಮಣಿಗಳಾಗಿ ಸೇರಿ, ಬೇಕು ಬೇಕಾದ ಅನೇಕ ವಸ್ತುಗಳನ್ನು ನಿರಂತರವಾಗಿ ಲಿಂಗಜಂಗಮಗಳಿಗೆ ಮನದಣಿಯುವಂತೆ ನಿತ್ಯನಿತ್ಯವೂ ನೀಡುತ್ತಾ ತನ್ನ ಭಕ್ತಿಯಿಂದ ಲೋಕ ಪಾವನ ಮಾಡಿದನು. ಅಂದರೆ ಬಸವಣ್ಣ ಲಿಂಗ ಜಂಗಮರುಗಳಿಗೆ ನಿತ್ಯ ಬೇಕು ಬೇಕಾದ (ಬೇಡಿದ್ದನ್ನು) ವಸ್ತುಗಳನ್ನು ಅರ್ಪಿಸುತ್ತಿದ್ದ ಎಂದು ಹೇಳಿದ್ದಾನೆ.

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವಚಿಂತಾಮಣಿ ಕಾವ್ಯದಲ್ಲಿ ಭಕ್ತನಾದವನು ಅರಸನಾಗಿರಲಿ, ಧನಿಕನಾಗಿರಲಿ, ವೀರಯೋಧನಾಗಿರಲಿ ಅವನು ತನ್ನ ತಾನೇ ಶ್ರೇಷ್ಠನೆಂದು ಅಂದು ಕೊಳ್ಳದೇ ಗುರುವನ್ನು ಕಂಡು ನಮಸ್ಕರಿಸಿ ಆತನಿಗೆ ಸಕಲ ಉಪಚಾರಗಳನ್ನು ಮಾಡಿ ಆತನನ್ನು ನಿತ್ಯ ಸಂತೃಪ್ತಿಗೊಳಿಸುವವನು

ಶ್ರೇಷ್ಠ. ಅಂದರೆ ದಿನನಿತ್ಯ ತನ್ನ ಕಾಯಕದಿಂದ ಗಳಿಸಿದ ಹಣದಿಂದ ಗುರು-ಲಿಂಗ-ಜಂಗಮರ ಸೇವೆ ಮಾಡಿದರೆ ಅವನೇ ಶ್ರೇಷ್ಠನೆನಿಸಿಕೊಳ್ಳುತ್ತಾನೆ.

ಕರಸ್ಥಲ ವೀರಣ್ಣೊಡೆಯ ತನ್ನ ನಿಃಕಲಶತಕದಲ್ಲಿ ಲಿಂಗದಲ್ಲಿ ಮನಸ್ಸನಿಟ್ಟು ಜಂಗಮದಲ್ಲಿ ಅರ್ಥವು ಹಿಂಗದಂತೆ ತನುವನೊಪ್ಪಿಸಿ ಗುರು ಸೇವೆ ಮಾಡುವುದು ಸದಾಚಾರ ಎಂದಿದ್ದಾರೆ. ಅಂದರೆ ಗುರುಲಿಂಗ ಜಂಗಮಕ್ಕೆ ನಿತ್ಯ ತನುಮನ ಅರ್ಪಿಸಬೇಕು.

ಈ ಮೇಲಿನ ಎಲ್ಲಾ ಕವಿಗಳ ಕಾವ್ಯಗಳಿಂದ ಸದಾಚಾರವು ಗುರುಲಿಂಗ ಜಂಗಮಗಳಿಗೆ ಸತ್ಯಶುದ್ಧ ಕಾಯಕದಿಂದ ತನುಮನದಿಂದ ಸೇವೆ ಮಾಡಬೇಕು. ಪರವಸ್ತು, ಪರಸ್ತ್ರೀ, ಪರ ದ್ರವ್ಯ ಮುಂತಾದವನ್ನು ವಿಷದಂತೆ ಕಾಣಬೇಕು. ಬಂದ ಭಕ್ತರಿಗೆ ಉಪಚಾರ ಮಾಡಬೇಕು. ನಿತ್ಯ ಕಾಯಕದಿಂದ ದಾಸೋಹ ಮಾಡಬೇಕು. ಇದೇ ಸದಾಚಾರ ಎಂದು ತಿಳಿದುಬರುತ್ತದೆ.

## ೨.೩. ಶಿವಾಚಾರ

ಶಿವಭಕ್ತರಲ್ಲಿ ಜಾತಿ-ಕುಲ-ಗೋತ್ರವನ್ನರಸದೇ, ವರ್ಣಾಶ್ರಮ ಹುಡುಕದೇ ಅವರೊಕ್ಕುದ ಕೊಂಬುದೇ ಶಿವಾಚಾರ. ಅಂದರೆ ಶಿವಭಕ್ತರಲ್ಲಿ ಕುಲ ಜಾತಿ (ಪೂರ್ವದ) ಕೇಳದಿರುವುದು. ಅಜ್ಞಾನದ ಜಂಜಡದಿಂದ ಹೊರಬಂದು ಸುಜ್ಞಾನದ ಮಟ್ಟಕ್ಕೆ ತಲುಪಿಸುವ ಸಾಧನ ಶಿವಾಚಾರ. ಶಿವಾಚಾರದ ವೈಶಿಷ್ಟ್ಯ, ಸಾಮಾಜಿಕ ಸಂಘಟನಾ ಶಕ್ತಿಯಲ್ಲಿ ಅಡಗಿದೆ. ಸಮಾಜ ರಚನೆ, ಸಮಾಜ ಸ್ಥಿರತೆ, ಸಮಾಜ ಸಂಘಟನೆಗಳಿಗೆ ಅಡಿಗಲ್ಲಾಗಿದೆ. ಶಿವಾಚಾರದಲ್ಲಿ ಸಾಮಾಜಿಕ ಸ್ವಾತಂತ್ರ್ಯ, ಸರ್ವ ಸಮಾನತೆ, ಅನ್ಯೋನ್ಯ ಸಹೋದರತ್ವ ಇವು ಮುಖ್ಯ ಆಧಾರ ಸ್ಥಂಭಗಳಾಗಿವೆ. ಶಿವಾಚಾರ - ಸ್ಥಿರ ನಡೆ ನುಡಿ ಒಂದಾಗಿರಬೇಕು. ವೃತ್ತಿಯಿಂದ ಜಾತಿ ಬೇಧ ಕಲ್ಪಿಸಬಾರದು. ಸತ್ಯ ಶುದ್ಧ ಮಾರ್ಗದಿಂದ ನಡೆಯುವುದೇ ಶಿವಾಚಾರ. ಶಿವಲಿಂಗಧಾರಿಗಳೆಲ್ಲಾ ಸಮಾನರೆಂದು ಭಾವಿಸುವುದೇ ಶಿವಾಚಾರ.[೧೩೪] ಅಂಗಗುಣಗಳನ್ನುಳಿದು ಸರ್ವಾಂಗ ಲಿಂಗಿಯಾದ ವೀರಶೈವನು ತಾನು ಶಿವನಾದೆನೆಂಬ ಅಹಮಿಕೆಯಲ್ಲಿ ಬೀಗಬಾರದು. ಎಲ್ಲೆಲ್ಲೂ ಶಿವಸ್ವರೂಪ ಕಾಣಬೇಕು. ಇದುವೇ ಶಿವಾಚಾರ. ತನ್ನಂತೆ ಇತರರನ್ನು ಶಿವಸ್ವರೂಪಿಗಳೆಂದು ಭಾವಿಸಿ ಎಲ್ಲರಲ್ಲೂ ಸಮಾನ ಭಾವದಿಂದ ವರ್ತಿಸಬೇಕು.[೧೩೫] ಹಾಗಾದಾಗ ಮಾತ್ರ ಶಿವಾಚಾರವೆನಿಸುತ್ತದೆ. ಶಿವನೇ ಸರ್ವೋತ್ತಮ ಎಂಬ ಭಾವ ಭಕ್ತನಲ್ಲಿರುವುದು ಅವಶ್ಯಕ.

ಶಿವಾಚಾರದ ಹಿರಿಮೆ ಕುರಿತು ಬಸವಣ್ಣ ತನ್ನ ವಚನದಲ್ಲಿ

"ಶಿವಾಚಾರವೆಂಬುದು ಬಾಳಬಾಯಧಾರೆ
ಲಿಂಗಮೆಚ್ಚಬೇಕು, ಜಂಗಮ ಮೆಚ್ಚಬೇಕು
ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಬೇಕು..."[೧೩೬]

ಎಂದು ಈ ವಚನದ ಮೂಲಕ ಶಿವಾಚಾರದ ಮಹತ್ವ ಹೇಳಿದ್ದಾರೆ. ಲಿಂಗ-ಜಂಗಮ ಮೆಚ್ಚುವಂತೆ ನಡೆದು, ಪ್ರಸಾದವನ್ನು ಸ್ವಾಯತ ಮಾಡಿಕೊಂಡವರೇ ಶಿವಾಚಾರಿಗಳು. ಅವರು ಸಾಕ್ಷಾತ್ ಶಿವನಸ್ವರೂಪಿಗಳು. 'ಶಿವಲಿಂಗವಿದ್ದವನೇ ಕುಲಜನು' ಎಂಬ ಬಸವಣ್ಣನ ಮಾತು ಶಿವಾಚಾರವನ್ನೇ ಧ್ವನಿಸುತ್ತದೆ.

ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ಶಿವಾಚಾರ ಮಹತ್ವ ಕುರಿತು ವಿಶ್ಲೇಷಿಸಿದ್ದಾರೆ. ಅವರ ಕಾವ್ಯಗಳಲ್ಲಿ ಶಿವಾಚಾರದ ಅಂಶಗಳು ಕಂಡುಬರುತ್ತವೆ.

**ಹರಿಹರ :** "ಶಿವಲಿಂಗದಾರೋಗಣೆಯ ಸಮಯ ಸರ್ವಮಂಗಳ ರಚಿತ......
(ಸಂಬೋಳಿ) ನಾಗಿದೇವನೆಂಬ ಹಿರಿಯ ಮಾಹೇಶ್ವರರ ಮನೆಯಂ ಪೊಕ್ಕು,
ಸಂಗಪ್ರಸಾದದಲವರ ಪ್ರಸಾದಮಂ ಬೆರಸಿ ಕೈಕೊಳ್ಳುತ್ತಿರಲಿತ್ತಲೊಡನೆ...."[೧೩೭]

"ಹಿರಿಯ ಮಾಹೇಶ್ವರರೆಂದು ಬೆರಸಿಕೊಂಡಿರ್ಪುದಂತಲ್ಲದೆ ಇಂದೀಗಳೀಗಳ್
ಪೊಲೆಗೇರಿಯೊಳೊರ್ಬಂ ಪೊಲೆಯನೆಂದಡೆ ಕೊಂದಪಂ ಹಿರಿಯ ಭಕ್ತನ ಮನೆ
ಯೊಳುಂಡು...."[೧೩೮]

**ಚಾಮರಸ :** "ಚಿತ್ತದೊಳಗಿನ್ನೂ ವಿಚಾರಿಸಲುತ್ತಮಾದಮ
ಪಕ್ಷಪಾತ ಭ್ರಮೆಗಳಿಡಿದಿಹವು
ಎತ್ತ ಬಲ್ಲೆವು ಸರ್ವದನು ಸಮ
ಚಿತ್ತದಲ್ಲಿ ಕಾಂಬಱಿವ....."[೧೩೯]

**ಲಕ್ಕಣ್ಣ ದಂಡೇಶ :** "..........ಶಿವನ ಲಾಂಛನಾಧಿಕ್ಯರಂ
ಹಲವು ವರ್ಣಗಳಾ ಹರಭಕ್ತಿ ಮಯವಾಗೆ
ಯಳಿದವಾ ಪರವಾದಿಗಳ ಮತಗಳೆಂಬವರ....."[೧೪೦]

**ಕರಸ್ಥಲ ವೀರಣ್ಣೊಡೆಯ :** "ನುಡಿವಲ್ಲಿ ನಡೆವಲ್ಲಿ ಕೊಡುವಲ್ಲಿ ಕೊಂಬಲ್ಲಿ
ಒಡಗಲಸಿ ಲಿಂಗದೊಳಗೆರಡಿಲ್ಲದೆ"[೧೪೧]
"ಶರಣಂಗಿಹವಿಲ್ಲ ಪರವಿಲ್ಲ
ಎಂತಿರ್ದಂತೆ ಪರಬ್ರಹ್ಮವು ತಾನೇ"[೧೪೨]

**ಕರಸ್ಥಲ ನಾಗಿದೇವ :** "ಅಡಕ ಲಿಂಗದಿ ಶರಣದೊಡೆಯರೆಂಬುದೆ ಸತ್ಯ
ಜಡಚಿತ್ತವಿರಲಿಲ್ಲ ಜಾತಿಸೂತಕವಿಲ್ಲ
ಕೊಡುವ ಕೊಂಬಡೆ ಕರ್ತನಲ್ಲದಾನಲ್ಲೆನಲು
ಅದು ಸತ್ಯ ಶುದ್ಧ ದೀಕ್ಷೆಯು"[೧೪೩]

ಹೀಗೆ ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ಶಿವಾಚಾರ ಕುರಿತು ವಿಶ್ಲೇಷಿಸಿದ್ದಾರೆ. ಹರಿಹರ ತನ್ನ ಬಸವರಾಜದೇವರ ರಗಳೆಯಲ್ಲಿ ಬಸವಣ್ಣ ಜಾತಿಯಿಂದ ಹೊಲೆಯನಾದ ಸಂಬೋಳಿ ನಾಗಿದೇವನ ಮನೆಗೆ ಹೋಗಿ ತಾನು ತಂದ ಸಂಗನ ಪ್ರಸಾದವನ್ನು ನಾಗಿದೇವನ ಪ್ರಸಾದದೊಂದಿಗೆ ಬೆರೆಸಿ ಆತನಿಗೆ ನೀಡಿ ತಾನೂ ಆತನ ಜೊತೆ ಊಟ ಮಾಡುತ್ತಾನೆ. ಲಿಂಗಧರಿಸಿದ ಸಂಬೋಳಿ ನಾಗಿದೇವನ ಪೂರ್ವಜಾತಿ ಕಳೆದು ಅವನು ಹಿರಿಯ ಮಹೇಶ್ವರನಾಗಿರುತ್ತಾನೆ. ಸಂಬೋಳಿ ನಾಗಿದೇವನಿಗೆ ಹೊಲೆಯ ಎಂದವನಿಗೆ ಶಿಕ್ಷಿಸುತ್ತಾನೆ. ಕಾರಣ ಬಸವಣ್ಣ ಶಿವಭಕ್ತ ಶರಣರಲ್ಲಿ ಜಾತಿ-ಕುಲವನ್ನು ಎಣಿಸುವುದಿಲ್ಲ. ಇದು ಅವನ ಶಿವಾಚಾರವಾಗಿದೆ. ಇಲ್ಲಿ ವ್ಯಕ್ತಿ ಹುಟ್ಟಿನಿಂದ, ವೃತ್ತಿಯಿಂದ ಯಾವುದೇ ಜಾತಿಯವನಿದ್ದರೂ ಲಿಂಗಧರಿಸಿದ ಬಳಿಕ ಅಚ್ಚ ಶರಣನಾಗುತ್ತಾನೆ. ಆಗ ಆತನ ಕುಲ ನೋಡಬಾರದೆಂಬುದು ಇಲ್ಲಿಯ ಅರ್ಥ.

ಚಾಮರಸ ತನ್ನ ಪ್ರಭುಲಿಂಗಲೀಲೆಯಲ್ಲಿ ಅಲ್ಲಮ ಸಿದ್ಧರಾಮನನ್ನು ಸೊನ್ನಲಿಗೆಯಲ್ಲಿ ಭೇಟಿಯಾದಾಗ(ಇನ್ನೂ ಲಿಂಗದೀಕ್ಷೆ ಪಡೆದು ಶರಣನಾಗದಾಗ) ಸಿದ್ಧರಾಮ ಅಲ್ಲಮನಿಗೆ ಶ್ರಮಿಕರಾದ ತಮ್ಮಲ್ಲಿ ಉತ್ತಮ ಅಧಮ ಎಂಬ ಬೇಧಗಳಿವೆ ಎಲ್ಲರೂ ಸಮಾನರು ಎಂಬ ಭಾವ ತೋರುವ ಮಾರ್ಗ ತೋರು ಎನ್ನುತ್ತಾರೆ. ಅಂದರೆ ಇಲ್ಲಿ ಸಿದ್ಧರಾಮನಲ್ಲಿ ಶಿವಭಕ್ತರಾದ ನಮ್ಮಲ್ಲಿ ಮೇಲು-ಕೀಳು ಶ್ರೇಷ್ಠ-ಕನಿಷ್ಠ ಎಂಬುದು ತೊಲಗಬೇಕು, ನಾವೆಲ್ಲ ಒಂದೇ ಎಂಬ ಭಾವ ಮೂಡಬೇಕು ಎಂಬ ಭಾವನೆ ಇದೆ. ಮತ್ತೊಂದು ಸಂದರ್ಭದಲ್ಲಿ ಅಲ್ಲಮಪ್ರಭು ಬಸವಣ್ಣನಿಗೆ ಅಂಗದ ಮೇಲೆ ಲಿಂಗ ಧರಿಸಿದ ವ್ಯಕ್ತಿ ಮಂಗಳಾತ್ಮನಾಗುತ್ತಾನೆ. ಆತನಲ್ಲಿ ಯಾವ ಜಾತಿ ಇರುವುದಿಲ್ಲ ಎನ್ನುತ್ತಾನೆ. ಅಂದರೆ ಇಲ್ಲಿ ಲಿಂಗಧರಿಸಿದವರೆಲ್ಲರೂ ಒಂದೇ ಎಂಬ ಭಾವನೆ ಇದೆ.

ಲಕ್ಕಣ್ಣದಂಡೇಶ ತನ್ನ ಶಿವತತ್ವ ಚಿಂತಾಮಣಿಯಲ್ಲಿ ಹಲವು ವರ್ಣಗಳು ಶಿವಲಾಂಛನ ಧರಿಸಿ ಹರಭಕ್ತಿಮಯವಾಗಿವೆ. ಇವುಗಳಲ್ಲಿ ಶ್ರೇಷ್ಠ-ಕನಿಷ್ಠವೆಂಬುದಿಲ್ಲ ಎಂದಿದ್ದಾನೆ. ಹಾಗೆಯೇ ಕರಸ್ಥಲ ವೀರಣ್ಣೊಡೆಯ ತನ್ನ ಪರಮ ವಿರಕ್ತನ ಐಕ್ಯಸ್ಥಲ ಕೃತಿಯಲ್ಲಿ ಲಿಂಗಧರಿಸಿದ ಭಕ್ತರು, ಬೇಧವಿಲ್ಲದೆ ಲಿಂಗಪೂಜಾ ನಿರತರಾದವರು ನಡೆ-ನುಡಿ ಕೊಡು-ಕೊಳ್ಳುವಿಕೆಯಲ್ಲಿ ಬೇದವೆಣಿಸಬಾರದು. ಶರಣರಿಗೆ ಶಿವನೇ ಸರ್ವೋತ್ತಮ ಅವನಲ್ಲದೆ ಬೇರೆ ಇಲ್ಲ. ಆದ್ದರಿಂದ ಶಿವಭಕ್ತರೆಲ್ಲಾ ಒಂದೇ ಎಂದಿದ್ದಾನೆ. ಕರಸ್ಥಲ ನಾಗಿದೇವ ತನ್ನ ಏಕವಿಂಶತಿ ದೀಕ್ಷಾ ವಿಧಾನ ಕೃತಿಯಲ್ಲಿ ಲಿಂಗಧರಿಸಿದ ಶರಣರಲ್ಲಿ ಸ್ಥಗಿತಗೊಂಡ ಮನಸ್ಸಿಲ್ಲ ಅವರಲ್ಲಿ ಜಾತಿ ಮಡಿ-ಮೈಲಿಗೆಯ ಬೇಧವಿಲ್ಲ. ಕೊಡು-ಕೊಳ್ಳುವಿಕೆಯಲ್ಲಿ ಎಲ್ಲರೂ ಸಮಾನರು ಎಂದಿದ್ದಾನೆ.

ಹೀಗೆ ಈ ಎಲ್ಲಾ ಕವಿಗಳು ತಮ್ಮ ಕಾವ್ಯಗಳಲ್ಲಿ ಲಿಂಗಧರಿಸಿ ಶರಣನಾದ ವ್ಯಕ್ತಿ ತನ್ನ ಪೂರ್ವದ ಜಾತಿ ಸೂತಕ ಕಳೆದುಕೊಳ್ಳುತ್ತಾನೆ. ಇಂಥವನಲ್ಲಿ ಕೊಡು ಕೊಳ್ಳುವಿಕೆಯನ್ನು ಯಾವುದೇ ಬೇಧವಿಲ್ಲದೆ

ಮಾಡಬಹುದು. ಇಂಥ ಶರಣನ, ಶಿವಭಕ್ತನ ಮೂಲ ಜಾತಿ ನೋಡಬಾರದೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

### ೨.೪. ಗಣಾಚಾರ

ಶಿವಾಚಾರದ ನಿಂದೆಯ ಕೇಳದಿರುವುದೇ ಗಣಾಚಾರ ಎಂದು ಚೆನ್ನಬಸವಣ್ಣ ಹೇಳುವನು. ಅವನೇ ಇನ್ನೊಂದು ಕಡೆ, ಅಷ್ಟಾವರಣಗಳ ಮೇಲೆ ಅನ್ಯರಿಂದ ಕುಂದು ನಿಂದೆಗಳು ಬಂದು ತಟ್ಟಿದಲ್ಲಿ ಗಣ ಸಮೂಹದೊಡನೆ ಆ ಸ್ಥಳವನ್ನು ತ್ಯಜಿಸಬೇಕೆಂದು ಹೇಳಿರುವನು.''[೧೬೪] ಗಣವೆಂದರೆ ಲಿಂಗಧಾರಿ ಶರಣರ ಸಮೂಹ, ಗುಂಪು, ಇವರ ಸಿದ್ಧಾಂತಕ್ಕೆ ಅನ್ಯರು ಅಡ್ಡಿಪಡಿಸಿದರೆ, ಆಪತ್ತು ತಂದರೆ ಅಥವಾ ಅವರಿಗೆ ತೊಂದರೆ ಕೊಟ್ಟರೆ ಅಂಥಹ ಶಿವದ್ರೋಹಿಗಳ ವಿರುದ್ಧ ಹೋರಾಡುವುದೇ ಗಣಾಚಾರ. ಶಿವಗಣಗಳೆನಿಸಿದ ಶಿವಭಕ್ತ ವೃಂದಕ್ಕೆ, ಶಿವಯೋಗಿಗಳ ಸಮಾಜಕ್ಕೆ ಉಪಕಾರವಾಗುವಂತೆ ಸೇವೆ ಸಲ್ಲಿಸುವುದು. ಶಿವ ಶಿವಭಕ್ತ, ಶಿವಾಚಾರ ಒಪ್ಪಿದ ಸಮಾಜಕ್ಕೆ ಅವಹೇಳನ-ಅಪಚಾರಗಳು ಉಂಟಾಗದಂತೆ ಜಾಗ್ರತೆ ವಹಿಸುವುದು ಮತ್ತು ಲವರಿಗೆ ಸಹಕಾರಿಯಾಗುವುದು''[೧೬೫] ಗಣಾಚಾರವೆನಿಸುತ್ತದೆ.

ಸಾಧಕನು ಸಂಘಜೀವಿಯಾಗಿ ಸಮಾಜದೊಂದಿಗೆ ಸಾಮರಸ್ಯದಿಂದ ಬಾಳುವುದೇ ಗಣಾಚಾರ. ಅಷ್ಟಾವರಣ, ಷಟ್‌ಸ್ಥಲಗಳಲ್ಲಿ ನಿಷ್ಠೆಯಿಟ್ಟು, ಅಂತರಂಗ ಬಹಿರಂಗ ಶುದ್ಧಿ ಹೊಂದಿ, ಗುರು-ಲಿಂಗ-ಜಂಗಮರ ನಿಂದೆ ಕೇಳದಿರುವುದು, ಲಿಂಗಗುಣ ಹೊಂದಿದವರೆಲ್ಲರೂ ಸಂಘಟಿತರಾಗಿ, ದುಷ್ಟರನ್ನು ಸಂಹರಿಸುವುದೆ ಗಣಾಚಾರ''[೧೬೬] ವೀರಶೈವ ಧರ್ಮ ತತ್ತ್ವ ಸಿದ್ಧಾಂತಕ್ಕೆ ಆಪತ್ತು, ನಿಂದೆ, ಬಂದಾಗ ಅದರ ರಕ್ಷಣೆಗಾಗಿ ಹೋರಾಡುವುದು ಗಣಾಚಾರವಾಗುತ್ತದೆ.

``ಲಿಂಗಬಾಹ್ಯವ ಆಚಾರ ಭ್ರಷ್ಟನ ವ್ರತ ತಪ್ಪುತನ ಗುರುಲಿಂಗ ಜಂಗಮವ ಕೊಂದವನ, ಪಾದೋದಕ ಪ್ರಸಾದ ದೋಷಕನ ವಿಭೂತಿ ರುದ್ರಾಕ್ಷಿ ನಿಂದಕನ, ಕಂಡಡೆ ಶಕ್ತಿಯುಳ್ಳಡೆ ಸಂಹಾರವ ಮಾಡುವುದು. ಶಕ್ತಿಯಿಲ್ಲದಿದ್ದರೆ ಕಣ್ಣ ಕರ್ಣವ ಮುಚ್ಚಿಕೊಂಡು ಶಿವಮಂತ್ರವ ಜಪಿಸುವುದು. ಅಷ್ಟೂ ಆಗದಿದ್ದಡೆ ಆ ಸ್ಥಳವ ಬಿಡುವುದು ಅದಿಲ್ಲದಿದ್ದಡೆ ಕುಂಭೀಪಾತಕ ನಾಯಕ ನರಕದಲ್ಲಿಕ್ಕುವ ಶ್ರೀಗುರುಸಿದ್ದೇಶ್ವರನು''[೧೬೭] ಎಂದು ರೇವಣ್ಣ ಸಿದ್ದಯ್ಯಗಳ ಪುಣ್ಯಸ್ತ್ರೀ ರೇಕಮ್ಮ ಹೇಳುವಳು.

ಹರಿಹರ : ``ಮಾರುಡಗೆಯಂ ಪೊಕ್ಕು ಜೈನರನೊಕ್ಕಲಿಕ್ಕಿ ಬತ್ತಲೆಯ ಬೊಂಬೆಗಳಂ
ಬರಿಕೆಯ್ದು, ಪರಸಮಯಮಂ ನಿರ್ಧೂಮಮಂ ಮಾಡಿ, ಪರದೈವಮಂ
ಹೊಸೆದು ಬಿಸುಟು ಹುಡಿಗುಟ್ಟಿ ಸಲ್ಲೀಲೆಯಿಂ ಮಲ್ಲಿನಾಥನಂ ಪ್ರತಿಷ್ಠೆಗೆಯ್ವೆ''[೧೬೮]

``ಹರನಿರ್ದ ದೆಸೆಯೊಳೀ ಪರಿಯಿರಲ್ತಕ್ಕುದೆ
ನರಕಿಯೇಳೇಳ್ ಶಿವದ್ರೋಹಿ ಇರತಕ್ಕುದೆ.........

......ದಂಬಿನ ಗೊರವ ಗಳಹದಿರ್ ನಿನ್ನ ಮಾತು ಹುಸಿ
ಶಿವನೆಂದದಾರೆಲ್ಲಿಯಾರ್ಗಿತ್ತನೆಲೆಗೊರವ......"[೧೪೯]

ರಾಘವಾಂಕ : "ತನ್ನ ದೇವರನು ತಂದೆಮ್ಮ ಹುಲಿಗೆಜೆಯ ಸುರ
ಹೊನ್ನಯ ಮಹಾಬಸದಿಯೊಳು ನಿಲಿಸಿ ಬಳಿಕಾಮ ಮೊದಲಾದ ಜೈನ ಕುಲವ
........................
ಹರನಿಲ್ಲಿಗೆ ಬರಿಸು ಹರದೂಷಕರನೊರಸು
ಹರಮತವನುದ್ಧರಿಸು ಹರಸಮಯದೊಳುಬೆರಸು......."[೧೫೦]

ಕರಸ್ಥಲ ವೀರಣ್ಣೊಡೆಯ : "......ಲಿಂಗಮಂ ದಾಸತೆವೆತ್ತು
ಸಂಸ್ಕೃತಿಗೆ ಲಿಂಗ ನಿಜೈಕ್ಯಮದಿಲ್ಲದಿರ್ಪನ ವರ್ಗೇಸು
ವಚಸ್ಸಿರಲ್ ಭ್ರಮಿತರೆಂದು ಜಡಾತ್ಮಕರೆಂದು....."[೧೫೧]
"ಜಡಾಜಡ ಮೆಂಬುಭಯ ಪ್ರಭಾವಮಂ ಬತ್ತಲೆ
ಮಾಡಿ ಲಿಂಗವೆನಿಪಂ ಶರಣಂ...."[೧೫೨]

ಕರಸ್ಥಲ ನಾಗಿದೇವ : "ಹೊನ್ನಿನ ಹೆಣ್ಣಿನ ಮಣ್ಣಿನ
ಬಿನ್ನಾಣದ ಬಲೆಗೆ ಸಿಲುಕಿ ಲಿಂಗದ ನೆಲೆಯಂ
ಚೆನ್ನಾಗಿ ಅರಿದೆನೆನುತ್ತಿಹ...."[೧೫೩]

ಹೀಗೆ ಹರಿಹರಾದಿ ಕವಿಗಳು ಗಣಾಚಾರ ಕುರಿತು ಶಾಸ್ತ್ರೀಯವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ವಿಶ್ಲೇಷಿಸಿದ್ದಾರೆ. ಹರಿಹರ ತನ್ನ ಮಾರುಡಿಗೆ ನಾಚಿತಂದೆ ರಗಳೆಯಲ್ಲಿ ಮಾರುಡಿಗೆಯಲ್ಲಿ ಜೈನರು ಭಕ್ತನೋರ್ವನಿಗೆ ಅಪಮಾನ ಮಾಡಿದ್ದನ್ನು ಕೇಳಿ ನಾಚಿತಂದೆ ಆತನಿಗೆ ಸಮಾಧಾನ ಹೇಳಿ ತಾನು ಶಿವಭಕ್ತರ ಜೊತೆ ಸೇರಿ ಮಾರುಡಿಗೆ ಗ್ರಾಮಕ್ಕೆ ಹೋಗಿ ಜೈನರನ್ನು ಸದೆ ಬಡಿದು ಬತ್ತಲೆಯ ಗೊಂಬೆಗಳಾದ ಜಿನ ಪ್ರತಿಮೆಗಳನ್ನು ಕಿತ್ತುಹಾಕಿ ಅನ್ಯಧರ್ಮವನ್ನು ಅಳಿಸಿ ಅದನ್ನು ಹೊಡೆದು ಹಾಕಿ-ಬಸದಿಯಲ್ಲಿ ಮಲ್ಲಿನಾಥನ ಶಿಲ್ಪವನ್ನು ಪ್ರತಿಷ್ಠಾಪಿಸಿ ಶಿವಧರ್ಮವನ್ನು ಎತ್ತಿ ಹಿಡಿದನೆಂದು ಪ್ರತಿಜ್ಞೆಗೈದು ಹಾಗೆ ನಡೆದುಕೊಂಡ. ಹಾಗೆ ಏಕಾಂತರಾಮಿ ತಂದೆ ರಗಳೆಯಲ್ಲಿ ಜೈನನೊಬ್ಬ ಶಿವದೇವಾಲಯದಲ್ಲಿ ಶಿವಲಿಂಗದ ಕಡೆಗೆ ಕಾಲುಚಾಚಿ ಮಲಗಿದ್ದನ್ನು ಏಕಾಂತ ರಾಮಯ್ಯ ಪ್ರಶ್ನಿಸಿ ನರಕಿ ಏಳೇಳು ಶಿವದ್ರೋಹಿ ಎಂದನು ಇದರಿಂದ ಕುಪಿತನಾಗಿ ಜೈನ ವ್ಯಕ್ತಿ ದಂಬಿನ ಗೊರವ ನಿನ್ನ ಮಾತು ಸುಳ್ಳು ಶಿವನೆಂದರೆ ಯಾರು! ಎಲ್ಲಿರುವನು? ಏನು ಕೊಟ್ಟಿರುವನು? ಹುಚ್ಚಾ ಎಂಬಿತ್ಯಾದಿಯಾಗಿ ಶಿವನಿಂದೆ ಮಾಡಿದಾಗ ಏಕಾಂತರಾಮಯ್ಯ "ಕೇಳೆಲವೋ ಶಿವನನ್ನರಿಯದವನೇ, ಶಿವ ಮೂರು ಪಟ್ಟಣಗಳನ್ನು ಸುಟ್ಟು ತ್ರಿಪುರಾರಿ ಎನಿಸಿಕೊಂಡವನು, ಕಾಲನನ್ನೇ ಸುಟ್ಟು ಭಸ್ಮ ಮಾಡಿರುವನು. ಅದಕ್ಕಾಗಿ ಅವನು ಲಯಕಾರನಾಗಿರುವನು.

ಹರಿಯಜರ ನಡುವೆ ಉರಿಲಿಂಗವಾಗಿರುವನು. ಮಧುರೆಯಲ್ಲಿ ಜೈನರ ಭವಗೆಡಿಸಿರುವನು ಎಂಬಿತ್ಯಾದಿಯಾಗಿ ಶಿವನ ಮಹಿಮೆ ಹೇಳಿದಾಗ, ಇದನ್ನು ಒಪ್ಪದ ಆ ಜೈನ ಏಕಾಂತರಾಮಯ್ಯನಿಗೆ ನಿನ್ನ ತಲೆ ಕಡಿದು ಮತ್ತೆ ಹೊಂದಿಸಿ ಜೀವ ಪಡೆ ಆಗ ಶಿವನನ್ನು ನಂಬುತ್ತೇನೆ ಎಂಬ ಸವಾಲು ಸ್ವೀಕರಿಸಿ, ಅದರಲ್ಲಿ ಯಶಸ್ವಿಯಾಗಿ ಶಿವ ಪಾರಮ್ಯ ಮೆರೆಯುತ್ತಾನೆ. ಹೀಗೆ ಈ ಎರಡೂ ಸಂದರ್ಭದಲ್ಲಿ ಶಿವ ಪಾರಮ್ಯ ಮೆರೆಯಲು ಭಕ್ತರು ಜೈನರೊಡನೆ ಹೋರಾಡುತ್ತಾರೆ. ಕವಿ ಮಾರುಡಿಗೆ ನಾಚಿತಂದೆ ರಗಳೆಯಲ್ಲಿ ಶಿವಪರಾಮ್ಯ ಮೆರೆಯಲು ಹೋರಾಡುವವರನ್ನು ವೀರಭಕ್ತರೆಂದು ಗಣಾಚಾರಿಗಳನ್ನು ಕರೆದಂತಿದೆ.

ರಾಘವಾಂಕ ತನ್ನ ಸೋಮನಾಥ ಚಾರಿತ್ರದಲ್ಲಿ ಆದಯ್ಯ ಶೆಟ್ಟಿ ತಮ್ಮ ಜೈನ ಮಾವನಿಗೆ ಶಿವನೇ ಶ್ರೇಷ್ಠವೆಂದು ವಾದಿಸಿ ಇದೇ ಪುಲಿಗೆರೆ ಸುರ ಹೊನ್ನ ಬಸದಿಯ ಜಿನನನ್ನು ಕಿತ್ತೆಸೆದು ಸೌರಾಷ್ಟ್ರ ಸೋಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿ ಹರನಿಂದೆ ಮಾಡುವ ಜೈನ ಕುಲವನ್ನು, ಶಿವದ್ರೋಹಿಗಳನ್ನು ನಾಶಮಾಡುವೆನು, ಹರಮತವನ್ನು ಉದ್ಧರಿಸಿ ಪುಲಿಗೆರೆಯಲ್ಲಿ ಶಿವಧರ್ಮ ನೆಲೆಗೊಳ್ಳುವಂತೆ ಮಾಡುತ್ತೇನೆಂದು ಪಣತೊಟ್ಟು ಹಾಗೆ ಮಾಡುತ್ತಾನೆ. ಇಲ್ಲಿಯೂ ಸಹ ಶಿವದ್ರೋಹಿಗಳನ್ನು ನಾಶ ಮಾಡಿ ಹರ ಸಮಯ ಬಿತ್ತರಿಸಲು ಜೈನರೊಡನೆ ಶಿವಭಕ್ತರು ಹೋರಾಡಿ ಗಣಾಚಾರಿಗಳಾಗಿರುವುದನ್ನು ಕಾಣಬಹುದು.

ಕರಸ್ಥಲ ವೀರಣ್ಣೊಡೆಯ ತನ್ನ ನಿಃಕಲಶತಕದಲ್ಲಿ ದೇಹದಲ್ಲಿ ಧರಿಸಿದ ಲಿಂಗಕ್ಕೆ ದಾಸನಾದವನು ಲಿಂಗವು ಜನನ ಮರಣದ ಸೂತಕ ಕಳೆಯುವುದೆಂಬ ಮಾತು ಸುಳ್ಳು ಅದು ಬರೀ ಭ್ರಮೆ, ಲಿಂಗ ಹೊಂದಿದವರು ಜಡಾತ್ಮರೆಂದು ಭವಾವಳಿಗಳನ್ನು ಆಚರಿಸುವವರೆಂದು ಕರೆಯುವವರನ್ನು ಸೈರಿಸದಿರು. ಹಾಗೆಯೇ ಮುಂದುವರೆದು ಇದೇ ಕಾವ್ಯದಲ್ಲಿ ಕತ್ತಲೆ ಹೋಗಲಾಡಿಸಲು ದೀಪಹಚ್ಚಿದರೆ ಎಲ್ಲಾ ಕತ್ತಲೆ ಹೋಗುವುದೇ? ಹಾಗೆ ಲಿಂಗಧರಿಸಿದ ಶರಣನ ಬದುಕಿನ ಕತ್ತಲೆ ಹೋಗುವುದೆ? ಎಂದು ಪ್ರಶ್ನಿಸುವ ಮೂರ್ಖರ ಪ್ರಭಾವವನ್ನು ಬತ್ತಲೆ ಮಾಡುವವನೇ ಶರಣ ಎಂದು ಗಣಾಚಾರದ ಪರಿಕಲ್ಪನೆ ವಿಶ್ಲೇಷಿಸಿದ್ದಾನೆ.

ಕರಸ್ಥಲ ನಾಗಿದೇವ ತನ್ನ ಶಾಂತ ಶತಕದಲ್ಲಿ ಹೊನ್ನು ಹೆಣ್ಣು ಮಣ್ಣಿನ ವ್ಯಸನಕ್ಕೆ ಬಿದ್ದು ಲಿಂಗಾರ್ಚನೆ ಬಿಟ್ಟು, ಅದರ ಬಗ್ಗೆ ಚೆನ್ನಾಗಿಗೊತ್ತು ಎಂದು ಬೊಗುಳುವ ಕುನ್ನಿಗಳಿಗೆ ಸರಿಯಾದ ಪಾಠ ಕಲಿಸಬೇಕು ಎಂದಿದ್ದಾನೆ. ಹೀಗೆ ಗಣಾಚಾರ ಕುರಿತು ಈ ಕವಿಗಳು ವಿಶ್ಲೇಷಿಸಿದ್ದಾರೆ. ಕೆಲವರು ಉಗ್ರ ಹೋರಾಟ ಮಾಡಬೇಕೆಂದು ಹೇಳಿದರೆ ಮತ್ತೆ ಕೆಲವರು ಶಿವಪಾರಮ್ಯ ಎತ್ತಿ ಹಿಡಿಯಲು ಸೌಜನ್ಯವಾಗಿ ವರ್ತಿಸಬೇಕೆಂದು ಹೇಳಿದ್ದಾರೆ. ಹರಿಹರ ಕವಿ ಶಿವಪಾರಮ್ಯ ಎತ್ತಿ ಹಿಡಿದ ಭಕ್ತರನ್ನು ವೀರಭಕ್ತ, ಕಲಿಶರಣ ಎಂದು ಕರೆದಿದ್ದಾನೆ. ಈ ಎಲ್ಲಾ ಪದಗಳು ಗಣಾಚಾರಿಗೆ ಬಳಸಿದ ಪರ್ಯಾಯ ಪದಗಳಾಗಿವೆ ಎಂಬುದು ಮುಖ್ಯವಾದ ಅಂಶವಾಗಿದೆ.

## ೨.೫. ಭೃತ್ಯಾಚಾರ

ಶಿವಶರಣರೇ ಹಿರಿಯರಾಗಿ, ತಾನೇ ಕಿರಿಯನಾಗಿ ಭಕ್ತಿಯಿಂದ ಆಚರಿಸುವುದೇ ಭೃತ್ಯಾಚಾರ. ಅಂದರೆ ಶರಣರಲ್ಲಿ ಕಿಂಕರ ಭಾವಹೊಂದಿ ಅವರನ್ನು ಸತ್ಕರಿಸುವುದು ಅವರ ಸೇವೆ ಮಾಡುವುದು ಭೃತ್ಯಾಚಾರವೆನಿಸುತ್ತದೆ. ಅಹಂಕಾರವನ್ನು ಅಳಿಸಿ ಹಾಕಿ, ವಿನಯಗುಣ ಸಂಪನ್ನನಾಗಿ ಸೇವಾ ಮನೋಭಾವದಿಂದಿರುವುದೇ ಭೃತ್ಯಾಚಾರ. ಸಮಾಜದ ಸಮತಾಭಾವಕ್ಕೆ ಭೃತ್ಯಾಚಾರ ಅತ್ಯಂತ ಅವಶ್ಯವಾದುದಾಗಿರುತ್ತದೆ. 'ಸದುವಿನಯವೇ ಸದಾಶಿವನ ಒಲುಮೆಯಯ್ಯಾ' ಇದುವೇ ಭೃತ್ಯಾಚಾರದ ಪ್ರಥಮ ಸೋಪಾನ, ಅಹಂ ಅಳಿದು, ಸೋಹಂಭಾವ ಬೆಳೆಯಬೇಕು. ದಾಸೋಹಂ ಭಾವದಿಂದ ಕರ್ತವ್ಯ ಮುಖನಾಗಬೇಕು.[೧೫೪] ತಾನು ಶಿವಭಕ್ತರ ಕಿಂಕರನೆಂಬ ಭಾವನೆಯನ್ನು ತಾಳಿ ಭೃತ್ಯಾಚಾರಿಯಾದಾಗ ಅಂತರಂಗ ವಿಕಾಸವಾಗಿ ಮನಸ್ಸು ಶುದ್ಧವಾಗುತ್ತದೆ.[೧೫೫] ಶಿವ ಹಾಗೂ ಶಿವಭಕ್ತರಲ್ಲಿ ಸಂಪೂರ್ಣವಾದ ವಿನಮ್ರ ಭಾವನೆಯುಳ್ಳವನಾಗಿ, ಜೀವನದಲ್ಲಿ ಅವನ್ನು ಕಾರ್ಯತಃ ಆಚರಣೆಗೆ ತರುವುದು. ಶಿವನ ಹಾಗೂ ಶಿವಭಕ್ತರ ಸೇವೆಗಾಗಿ ದುಡಿಯುವುದು, ದೀನದಲಿತ, ಸ್ತ್ರೀ ಪುರುಷ ಹಾಗೂ ಮೂಕ ಪ್ರಾಣಿಗಳ ವಿಷಯದಲ್ಲಿ ದಯೆ, ವಿನಯಗಳಿಂದ ವ್ಯವಹರಿಸುವುದು ಭೃತ್ಯಾಚಾರವಾಗುತ್ತದೆ.[೧೫೬] ಲಿಂಗಧರಿಸಿದ ಶರಣನಲ್ಲಿ ಅಹಂಕಾರ ಅಳಿಸಿ ಸದ್ಗುಣ ನಿರ್ಮಿಸಿ ಹಿರಿಯ-ಕಿರಿಯರಲ್ಲಿ ಗೌರವ ಹೆಚ್ಚಿಸಿ, ಕಿಂಕರತ್ವ ಸೇವಾ ಮನೋಭಾವನೆ ಮೂಡಿಸುವುದು ಭೃತ್ಯಾಚಾರವಾಗುತ್ತದೆ.

ಭೃತ್ಯಾಚಾರದ ಸ್ವರೂಪ ಕುರಿತು ಜೇಡರದಾಸಿಮಯ್ಯ ತನ್ನ ಒಂದು ವಚನದಲ್ಲಿ

"ಎತ್ತಪ್ಪೆ ಶರಣಂಗೆ ತೊತ್ತಪ್ಪ ಶರಣಂಗೆ
ಭೃತ್ಯವಾಗಿ ಸದ್ಭಕ್ತರ ಮನೆಯ ಬಾಗಿಲ ಕಾಯ್ದಿಪ್ಪ ಸೊಣಗನಪ್ಪೆ
ಕರ್ತಾರ, ನಿನಗೆ ಕರವೆತ್ತಿ ಹೊಡವಡುವ ಭಕ್ತರ ಮನೆಯ
ಹಿತ್ತಲ ಬೇಲಿಯಾಗಿಪ್ಪೆನಯ್ಯಾ ರಾಮನಾಥಾ"[೧೫೭]

ಎಂದು ಹೇಳಿದ್ದಾನೆ.

ದಾಸಿಮಯ್ಯ ಭೃತ್ಯಾಚಾರಿಯಾದ ಶರಣ ಮತ್ತೊಬ್ಬ ಶರಣನಿಗೆ ಸೇವಕನಾಗಬೇಕು. ಅವನು ಸದ್ಭಕ್ತರ ಮನೆಯ ಕಾಯುವ ನಾಯಿಯಾಗಿ ಶರಣರಿಗೆ ಕರವೆತ್ತಿ ನಮಸ್ಕರಿಸುವ ಭಕ್ತರ ಮನೆಯ ಹಿತ್ತಲಿಗೆ ಬೇಲಿಯಾಗಿರಬೇಕೆಂದೂ, ಅಂಥಹ ಸೌಜನ್ಯ ವಿನಯಶೀಲಭಾವ ಶರಣನಲ್ಲಿರಬೇಕೆಂದು ಹೇಳುತ್ತಾನೆ. ಅಂದರೆ ಭೃತ್ಯಾಚಾರಿಗೆ ವಿನಯಶೀಲ, ಸಹನಾ ಗುಣ ತಾಳ್ಮೆ ಇರಬೇಕೆಂಬುದು ಈ ವಚನದಿಂದ ತಿಳಿದುಬರುತ್ತದೆ.

ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ಭೃತ್ಯಾಚಾರ ಕುರಿತು ದಾಖಲಿಸಿದ್ದಾರೆ.

**ಹರಿಹರ :** "…. ನರಜನ್ಮದೊಳು ಬಂದು ಗುರುಕರುಣಮಂ ಪೊತ್ತು
ಹರಕಿಂಕರನಾಗಿ ಶರಣರ ಬರವಂ ಪಡೆದೆಂ……….
ನೀವೆಗತಿ ನೀವೆ ಮತಿ ನೀವೆ ಪ್ರಾಣಂ…….. ಜಂಗಮಪ್ರಾಣಿ ಸಂಗನ ಬಸವಂ"[೧೫೮]
"ದೇವರ್ ನೀವೇ ಪ್ರಾಣಂ, ನೀವೇ ಕಣ್ ನೀವೆ ಮಾತೆ ನೀವೇ ಜನಕಂ
ನೀವೇ ಗತಿ ನೀವೇ ಮತಿ, ನೀವೇ ಪತಿ ನೀವೆ ಗುರುವೆನಗೆ ಬೇರುಂಟೇ…..
ಶರಣರ ಬಂಟರ ಬಂಟಂ, ಶರಣರ ಕಿಂಕರರ ಕಿಂಕರರ ಕಿಂಕರನಾಂ
ಶರಣರ ಲೆಂಕರ ಲೆಂಕಂ, ಶರಣರ ತೊತ್ತೆನಗೆ ಬೇರೆ ಗತಿಮತಿಯುಂಟೇ"[೧೫೯]

**ಚಾಮರಸ :** "ಭ್ರಮಿಸಿದೆನು ನಾನೆನ್ನ ಮದದಲಿ
ಕ್ಷಮಿಸುವುದು ನೀ ನಿನ್ನ ಗುಣದಲಿ
…………………………………
ಲ್ಲಮನ ಪಾದಪಯೋಜದಲಿ ನೆಜೆ
ನಮಿಸುತಿರ್ದನು ಬಸವದಂಡಾಧೀಶನಡಿಗಡಿಗೆ"[೧೬೦]

**ಕರಸ್ಥಲ ವೀರಣ್ಣೊಡೆಯ :** "ಶಕ್ತಿಗೆ ಭೃತ್ಯನಾಗಿ ಜಡಶಕ್ತಿಯನಾತ್ಮದೊಳಿಟ್ಟು ಮಂತ್ರಮಾ
ಶಕ್ತಿಯ ಜಾಡ್ಯದೊಳ್ ಮನಮನೊಗ್ಗಿಸಿ ಶಕ್ತಿಯಾಗಿ……."[೧೬೧]

ಹೀಗೆ ಹರಿಹರಾದಿ ಕವಿಗಳು ಭೃತ್ಯಾಚಾರ ಕುರಿತು ವಿಶ್ಲೇಷಿಸಿದ್ದಾರೆ. ಹರಿಹರ ಬಸವರಾಜ ದೇವರ ರಗಳೆಯಲ್ಲಿ ಬಸವಣ್ಣ ತನ್ನ ಕಾಣಲು ಬಂದ ಮಾಹೇಶ್ವರರನ್ನು ಸ್ನೇಹ, ಭಯ, ಹರುಷ, ಭಕ್ತಿಯಿಂದ ಎದುರುಗೊಳ್ಳುವನು ಮನುಷ್ಯ ಜನ್ಮದಲ್ಲಿ ಹುಟ್ಟಿ ಗುರು ಕರುಣೆಯನ್ನು ಹೊತ್ತು ಶಿವನ ಸೇವಕನಾಗಿ ಶರಣರ ಬರುವನ್ನು ಪಡೆದೆನೆಂದು ಹಿಗ್ಗುವನು. ಆ ಶರಣರೆಲ್ಲರನ್ನು ತನ್ನ ಮಹಾಮನೆಗೆ ಕರೆದೊಯ್ದು, ಅವರಿಗೆ ಕೈಮುಗಿದು ನೀವೇ ಸಂಗಮ ದೇವರೆನ್ನುವನು. ವಿವಿಧ ದೇವರಿಗೂ ಅವರಿಗೂ ಸಾಮ್ಯ ಕಲ್ಪಿಸುವನು. ನನಗೆ ನಿಮ್ಮ ನೆನೆಯುವುದೇ ಶಿವಚಿಂತೆ, ನೋಡುವುದೇ ದರುಶನ, ಮುಟ್ಟುವುದೇ ದೇವದರ್ಶನ, ನನಗೆ ನೀವೇ ಗತಿ, ನೀವೇ ಮತಿ, ನೀವೇ ಪ್ರಾಣ ಎಂದು ಜಂಗಮ ಪ್ರಾಣಿಯಾದ ಸಂಗನ ಬಸವನುಡಿದು ಸಕಲರಿಗೂ ಶಿವಪೂಜೆ, ದಾಸೋಹ ಮಾಡಿಸಿ ಸಂತೃಪ್ತಿಗೊಳಿಸಿದ. ಸಂತೃಪ್ತಿಗೊಂಡ ಶರಣ ಸಮೂಹ ಹರಸಿತು. ಬಂದ ಶರಣ ಸಮೂಹ ಹೊರಡುವಾಗ ಬಸವಣ್ಣನನ್ನು ಸಹಜವಾಗಿ ಹೊಗಳಿದಾಗ ಬಸವಣ್ಣ ಸಂಕೋಚದಿಂದ ತಲೆ ತಗ್ಗಿಸಿ "ನನಗೆ ನೀವೇ ದೇವರು ನೀವೇ ಪ್ರಾಣ, ಕಣ್ಣು, ನೀವೇ ತಾಯಿ-ತಂದೆ, ನೀವೇ ಗುರು, ನಿಮ್ಮ ಕರುಣವೇ ನನ್ನ ಪ್ರಾಣ ನಿಮ್ಮಿಂದಲೇ ಬಸವನಾದೆ, ಶರಣರ ಬಂಟರ ಬಂಟ, ಶರಣರ ಕಿಂಕರರ ಕಿಂಕರ ನಾನು, ಶರಣರ ಲೆಂಕರ ಲೆಂಕ ನಾನು, ಶರಣರ ತೊತ್ತು

ನಾನು, ನನಗೆ ಬೇರೆ ಗತಿಮತಿ ಇಲ್ಲ ಎಂದು ಸೇವಾ ಮನೋಭಾವನೆ, ನಿರಂಹಕಾರ ಭಾವದಿಂದ ನುಡಿದನು.

ಹರಿಹರನ ಬಸವಣ್ಣ ಕಿಂಕರ ಮನೋಭಾವನೆಯಿಂದ ಶರಣರ ಸೇವೆ ಮಾಡುತ್ತಾನೆ. ಶಿವಶರಣರೇ ಹಿರಿಯರು ತಾನೇ ಕಿರಿಯನೆಂಬ ನಿರಂಹಕಾರ ಮನೋಭಾವನೆ ಇರುವುದು ಕಂಡುಬರುತ್ತದೆ.

ಚಾಮರಸ ತನ್ನ ಪ್ರಭುಲಿಂಗಲೀಲೆಯಲ್ಲಿ ಕಲ್ಯಾಣಕ್ಕೆ ಬಂದ ಅಲ್ಲಮಪ್ರಭುವನ್ನು ಲಿಂಗಪೂಜಾನಿರತನಾದ ಬಸವಣ್ಣ ಒಳಗೆ ಬರಲು ಅಪ್ಪಣ್ಣನ ಮೂಲಕ ತಿಳಿಸಿದ್ದನ್ನು ಕಂಡು ಅಲ್ಲಮ ಸಿಟ್ಟಾಗುತ್ತಾನೆ. ಇದರಿಂದ ನೊಂದ ಬಸವಣ್ಣ ಅಲ್ಲಮನ ಪಾದಕ್ಕೆ ಬಿದ್ದು "ನಾನು ನನ್ನ ಗರ್ವದಿಂದ ಮತಿವಿಹೀನನಾದೆನು. ನಿನ್ನ ಸದ್ಗುಣದಿಂದ ನನ್ನನ್ನು ನೀನು ಕ್ಷಮಿಸುವುದು. ಪ್ರಭುಗಳು ನನ್ನ ಕೊರತೆಯನ್ನು ನೋಡಬಾರದೆಂದು" ಪರಿಶುದ್ಧ ಬುದ್ಧಿಯ ಬಸವದಂಡಾಧೀಶನು ಭಯಭಕ್ತಿಗಳಿಂದ ಅಲ್ಲಮನ ಪಾದಕಮಲಗಳಲ್ಲಿ ಪದೇ ಪದೇ ಅತಿಶಯವಾಗಿ ನಮಸ್ಕರಿಸಿದನು. ಇಲ್ಲಿಯೂ ಸಹ ಬಸವಣ್ಣ ಮಹಾಶರಣ(ಜಂಗಮ)ನಾದ ಅಲ್ಲಮನಿಗೆ ಅಪಾರ ಗೌರವ ತೋರಿಸಲು ಕಿಂಕರ ಭಾವದಿಂದ ನಮಸ್ಕರಿಸಿ ಭೃತ್ಯಾಚಾರಿಯಾಗಿ ಸತ್ಕರಿಸಿದ್ದನ್ನು ಕಾಣಬಹುದು.

ಕರಸ್ಥಲ ವೀರಣ್ಣೊಡೆಯ ತನ್ನ ನಿಃಕಲಶತಕದಲ್ಲಿ ಶರಣ ಭಕ್ತಿಗೆ ಭೃತ್ಯಾಚಾರಿಯಾಗಿ ನಿಸ್ತೇಜ ಶಕ್ತಿಯನ್ನು ಆತ್ಮದಿಂದ ದೂರವಿಟ್ಟು ಸೌಜನ್ಯ ಭಾವದಿಂದ ಶರಣರಿಗೆ ಕಿಂಕರ ಭಾವದಿಂದ ಕೆಟ್ಟಮನಸ್ಸನ್ನು ಅಳಿಸಿ ಸತ್ಕರಿಸಬೇಕು ಎಂಬ ಗೂಢ ಅರ್ಥದಲ್ಲಿ ಹೇಳಲಾಗಿದೆ.

ಈ ಎಲ್ಲಾ ಕವಿಗಳು ಭೃತ್ಯಾಚಾರವನ್ನು ನಿಷ್ಕಲ್ಮಶ, ಕಿಂಕರ ಭಾವದಿಂದ ಆಚರಿಸಬೇಕು. ಎಂಥ ಸಂದರ್ಭ ಬಂದರೂ ಶರಣನಾದವನು ಭೃತ್ಯಾಚಾರ ಆಚರಿಸುವುದನ್ನು ಕೈಬಿಡಬಾರದೆಂಬ ಭಾವ ಅಭಿವ್ಯಕ್ತಗೊಳಿಸಿದ್ದಾರೆ. ಈ ಯಾವ ಕವಿಗಳ ಕಾವ್ಯದಲ್ಲಿ ಭೃತ್ಯಾಚಾರದ ಶಾಸ್ತ್ರೀಯ ನಿರೂಪಣೆ ಕಂಡುಬರುವುದಿಲ್ಲ. ಒಟ್ಟಾರೆಯಾಗಿ ಹೇಳುವುದಾದರೆ ಪಂಚಾಚಾರಗಳು ವೀರಶೈವ ಧರ್ಮೀಯನ ಧಾರ್ಮಿಕ ಆಚರಣೆಯ ಅವಿಭಾಜ್ಯ ಅಂಗಗಳಾಗಿವೆ ಎಂದು ಹೇಳಬಹುದು.

### ೩. ಷಟ್‌ಸ್ಥಲಗಳು

'ಷಟ್' ಎಂದರೆ ಆರು, ಸ್ಥಲವೆಂದರೆ 'ನೆಲೆ' ಭಕ್ತನ ಸಾಧನೆಯ ಮುಖ್ಯ ಹಂತ.[೨೨] ಸ್ಥಾನ, ಮೆಟ್ಟಿಲು, ಭಕ್ತನ ಸಾಧನೆಯ ಮಾರ್ಗ, ನೆಲೆ, ಸಾಧಕನ ಸಾಧನೆಯ ಮಾರ್ಗದಲ್ಲಿ ಕಲ್ಪಿಸಲಾಗಿರುವ ವಿವಿಧ ಹಂತಗಳು ಎಂಬಿತ್ಯಾದಿಯಾಗಿ ಅರ್ಥೈಸಬಹುದು. ಚೇತನಾಚೇತ್ಮಕವಾದ ಜಗತ್ತು ಯಾವುದರಲ್ಲಿ ಹುಟ್ಟಿ ಯಾವುದರಲ್ಲಿ ಲಯವಾಗುತ್ತದೆಯೊ, ಆ ಏಕಮೇವಾ ದ್ವಿತೀಯವಾದ ಪರಶಿವ ಬ್ರಹ್ಮವನ್ನೇ ಅಲ್ಲಿ ಸ್ಥಲವೆಂದು ಕರೆಯಲಾಗಿದೆ. ಮಹದಾದಿಯಾದ ಸರ್ವ ತತ್ತ್ವಗಳಿಗೆ ಶಿವತತ್ತ್ವವೇ ಸ್ಥಾನಭೂತವೂ,

ಲಯಭೂತವೂ ಆಗಿರುವುದರಿಂದ ಅದನ್ನು ಸ್ಥಲವೆಂದು ಕರೆಯಲಾಗುತ್ತದೆ. 'ಸ್ಥಲ' ಶಬ್ದದಲ್ಲಿಯ 'ಸ್ಥ' ಸ್ಥಾನವಾಚಕವಾಗಿದ್ದರೆ 'ಲ' ಎಂಬುದು ಲಯವಾಚಕವಾಗಿದೆ. ಈ ಎರಡಕ್ಕೆ ಎಂದರೆ ಸೃಷ್ಟಿಯ ಸ್ಥಿತಿ-ಲಯಗಳಿಗೆ ಯಾವುದು ಕಾರಣೀಭೂತವಾಗಿದೆಯೋ ಅದೇ ಸ್ಥಲ."[೧೬೩] ವೀರಶೈವ ಭಕ್ತನು ಸಾರ್ಥಕ ಬದುಕಿನ ಆರು ಮೆಟ್ಟಿಲುಗಳನ್ನು ಏರುವುದೇ ಷಟ್‌ಸ್ಥಲವಾಗಿದೆ.

ವೀರಶೈವ ಧರ್ಮದ ತಾತ್ವಿಕ ಸಿದ್ಧಾಂತ ಹಾಗೂ ಧಾರ್ಮಿಕ ಆಚರಣೆ ಇವೆರಡಕ್ಕೂ ಸಮನ್ವಯ ಕಲ್ಪಿಸುವ ಮಾರ್ಗ ಷಟ್‌ಸ್ಥಲದಲ್ಲಿದೆ. ಧಾರ್ಮಿಕ ಆಚರಣೆಗೆ ಬೆಲೆ ಬಂದು ಅದು ಶಕ್ತಿಶಾಲಿಯಾಗಿ ಕಾಣಬೇಕಾದರೆ ತಾತ್ವಿಕ ಸಿದ್ಧಾಂತದ ಬುನಾದಿಯ ಮೇಲೆ ನಿಂತಿರಬೇಕು. ಅದೇ ರೀತಿ ತಾತ್ವಿಕ ಚಿಂತನೆಯಿಂದ ಪೋಷಣೆ ದೊರೆಯಬೇಕಾದರೆ ಆಚಾರದೊಡನೆ ಬೆರೆತು ಜೀವನದಲ್ಲಿ ಅಳವಡಿಸಬೇಕು. ಷಟ್‌ಸ್ಥಲ ಸಿದ್ಧಾಂತ ಈ ಎರಡನ್ನೂ ಸಾಧಿಸಿರುತ್ತದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅಂಗ ಎಂದರೆ ಜೀವಾತ್ಮ, ಲಿಂಗ ಎಂದರೆ ಪರಮಾತ್ಮ, ಐಕ್ಯ ಎಂದರೆ ಸಮರಸವಾಗುವುದು ಅಥವಾ ಬೆರೆತು ಹೋಗುವುದು. ಅಂಗನು ಲಿಂಗನಲ್ಲಿ ಸಮರಸವಾಗಲು ಷಟ್‌ಸ್ಥಲದಾಚರಣೆಯನ್ನು ಕಲ್ಪಿಸಲಾಗಿದೆ.[೧೬೪] ವೀರಶೈವ ತಾತ್ವಿಕ ವಿಭಾಗದಲ್ಲಿ ಸಮಾವೇಶಗೊಳ್ಳುವ ಷಟ್‌ಸ್ಥಲಗಳನ್ನು ವೀರಶೈವದ ಆತ್ಮವೆಂದು ಪರಿಗಣಿಸಲಾಗಿದೆ. ಅಂತಿಮ ಧ್ಯೇಯವಾದ ಲಿಂಗಾಂಗ ಸಾಮರಸ್ಯ ರೂಪದ ಮುಕ್ತಿಯನ್ನು ಸಾಧಿಸಲು ವೀರಶೈವವು ವ್ಯವಸ್ಥೆಗೊಳಿಸಿರುವ ಷಟ್‌ಸ್ಥಲ ಒಂದು ಉಪಾಸನಾ ಮಾರ್ಗ[೧೬೫] ಎಂದು ಹೇಳಬಹುದು. ಅಂದರೆ ವೀರಶೈವ ಭಕ್ತನು ನಿತ್ಯ ಬದುಕಿನಲ್ಲಿ ಅನುಷ್ಠಾನಗೊಳಿಸಿಕೊಳ್ಳುವ ಸಾಧನ ಮಾರ್ಗವಾಗಿದೆ.

ಷಟ್‌ಸ್ಥಲದಲ್ಲಿ ಶಿವಯೋಗವೇ ಸಾಧನೆ, ಶಿವಾನುಭವವೇ ಸಿದ್ಧಿ. ಅಂಗದ ಕ್ರಿಯೆಗಳು ಲಿಂಗದ ಕ್ರಿಯೆಗಳಾಗಬೇಕು, ಪದಾರ್ಥ ಪ್ರಸಾದವಾಗಬೇಕೆಂಬುದು ಷಟ್‌ಸ್ಥಲದ ಉದ್ದೇಶ.[೧೬೬] ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಹಂತಗಳನ್ನು ಭಕ್ತ (ವ್ಯಕ್ತಿ) ಏರಿದಾಗ ಮಾತ್ರ ಅವರ ಬದುಕು ಸಾರ್ಥಕವಾಗುತ್ತದೆ.

ಬಸವಣ್ಣ ಮತ್ತು ಚನ್ನಬಸವಣ್ಣ ಷಟ್‌ಸ್ಥಲಗಳನ್ನು ಕುರಿತು ತಮ್ಮ ವಚನದಲ್ಲಿ ಹೀಗೆ ಹೇಳಿದ್ದಾರೆ.

ಬಸವಣ್ಣ : "ಮೆಲ್ಲಮೆಲ್ಲನೆ ಭಕ್ತನಪ್ಪೆ, ಮೆಲ್ಲಮೆಲ್ಲನೆ ಮಹೇಶ್ವರನಪ್ಪೆ
ಮೆಲ್ಲಮೆಲ್ಲನೆ ಪ್ರಸಾದಿಯೆಪ್ಪೆ, ಮೆಲ್ಲಮೆಲ್ಲನೆ ಪ್ರಾಣಲಿಂಗಿಯಪ್ಪೆ
ಮೆಲ್ಲಮೆಲ್ಲನೆ ಶರಣನಪ್ಪೆ, ಮೆಲ್ಲಮೆಲ್ಲನೆ ಐಕ್ಯನಪ್ಪೆ"[೧೬೭]

ಚೆನ್ನಬಸವಣ್ಣ : "ಮೆಲ್ಲಮೆಲ್ಲನೆ ಭಕ್ತ,

................

ನಿಮ್ಮ ಶರಣರು,

ತಾವೇನು ಮರುಜೇವಣೆಯ ಕೊಂಡರೆ?

ಅಮೃತ ಸೇವನೆಯ ಮಾಡಿದರೆ?

ಆವ ಸ್ಥಲದಲ್ಲಿ ನಿಂದರೂ ಷಡುಸ್ಥಲವಡಗದಿರ್ದಡೆ..."[೧೬೮]

ಈ ಮೇಲಿನ ಎರಡೂ ಸ್ಥಲಗಳಲ್ಲಿ ಭಿನ್ನತೆ ಇದೆ. ಬಸವಣ್ಣ ಭಕ್ತಸ್ಥಲದಿಂದ ಏರಿ ಕೊನೆಯಲ್ಲಿ ಐಕ್ಯಸ್ಥಲ ಮುಟ್ಟಬೇಕೆಂದು ಹೇಳಿದರೆ ಚನ್ನಬಸವಣ್ಣ ಅದನ್ನು ಪ್ರಶ್ನಿಸಿ ಖಂಡಿಸಿರುವುದು ಕಂಡುಬರುತ್ತದೆ. ಈ ಎರಡೂ ವಚನಗಳು ಷಟ್‌ಸ್ಥಲಗಳ ಕ್ರಮ ಕುರಿತು ಹೇಳಿವೆ.

ಪ್ರಸ್ತುತ ಅಧ್ಯಯನವು ಹಂಪಿ ಪರಿಸರದ ಕವಿಗಳಾದ ಹರಿಹರ, ಚಾಮರಸ, ಲಕ್ಕಣ್ಣ ದಂಡೇಶ, ಕಲ್ಲುಮಠದ ಪ್ರಭುದೇವ, ಮಹಾಲಿಂಗದೇವ, ಕರಸ್ಥಲ ಮಲ್ಲಿಕಾರ್ಜುನ್ನೊಡೆಯ, ಮಗ್ಗೆಯ ಮಾಯಿದೇವ ಇಂಥ ಪ್ರಮುಖ ಕವಿ, ಸಂಕಲನಕಾರರ ಕೃತಿಗಳನ್ನು ಆಧರಿಸಿ ಷಟ್‌ಸ್ಥಲ ಸ್ವರೂಪವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇವರ ಕೃತಿಗಳಲ್ಲಿ ಬರುವ ಷಟ್‌ಸ್ಥಲ, ಷಡೋಶಸ್ಥಲ, ಏಕೋತ್ತರ ಶತಸ್ಥಲ ಇತ್ಯಾದಿ ಸ್ಥಲಗಳ ಸ್ವರೂಪ ಕುರಿತು ಅಧ್ಯಯನ ಮಾಡಲಾಗಿದೆ. ಅಲ್ಲಲ್ಲಿ ಈ ಅಧ್ಯಯನಕ್ಕೆ ಪೂರಕವಾಗಿ ಶಿವಶರಣರ ವಚನಗಳನ್ನು ವಿಷಯಸ್ಪಷ್ಟತೆಗಾಗಿ ಬಳಸಲಾಗಿದೆ.

### ಷಟ್‌ಸ್ಥಲದ ಮೂಲ ಮತ್ತು ಸ್ವರೂಪ

ವ್ಯಕ್ತಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಆರು ವೈರಿಗಳನ್ನು ಮೆಟ್ಟಿ ನಿಂತಾಗ ಅವನು ಪರಿಪೂರ್ಣ ಮನುಷ್ಯನಾಗುವಂತೆ, ವೀರಶೈವ ಸಾಧಕ ಷಟ್‌ಸ್ಥಲ ಎಂಬ ಆರು ಮೆಟ್ಟಿಲುಗಳನ್ನು ಏರಿದಾಗ ಮಾತ್ರ ಅವನು ಮಹಾಶರಣನಾಗುತ್ತಾನೆ. ಈ ಷಟ್‌ಸ್ಥಲದ ಕಲ್ಪನೆಯ ಹಿಂದೆ ಸೃಷ್ಟಿ-ಲಯಗಳ ತಾತ್ತ್ವಿಕ ಚಿಂತನೆ ಅಡಗಿದೆ ಎಂಬುದು ಬಹುಮುಖ್ಯವಾದ ಅಂಶವಾಗಿದೆ.

ಷಟ್‌ಸ್ಥಲ ಕಲ್ಪನೆಯ ಹಿನ್ನೆಲೆಯಲ್ಲಿ ಚಾಮರಸ ತನ್ನ ಪ್ರಭುಲಿಂಗ ಲೀಲೆ ಕಾವ್ಯದಲ್ಲಿ ಹೀಗೆ ವಿಶ್ಲೇಷಿಸಿದ್ದಾನೆ.

"ಕರಿವಿಡಿಯಲಿಳೆ ಸಲಿಲ ಪಾವಕ

ಮರುಕ ಗಗನಾತುಮ ನಿರಾಳದ

ತರತರದ ಶಿವಭಕ್ತ ಮಾಹೇಶ ಪ್ರಸಾದಿಗಳ

ಪರಮವರದ ಪ್ರಾಣಲಿಂಗಿಯ

ಶರಣನೈಕ್ಯನ ಭೇದ ನೆಲೆಗಳ..."[೧೬೯]

ಬಸವಣ್ಣ ಅನುಭವ ಮಂಟಪದಲ್ಲಿ ಶೂನ್ಯಪೀಠ ರಚಿಸುವಾಗ ಕ್ರಮವಾಗಿ ಸೃಷ್ಟಿ, ಲಯಗಳ ಮೂಲರೂಪಗಳಾದ ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಆತ್ಮಗಳ ಪ್ರಶಾಂತತೆಯ ಹಾಗೂ ಭಕ್ತ,

ಮಹೇಶ, ಪ್ರಸಾದಿಗಳ, ಶ್ರೇಷ್ಠವರವನ್ನು ಕೊಡುವ ಪ್ರಾಣಲಿಂಗಿ, ಶರಣ ಐಕ್ಯರ ಪ್ರತ್ಯೇಕ ನೆಲೆಗಳನ್ನು ಸೂಚಿಸುವಂತೆ ಮೆಟ್ಟಿಲುಗಳನ್ನು ನಿರ್ಮಿಸಿರುತ್ತಾನೆ. ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಆತ್ಮ ಇವುಗಳ ಪ್ರತೀಕವೇ ಷಟ್‌ಸ್ಥಲ, ಇವೇ ಇವುಗಳ ಮೂಲವೆಂದು ಹೇಳಬಹುದು.

ಷಟ್‌ಸ್ಥಲಗಳ ಉಲ್ಲೇಖ ಮೊದಲು ವೇದ ಆಗಮ ಉಪನಿಷತ್ತುಗಳಲ್ಲಿ ಕಂಡುಬರುತ್ತದೆಂದು ಕೆಲವು ವಿದ್ವಾಂಸರು ಹೇಳಿದರೆ, ಅವು ಮೊದಲು ಕಂಡುಬರುವುದು ೧೨ನೇ ಶತಮಾನದ ಬಸವಾದಿ ಶರಣರ ವಚನಗಳಲ್ಲಿ ಎಂದು ಮತ್ತೆ ಕೆಲವು ವಿದ್ವಾಂಸರು ಹೇಳಿರುವುದನ್ನು ಕಾಣಬಹುದು.

ಷಟ್‌ಸ್ಥಲ ಸಿದ್ಧಾಂತವೇ ವೀರಶೈವ(ಲಿಂಗಾಯತ)ಧರ್ಮದ ಆತ್ಮ-ಜೀವಾಳ ಎಂದು ಹಂಪಿ ಪರಿಸರದ ಕವಿಗಳು ಭಾವಿಸಿರುವುದನ್ನು ಅವರ ಕೃತಿಗಳಿಂದ ಅರಿಯಬಹುದು.

ಕಲ್ಲು ಮಠದ ಪ್ರಭುದೇವ ತನ್ನ ಲಿಂಗಲೀಲಾ ವಿಲಾಸ ಚಾರಿತ್ರ ಕೃತಿಯಲ್ಲಿ "....ಷಟ್‌ಸ್ಥಲ ಮಾರ್ಗವೇ ಶರಣ ಮಾರ್ಗ. ಈ ಶರಣ ಮಾರ್ಗವೆಂಬುದು ವೇದಾಗಮಂಗಳಿಗೆ ಅಗೋಚರ..... ವೀರಶೈವ ಷಟ್‌ಸ್ಥಲಜ್ಞಾನಾಚಾರ್ಯರಪ್ಪ ಪ್ರಭುದೇವರು, ಬಸವಣ್ಣ, ಚನ್ನಬಸವಣ್ಣ, ಮಹಾದೇವಿಯಕ್ಕಗಳು ಮುಖ್ಯವಾದ ಶಿವಾನುಭಾವಿಗಳು ಶಿವಸುಖವನನುಭವಿಸಿ, ಜ್ಞಾನದಿಂದಲುತ್ತರವಾದುದು ಭಕ್ತಿಕಾಂಡವೆಂದು ನಿರೂಪಿಸಿದ ಭಕ್ತಿಕಾಂಡವೇ ಷಟ್‌ಸ್ಥಲ ಮಾರ್ಗ...."[೧೦] ಎಂದು ಹೇಳಿದ್ದಾನೆ. ಪ್ರಭುದೇವನ ಪ್ರಕಾರ ಶರಣ ಮಾರ್ಗವೇ ಷಟ್‌ಸ್ಥಲ ಮಾರ್ಗ. ಇದು ವೇದ ಆಗಮಗಳಲ್ಲಿ ಕಾಣಲಾರದ್ದು. ಬಸವಾದಿ ಶರಣರ ವಚನಗಳಲ್ಲಿ(ಅಡಕವಾಗಿರುವ) ಜ್ಞಾನ ಭಕ್ತಿಯೆಂದು ನಿರೂಪಿಸಿದ ಭಕ್ತಿಕಾಂಡ ಈ ಷಟ್‌ಸ್ಥಲ ಮಾರ್ಗವೆಂದು ಹೇಳಿದ್ದಾನೆ. ಅಂದರೆ ಇಲ್ಲಿ ಬಸವಾದಿ ಶರಣದಿಂದ ರೂಪಿತವಾದದ್ದು ಷಟ್‌ಸ್ಥಲ ಮಾರ್ಗವೆಂದು ತಿಳಿದುಬರುತ್ತದೆ.

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವ ಚಿಂತಾಮಣಿಯಲ್ಲಿ

"ಪರಶಿವಂ ಶಿವೆಗೆ ತಿಳುಪಿದ ಷಟ್‌ಸ್ಥಲ ಬ್ರಹ್ಮ
ಪರಮೋಪದೇಶದ ರಹಸ್ಯಾರ್ಥಮಂ...."

ಶೃತಿಗಳಿಂ ಸ್ಮೃತಿಗಳಿಂದಿತಿಹಾಸ ಕಥನದಿಂ
ದತುಳ ಶಿವಧರ್ಮ ಮೊದಲಾದ ಶಾಸ್ತ್ರಂಗಳಿಂ
ನುತರಹಂಸ್ಯಾಗಮಪುರಾಣಂಗಳಿಂದ ನಿಖಿಲ ಸಿದ್ಧಾಂತ ತಂತ್ರಂಗಳಿಂ....
ವಿಮಲ ವೀರಶೈವ ವ್ರತಾಚಾರಪೂರಿತ
ಷಟ್‌ಸ್ಥಲ ಬ್ರಹ್ಮವೆಂದೊರೆದ ದೇಶಿಕನ....."[೧೧]

ಎಂದು ಷಟ್‌ಸ್ಥಲ ಕುರಿತು ಹೇಳಿದ್ದಾನೆ. ಷಟ್‌ಸ್ಥಲವನ್ನು ಶಿವನು ಪಾರ್ವತಿಗೆ ಬೋಧಿಸಿದನೆಂದೂ, ಈ ಷಟ್‌ಸ್ಥಲವು ಶೃತಿ, ಸ್ಮೃತಿ, ಇತಿಹಾಸ ಕಥನ, ಶಿವಧರ್ಮ ಮೊದಲಾದ ಶಾಸ್ತ್ರಗ್ರಂಥಗಳ, ರಹಸ್ಯ ಆಗಮ ಪುರಾಣಗಳ ಸಮಗ್ರ ಸಿದ್ಧಾಂತ ತಂತ್ರಗಳಿಂದ ನಕಲು ಮಾಡಿದ್ದಲ್ಲ. ಅವುಗಳಿಗೆ ಸರಿಸಾಟಿಯಾಗಿ ನಿಲ್ಲಬಲ್ಲ ಪಾರಮಾರ್ಥಿಕವಾದ ಶಿವಾದ್ವೈತ ಮತವನ್ನು ವೀರಶೈವ ವ್ರತಾಚಾರಪೂರಿತ ಷಟ್‌ಸ್ಥಲ ಬ್ರಹ್ಮವೆಂದು ಕರೆದು ವರ್ಣಿಸಲಾಗಿದೆ. ಈ ಷಟ್‌ಸ್ಥಲದ ನಿರ್ವಚನ ಮಹತ್ವವನ್ನು ಸಾರಿದವನು ಚೆನ್ನಬಸವಣ್ಣನೆಂದು ಲಕ್ಕಣ್ಣದಂಡೇಶ ಹೇಳಿದ್ದಾನೆ. ಇದೇ ಅಭಿಪ್ರಾಯವನ್ನು(ಷಟ್‌ಸ್ಥಲ ಉಪಾಸನೆ) ಚಾಮರಸನೂ ಅಭಿವ್ಯಕ್ತಿಸಿದ್ದಾನೆ.

ಕರಸ್ಥಲ ಮಲ್ಲಿಕಾರ್ಜುನೊಡೆಯ ತನ್ನ ಬ್ರಹ್ಮಾದ್ವೈತ ಸಿದ್ಧಾಂತ ಷಟ್ಸ್ಥಲಾಭರಣ ಕೃತಿಯಲ್ಲಿ

"ಶೃತಿ ಶಾಸ್ತ್ರಾಗಮ ವಚನದೊಳತಿಶಯ ವಾಕ್ಯವನು ತೆಗೆದು.......
......ಬಸವೇಶ ಸಿದ್ಧರಾಮನುದಸರಸ್ಯನು ಚೆನ್ನಬಸವ
ಮಡಿವಳ ಮೊದಲಾದ ಸಮಾನಾಲ್ಲಮ ಶರಣರ
ದೆಸೆಯಿಂ ಸೇರಿಸಿದೆ ಷಟ್‌ಸ್ಥಲಾಭರಣಮಿದಂ...."[೧೭೨]

ಎಂದು ಹೇಳಿದ್ದಾನೆ.

ಈ ಸಂಕಲನಕಾರ ಹೇಳುವಂತೆ ಶೃತಿ, ಶಾಸ್ತ್ರ, ಆಗಮಗಳಲ್ಲಿಯ ವಚನದ ಅತಿಶಯ ವಾಕ್ಯಗಳನ್ನು ತೆಗೆದು ಹಾಕಿ ಕೇವಲ ಬಸವಾದಿ ಶರಣರ ವಚನಗಳನ್ನು ಸೇರಿಸಿ ಷಟ್‌ಸ್ಥಲಾಭರಣ ರಚಿಸಿರುವುದಾಗಿ ಹೇಳಿರುವುದನ್ನು ಗಮನಿಸಿದರೆ ಶೃತಿ ಆಗಮ ಶಾಸ್ತ್ರಗಳಲ್ಲಿ ಷಟ್‌ಸ್ಥಲ ಪರಿಕಲ್ಪನೆ ಇತ್ತು ಎಂದು ತಿಳಿದುಬರುತ್ತದೆ. ಆದರೆ ಕವಿ ಆ ಶಾಸ್ತ್ರಗಳನ್ನು ಬಿಟ್ಟು ಕೇವಲ ಶರಣರ ವಚನಗಳ ಹಿನ್ನಲೆಯಲ್ಲಿ ಷಟ್ ಸ್ಥಲಾಭರಣ ಕೃತಿ ರಚಿಸಿರುವುದು ಕಂಡುಬರುತ್ತದೆ.

ಮೊಗ್ಗೆಯ ಮಾಯಿದೇವ ತನ್ನ ಏಕೋತ್ತರ ಶತಸ್ಥಲದಲ್ಲಿ

"ವೇದವೇದಾಂತ ಶಾಸ್ತ್ರಾದಿ ಪೌರಾಣಗಳ
ವಾದ ನಿಲುಕದ ಸಕಲ ದರುಶನಂಗಳ ಕರ್ಮ
ಬೋಧೆ ಮುಸುಕದ ವೀರಶೈವ ಸಿದ್ಧಾಂತಮಂ ಬೋಧಿಸಿದ ಕರುಣವೊಗೆದು....
.....................
ಏಕನಿಷ್ಠಾಚಾರ ಮಾರ್ಗದೊಳು ನಿಜವೆರಸಿ
ಲೋಕನಂಗೆಯ್ದುಮಲ ವೀರಶೈವಾಚಾರ ಷಟ್‌ಸ್ಥಲಂಗಳ ಪಥದೊಳು"[೧೭೩]

ಎಂದು ವಿಶ್ಲೇಷಿಸಿದ್ದಾನೆ. ಬಸವಣ್ಣ ವೇದ ಶಾಸ್ತ್ರ ಪುರಾಣಗಳ ವಾದಕ್ಕೆ ನಿಲುಕದ, ಸಕಲ ದರ್ಶನಗಳ ಕರ್ಮ ಬೋಧೆ ಮುಸುಕದ ವೀರಶೈವ ಸಿದ್ಧಾಂತವನ್ನು ಭಕ್ತರಿಗೆ ಬೋಧಿಸಿದ್ದಾನೆ. ಇದನ್ನು ಏಕನಿಷ್ಠಾಚಾರ

ಮಾರ್ಗದಲ್ಲಿ ನಿಜಬೆರೆಸಿ ಸ್ವೀಕರಿಸಿ ಲೋಕ ಬೆಳಗುವಂತೆ ಷಟ್‌ಸ್ಥಲ ಮಾರ್ಗದಲ್ಲಿ ಹೇಳಿದ್ದಾನೆಂದು ಕವಿ ಹೇಳುತ್ತಾನೆ. ಈತನ ಪ್ರಕಾರ ವೇದ ಶಾಸ್ತ್ರ ಪುರಾಣಗಳಿಗೆ ವೀರಶೈವ ಷಟ್‌ಸ್ಥಲ ಸಿದ್ಧಾಂತ ಸಿಲುಕಲಾರದ್ದು ಅದು ಬಸವಾದಿ ಶರಣರದ್ದಾಗಿದೆ.

ಮಹಾಲಿಂಗದೇವ ತನ್ನ ಏಕೋತ್ತರಶತಸ್ಥಲ ಕೃತಿಯಲ್ಲಿ

"ಆ ಶ್ರೀಗುರುಸ್ವಾಮಿ ತಮ್ಮ ಪರಮ ಜ್ಞಾನಾನುಭವ
ಪ್ರಸನ್ನ ಪ್ರಕಾಶದಿಂದ ಷಡುಸ್ಥಲವನು, ಬಸವರಾಜದೇವರು ಚೆನ್ನಬಸವರಾಜ-
ದೇವರು ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ
ಪರಮವಾಕ್ಯಾಮೃತವಪ್ಪ ವಚನಂಗಳಿಂದ ಆ ತಚ್ಛಿಷ್ಯಂಗೆ ಬೋಧಿಸುತ್ತಿರಲು..."[೧೭೪]

ಎಂದು ಹೇಳಿದ್ದಾರೆ. ಷಟ್‌ಸ್ಥಲವು ಬಸವಾದಿ ಶರಣರು, ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ಪರಮವಾಕ್ಯಾಮೃತವಾಗಿದೆ. ಇದು ವೇದಾದಿ ಆಗಮ ಪುರಾಣಗಳ ಮೂಲದ್ದಲ್ಲ ಎಂಬ ಅಭಿಪ್ರಾಯ ವ್ಯಕ್ತವಾಗಿದೆ.

ಇಲ್ಲಿ ಬಹಳಷ್ಟು ಕವಿಗಳು ಷಟ್‌ಸ್ಥಲ ಪರಿಕಲ್ಪನೆ ವೇದ ಆಗಮ ಪುರಾಣದಲ್ಲ ಎಂದಿರುವುದರಿಂದ ಷಟ್‌ಸ್ಥಲ ಪರಿಕಲ್ಪನೆ ಬಸವಾದಿ ಶರಣರ ಕಲ್ಪನೆ ಎಂದು ಹೇಳಬಹುದು.

ಕರಸ್ಥಲ ಮಲ್ಲಿಕಾರ್ಜುನೊಡೆಯ ತನ್ನ ವಚನವೊಂದರಲ್ಲಿ

"ಅಂತರಂಗದಲ್ಲಿ ಅರಿವು ಬಹಿರಂಗದಲ್ಲಿ ಕ್ರಿಯೆಯುಳ್ಳ ಮಹಾತ್ಮನೆ
ಭಕ್ತನಪ್ಪ, ಮಹೇಶ್ವರನಪ್ಪ, ಪ್ರಸಾದಿಯಪ್ಪ, ಪ್ರಾಣಲಿಂಗಿಯಪ್ಪ ಶರಣನೈಕ್ಯನಪ್ಪ"[೧೭೫]

ಎಂದು ಹೇಳಿದ್ದಾನೆ. ಅಂತರಂಗದಲ್ಲಿ ಅರಿವು, ಬಹಿರಂಗದಲ್ಲಿ ಕ್ರಿಯೆ ಪಡೆದವನು ಅಥವಾ ಹೊಂದುವವನು ಷಟ್‌ಸ್ಥಲ ಹಂತ ತಲುಪಿದವನು ಎಂದರ್ಥ. ಒಟ್ಟಾರೆಯಾಗಿ ಹೇಳುವುದಾದರೆ ಷಟ್‌ಸ್ಥಲ ಪರಿಕಲ್ಪನೆ ಬಸವಾದಿ ಶರಣರದ್ದಾಗಿದೆ. ಇದು ಅವರಿಂದ ಮೊದಲು ಸೃಷ್ಟಿಸಲ್ಪಟ್ಟದೆಂದು ಹೇಳಬಹುದು. ಅಂದರೆ ಷಟ್‌ಸ್ಥಲಗಳ ಮೂಲ ನಿರ್ಮಾತೃಗಳು ಬಸವಾದಿ ಶರಣರೆಂದು ಖಚಿತವಾಗಿ ಹೇಳಬಹುದು. ಈ ಷಟ್‌ಸ್ಥಲಗಳ ಸ್ವರೂಪ ಮತ್ತು ಮಹತ್ವವನ್ನು ಹರಿಹರಾದಿ ಕವಿಗಳ ಕಾವ್ಯಗಳಲ್ಲಿ ವ್ಯಕ್ತವಾಗಿರುವ ಅಂಶಗಳನ್ನು ಆಧರಿಸಿ ಅಧ್ಯಯನ ಮಾಡಲಾಗಿದೆ.

### ೩.೧. ಭಕ್ತಸ್ಥಲ

ದೀಕ್ಷಾಕಾಲದಲ್ಲಿ ಗುರುವು ಕೊಟ್ಟ ಇಷ್ಟಲಿಂಗ ಅಥವಾ ಆಚಾರಲಿಂಗಕ್ಕೆ ಮಾತ್ರ ನಮಸ್ಕರಿಸಬೇಕು. ಅದು ಪರದೈವವಾಗಿರುವುದರಿಂದ ಅದನ್ನು ಯಾವಾಗಲೂ ಅಗಲಿರಬಾರದು. ಗುರುಲಿಂಗ ಜಂಗಮರನ್ನು ಒಂದೇ ಎಂದು ತಿಳಿದು ಅವಕ್ಕೆ ವಂಚನೆ ಮಾಡಬಾರದು.[೧೭೬] ಭಕ್ತನು ಸಚ್ಚಾರಿತ್ರವುಳ್ಳವನೂ ಶಾಂತಚಿತ್ತನೂ

ಆಗಿರಬೇಕು. ಸಮದೃಷ್ಟಿ ಇಲ್ಲದವನನ್ನು ಭಕ್ತ ಎನ್ನಲಾಗುವುದಿಲ್ಲ. ಭಕ್ತನಿಗೆ ಪೃಥ್ವಿಯೇ ಅಂಗವಾಗಿದೆ. ಭಕ್ತನ ಸ್ವರೂಪ ತಿಳಿಸುವುದೇ ಭಕ್ತಸ್ಥಲವಾಗಿದೆ.

ಭಕ್ತನ ಸ್ವರೂಪ ಕುರಿತು ಚನ್ನಬಸವಣ್ಣ ತನ್ನ ವಚನದಲ್ಲಿ

"ಭಕ್ತನು ಶಾಂತವಾಗಿರಬೇಕು. ಸತ್ಯವಾಗಿರಬೇಕು ತನ್ನ ಕೂರ್ತು ಬಂದ ಠಾವಿನಲ್ಲಿ ಭೂತಹಿತವಹ ವಚನವ ನುಡಿಯಬೇಕು, ಜಂಗಮಲಿಂಗದಲ್ಲಿ ನಿಂದೆಯಿಲ್ಲದಿರಬೇಕು, ಸಕಲಪ್ರಾಣಿಗಳ ತನ್ನಂತೆ ಕಾಣಬೇಕು, ತನುಮನ ಧನವ ಗುರುಲಿಂಗ ಜಂಗಮಕ್ಕೆ ಸವೆಸಬೇಕು....ಎಂದಿದ್ದಾನೆ."[೧೭೭]

ಭಕ್ತನು ಕಾಯ, ವಾಚ, ಮನಸಾ ಶುದ್ಧವಾಗಿರಬೇಕೆಂಬುದು ಇಲ್ಲಿಯ ಅಭಿಪ್ರಾಯ ಅಂದರೆ ಎಲ್ಲಾ ಪ್ರಾಣಿಗಳಲ್ಲಿ ಸಮಾನತೆ ಕಾಣಬೇಕು. ಗುರುಲಿಂಗ ಜಂಗಮಕ್ಕೆ ಎಲ್ಲವನ್ನೂ ಸಮರ್ಪಿಸಬೇಕು ಎಂಬರ್ಥವಿದೆ.

ಮೊಗ್ಗೆಯ ಮಾಯಿದೇವ ತನ್ನ ಷಟ್‌ಸ್ಥಲ ಗದ್ಯದಲ್ಲಿ

"ಉತ್ಸಹಗುಣ ಸಂಸಕ್ತಂ ಭಕ್ತಂ | ಕುತ್ಸಿತ ಕರ್ಮ ನಿರಸ್ತ ಭಕ್ತಂ
ಲೋಕಾಚಾರ ವಿರಕ್ತಂ ಭಕ್ತಂ ‖ ಲೋಕಾನುಗ್ರಹ ಶಕ್ತಂ ಭಕ್ತಂ
..................................................................
ಆಚಾರಾಶ್ರಿತ ಚಿತ್ತಂ ಭಕ್ತಂ | ಶ್ರೀ ಚರ ತುಷ್ಟಿತ ವಿತ್ತಂ ಭಕ್ತಂ ಎಂದಿದ್ದಾನೆ."[೧೭೮]

ಮಾಯಿದೇವನ ಪ್ರಕಾರ ಭಕ್ತನು ಉತ್ಸಾಹ ಗುಣಹೊಂದಿದವನು, ಕೆಟ್ಟ ಕೆಲಸಗಳಿಂದ ದೂರವಿದ್ದವನು. ಲೋಕಾಚಾರ, ಲೋಕಾನುಗ್ರಹ ಶಕ್ತನಾದವನು. ಜಂಗಮಾಚಾರದಲ್ಲಿ ಮನಸ್ಸಿಟ್ಟು ಮಾಡಿ ಸಂತೃಪ್ತಿ ಹೊಂದಿದವನು, ನಿರ್ಮಲಮನಸ್ಸು, ಬುದ್ಧಿ ಹೊಂದಿದವನು ನಿಜವಾದ ಭಕ್ತ ಎಂದಿದ್ದಾನೆ.

ಹರಿಹರಾದಿ ಕವಿಗಳು ಭಕ್ತನ ಪರಿಕಲ್ಪನೆಯನ್ನು ತಮ್ಮ ಕಾವ್ಯದಲ್ಲಿ ಹೀಗೆ ಹೇಳಿದ್ದಾರೆ.

ಹರಿಹರ : "ಗುರುಲಿಂಗದೊಳೆರಡಿಲ್ಲದಿರ್ಪ.......ಬಪ್ಪ ಭಕ್ತರಂ ಹರುಷ
ದೊಳದಿರ್ಗೊಂಬೆ....... ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೋಡೆ
ನುಡಿಯೆ ಮುಟ್ಟೆ ಕೇಳೆ......"[೧೭೯]

"ಮನದೊಳು ಮಹೇಶ್ವರಿಂಗೆ ಮೊರೆಯಿಟ್ಟು ಭವಿಗಳೊಳಸೋರ್ಗೆ
ಭಕ್ತರೆನ್ನತ್ತಂ ಸಾರ್ಗೆ ಲಗ್ನಂ ದೂರವಕ್ಕೆ...."[೧೮೦]

“..........ಕೌಶಿಕನಿಚ್ಛೆಗೆ ಜಾರಿ ದೇಹಮಂ ಮಾರಿ ಭವಿಯ
ಸಂಗಕ್ಕೆ ತಾರಿ ಚಿತ್ತಮಂ ತೂರಿ...... ಲಿಂಗಪೂಜೆಯ ಸುಖಮಂ
ಭವಿಯ ಕೂಟದ ದುಃಖವನನುಭವಿಸುತ್ತಿರ್ಪಲ್ಲಿ”[೧೮೧]

**ಚಾಮರಸ :** “ಅನುಶ್ರವಣ ಮನನದ ನಿಧಿದ್ಯಾ
ಸನದಲೊಚ್ಚತನಾಗಿ ತನ್ನಯ
ತನು ಮನೋವಾಕ್ಕಾಯ ಕರ್ಮಗಳೊಂದು ಹರಿಯಾಗಿ
ತನೆ ಕಣಾ ಸ್ವಾತಂತ್ರಭಕ್ತನು.....”

ತನ್ನೊಳಗೆ ಗುರುಲಿಂಗ ಜಂಗಮ
ತನ್ನೊಳಗೆ ಪಾದೋದಕಾಮೃತ
ತನ್ನೊಳಗೆ ಪರಮ ಪ್ರಸಾದ ಸಮಸ್ತವೆಲ್ಲವನು....
ಭಿನ್ನಭಾವ ಭ್ರಾಂತಭವಿಗಳು....”[೧೮೨]

**ಲಕ್ಕಣ್ಣದಂಡೇಶ :** “ಸತ್ಯವೆಂಬಂತೆ ತೋಱುವ ಶರೀರಪ್ರಾಣ
ವಿತ್ತ ಮೊದಲಾದವೆಲ್ಲಂ ವಿಚಾರಿಸಿ ಕಡೆಗ
ನಿತ್ಯವೆಂದಱಿದು ನಿಶ್ಚಯಿಸಿಯವಱೊಳಗತಿ ನಿವೃತ್ತಿಚಿತ್ತವನು ತಳೆದು
ಅತ್ಯಮಲ ಭಕ್ತಿಕ್ರಿಯಾಚರಣೆಯಿಂ ಭವವ
ಸ್ತುತ್ಯ ಭಕ್ತಸ್ಥಲವದೆಂದೊರೆದ.....”[೧೮೩]

**ಮಹಾಲಿಂಗದೇವ :** “ಇಂತು ವಿಭೂತಿ ರುದ್ರಾಕ್ಷಿಯಂ ಧರಿಸಿ, ಪಂಚಾಕ್ಷರಿಯಂ ಜಪಿಸಿ, ನಿತ್ಯ
ಲಿಂಗಾರ್ಚನೆಯಂ ಮಾಡುವ ಸತ್ಕ್ರಿಯಾ ಸಂಪನ್ನನ ಸಾಂಗ ಕ್ರಿಯಾವರ್ತನೆ
ಎಂತಿರ್ದುದೆಂದಡೆ, ಮುಂದೆ ಭಕ್ತಿಸ್ಥಲವಾದುದು”[೧೮೪]

**ಕಲ್ಲುಮಠದ ಪ್ರಭುದೇವ :** “......ಆ ಗುರು ಲಿಂಗ ಜಂಗಮವೆಂಬ ತ್ರಿವಿಧವಾದುದು
ಒಂದೇ ವಸ್ತುವೆಂದಱುದು, ತಾ ಮೊದಲಾದ ಸಕಲ ತತ್ತ್ವ ಪದಾರ್ಥಂಗಳೆಲ್ಲಾ
ಗುರುಲಿಂಗ ಜಂಗಮದ ಸೊಮ್ಮೆಂದಱಿದು, ತನುಮನಧನಂಗಳಲ್ಲಿ
ನಿರ್ವಂಚಕನಾಗಿ ಶ್ರದ್ಧಾಭಕ್ತಿಯಿಂದರ್ಪಿಸುತ್ತಾ......
....... ಜಂಗಮದಲ್ಲಿ ಗುಣ ಅವಗುಣವ
ಸಂಪಾದಿಸದೆ, ಜಾತಿವರ್ಣಾಶ್ರಮಂಗಳ ವಿವರಿಸದೆ, ಫಲಪದಂಗಳ
ಬಯಸದೆ....”[೧೮೫]

**ಕರಸ್ಥಲ ಮಲ್ಲಿಕಾರ್ಜುನೊಡೆಯ :** “ಇಂತಪ್ಪ ಅಂತರಂಗದರಿವು ಬಹಿರಂಗದ ಕ್ರಿಯೆಯಲ್ಲಿ
ಸದಾ ಸಂಪನ್ನನಾದ ಬ್ರಹ್ಮಜ್ಞಾನಿಯಪ್ಪ ಪರಮಲಿಂಗಾಂಗಿಗೆ ತನ್ನ

ಆದಿಯಾದ ಪರಬ್ರಹ್ಮ ಲಿಂಗಾನುಸಂಧಾನ ಸಮರಸೈಕ್ಯಕ್ಕೆ
ಸಾಧನವಾದ ಪ್ರಥಮ ಭಕ್ತಸ್ಥಲ''೧೪೬

ಹೀಗೆ ಹರಿಹರಾದಿ ಕವಿ, ಸಂಕಲನಕಾರರು ಭಕ್ತ ಸ್ಥಲದ ಸ್ವರೂಪ ಕುರಿತು ವಿಶ್ಲೇಷಿಸಿದ್ದಾರೆ. ಹರಿಹರ ತನ್ನ ಬಸರಾಜದೇವರ ರಗಳೆಯಲ್ಲಿ ಬಸವಣ್ಣನ ಮೂಲಕ ಭಕ್ತಸ್ಥಲವನ್ನು ವಿವರಿಸಿದ್ದಾನೆ. ಭಕ್ತನು ಗುರುಲಿಂಗದೊಳಗೆ ಭೇದ ಕಲ್ಪಿಸಬಾರದು, ಬರುವ ಭಕ್ತರನ್ನು ಸಂತೋಷದಿಂದ ಎದುರುಗೊಂಡು ಸತ್ಕರಿಸಬೇಕು. ಶಿವಲಿಂಗ ಅರ್ಪಿತವಲ್ಲದ್ದನ್ನು ನೋಡಬಾರದು, ಕೇಳಬಾರದು ಮುಟ್ಟಬಾರದು. ಶರಣರಲ್ಲಿ ಜಾತಿ ಎಣಿಸಬಾರದು ಎಂಬಿತ್ಯಾದಿಯಾಗಿ ಹೇಳಿದರೆ ಇದೇ ಕವಿ ಮಹಾದೇವಿಯಕ್ಕನ ರಗಳೆಯಲ್ಲಿ ಭವಿ-ಭಕ್ತರ ಕಲ್ಪನೆ ಹೇಳಿದ್ದಾನೆ. ಅಕ್ಕಮಹಾದೇವಿ ಪಾತ್ರದ ಮೂಲಕ ಭಕ್ತರು ಭವಿಯ ಜೊತೆ(ಲಿಂಗಧರಿಸಿದವರು ಭಕ್ತರು, ಲಿಂಗಧರಿಸಲಾರದವರು ಭವಿಗಳು) ಮದುವೆಯಾಗಬಾರದು, ಅವರಿಗೆ ಲಿಂಗಪೂಜೆಯ ಮಹತ್ವಗೊತ್ತಿರುವುದಿಲ್ಲ ಅಂಥವರನ್ನು ಪೂಜಾ ಸಮಯದಲ್ಲಿ ಮುಟ್ಟಿಸಿಕೊಳ್ಳಬಾರದು, ದೂರವಿಡಬೇಕು. ಒಂದು ವೇಳೆ ಭವಿಯೊಂದಿಗೆ ವಿವಾಹವಾಗಿ ದೈಹಿಕ ಸಂಬಂಧಹೊಂದಿದರೆ ಅದು ದೇಹವನ್ನು ಮಾರಿ ಕೊಂಡಂತೆ ಆಗುತ್ತದೆ. ಭವಿಯ ಕೂಟ ದುಃಖಕ್ಕೆ ನಾಂದಿ ಹಾಡುತ್ತದೆ ಎಂದಿದ್ದಾನೆ. ಅಂದರೆ ಭಕ್ತರು, ಭಕ್ತರೊಂದಿಗೆ ವಿವಾಹವಾಗಬೇಕು ಭಕ್ತನಿಗೆ ಲಿಂಗಪೂಜೆಯಲ್ಲಿ ಸಿಗುವ ಸುಖ ಬೇರೆ ಎಲ್ಲೂ ಸಿಗಲಾರದು.

ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ ಭವಿ, ಭಕ್ತ ಪರಿಕಲ್ಪನೆ ಕುರಿತು ದಾಖಲಿಸಿದ್ದಾನೆ. ಈತನ ಪ್ರಕಾರ ಶ್ರವಣ, ಮನನ, ನಿಧಿಧ್ಯಾಸನಗಳಲ್ಲಿ ಐಕ್ಯವಾಗಿ ತನ್ನ ದೇಹ ಮನಸ್ಸು ಮಾತು ಕ್ರಿಯೆಗಳು ಒಂದಾಗಿ ಧ್ಯಾನ ನೆಲೆಯನ್ನು ಕಂಡುಕೊಂಡ ಮಹಾತ್ಮನಿಗೆ ದೊಡ್ಡದಾವುದು ಇಲ್ಲ ಹೀಗೆ ನಡೆದವನು ಯಾವ ಹಂಗುಗಳೂ ಇಲ್ಲದ ಪರಿಪೂರ್ಣ ಭಕ್ತನಾಗುತ್ತಾನೆ. ಆದರೆ ತನ್ನಲ್ಲೇ ಗುರು ಲಿಂಗ ಜಂಗಮ; ತನ್ನಲ್ಲೇ ಪಾದೋಕ ಪ್ರಸಾದ, ಹೀಗೆ ತನ್ನಲ್ಲೇ ಸರ್ವಸ್ವವೂ ಇರುವುದನ್ನು ತಿಳಿಯದೆ ಇದಿರಿನಲ್ಲಿ ಹುಡುಕುವ ಭಿನ್ನ ಭಾವವುಳ್ಳ ಮರುಳರು ಭವಿಗಳಾಗುತ್ತಾರೆ ಎಂದು ಕವಿ ಹೇಳುತ್ತಾನೆ. ಅಂದರೆ ಭಕ್ತ ದೇಹ ಮನ ಮಾತುಕ್ರಿಯೆಯಲ್ಲಿ ಒಂದಾಗಿ ಧ್ಯಾನ ಕಂಡುಕೊಂಡವನು, ಯಾವ ಹಂಗಿಗೂ ನಿಲುಕದವನು. ಗುರು ಲಿಂಗ ಜಂಗಮ, ಪಾದೋದಕ, ಪ್ರಸಾದವನ್ನು ತನ್ನಲ್ಲೇ ಕಂಡುಕೊಂಡವನು ಭಕ್ತ. ಇವುಗಳನ್ನು ಕಂಡುಕೊಳ್ಳಲಾರದವನು ಭವಿ ಎಂದಿದ್ದಾನೆ.

ಲಕ್ಕಣ್ಣದಂಡೇಶ ತನ್ನ ಶಿವತತ್ತ್ವಚಿಂತಾಮಣಿಯಲ್ಲಿ ಸತ್ಯವೆಂಬಂತ್ತಿರುವ ಶರೀರದಲ್ಲಿ ಪ್ರಾಣ ಮೊದಲಾದವುಗಳಿರುವುದನ್ನು ಅರಿತು ಅದು ನಿತ್ಯವೆಂದು ಭಾವಿಸಿ ಹುಟ್ಟು ಪಡೆದ ಮೇಲೆ ಮನಸ್ಸಿಟ್ಟು ಅತ್ಯಮೂಲ್ಯವಾಗಿ ಶ್ರದ್ಧೆಯಿಂದ ಭಕ್ತಿ ಕ್ರಿಯಾಚರಣೆ ಮಾಡುವುದೇ ಭಕ್ತಸ್ಥಲ ಎಂದು ಹೇಳಿದ್ದಾನೆ. ಅಂದರೆ ಭಕ್ತ ನಿತ್ಯ ಕ್ರಿಯಾಚಾರಣೆ ಮಾಡುವುದು ಭಕ್ತಸ್ಥಲವಾಗಿದೆ.

ಮಹಾಲಿಂಗದೇವ-ಏಕೋತ್ತರ ಶತಸ್ಥಲ, ಕಲ್ಲುಮಠದ ಪ್ರಭುದೇವ-ಲಿಂಗಲೀಲಾ ವಿಲಾಸ ಚಾರಿತ್ರ, ಕರಸ್ಥಲ ಮಲ್ಲಿಕಾರ್ಜುನನೊಡೆಯ-ಬ್ರಹ್ಮಾದ್ವೈತ ಸಿದ್ಧಾಂತ ಷಟ್ಸ್ಥಲಾಭರಣ ಸಂಕಲನ ಕೃತಿಗಳಲ್ಲಿ, ಭಕ್ತನು ಗುರುವಿನಿಂದ ಲಿಂಗಪಡೆದು ಗುರುಲಿಂಗ ಜಂಗಮ ಒಂದೇ ಎಂದು ಭಾವಿಸಿ ವಿಭೂತಿ ರುದ್ರಾಕ್ಷಿ ಧರಿಸಿ ನಿತ್ಯ ಲಿಂಗಾರ್ಚನೆ ಮಾಡಬೇಕು. ಗುರುಲಿಂಗ ಜಂಗಮಕ್ಕೆ ಸರ್ವಸ್ವವನ್ನೂ ಶ್ರದ್ಧಾಶಕ್ತಿಯಿಂದ ಅರ್ಪಿಸಬೇಕು. ಪ್ರತಿಫಲಗಳನ್ನು ಬಯಸಬಾರದು ಹೀಗೆ ಅಂತರಂಗದ ಅರಿವು ಬಹಿರಂಗ ಕ್ರಿಯೆಯಲ್ಲಿ ಸದಾ ಸಂಪನ್ನವಾಗಿರುವವನು ಭಕ್ತನಾಗುತ್ತಾನೆ. ಇದೇ ಭಕ್ತಸ್ಥಲವಾಗಿದೆ. ಹಾಗೆಯೇ ಅಷ್ಟಾವರಣ ಆಚರಿಸದವನು ಭವಿಯಾಗುತ್ತಾನೆಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಭಕ್ತ ಸದಾ ಆಚಾರವುಳ್ಳವನಾಗಿದ್ದು, ಕ್ರಿಯಾ ಸಂಪನ್ನನಾಗಿರಬೇಕು ಭವಿಯೊಂದಿಗೆ ಸ್ನೇಹ ಸಂಬಂಧ ಅಥವಾ ಯಾವುದೇ ಸಂಬಂಧ ಹೊಂದಬಾರದೆಂಬ ಅಭಿಪ್ರಾಯ ವ್ಯಕ್ತವಾಗಿದೆ.

೩.೨. ಮಾಹೇಶ್ವರ ಸ್ಥಲ

ಭಕ್ತನು ತನ್ನ ಅಧ್ಯಾತ್ಮಿಕ ಸಾಧನೆಗೆ ಅಡ್ಡ ಬರುವಂತಹ ದೋಷಗಳನ್ನು ದೂರ ಮಾಡಬೇಕು. ಮತ್ತು ಸಾಧನೆಗೆ ಅನುಕೂಲವಾಗುವಂತಹ ಗುಣಗಳನ್ನು ಹೊಂದಬೇಕೆಂದು ಪ್ರಯತ್ನ ಮಾಡಲು ಯಾವಾಗ ಪ್ರಾರಂಭಿಸುತ್ತಾನೆಯೋ ಆಗ ಅವನು ಮಾಹೇಶ್ವರ ಸ್ಥಲಕ್ಕೆ ಬರುತ್ತಾನೆ. ತನ್ನ ತಪ್ಪುಗಳ ಬಗ್ಗೆ ಪಶ್ಚಾತ್ತಾಪ ಪಟ್ಟುಕೊಂಡು ಇನ್ನೊಮ್ಮೆ ಇಂತಹ ತಪ್ಪು ಮಾಡಲಾರೆ ಎಂದು ಪ್ರತಿಜ್ಞೆಗೈದಾಗ ಅವನು ಮಾಹೇಶನೆನಿಸಿಕೊಳ್ಳುತ್ತಾನೆ. ಪರಧನ ಪರಸತಿ, ಪರದೈವವನ್ನು ಒಲ್ಲೆನೆಂಬ ಛಲ ತಾನು ಪ್ರಲೋಭನೆಗಳಿಗೆ ಒಳಗಾಗುವುದಿಲ್ಲವೆಂಬ ಭಕ್ತನ ಛಲವನ್ನು ಸಾರುತ್ತದೆ. ಮಾಹೇಶ್ವರ ಸ್ಥಲದಲ್ಲಿ ಭಕ್ತನ ಶ್ರದ್ಧೆ ಬಲಿತು ನಿಷ್ಠೆಯಾಗಿ ಅವನು ಮಾಹೇಶ್ವರನಾಗುತ್ತಾನೆ.[೧೮೭] ಭಕಸ್ಥಲದಾಟಿ ಮಾಹೇಶ್ವರನಾದ ಸಾಧಕ ಸರ್ವಾಂಗ ಪರಿಶುದ್ಧನಾಗಿರಬೇಕು. ಅನ್ಯವಿಷಯಕ್ಕೆ ಮನಸ್ಸು ಕೆಡಿಸಿಕೊಳ್ಳಬಾರದು.

ಬಸವಣ್ಣ ಮಾಹೇಶ್ವರ ಸ್ಥಲ ಕುರಿತು ತನ್ನ ವಚನದಲ್ಲಿ

> "ಸಜ್ಜನ ಸದ್ಭಾವಿ ಅನ್ಯರಲಿ ಕೈಯಾಂತು ಬೇಡ, ಲಿಂಗವ ಮುಟ್ಟಿದ ಕೈ
> ಮೀಸಲು, ಕಂಗಳಲಿ ಒಸೆದು ನೋಡ ಪರವಧುವ, ಮನದಲ್ಲಿ ಅನ್ಯವ
> ನೆನೆಯ, ಮಾನವರ ಸೇವೆಯ ಮಾಡ, ಲಿಂಗವ ಬೇಡ, ಲಿಂಗದ ಹಂಗ
> ನೊಲ್ಲ ಧನದಲ್ಲಿ ವಂಚನೆಯಿಲ್ಲ, ಕೂಡಲಸಂಗಮದೇವಾ, ನಿಮ್ಮ ಶರಣ"[೧೮೮]

ಎಂದು ಹೇಳಿದ್ದಾನೆ.

ಬಸವಣ್ಣನ ಪ್ರಕಾರ ಮಹೇಶ್ವರನು ಸಜ್ಜನ ಸದ್ಭಾವಿಯಾಗಿದ್ದು ಅನ್ಯರಿಗೆ ಕೈಚಾಚ ಬಾರದು. ಲಿಂಗಕ್ಕೆ ಕೈ ಮೀಸಲು. ಪರಸ್ತ್ರೀ ನೋಡಬಾರದು ಅನ್ಯವ ನೆನೆಯಬಾರದು, ಹಣದಲ್ಲಿ ಮೋಸವಿರಬಾರದು. ಲಿಂಗದಲ್ಲಿ ಹಂಗು ಇರಬಾರದು ಆಗ ಅವನು ಮಾಹೇಶ್ವರನಾಗುತ್ತಾನೆ.

ಮೊಗ್ಗೆಯ ಮಾಯಿದೇವ ತನ್ನ ಷಟ್‌ಸ್ಥಲ ಗದ್ಯದಲ್ಲಿ ಮಾಹೇಶ್ವರ ಸ್ಥಲ ಕುರಿತು

> "ಶ್ರೀ ಲಿಂಗನಿಷ್ಠಾಗರಿಷ್ಠ ಮಾಹೇಶ್ವರಂ | ಸಾರಸಜ್ಜನಮನೋಹಾರಿ ಮಾಹೇಶ್ವರಂ
> ................................................................................................
> ವೀರವ್ರತಂಮಹೋದಾರಿ ಮಾಹೇಶ್ವರಂ |ಪಾರಲೌಕಿಕ ಸುಖಂಕಾರಿ ಮಾಹೇಶ್ವರಂ
> ಶ್ರದ್ಧಾಪರಂ ಸತ್ಯಶುದ್ಧಂ ಮಾಹೇಶ್ವರಂ | ಸಿದ್ಧಗುರುಲಿಂಗ ಸನ್ನದ್ಧ ಮಾಹೇಶ್ವರಂ"[೧೮೯]

ಎಂದು ಹೇಳಿದ್ದಾನೆ.

ಮಾಯಿದೇವನ ಪ್ರಕಾರ ಸಾಧಕನು ಲಿಂಗನಿಷ್ಠಾಪರನು, ಶೀಲವ್ರತ ಕ್ರಿಯಾಶ್ರೇಷ್ಠನೂ, ಪಾಪ ಕರ್ಮಗಳನ್ನು ಕಳೆದುಕೊಂಡವನೂ, ಸಾರಸಜ್ಜನರ ಮನಸ್ಸನ್ನು ಸೆಳೆಯುವ ವ್ಯಕ್ತಿತ್ವ ರೂಪಿಸಿಕೊಂಡವನೂ ವೀರವ್ರತ ಗರ್ಭೀಕರಿಸಿಕೊಂಡವನು, ಪಾರಲೌಕಿಕವನ್ನು ಕಳೆದುಕೊಂಡವನು, ಶ್ರದ್ಧಾಪರ ಸತ್ಯಶುದ್ಧ ಮನಸ್ಸು ದೇಹ ಹೊಂದಿದವನು ಮಾಹೇಶ್ವರನಾಗುತ್ತಾನೆ. ಇದೇ ಮಾಹೇಶ್ವರ ಸ್ಥಲವಾಗಿದೆ.

ಹರಿಹರಾದಿ ಕವಿಗಳು ಮಾಹೇಶ್ವರ ಸ್ಥಲದ ಪರಿಕಲ್ಪನೆ ಕುರಿತು ತಮ್ಮ ಕಾವ್ಯಗಳಲ್ಲಿ ದಾಖಲಿಸಿದ್ದಾರೆ. ಇದನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಹರಿಹರ :** "....ಪರಾಂಗನೆಯಂ ಹೆತ್ತ ತಾಯಿಗಳೆಂಬೆ, ಪರದ್ರವ್ಯಮಂ ಕಿಲ್ಬಿಷಮೆಂದು
ಮುಟ್ಟೆ, ನಡೆದು ತಪ್ಪೆ, ನುಡಿದು ಹುಸಿಯೆ, ಹಿಡಿದು ಬಿಡೆ, ಬಿಟ್ಟು ಹಿಡಿಯೆ.....
......ಅಹಂಕಾರದೊಳು ಗರ್ವವಿಲ್ಲ........"[೧೯೦]

**ಚಾಮರಸ :** "ನಾನು ಮಱವೆಯ ಮರಳು ಸಂತತ
ನೀನೆಯಱಿವಿನ ತಿರುಳು ತಿಳಿವೊಡೆ
ನಾನು ರಂಜಕನಖಿಳರಱಿಯಲು ನೀ ನಿರಂಜಕನು
ನಾನು ಭಾವಿಸೆ ಪಶು ವಿಚಾರಸೆ
ನೀನು ಪಶುಪತಿಯೆನ್ನ ತಪ್ಪನು..."[೧೯೧]

**ಲಕ್ಕಣ್ಣದಂಡೇಶ :** "ವ್ರತನಿಯಮ ಸತ್ಯ ಧರ್ಮಾಚಾರ ಶೌಚದು
ನ್ನತಿಯೊಳುಂಟೆಂಬ ನಿಶ್ಚಯಬುದ್ಧಿಯಿಂದಲ
ಕ್ಷಿತವಾದ ಸುಚರಿತ್ರಯುತಲಿಂಗ ನಿಷ್ಠೆಯಿಂ ವೀರವೃತ್ತಿಯನೆ ತಳೆದು
ಪರಮಮಾಹೇಶ್ವರ ಸ್ಥಲವೆಂದು..."[೧೯೨]

**ಮಹಾಲಿಂಗದೇವ :** "ಇಂತು ಭಕ್ತಿಸ್ಥಲದಲ್ಲಿ ಆಚರಿಸಿ, ಮಾಡಿ ಮಾಟವ ಮಱೆದು ಕೂಡಿ ಕೂಟವ ಮಱೆದು. ಸಹಜದಲ್ಲಿ ಐಕ್ಯವಾದ ಮಹಂತನು ಮುಂದೆ ನೈಷ್ಠಿಕಾ ಮುಖದಿಂದ ಆಚರಿಸಿ ಬೆರಸುವ ಬೇಧವೆಂತಿರ್ದುದೆಂದಡೆ ಮುಂದೆ ಮಾಹೇಶ್ವರ ಸ್ಥಲವಾದುದು"[೧೯೩]

**ಕಲ್ಲುಮಠದ ಪ್ರಭುದೇವ :** "....ಲಿಂಗಾಂಗವೆರಡಾದುದು ಒಂದೇ ವಸ್ತುವೆಂದರಿದು ಅನನ್ಯಭಾವದಿಂದ ಬೇಧವಳಿದು ಬುದ್ಧಿಯಿಂದ ಮಾಡುವ ಭಕ್ತಿಯೇ ಪರಮ ಪದವೆಂದು, ಪರಧನ ಪರಸ್ತ್ರೀ ಪರಲೋಕಂಗಳ ಬಯಕೆಗೆಟ್ಟು, ಜಾತಿ ವರ್ಣಾಶ್ರಮಾಭಿಮಾನಂಗಳಿಲ್ಲದೆ, ಲಿಂಗಾಭಿಮಾನಿಯಾಗಿರ್ದುದೆ ಮಾಹೇಶ್ವರ ಸ್ಥಲವೆಂದು...."[೧೯೪]

**ಕರಸ್ಥಲ ಮಲ್ಲಿಕಾರ್ಜುನೊಡೆಯ :** "ಇಂತು ಪರಮವಿಶ್ವಾಸದಿಂದ ಭಕ್ತನಾಗಿ ಆ ವಿಶ್ವಾಸದೊಳ ಗಣ ಏಕೋನಿಷ್ಠೆಯಿಂ ಬ್ರಹ್ಮಜ್ಞಾನಿಯಪ್ಪ ಭಕ್ತನು ತಾನೇ ಮಹೇಶ್ವರ ನಾದ ಮಾಹೇಶ್ವರಸ್ಥಲ"[೧೯೫]

ಎಂದು ಮಾಹೇಶ್ವರ ಸ್ಥಲ ಕುರಿತು ಹೇಳಿದ್ದಾರೆ. ಹರಿಹರ ಬಸವರಾಜದೇವರ ರಗಳೆಯಲ್ಲಿ ಪರಸ್ತ್ರೀಯನ್ನು ಹೆತ್ತ ತಾಯಿಯಂತೆ ಕಾಣಿರಿ, ಪರರ ಸಂಪತ್ತನ್ನು ಪಾಪವೆಂದು, ವಿಷವೆಂದು ಮುಟ್ಟಲಾರಿರಿ, ನಡೆದು ತಪ್ಪದವರು, ಸುಳ್ಳು ಹೇಳಲಾರದವರು, ಹಿಡಿದ ಕೆಲಸ ಬಿಡದವರು, ಬಿಟ್ಟು ಹಿಡಿಯದವರು, ಮನಸ್ಸಿನಲ್ಲಿ ಒಳಗೊಂದು ಹೊರಗೊಂದು ಇಲ್ಲದವರು, ಅಹಂಕಾರ, ಗರ್ವ ಇಲ್ಲದವರು ಎಂಬಿತ್ಯಾದಿಯಾಗಿ ಬಸವಣ್ಣನಲ್ಲಿರುವ ಮಾಹೇಶ್ವರ ಸ್ಥಲ ಕುರಿತು ಹೇಳಿದ್ದಾನೆ. ಅಂದರೆ ಮಾಹೇಶ್ವರ ಸ್ಥಲಕ್ಕೇರಿದ ಭಕ್ತ ನಿಷ್ಕಪಟಿಯಾಗಿರಬೇಕೆಂಬುದು ಮುಖ್ಯವಾದ ಅಂಶವಾಗಿದೆ.

ಚಾಮರಸ ತನ್ನ ಪ್ರಭುಲಿಂಗಲೀಲೆಯಲ್ಲಿ ಬಸವಣ್ಣ ಪೂಜಾ ನಿರತನಾದ ಸಮಯದಲ್ಲಿ ಅಲ್ಲಮ ಬಂದಿರುವ ವಿಚಾರ ಕೇಳಿದ ಬಸವಣ್ಣ ಅವರನ್ನು ಒಳಗೆ ಬರಲು ಅಪ್ಪಣ್ಣನ ಮೂಲಕ ತಿಳಿಸುತ್ತಾನೆ. ಇದರಿಂದ ಕೋಪಗೊಂಡ ಅಲ್ಲಮನನ್ನು ಶಾಂತಗೊಳಿಸಲು ಬಸವಣ್ಣ "ನಾನು ಜ್ಞಾಪಕ ಶಕ್ತಿಯಿಲ್ಲದ ಹುಚ್ಚ, ನೀನು ಸದಾ ಜ್ಞಾನದ ತಿರುಳು; ತಿಳಿಯುವುದಾದರೆ ನಾನು ವೇಷಧಾರಿ, ನೀನು ಸರ್ವರೂ ತಿಳಿದಂತೆ ಸಹಜ ಸ್ವರೂಪನು, ವಿಚಾರ ಮಾಡಲು ನಾನು ಪಶು, ನೀನು ಪಶುಪತಿ, ನನ್ನ ತಪ್ಪನ್ನು ನೀನೇ ಸರಿಪಡಿಸುವುದು" ಎಂದು ಬಸವಣ್ಣ ಅಲ್ಲಮನ ಪಾದಗಳಿಗೆ ಅಡ್ಡಬೀಳುತ್ತಾನೆಂದು ಕವಿ ಹೇಳುತ್ತಾನೆ. ಇಲ್ಲಿ ಭಕ್ತನಾದವನು ತನ್ನ ತಪ್ಪನ್ನು ತಿದ್ದಿಕೊಂಡು ತಾನು ಸರಿಯಾಗಿರುವುದನ್ನು ಕವಿ ಹೇಳಿರುವುದು ಕಂಡುಬರುತ್ತದೆ. ಇದು ಮಾಹೇಶ್ವರ ಸ್ಥಲದ ಒಂದು ಭಾಗವಾಗಿದೆ.

ಲಕ್ಕಣ್ಣದಂಡೇಶ ತನ್ನ ಶಿವತತ್ವ ಚಿಂತಾಮಣಿ ಕಾವ್ಯದಲ್ಲಿ ಮಾಹೇಶ್ವರ ಸ್ಥಲ ಕುರಿತು ಹೀಗೆ ಹೇಳಿದ್ದಾನೆ. ವ್ರತ, ನಿಯಮ, ಸತ್ಯ, ಧರ್ಮಾಚರಣೆ, ಪರಿಶುದ್ಧತೆ ಉನ್ನತೀಕರಿಸುತ್ತದೆಂಬ ನಿಶ್ಚಯ ಬುದ್ಧಿಯಿಂದ ಲಿಂಗವನ್ನು ನಿಷ್ಠೆಯಿಂದ ಪೂಜಿಸುವ, ವೀರವ್ರತಿಯನ್ನಾಚರಿಸುವಾಗ ಯಾವುದೇ ಆಮಿಷಕ್ಕೆ ಒಳಗಾಗದೇ ಇರುವುದು ಮಾಹೇಶ್ವರ ಸ್ಥಲವಾಗುತ್ತದೆ ಎನ್ನುತ್ತಾನೆ ಕವಿ. ಮಾಹೇಶ್ವರ ಸ್ಥಲಕ್ಕೇರಿದ ಭಕ್ತ ಸರ್ವ ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಳ್ಳಬೇಕೆಂಬುದು ಇಲ್ಲಿಯ ಆಶಯ.

ಮಹಾಲಿಂಗದೇವ ತನ್ನ ಏಕೋತ್ತರಶತಸ್ಥಲ ಕಲ್ಲುಮಠದ ಪ್ರಭುದೇವ ತನ್ನ ಲಿಂಗಲೀಲಾ ವಿಲಾಸ ಚಾರಿತ್ರ, ಕರಸ್ಥಲ ಮಲ್ಲಿಕಾರ್ಜುನೊಡೆಯ ತನ್ನ ಬ್ರಹ್ಮಾದ್ವೈತ ಸಿದ್ಧಾಂತ ಷಟ್ಸ್ಥಲಾಭರಣ ಸಂಕಲನ ಕೃತಿಗಳಲ್ಲಿ ಸಾಧಕ ಭಕ್ತಸ್ಥಲದಲ್ಲಿದ್ದಾಗ ಮಾಡಿದ ಮಾಟ, ಕೂಡಿದ ಕೂಟ ಮರೆತು, ನೈಷ್ಠಿಕಾ ಮುಖದಿಂದ ಲಿಂಗ ಅಂಗ ಒಂದೇ ಎಂದು ತಿಳಿದು ಅನನ್ಯ ಭಾವದಿಂದ ಭಕ್ತಿಯೇ ಪರಮ ಪದವೆಂದು ತಿಳಿದು ಆಚರಿಸಬೇಕು. ಪರರ ಹಣ, ಪರಸ್ತ್ರೀ, ಪರಲೋಕಗಳ ಆಸೆ ಬಿಟ್ಟು ಜಾತಿ ಬೇಧವನ್ನು ಅಳಿಸಿ ಹಾಕಿ ಪರಮ ವಿಶ್ವಾಸದಿಂದ ಭಕ್ತನಾಗಿ ಏಕ ನಿಷ್ಠೆಯಿಂದ ಲಿಂಗಾಭಿಮಾನಿಯಾಗಿ ಇದ್ದು ಆಚರಿಸುವ ಆಚಾರವೇ ಮಾಹೇಶ್ವರ ಸ್ಥಲವಾಗಿದೆ ಎನ್ನುತ್ತಾರೆ. ಇಲ್ಲಿ ಹಿಂದಿನ ತಪ್ಪುಗಳು ಮರು ಕಳಿಸದಂತೆ ಎಚ್ಚವಹಿಸಬೇಕು. ಮತ್ತು ಅನ್ಯ ವಿಷಯಗಳ ಕಡೆ ಗಮನಹರಿಸಬಾರದು ಏಕನಿಷ್ಠೆ ಇರಬೇಕು ಆಗ ಭಕ್ತ ಮಾಹೇಶ್ವರನಾಗುತ್ತಾನೆ.

ಮಾಹೇಶ್ವರ ಸ್ಥಲದಲ್ಲಿ ಭಕ್ತ ಹಿಂದಿನ ತಪ್ಪುಗಳಿಗೆ ಪ್ರಾಯಶ್ಚಿತ್ತ ಮಾಡಿಕೊಂಡು ಅನ್ಯ ವಿಷಯ ಗಳ ಕಡೆ ಮನಸ್ಸು ಹರಿಸದೆ ಏಕನಿಷ್ಠೆಯ ಆಚಾರ ಅನುಸರಿಸಬೇಕು.

### ೩.೩. ಪ್ರಸಾದಿ ಸ್ಥಲ

ದೇವರಿಗೆ ಪೂಜೆಯ ನಂತರ ನೈವೇದ್ಯ ಮಾಡುವ ಹಾಲು, ಹಣ್ಣು, ಆಹಾರ ಪದಾರ್ಥಗಳೆಲ್ಲವನ್ನೂ ಅರ್ಪಣೆಯ ನಂತರ ಪ್ರಸಾದವೆಂದು ಕರೆಯುತ್ತೇವೆ. ಆದರೆ ವೀರಶೈವ ಧರ್ಮದಲ್ಲಿ ತಿನ್ನುವ ಎಲ್ಲಾ ಪದಾರ್ಥಗಳು ಪ್ರಸಾದವಾಗುತ್ತವೆ. ಪ್ರಸಾದದ ಆಚರಣೆಯಲ್ಲಿ ಭಕ್ತನು ಪ್ರಸಾದ ಸ್ವೀಕರಿಸುವ ಅಂಶವಲ್ಲ. ಅವನು ಅರ್ಪಿಸುವ ಅಂಶ. ತಾನು ಅರ್ಪಿಸುವ ವಸ್ತುಗಳ ಬಗೆಗೆ ಅವನಿಗೆ ಆಸೆ ಇರಬಾರದು. ನಾವು ಬೋಗಿಸಬೇಕಾದ ವಸ್ತುಗಳನ್ನೆಲ್ಲ ಪರಶಿವನಿಗೆ ಅರ್ಪಿಸಿದ ನಂತರವೇ ಬೋಗಿಸಬೇಕು.[೧೯] ನಾವು ಯಾವಾಗ ಏನೇ ತಿಂದರೂ, ಕುಡಿದರೂ ಅದು ಶಿವನ ಪ್ರಸಾದವೆಂದು ತಿಳಿದು ಸ್ವೀಕರಿಸಬೇಕು. ತಾನು ಅನುಭವಿಸುವುದೆಲ್ಲವೂ ಶಿವನ ಪ್ರಸಾದವೆಂದು ತಿಳಿದು ನಡೆಯುವವನು ಪ್ರಸಾದಿಯಾಗುತ್ತಾನೆ. ಸಾಧಕನ ಈ ವ್ರತಾಚರಣೆಯೇ ಪ್ರಸಾದಿಸ್ಥಲವಾಗುತ್ತದೆ. ಸಾಧಕನಿಗೆ ಈ ಹಂತ ತಲುಪಲು ತುಂಬಾ ತಾಳ್ಮೆ ಬೇಕಾಗುತ್ತದೆ.

ಬಸವಣ್ಣ ತನ್ನ ಒಂದು ವಚನದಲ್ಲಿ ಪ್ರಸಾದಿ ಸ್ಥಲ ಕುರಿತು ಹೀಗೆ ಹೇಳಿದ್ದಾನೆ.

"ಒಲ್ಲೆನೆಂಬುದು ವೈರಾಗ್ಯ, ಒಲಿವೆನೆಂಬುದು ತಾಯಗುಣ, ಆವ
ಪದಾರ್ಥವಾದರೇನು? ತಾನಿದ್ದೆಡೆಗೆ ಬಂದ ಪದಾರ್ಥವ ಲಿಂಗಾರ್ಪಿತವ
ಮಾಡಿ ಭೋಗಿಸುವುದೇ ಆಚಾರ. ಕೂಡಲಸಂಗಮ ದೇವರ ಒಲಿಸ ಬಂದ
ಪ್ರಸಾದ ಕಾಯವ ಕೆಡಿಸಲಾಗದು"[೯೭]

ಬಸವಣ್ಣನ ಪ್ರಕಾರ ಯಾವ ಪದಾರ್ಥವಾದರೂ ಸರಿಯೇ ಲಿಂಗಾರ್ಪಿತವಾದರೆ ಅದು ಪ್ರಸಾದವಾಗುತ್ತದೆ. ಅದನ್ನು ಶಿವನ ಪ್ರಸಾದವೆಂದು ಸ್ವೀಕರಿಸುವ ಆಚಾರವೇ ಪ್ರಸಾದಿಸ್ಥಲವಾಗಿದೆ. ಹಾಗೆಯೇ ಪ್ರಸಾದಿ ಸ್ಥಲದ ಸ್ವರೂಪ ಕುರಿತು ಮೊಗ್ಗೆಯ ಮಾಯಿದೇವ ತನ್ನ ಷಟ್‌ಸ್ಥಲ ಗದ್ಯದಲ್ಲಿ

"ಶ್ರೀ ಶಿವಾಭಿದಾನ ಲಿಂಗ ಸಾವಧಾನಿ ಸು ಪ್ರಸಾದಿ
ಪಾಶಮೋಚನಾರ್ಪಣ ಕ್ರಿಯಾಭಿಮಾನಿತ ಪ್ರಸಾದಿ
..................................................
ಲಿಂಗಮುಖ ನಿವೇದ್ಯಮಾನ ಶಬ್ದ ಸೇವಕ ಪ್ರಸಾದಿ
ಸಂಗಸ್ಪರ್ಶ ಸುಖ ಸಮರ್ಪಣ ಪ್ರಿಯಕರ? ಪ್ರಸಾದಿ"[೯೮]

ಎಂದು ಹೇಳಿದ್ದಾನೆ.

ಈತನ ಪ್ರಕಾರ ಸಾಧಕ ಪ್ರಸಾದಿ ಸ್ಥಲಕ್ಕೇರಲು ಶಿವನಲ್ಲಿ ನಿಷ್ಠೆ ಲಿಂಗ ಪೂಜಾನಿರತನೂ ಆಗಿದ್ದು, ಅದರಿಂದ ಭವಬಂಧನ ಮುಕ್ತಾ ನಿರತನೂ ಆಗಿದ್ದು, ಲಿಂಗ ಮುಖದಿಂದ ನೈವೇದ್ಯ ಮಾಡಿ ಅದರ ಫಲ ಪಡೆದವನು. ಎಲ್ಲರಲ್ಲೂ ಸಾಮರಸ್ಯ ಹೊಂದುವ ಗುಣ ರೂಪಿಸಿದವನು ಪ್ರಸಾದಿ. ಸಕಲ ಪದಾರ್ಥಗಳನ್ನು ಲಿಂಗಕ್ಕೆ ಅರ್ಪಿಸುವವನು ಪ್ರಸಾದಿ, ಇದುವೇ ಪ್ರಸಾದಿ ಸ್ಥಲ.

ಹರಿಹರಾದಿ ಕವಿಗಳು ತಮ್ಮ ಕಾವ್ಯಗಳಲ್ಲಿ ಪ್ರಸಾದಿಸ್ಥಲ ಕುರಿತು ವಿವೇಚಿಸಿದ್ದಾರೆ.

**ಹರಿಹರ :** "ಶಿವಲಿಂಗ ಮೂರ್ತಿಯಂ ಬೋಳಯಿಸತೊಡಗಿದರು
ಲಿಂಗಪ್ರಸಾದಿಗಳು ಶರಣ ಪ್ರಸಾದಿಗಳು, ಗೀತ ಪ್ರಸಾದಿಗಳು ನೋಟ ಪ್ರಸಾದಿಗಳು
ಸಂಗ ಪ್ರಸಾದಿಗಳು ಶಬ್ದಪ್ರಸಾದಿಗಳು, ಮಾತೇನೊ ಶರಣ ದರುಶನ ಪ್ರಸಾದಿಗಳು
ವೀರ ಪ್ರಸಾದಿಗಳು ಧೀರ ಪ್ರಸಾದಿಗಳು, ಅಚ್ಚ ಪ್ರಸಾದಿಗಳು ನಿಚ್ಚಪ್ರಸಾದಿಗಳು...."[೯೯]

**ಚಾಮರಸ :** "ಬಿಂದು ವಸ್ತುವ ಗುರುಮುಖಾಗ್ನಿಗೆ
ತಂದು ಪಚನಿಸಿ ಜಂಗಮದ ಮುಖ
ದಿಂದ ಲಿಂಗಕೆ ನೀಡಿ ತನ್ಮುಖದಿಂದಲೊಕ್ಕುಳಿದ
ಸಂದ ಸುಧೆಯೆನಿಪಾ ಪ್ರಸಾದವ..."[೧೦೦]

**ಲಕ್ಕಣ್ಣ ದಂಡೇಶ :** "ಹಿಂಗದುಪಬೋಗ ಭೋಗದ ವಿಷಯವಹ ಪದಾ
ರ್ಥಗಳನಹಂಕೃತಿಯ ಬಗೆಯುಳ್ಳ ಸಕಲೇಂದ್ರಿ
ಯಂಗಳಿಂದವಧಾನ ಸಹಿತ ಫಲವಂದದಿಂ ಲಿಂಗಾರ್ಪಿತವನು ಮಾಡಿ
ಕಂಗೊಳಿಪ ವಿಮಲ ಪ್ರಸಾದಮಂ ಕೈಕೊಂಡು
ಮಂಗಳಾತ್ಮಕವಾದುದೇ ಪ್ರಸಾದಿಸ್ಥಲಂ......"[೨೦೧]

**ಮಹಾಲಿಂಗದೇವ :** "ಇಂತು ಮಾಹೇಶ್ವರ ಸ್ಥಲದಲ್ಲಿ ಆಚರಿಸಿ, ಭಕ್ತಕಾಯವೇ ಲಿಂಗಕಾಯವಾಗಿ ಆ ಲಿಂಗ ಕಾಯವೇ ಭಕ್ತಕಾಯನಾಗಿ, ವಿರಳವಿಲ್ಲದೆ ಬೆರೆಸಿದ ಮಹಂತನು, ಮುಂದೆ ಸಾವಧಾನ ಮುಖದಿಂದ ಆಚರಿಸಿ ಬೆರಸುವ ಬೇಧವೆಂತಿರ್ದುದೆಂದಡೆ ಮುಂದೆ ಪ್ರಸಾದಿಸ್ಥಲವಾದುದು"[೨೦೨]

**ಕಲ್ಲುಮಠದ ಪ್ರಭುದೇವ :** ".........ಸರ್ವೇಂದ್ರಿಯ ಸುಖಭೋಗವೆಲ್ಲಾ ಲಿಂಗ ಭೋಗೋಪ ಭೋಗವಾಗಿ, ಆ ಲಿಂಗಭೋಗೋಪಭೋಗವಾಗದ ದ್ರವ್ಯಪದಾರ್ಥಂಗಳೆಲ್ಲಾ ಪ್ರಸಾದ ಸ್ವರೂಪವಾಗೆ, ಆ ಪ್ರಸಾದ ಸ್ವರೂಪವೇ ಪರಶಿವತತ್ತ್ವ ಸ್ವರೂಪು, ಆ ಪರಶಿವತತ್ತ್ವ ಸ್ವರೂಪಮಪ್ಪ ಪ್ರಸಾದಮಂ ಸೇವಿಸುವ ಪ್ರಸಾದಿಯು, ಸಾವಧಾನ ಭಕ್ತಿಯಿಂದ ಲಿಂಗಾರ್ಪಿತವ ಮಾಡಿ, ಪ್ರಸಾದಮಂ ಭೋಗಿಸುತ್ತಿರ್ಪಾತನೇ ಪ್ರಸಾದಿಯೆಂದು ಹೇಳಲಾದುದು"[೨೦೩]

**ಕರಸ್ಥಲ ಮಲ್ಲಿಕಾರ್ಜುನೊಡೆಯ :** "ಇಂತು ಪರಮನಿಷ್ಠೆಯಿಂ ವೀರಮಾಹೇಶ್ವರನಾಗಿ, ಆ ನಿಷ್ಠೆಯೊಳಗಣ ಸಾವಧಾನದಿಂದ ಬ್ರಹ್ಮಜ್ಞಾನಿಯಪ್ಪ ಮಾಹೇಶ್ವರನು ತಾನೇ ಪ್ರಸಾದಿಯಾದ ಪ್ರಸಾದಿಸ್ಥಲ"[೨೦೪]

ಹೀಗೆ ಹರಿಹರಾದಿ ಕವಿ ಸಂಕಲನಕಾರರು ಪ್ರಸಾದಿಸ್ಥಲದ ಸ್ವರೂಪ ವಿಶ್ಲೇಷಿಸಿದ್ದಾರೆ. ಹರಿಹರ ತನ್ನ ಬಸವರಾಜದೇವರ ರಗಳೆಯಲ್ಲಿ ಬಸವಣ್ಣನ ಮಹಾಮನೆಗೆ ಬಂದ ಶರಣರಿಗೆ ಬಸವಣ್ಣ ಲಿಂಗಪೂಜೆ ದಾಸೋಹದ ವ್ಯವಸ್ಥೆ ಮಾಡಿದ. ಲಿಂಗ ಪೂಜೆಯ ನಂತರ ವಿವಿಧ ಭಕ್ಷ್ಯ ಭೋಜ್ಯಗಳನ್ನು ಶರಣರು ಶಿವಲಿಂಗಕ್ಕೆ ನೈವೇದ್ಯ ಮಾಡಿ ಅದನ್ನು ಶಿವಪ್ರಸಾದವೆಂದು ಸ್ವೀಕರಿಸಿದರು. ತಾನು ತಯಾರಿಸಿದ ವಿವಿಧ ಆಹಾರ ಪದಾರ್ಥಗಳನ್ನು ಶಿವಲಿಂಗ ಸ್ವರೂಪಿಗಳಾದ ಶರಣರಿಗೆ ಬಸವಣ್ಣ ಅರ್ಪಿಸಿದ. ಅವನ ಮನೆಗೆ ಬಂದು ಪ್ರಸಾದ ಸ್ವೀಕರಿಸಿದವರಲ್ಲಿ ವೈವಿಧ್ಯಮಯ ಪ್ರಸಾದಿಗಳಿದ್ದರು. ಅವರಲ್ಲಿ ಲಿಂಗಪ್ರಸಾದಿ, ಶರಣ ಪ್ರಸಾದಿ, ಸಂಗ ಪ್ರಸಾದಿ, ಶಬ್ದ, ಗೀತ, ನೋಟ, ವೀರ, ಶಾಂತ, ಅಚ್ಚ, ನಿಚ್ಚ ಮುಂತಾದ ಪ್ರಸಾದಿಗಳಿದ್ದರೆಂದು ಹರಿಹರ ಹೇಳುತ್ತಾನೆ. ಇಲ್ಲಿ ನೆರೆದ ಪ್ರಸಾದಿಗಳೆಲ್ಲರೂ ಲಿಂಗ ಪೂಜಾನಿಷ್ಠರೆಂಬುದು ಗಮನಾರ್ಹ ಅಂಶ.

ಚಾಮರಸ ತನ್ನ ಪ್ರಭುಲಿಂಗಲೀಲೆಯಲ್ಲಿ ಬಿಂದುವೆಂಬ ವಸ್ತುವನ್ನು ಗುರುಮುಖವೆಂಬ ಅಗ್ನಿಯಲ್ಲಿ ಬೇಯಿಸಿ, ಜಂಗಮದ ಮುಖಾಂತರ ಲಿಂಗಕ್ಕೆ ನೀಡಿ, ಜಂಗಮ ಮುಖದಿಂದ ಮಿಕ್ಕ ಅಮೃತವೆನ್ನಿಸಿಕೊಳ್ಳುವ ಪ್ರಸಾದವನ್ನು ಒಮ್ಮನಸ್ಸಿನಿಂದ ಉಂಡು ಪರಮಾನಂದವನ್ನು ಪಡೆದ ಭಕ್ತ ಪ್ರಸಾದಿಯಾಗುತ್ತಾನೆಂದು ಕವಿ ಹೇಳುತ್ತಾನೆ. ಇಲ್ಲಿ ಭಕ್ತ ತಾನು ತಯಾರಿಸಿದ ಪದಾರ್ಥವನ್ನು ಜಂಗಮದ ಮೂಲಕ ಲಿಂಗಕ್ಕೆ ಅರ್ಪಿಸಿ ನಂತರ ಅದನ್ನು ಪ್ರಸಾದವೆಂದು ಸ್ವೀಕರಿಸಿದಾಗ ಅವನು ಪ್ರಸಾದಿಯಾಗುತ್ತಾನೆಂಬ ಭಾವ ಇಲ್ಲಿದೆ.

ಲಕ್ಕಣ್ಣದಂಡೇಶ ತನ್ನ ಶಿವತತ್ವ ಚಿಂತಾಮಣಿ ಕಾವ್ಯದಲ್ಲಿ ಭೋಗೋಪ ಭೋಗ ವಿಷಯದ ಕಡೆಗೆ ಗಮನ ಹರಿಸದೆ ಸಕಲ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡು ನಾನಾ ಬಗೆಯ ಪದಾರ್ಥಗಳನ್ನು ಸಿದ್ಧಗೊಳಿಸಿ ಅವುಗಳನ್ನು ಲಿಂಗಕ್ಕೆ ಅರ್ಪಿಸಿ ಪ್ರಸಾದವೆಂದು ಸ್ವೀಕರಿಸುವ ಭಕ್ತನೇ ಪ್ರಸಾದಿ. ಅವನ ಈ ರೀತಿಯ ಆಚಾರವೇ ಪ್ರಸಾದಿಸ್ಥಲ ಎಂದಿದ್ದಾನೆ. ಇಲ್ಲಿ ಭಕ್ತ ಪ್ರಸಾದಿಯಾಗಲು ಇಂದ್ರಿಯ ನಿಗ್ರಹ ಅತ್ಯಗತ್ಯ.

ಮಹಾಲಿಂಗದೇವ ತನ್ನ ಏಕೋತ್ತರ ಶತಸ್ಥಲ, ಕಲ್ಲುಮಠದ ಪ್ರಭುದೇವ ಲಿಂಗಲೀಲಾ ವಿಲಾಸ ಚಾರಿತ್ರ, ಕರಸ್ಥಲ ಮಲ್ಲಿಕಾರ್ಜುನೊಡೆಯ ತನ್ನ ಬ್ರಹ್ಮಾದ್ವೈತ ಸಿದ್ಧಾಂತ ಷಟ್ಸ್ಥಲಾಭರಣ ಕೃತಿಗಳಲ್ಲಿ ಮಾಹೇಶ್ವರ ಸ್ಥಲದಲ್ಲಿರುವ ಭಕ್ತನ ಕಾಯವೇ ಲಿಂಗಕಾಯ, ಲಿಂಗಕಾಯವೇ ಭಕ್ತಕಾಯವಾಗಿ ಸಕಲ ದ್ರವ್ಯ ಪದಾರ್ಥಗಳನ್ನು ಲಿಂಗಕರ್ಪಿಸಿದಾಗ ಅದು ಪ್ರಸಾದವಾಗುತ್ತದೆ. ಅದನ್ನು ಪರಶಿವನ ಸ್ವರೂಪವೆಂದು ಸಾವಧಾನ ಭಕ್ತಿಯಿಂದ ಸ್ವೀಕರಿಸುವ ಮಾಹೇಶ್ವರ ಪ್ರಸಾದಿಯಾಗುತ್ತಾನೆ. ಅವನು ಅನುಸರಿಸಿದ ಈ ಕ್ರಮವೇ ಪ್ರಸಾದಿ ಸ್ಥಲವಾಗುತ್ತದೆ ಎಂದು ಅಭಿಪ್ರಾಯ ಈ ಕವಿಗಳದ್ದಾಗಿದೆ.

ವ್ರತಾಚಾರದ ಮೂಲಕ ಲಿಂಗಕ್ಕೆ ಅರ್ಪಿಸಿದ ಸಕಲ ಪದಾರ್ಥಗಳು ಪ್ರಸಾದಗಳಾಗುತ್ತವೆ. ಸಾಧಕನು ಪ್ರಸಾದಿಯಾಗಲು ಇಂದ್ರಿಯ ನಿಗ್ರಹ ಅತ್ಯವಶ್ಯಕವಾದದೆಂದು ಹೇಳಬಹುದು.

೩.೪. ಪ್ರಾಣಲಿಂಗಿ ಸ್ಥಲ

ವೀರಶೈವ ಸಾಧಕನ ಪ್ರಾಣವೇ ಲಿಂಗ - ಲಿಂಗವೇ ಪ್ರಾಣ ಎಂಬ ಹಂತ ತಲುಪಿದಾಗ ಅವನು ಪ್ರಾಣಲಿಂಗಿಯಾಗುತ್ತಾನೆ. ಪ್ರಾಣಲಿಂಗಿ ಎಂದರೆ ಇಡೀ ಪ್ರಾಣವೇ ದೇಹ-ಬುದ್ಧಿ-ಇಂದ್ರಿಯಗಳಿಂದೊಡಗೂಡಿದ ವ್ಯಕ್ತಿಯೇ ಲಿಂಗವಾಗಿರುವನು ಎಂದರ್ಥ. ಆತ್ಮನಲ್ಲಿ ತಾನು ಎಂಬ ಭಾವ ಹೋಗಿ ಆ ಸ್ಥಾನದಲ್ಲಿ ಪರಶಿವನು ನೆಲೆಸಿದಾಗ ಆತ್ಮನು ತಾನೇ ಪರಮಾತ್ಮ ಎಂದು ತಿಳಿಯುತ್ತಾನೆ. ಪ್ರಾಣವು ದೇಹದ ಎಲ್ಲೆಡೆಯಲ್ಲಿ ಹೇಗಿದೆಯೋ ಹಾಗೆ ಪರಶಿವನು ಇಡೀ ದೇಹವನ್ನೇ ಆಕ್ರಮಿಸಿಕೊಂಡಿರುತ್ತಾನೆ. ಆಗ ಪ್ರಸಾದಿಯು ಪ್ರಾಣಲಿಂಗಿ ಎನಿಸಿಕೊಳ್ಳುತ್ತಾನೆ.[೨೧೫] ಶಿವಯೋಗ ಸಾಧಕರು ಸಾಕಾರದಿಂದ ನಿರಾಕಾರಕ್ಕೆ,

ವ್ಯಕ್ತದಿಂದ ಅವ್ಯಕ್ತಕ್ಕೆ, ಸುಗುಣದಿಂದ ನಿರ್ಗುಣಕ್ಕೆ ಸಾಗುವ ಒಂದು ಸಿದ್ಧಿ ಪ್ರಾಣಲಿಂಗಿ ಸ್ಥಲವಾಗಿದೆ.

ಅಲ್ಲಮಪ್ರಭು ತನ್ನ ಒಂದು ವಚನದಲ್ಲಿ ಪ್ರಾಣಲಿಂಗಿ ಪರಿಕಲ್ಪನೆ ಕುರಿತು

"ದೇಹದೊಳಗೆ ದೇಗುಲವಿರಲು ಮತ್ತೆ ದೇವಾಲಯವೇಕಯ್ಯಾ?
ಹೇಳಲಿಲ್ಲ, ಕೇಳಲಿಲ್ಲ, ಗುಹೇಶ್ವರ, ನೀನು ಕಲ್ಲಾದಡೆ ನಾನೆಲ್ಲಿಪ್ಪೆನು?"[೨೦೬]

ಎಂದು ಹೇಳಿದ್ದಾರೆ.

ಪ್ರಾಣವೇ ಲಿಂಗ, ಲಿಂಗವೇ ಪ್ರಾಣ ಆಗಿರುವಾಗ ಮತ್ತೊಂದು ದೇವಾಲಯದ ಅಗತ್ಯವಿಲ್ಲ. ಪ್ರಾಣವೇ ದೇವರು ಆಗಿರುವುದರಿಂದ ದೇವಾಲಯದ ಕಲ್ಲು ದೇವರಾಗಬಲ್ಲುದೆ ಎಂಬುದು ಇದರ ಭಾವವಾಗಿದೆ.

ಪ್ರಾಣಲಿಂಗಿಯ ಸ್ವರೂಪವನ್ನು ಮೊಗ್ಗೆಯ ಮಾಯಿದೇವ ತನ್ನ ಷಟ್‌ಸ್ಥಲ ಗದ್ಯದಲ್ಲಿ ಹೀಗೆ ಹೇಳಿದ್ದಾನೆ.

".......ವ್ಯಾಮೋಮ ದೂರಫಲ ಕಾಮ ಸಂಹಾರ ವಿ
ಶ್ರಾಮ ವಿದ್ಯಮಾನ ಪ್ರಾಣಲಿಂಗೀಶ್ವರಂ
ಅಂಗಲಿಂಗೋಭಯಸ್ಥಲ ಪರಿಜ್ಞಾನ ಪಾ
ರಂಗತ ಸುಸಂಗತ ಪ್ರಾಣಲಿಂಗೀಶ್ವರ
ಅಂಗಸ್ಥಲಂ ಜೀವ ಲಿಂಗಮಂ ಶಿವೇತಿ ವಿದ್ಯಾಂಗನಾಲಿಂಗಿತ ಪ್ರಾಣಲಿಂಗೀಶ್ವರಂ...."[೨೦೭]

ಮಾಯಿದೇವ ಹೇಳುವಂತೆ ಸಾಧಕ ಪ್ರಾಣಲಿಂಗಿಯಾಗಲು ವ್ಯಾಮೋಹವನ್ನು ದೂರಸರಿಸಿ ಕಾಮ ಸಂಹಾರ ಮಾಡಿದವನೂ, ಅಂಗ ಲಿಂಗ ಸ್ಥಲಗಳಲ್ಲಿ ಪರಿಜ್ಞಾನ ಪರಿಣತ, ಅಂಗವೇ ಪ್ರಾಣ ಲಿಂಗವೇ ಶಿವ ಎಂಬ ತಿಳಿವಳಿಕೆ ಹೊಂದಿ ಅದರಂತೆ ನಡೆದವನು ಪ್ರಾಣಲಿಂಗಿಯಾಗುತ್ತಾನೆ. ಇಲ್ಲಿ ಪ್ರಾಣಲಿಂಗಿಯಾಗುವ ಸಾಧಕನಿಗೆ ಅಂಗವೇ ಪ್ರಾಣ ಲಿಂಗವೇ ಶಿವ ಎಂಬ ಮನಸ್ಥಿತಿ ಇರಬೇಕು.

ಹರಿಹರಾದಿ ಕವಿಗಳು ತಮ್ಮ ಕಾವ್ಯ, ಸಂಕಲನ ಕೃತಿಗಳಲ್ಲಿ ಪ್ರಾಣಲಿಂಗಸ್ಥಲ ಕುರಿತು ವಿಶ್ಲೇಷಿಸಿದ್ದಾರೆ.

**ಹರಿಹರ** : "ನಡೆವಲ್ಲಿ ನುಡಿವಲ್ಲಿ ಸಂಗ ಶರಣೆಂದೆನುತೆ
ಉಡುವಲ್ಲಿ ಉಂಬಲ್ಲಿ ಸಂಗ ಶರಣೆಂದೆನುತೆ
ಕೊಡುವಲ್ಲಿ ಕೊಂಬಲ್ಲಿ ಸಂಶರಣೆಂದೆನುತೆ..."[೨೦೮]
"ಚನ್ನಮಲ್ಲಯ್ಯನಂ ಚನ್ನಪೀಠದೊಳಿಟ್ಟು
ತನ್ನ ಸುವನಾ ಲಿಂಗದಂಘ್ರಿಯೊಳಗಿರದಿಟ್ಟು

ಅತಿನಿಬಿಡವತಿಸಾಂದ್ರವತಿ ಸುಖಂ ಲಿಂಗದೊಳು...''[೨೦೯]

ಚಾಮರಸ : ''ಅದುನಿಮಿತ್ತದಲಿಷ್ಟಲಿಂಗದ
ಸದಮಲದ ಸೇವಾನುಭವಾನೆ
ಹೃದಯದಲಿ ನೆಲೆಗೊಂಡು ಬಿಡದಳವಟ್ಟು ಬಲಿದಿರಲು
ವಿದಿತವೆನಿಪಾ ಪ್ರಾಣಲಿಂಗದ
ವಿಧಿಯನಱಿವಂಜನವು......''[೨೧೦]

ಲಕ್ಕಣ್ಣದಂಡೇಶ : ''ತಳುಪದೀ ಪ್ರಾಣೇಂದ್ರಿಯಾದಿಯೊಳಹಂ ಮಮತೆ
ಗಳ ವಿಮೋಹಭ್ರಾಂತಿಯಂ ತಿಳಿದು ಮನದಿಂದ
ತೊಲಗ ನೂಂಕುತಲವೆಲ್ಲವನು ನಿಶ್ಚಿಂತದಿಂ ಲಿಂಗದೊಳು ನೆಲೆಗೊಳಿಸುತ
ಪ್ರಾಣಲಿಂಗಂ.....''[೨೧೧]

ಮಹಾಲಿಂಗದೇವ : ''ಇಂತು ಪ್ರಸಾದಿಸ್ಥಲದಲ್ಲಿ ಆಚರಿಸಿ, ಪ್ರಸನ್ನ ಪ್ರಸಾದದಲ್ಲಿ ಸಮರಸ
ವಾಗಿ ಬೆರಸಿದ ಪ್ರಸಾದಿ, ಅನುಭವ ಮುಂತಾಗಿ ಆಚರಿಸಿ ಬೆರಸುವ ಬೇಧ
ವೆಂತಿರ್ದುದೆಂದಡೆ, ಮುಂದೆ ಪ್ರಾಣಲಿಂಗಿಯ ಸ್ಥಲವಾದುದು''[೨೧೨]

ಕಲ್ಲುಮಠದ ಪ್ರಭುದೇವ : ''.....ಆಚಾರಾದಿ ಮಹಾಲಿಂಗಂಗಳ ಮುಖವನಱಿದು
ಸರ್ವೇಂದ್ರಿಯ ಸುಖಭೋಗಂಗಳನೆಲ್ಲಾ ಸಾವಧಾನಭಕ್ತಿಯಿಂದರ್ಪಿಸಿ, ಪ್ರಸಾದ
ಭೋಗೋಪಭೋಗಿಯಾದ ಪ್ರಸಾದಿಯ ತನುವೇ ಗುರು, ಮನವೇ ಲಿಂಗ
ಪ್ರಾಣವೇ ಜಂಗಮ ಸ್ವರೂಪು, ............
......ಎರಡಳಿದು ಅನುಭಾವಭಕ್ತಿ
ಯಿಂದ ಪ್ರಾಣಲಿಂಗಾರ್ಚನೆಯ ಮಾಡುತ್ತಿಪ್ಪುದೇ ಪ್ರಾಣಲಿಂಗಿಯೆಂದು......''[೨೧೩]

ಕರಸ್ಥಲ ಮಲ್ಲಿಕಾರ್ಜುನೊಡೆಯ : ''ಇಂತಹ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಣ
ಸ್ವಭಾವವೇಕದಿಂ ಬ್ರಹ್ಮಜ್ಞಾನಿಯಪ್ಪ ಪ್ರಸಾದಿ ತಾನೆ
ಪ್ರಾಣಲಿಂಗಿಯಾದ ಪ್ರಾಣಲಿಂಗಿಸ್ಥಲ''[೨೧೪]

ಹೀಗೆ ಹರಿಹರಾದಿ ಕವಿಗಳು ಪ್ರಾಣಲಿಂಗಿ ಸ್ಥಲದ ಸ್ವರೂಪ ಕುರಿತು ವಿಶ್ಲೇಷಿಸಿದ್ದಾರೆ. ಹರಿಹರ ತನ್ನ ಬಸವರಾಜ ದೇವರ ರಗಳೆಯಲ್ಲಿ ಪ್ರಾಣಲಿಂಗಿಸ್ಥಲ ಕುರಿತು ಹೀಗೆ ಉಲ್ಲೇಖಿಸಿದ್ದಾನೆ. ನಡೆವಲ್ಲಿ, ನುಡಿವಲ್ಲಿ, ಉಂಬಲ್ಲಿ ಉಡುವಲ್ಲಿ, ಕೊಡುವಲ್ಲಿ ಕೊಂಬಲ್ಲಿ, ತೊಡುವಲ್ಲಿ ಪೊದೆವಲ್ಲಿ, ಸಂಗನೇ ಶರಣೆನ್ನುತ್ತ ಸಂಗ ನಾಮಸ್ಮರಣೆ ಮಾಡುತ್ತಾ ಅಂಗವೆಲ್ಲಾ ಲಿಂಗವಾದವನು ಬಸವಣ್ಣ ಶರಣರೇ ಅವನ ಪ್ರಾಣವಾಗಿದ್ದಾರೆಂದು ಹರಿಹರ ಹೇಳುತ್ತಾನೆ. ಇಲ್ಲಿ ಬಸವಣ್ಣನಿಗೆ ಶರಣರೇ ಪ್ರಾಣ, ಸಂಗನೇ ಲಿಂಗ

ಅವನ ದೇಹವೇ ಲಿಂಗ ಆಗಿರುವುದನ್ನು ಗಮನಿಸಬಹುದು. ಇದೇ ಕವಿ ಮಹಾದೇವಿಯಕ್ಕನ ರಗಳೆಯಲ್ಲಿ ಅಕ್ಕಮಹಾದೇವಿ ಪ್ರಾಣಲಿಂಗಿಯಾದ ಬಗೆಯನ್ನು ಹೇಳುತ್ತಾನೆ. ಗಂಡನನ್ನು ತೊರೆದು ಶ್ರೀಶೈಲಕ್ಕೆ ಹೋದ ಅಕ್ಕಮಹಾದೇವಿ ಕದಳಿ ವನದಲ್ಲಿ ಸದಾ ಚೆನ್ನಮಲ್ಲಿಕಾರ್ಜುನನ ಧ್ಯಾನದಲ್ಲಿ ತಲೀನಳಾಗಿರುತ್ತಾಳೆ. ಕೌಶಿಕನನ್ನು ಭೇಟಿ ಮಾಡಿಸಲು ಮಹಾದೇವಿಯನ್ನು ಶರಣರು ಕರೆಯಲು ಬಂದಾಗ ಮಹಾದೇವಿಯು ಚೆನ್ನಮಲ್ಲಯ್ಯನನ್ನು ಚೆನ್ನಪೀಠದಲ್ಲಿಟ್ಟು ತನ್ನ ಪ್ರಾಣವನ್ನು ಲಿಂಗಪಾದದಲ್ಲಿಟ್ಟು ಲೋಕದ ಪರಿವೆಯಿಲ್ಲದೆ ಲಿಂಗಪ್ರಾಣಿಯಾಗಿ ಧ್ಯಾನಸ್ಥಳಾಗಿ ಕುಳಿತಿದ್ದಳು. ಅವಳನ್ನು ನೋಡುವುದು, ನುಡಿಸುವುದು ಯಾರಿಂದಲೂ ಆಗದ ಮಾತು. ಅದು ಅತಿ ನಿಬಿಡ, ಅತಿಸಾಂದ್ರ, ಅತಿಸುಖವು ಲಿಂಗದಲ್ಲಿ, ಅತಿ ಮಾತ್ರ, ಅತಿಸೂಕ್ಷ್ಮ ಅತಿ ಭರವು ಲಿಂಗದಲ್ಲಿ ಎಂಬಂತೆ ಧ್ಯಾನಾಸಕ್ತಳಾಗಿ ಕುಳಿತಿದ್ದಳು. ಇಲ್ಲಿ ಅಕ್ಕಮಹಾದೇವಿಯ ದೇಹವೇ ಲಿಂಗ, ಲಿಂಗವೇ ಪ್ರಾಣವಾಗಿದೆ ಎಂಬ ಅಂಶ ತಿಳಿದುಬರುತ್ತದೆ.

ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ ಇಷ್ಟಲಿಂಗದ ಪವಿತ್ರವಾದ ಸೇವಾನುಭಾವ ಮನದಲ್ಲಿ ನೆಲಗೊಂಡು, ಬಿಡದೆ ಚೆನ್ನಾಗಿ ಹೊಂದಿಕೊಂಡು, ಬಲಗೊಂಡು ಇರುತ್ತಿರಲು ಪ್ರಖ್ಯಾತ ಆ ಪ್ರಾಣಲಿಂಗವೆಂಬ ಗುಪ್ತಧನವನ್ನು ತಿಳಿಯುವ ಸಾಧಕ ಪ್ರಾಣಲಿಂಗಿಯಾಗುತ್ತಾನೆಂದು ಹೇಳುತ್ತಾನೆ. ಇಲ್ಲಿ ಇಷ್ಟಲಿಂಗಪೂಜೆ, ಧ್ಯಾನ ಇವುಗಳು ಮನದಲ್ಲಿ ಆಳವಾಗಿ ನೆಲೆಗೊಳ್ಳುವಂತೆ ಸಾಧನೆ ಮಾಡುವ ಸಾಧಕ ಪ್ರಾಣಲಿಂಗಿಯಾಗುತ್ತಾನೆ.

ಲಕ್ಕಣ್ಣದಂಡೇಶ ತನ್ನ ಶಿವತತ್ವಚಿಂತಾಮಣಿಯಲ್ಲಿ ಪ್ರಾಣಲಿಂಗಿ ಸ್ಥಲ ಕುರಿತು ಹೀಗೆ ಹೇಳಿದ್ದಾನೆ. ಪ್ರಾಣೇಂದ್ರಿಯಗಳಲ್ಲಿ ಅಡಗಿರುವ ಅಹಂ ಮಮತೆ, ಮೋಹ ಪರವಶವಾದ ಭ್ರಮೆಗಳನ್ನು ಪತ್ತೆಹಚ್ಚಿ ಅವುಗಳನ್ನು ಮನಸ್ಸಿನಿಂದ ತೊಲಗಿಸಿ ನಿಶ್ಚಿಂತೆಯಿಂದ ಮನಸ್ಸಿನಲ್ಲಿ ಲಿಂಗನೆಲೆಗೊಳ್ಳುವಂತೆ ಮನಸ್ಸು ಚಂಚಲಗೊಳ್ಳುವಂತೆ ನಿಗ್ರಹಿಸಿ ಲಿಂಗಾರ್ಚನೆಯಲ್ಲಿ ತಲೀನವಾಗುವುದೇ ಪ್ರಾಣಲಿಂಗ. ಹೀಗೆ ಆಚರಿಸುವುದೇ ಪ್ರಾಣಲಿಂಗಿ ಸ್ಥಲ. ಇಲ್ಲಿ ಸಾಧಕ ಪ್ರಾಣಲಿಂಗಿಯಾಗಲು ಮನಸ್ಸಿನ ಏಕಾಗ್ರತೆ ಅವಶ್ಯಕ.

ಹಾಗೆಯೇ ಮಹಾಲಿಂಗದೇವ ತನ್ನ ಏಕೋತ್ತರ ಶತಸ್ಥಲ, ಕಲ್ಲುಮಠದ ಪ್ರಭುದೇವ ತನ್ನ ಲಿಂಗ ಲೀಲಾ ವಿಲಾಸ ಚಾರಿತ್ರ, ಕರಸ್ಥಲ ಮಲ್ಲಿಕಾರ್ಜುನೊಡೆಯ ತನ್ನ ಬ್ರಹ್ಮಾದ್ವೈತ ಸಿದ್ಧಾಂತ ಷಟ್ಸ್ಥಲಾಭರಣ ಸಂಕಲನ ಗ್ರಂಥಗಳಲ್ಲಿ ಪ್ರಾಣಲಿಂಗಿ ಸ್ಥಲ ಕುರಿತು ವಿಶ್ಲೇಷಿಸಿದ್ದಾರೆ. ಪ್ರಸಾದಿಯು ದ್ಯಾನಾಸಕ್ತ ಅನುಭವದಿಂದ ತ್ರಿವಿಧ ಲಿಂಗಗಳನ್ನು ಮಹಾಲಿಂಗವೆಂದು ಭಾವಿಸಿ ಸರ್ವೇಂದ್ರಿಯ ಸುಖಭೋಗಗಳನ್ನು ಸಾವಧಾನ ಭಕ್ತಿಯಿಂದ ಅರ್ಪಿಸಬೇಕು. ದೇಹವೇ ಗುರು, ಮನವೇ ಲಿಂಗ, ಪ್ರಾಣವೇ ಜಂಗಮವೆಂದರಿತು ಲಿಂಗಾರ್ಚನೆ ಮಾಡಬೇಕು. ಆಗ ಪ್ರಾಣವೇ ಲಿಂಗವಾಗುತ್ತದೆ. ಹೀಗೆ ಸಾವಧಾನ ಅನುಭಾವ ಭಕ್ತಿ ವಿವೇಕದಿಂದ ಪ್ರಾಣಲಿಂಗಾರ್ಚನೆ ಮಾಡುವುದೇ ಪ್ರಾಣಲಿಂಗಿಸ್ಥಲ ಎಂದಿದ್ದಾರೆ.

ಹೀಗೆ ಸಾಧಕ ಪ್ರಾಣಲಿಂಗಿ ಸ್ಥಲವನ್ನೇರಲು ಅವನಿಗೆ ಲಿಂಗಾರ್ಚನೆಯಲ್ಲಿ ತಲೀನತೆ, ಇಂದ್ರಿಯ ನಿಗ್ರಹ, ಸಾವಧಾನ ಅನುಭಾವ ವಿವೇಕ ಇರಬೇಕಾಗುತ್ತದೆಂಬ ಅಂಶ ತಿಳಿದುಬರುತ್ತದೆ.

೩.೫. ಶರಣ ಸ್ಥಲ

ವೀರಶೈವ ಸಾಧಕ ಶರಣನಾಗುವುದೆಂದರೆ ಅವನು ತಪಸ್ವಿಯೇ ಸರಿ. ಅವನು ಸ್ವಸ್ಥಚಿತ್ತ ದೇಹ ಆತ್ಮ ಹೊಂದಿರಬೇಕು. ಸೇವಾ ಮನೋಭಾವ ನಿಷ್ಕಪಟ ಮನಸ್ಸನ್ನು ಹೊಂದಿದ ಸಾಧಕ ಮಾತ್ರ ಶರಣನಾಗುತ್ತಾನೆ. ಶರಣನಿಗೆ ಆಧ್ಯಾತ್ಮಿಕ ಸಿದ್ಧಿ ಮತ್ತು ಅನುಭಾವ ಭಕ್ತಿ ಅವಶ್ಯಕ. ಇವನು ಇಹದ ಬದುಕಿನ ಮೋಹ ಕಳೆದುಕೊಂಡು ನಿತ್ಯಾನಿತ್ಯ ವಿವೇಕವುಳ್ಳವನೂ ಜ್ಞಾನಿಯೂ ಆಗಿರುತ್ತಾನೆ. ಶರಣನು ಆಚರಿಸಿದ್ದೇ ಧರ್ಮ, ನುಡಿದದ್ದೇ ಶಿವತತ್ವ, ತ್ಯಜಿಸಿದ್ದೇ ಅಧರ್ಮ, ಇವನಿಗೆ ತನ್ನದೆಂಬುದು ಏನೂ ಇರುವುದಿಲ್ಲ. ಅವನು ನಿಶ್ಚಿಂತನು, ನಿರಾಮಯನು, ಮತ್ಸರವಿಲ್ಲದ ಮಹಿಮನು, ಸೀಮೆ ಮೀರಿದ ನಿಸ್ಸೀಮನು, ಶರಣ ನ್ಯಾಯನಿಷ್ಠೂರಿ ಅವನು ಯಾರಿಗೂ ಅಂಜುವುದಿಲ್ಲ. ಸತ್ಯ ನುಡಿಯುತ್ತಾನೆ. ಅಧರ್ಮದಂತೆ, ಲೋಕದಿಚ್ಛೆಯಂತೆ ನಡೆಯಲಾರ, ಧರ್ಮ ಮಾರ್ಗದಲ್ಲಿ ನಡೆಯುತ್ತಾನೆ. ಸಮಷ್ಟಿಹಿತಕ್ಕಾಗಿ ಬಾಳುತ್ತಾನೆ.[೨೧] ಇಲ್ಲಿ ಶರಣನೇ ಸತಿಯಾಗಿ ಲಿಂಗವೇ ಪತಿಯಾಗುವ ಅನುಭಾವ ಭಕ್ತಿ ಹೊರಹೊಮ್ಮುತ್ತದೆ. ಶರಣ ಸತಿ, ಲಿಂಗಪತಿ ಎಂಬ ಭಾವ ಮೈದಾಳಿದಾಗ ಶರಣಸ್ಥಲವಾಗುತ್ತದೆ.

ಶರಣನ ಸ್ವರೂಪ ಕುರಿತು ಚೆನ್ನಬಸವಣ್ಣ ತನ್ನ ವಚನದಲ್ಲಿ

> "ಇಷ್ಟಲಿಂಗಕ್ಕೆ ಮಜ್ಜನ, ಪ್ರಾಣಲಿಂಗಕ್ಕೆ ಭೋಜನ, ತೃಪ್ತಿಲಿಂಗ ಮುಖದಲ್ಲಿ
> ಪರಿಣಾಮಿಯಯ್ಯಾ, ಕಾಮಿತ, ಕಲ್ಪಿತ, ಅರ್ಪಿತ, ಭಾವಿತನಲ್ಲ...."[೨೨]

ಎಂದು ಹೇಳಿದ್ದಾನೆ.

ಚೆನ್ನಬಸವಣ್ಣನ ಪ್ರಕಾರ ಶರಣ ಯಾವುದೇ ವಸ್ತು ವಿಷಯಕ್ಕೆ ಕಾಮಿಸುವವನಲ್ಲ, ವಿಷಯ ಕಲ್ಪಿಸಿಕೊಳ್ಳಲಾರ, ಅನ್ಯದೈವಕ್ಕೆ ಅರ್ಪಿಸಿಕೊಳ್ಳಲಾರ, ಯಾವುದನ್ನೂ ಸುಮ್ಮನೆ ಭಾವಿಸಿಕೊಳ್ಳಾರ, ಅವನು ಸದಾ ಲಿಂಗ ಪೂಜಾನಿಷ್ಠನಾಗಿರುತ್ತಾನೆ. ಸರ್ವಾಂಗಪರಿತ್ಯಾಗಿಯಾಗಿರುತ್ತಾನೆ. ಅದಕ್ಕಾಗಿ ಅವನು ಶರಣಪತಿ ಲಿಂಗಪತಿ ಭಾವ ಹೊಂದಿರುತ್ತಾನೆ. ಇವನು ಪರಿಪೂರ್ಣ ಜ್ಞಾನಿಯಾಗಿರುತ್ತಾನೆ.

ಮೊಗ್ಗೆಯ ಮಾಯಿದೇವ ತನ್ನ ಷಟ್‌ಸ್ಥಲ ಗದ್ಯದಲ್ಲಿ ಶರಣಸ್ಥಲ ಕುರಿತು ಹೀಗೆ ಹೇಳಿದ್ದಾನೆ.

> "ಸರ್ವಾನುಗ್ರಹ ನೇತ್ರಂ ಶರಣಂ, ಸರ್ವೇಶೈಕ್ಯ ಕಳತ್ರಂ ಶರಣಂ
> ನಿರ್ಭೀತ ನಿರಾವರಣಂ ಶರಣಂ, ಗರ್ಭೀಕೃತ ಪುರಹರಣಂ ಶರಣಂ
> ಸ್ವಚ್ಛಂದಾಚಾರಪದಂ ಶರಣಂ, ಪರತತ್ವೈಕಾಕಾರಂ ಶರಣಂ"[೨೩]

ಮಾಯಿದೇವನ ಪ್ರಕಾರ ಶರಣನು ಸದಾ ಪರಮಾನಂದ ಹೊಂದಿದವನಾಗಿರುತ್ತಾನೆ. ಸರ್ವರ ಕಷ್ಟಗಳಿಗೆ ಸ್ಪಂದಿಸಿ ಅನುಗ್ರಹಿಸುವವನು, ಲಿಂಗದೇವನಿಗೆ ಸತಿಯಾಗಿ ಎಲ್ಲರೊಳಗೆ ಇರುವವನು. ಯಾವುದಕ್ಕೂ ಸೀಮಿತಗೊಳ್ಳದ ನಿರ್ಭಯದಿಂದ ಇರುವವನೂ; ದೇಹದಲ್ಲಿ ಶಿವನನ್ನು ಹುದುಗಿಸಿಟ್ಟು

ಕೊಂಡವನು, ಸ್ವತಂತ್ರ ವಿಚಾರಧಾರೆ ಹೊಂದಿದ ಶ್ರೇಷ್ಠರು. ಪರಿಪೂರ್ಣ ಜ್ಞಾನ ನೆಲೆಯಾದವನು ಪಾಪಗಳಿಂದ ವಿಮುಕ್ತಗೊಂಡ ದೇಹಹೊಂದಿದವನು ಶರಣ.

ಹರಿಹರಾದಿ ಕವಿಗಳು ತಮ್ಮ ಕಾವ್ಯ, ಸಂಕಲನ ಕೃತಿಗಳಲ್ಲಿ ಶರಣಸ್ಥಲ ಕುರಿತು ವಿಶ್ಲೇಷಿಸಿದ್ದಾರೆ.

**ಹರಿಹರ:** ''ಜಂಗಮ ಸಮಾಧಿ ತನಗೆಂಬಂತೆ ಕಣ್ಮುಚ್ಚಿ
ಲಿಂಗದಂಘ್ರಿಯ ಸೋಂಕನಂಗುಲಿ ಕರಂನೆಚ್ಚಿ
ಉಸುರಲ್ಲಿ ಶರಣಾರ್ಥಿಯೆಂದೆಂದು ಸುಳಿವುತಿರೆ
...................................................
ಚಿದ್ರೂಪದಿಂ ಶಿವನರ್ಚಿಪುದ್ಯೋಗದಿಂ''[೨೦೮]

''ಇಂದೆನ್ನಂ ಹೆಣ್ಣ ಮಾಡದೆಂತು ಪೋದಪಂ ಲಿಂಗಪತಿ ಶರಣಪತಿಯೆಂಬೀ
ಮಾತಂ ದಿಟ ಮಾಡಿ ತೋರ್ಪನೆನುತ್ತಿರಲತ್ತಲು''[೨೦೯]

**ಚಾಮರಸ :** ''ಇಂತು ನಿರಂಹಂಕಾರದಿಂದೋ
ರಂತೆ ಕಾಯ ಮನೋವಿಕಾರದ
ಸಂತತಿಯ ಸೈತಿಟ್ಟು ಪರಿಪಾಕ ಪ್ರಭಾವದಲಿ
ಸಂತಗೊಂಡು ಸಮಸ್ತಭಾವ...''[೨೧೦]

**ಲಕ್ಕಣ್ಣದಂಡೇಶ :** ''ಪರಮಸುಜ್ಞಾನ ಪ್ರಕಾಶಬಲದಿಂ ತಾನೆ
ನಿರುಪಮಿತ ಲಿಂಗವೆಂದಱಿದು ದೇಹೇಂದ್ರಿಯದ....
ನಿರುತ ನಿರ್ಲೇಪವೃತ್ತಿಯೊಳಾಚರಿಪ ಸದಾ
ಚರಣೆಯುಳ್ಳದು ತಾನೆ ಶರಣಸ್ಥಲಾಖ್ಯ......''[೨೧೧]

**ಮಹಾಲಿಂಗದೇವ :** ''ಇಂತು ಪ್ರಾಣಲಿಂಗಿಯ ಸ್ಥಲದಲಾಚರಿಸಿ, ಸರ್ವಾಂಗವು ಲಿಂಗದಲ್ಲಿ
ಲೀಯವಾಗಿ ಬೆರೆಸಿದ ಪ್ರಾಣಲಿಂಗಿ, ಮಹಾಜ್ಞಾನ ಮುಖದಿಂದಲಱಿದು
ಆಚರಿಸಿ ಲಿಂಗದಲ್ಲಿ ಬೆರಸುವ ಭೇದವೆಂತಿರ್ದುದೆಂದಡೆ ಮುಂದೆ ಶರಣಸ್ಥಲವಾದುದು''[೨೨೨]

**ಕಲ್ಲುಮಠದ ಪ್ರಭುದೇವ :** ''.....ಸರ್ವವು ಲಿಂಗಮಯವಾಗಿ.....
.....ಅಂತು ಲಿಂಗದ ಅಭಿನ್ನ
ಚಿಚ್ಛಕ್ತಿ ಸ್ವರೂಪವೆ ಶರಣನಾದ ಕಾರಣ, ಶರಣನೆ ಸತಿ, ಲಿಂಗವೆ ಪತಿಯೆನಿಸಿತ್ತು.
ಆ ಪತಿಯೆನಿಸಿದ ಚಿದ್ ಘನಲಿಂಗಕ್ಕೆಯೂ, ಆ ಸತಿಯೆನಿಸಿದ ಚಿತ್ ಸ್ವರೂಪಾದ

ಶರಣಂಗೆಯೂ ಎಂದೆಂದೂ ವಿಯೋಗವಿಲ್ಲ..... ಶರಣ ತಾನೆಲ್ಲಾ ಲಿಂಗ ವೆಂದು ಆ ಲಿಂಗಾನಂದಸುಖವೆಲ್ಲಾ ತನ್ನದಾಗಿ ಭೋಗಿಸುತ್ತಿಪ್ಪ ಶರಣ...."[೨೨೩]

ಕರಸ್ಥಲ ಮಲ್ಲಿಕಾರ್ಜುನೊಡೆಯ: "ಇಂತು ಸ್ವಾನುಭಾವ ವಿವೇಕದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವ ವಿವೇಕದೊಳಗಣ ಸದಾನಂದದಿಂ ಬ್ರಹ್ಮಜ್ಞಾನಿಯಪ್ಪ ಪ್ರಾಣಲಿಂಗಿ ತಾನೆ ಶರಣನಾದ ಶರಣಸ್ಥಲ"[೨೨೪]

ಹೀಗೆ ಹರಿಹರಾದಿ ಕವಿಗಳು ಶರಣಸ್ಥಲ ಕುರಿತು ವಿಶ್ಲೇಷಿಸಿದ್ದಾರೆ. ಹರಿಹರ ತನ್ನ ಬಸವರಾಜ ದೇವರ ರಗಳೆಯಲ್ಲಿ ಶರಣ ನಿದ್ರೆಯಲ್ಲಿಯೂ ಶಿವಧ್ಯಾನ ಮಾಡುತ್ತಿದ್ದನೆಂಬುದನ್ನು ಹರಿಹರ ಹೇಳುತ್ತಾನೆ. ಒಮ್ಮೆ ಬಸವಣ್ಣ ಜಂಗಮ ಸಮಾಧಿ ತನಗೆಂಬಂತೆ ಕಣ್ಣುಚ್ಚಿದ್ದ. ಅವನ ಉಸಿರು ಶರಣ ಶರಣಾರ್ಥಿ ಎನ್ನುತ್ತಿತ್ತು. ಜೀವವು ಸಂಗನನ್ನು ಶರಣರನ್ನು ಸ್ತುತಿಸುತ್ತಿತ್ತು. ಬಸವನ ಜೀವ ಮತ್ತು ಉಸಿರು ಚಿದ್ರೂಪದಿಂದ ಶಿವನರ್ಚನೆಗೈಯುತ್ತಿತ್ತು. ಇಂಥ ಸಮಯದಲ್ಲಿ ದೂರದ ದೇಶದಿಂದ ಬಸವನ ದರ್ಶನಕ್ಕೆ ಬಂದ ಶರಣರಿಗೆ ಪಡಿಯರ ಬಸವ ನಿದ್ರೆಯಲ್ಲಿರುವನು ಅವನ ದರುಶನಕ್ಕೆ ಈಗ ಸಮಯವಿಲ್ಲ ಎಂದು ಹೇಳಿದಾಗ ಆ ಶರಣರು ಹಿಂತಿರುಗಿ ಹೋದಾಗ ಅವರ ಜೊತೆ ಬಸವನ ಜೀವವೂ ಹೊರಟು ಹೋಯಿತು. ಆ ಶರಣರನ್ನು ಹುಡುಕಿ ಕರೆತಂದಾಗ ಬಸವನ ಜೀವ ಮರಳಿ ಬಂದಿತು.

ಮತ್ತೊಂದು ಸಂದರ್ಭದಲ್ಲಿ ವಿಟವೇಷಧಾರಿ ಸಂಗಮನ ಸೇವೆಗೆ ಸತಿ ಮಾಯಿದೇವಿಯನ್ನು ಒಪ್ಪಿಸಬೇಕಾದ ಸಂದರ್ಭದಲ್ಲಿ ಮಾಯಿದೇವಿ ಒಪ್ಪದಿದ್ದರೆ ತಾನೇ ಹೆಣ್ಣಾಗಿ ಸಂಗಮನ ಸೇವೆ ಮಾಡುತ್ತೇನೆಂದು ಬಸವಣ್ಣ ನಿಶ್ಚಯಿಸಿಕೊಳ್ಳುತ್ತಾನೆ ಎಂದು ಹರಿಹರ ಹೇಳುತ್ತಾನೆ. ಅಂದರೆ ಶರಣಸತಿ ಲಿಂಗ ಪತಿ ಎಂಬ ಭಾವವನ್ನು ಮಹಾಶರಣನಾದ ಬಸವಣ್ಣ ತಾಳಿರುವುದನ್ನು ಕಾಣಬಹುದು. ಇಲ್ಲಿ ಶರಣನಿಗೆ ಸದಾ ಲಿಂಗದೇವನ ಸ್ಮರಣೆ ಅಗತ್ಯ ಎಂಬ ಅಂಶ ತಿಳಿದುಬರುತ್ತದೆ.

ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ ಅಕ್ಕಮಹಾದೇವಿ ನಿರಹಂಕಾರದಿಂದ ಒಂದೇ ಸಮನಾಗಿ ದೇಹ ಮನಸ್ಸುಗಳ ವಿಕಾರ ಪರಂಪರೆಯನ್ನು ನೈಪುಣ್ಯ ಪ್ರಭಾವದಿಂದ ಸರಿಗೊಳಸಿ, ಶಾಂತಳಾಗಿ, ಸಮಸ್ತ ಭಾವಭ್ರಾಂತಿಯನ್ನು ನಾಶಗೊಳಿಸಿ ಒಮ್ಮನವನ್ನು ಹೊಂದಿ ಸದಾ ಅತಿಶಯವಾಗಿ ಶೋಭಿಸುತ್ತಿದ್ದಳು ಎಂದು ಕವಿ ಹೇಳುತ್ತಾನೆ. ಇಲ್ಲಿ ಶರಣ ಸ್ಥಿತಿ ತಲುಪಿದ ಸಾಧಕ ನಿರಹಂಕಾರ ಭಾವ, ನಿಭ್ರಾಂತಿಯಿಂದಿರುವಂತೆ ಅಕ್ಕಮಹಾದೇವಿ ಇದ್ದಳು ಅವಳು ತಲುಪಿದ್ದು ಶರಣಸ್ಥಲ ಎಂದು ತಿಳಿಯಬೇಕು.

ಲಕ್ಕಣ್ಣದಂಡೇಶ ತನ್ನ ಶಿವತತ್ವ ಚಿಂತಾಮಣಿಯಲ್ಲಿ ತಾನು ಸಂಪಾದಿಸಿದ ಮಹೋನ್ನತ ಜ್ಞಾನಜ್ಯೋತಿಯ ಬಲದಿಂದ ತಾನೇ ಉಪಮಾತೀತ ಲಿಂಗವೆಂದು ತಿಳಿದು ದೇಹದ ಇಂದ್ರಿಯ ವಿಚಾರ ರೂಪಗಳನ್ನು ನಾಶ ಮಾಡುವ ಮಾರ್ಗೋಪಾಯ ಕಂಡುಕೊಂಡ ಸಾಕಾರ ಮೂರ್ತಿ. ಇಹದ ಬದುಕಿನ

ಸಂಬಂಧ ಕಳೆದುಕೊಂಡು ನಿರ್ವಂಚನೆಯ ಮನಸ್ಸಿನಿಂದ ಸದಾಚಾರ ತೊಡಗಿದ ಶರಣನ ಈ ಸ್ಥಿತಿ ಶರಣಸ್ಥಲವಾಗಿದೆಂದು ಕವಿ ಹೇಳುತ್ತಾನೆ. ಇಲ್ಲಿ ಶರಣನಿಗೆ ಇಂದ್ರಿಯ ನಿಗ್ರಹ ಅಗತ್ಯವಾದುದು.

ಮಹಾಲಿಂಗದೇವ, ಕಲ್ಲುಮಠದಪ್ರಭುದೇವ, ಕರಸ್ಥಲಮಲ್ಲಿಕಾರ್ಜುನೊಡೆಯ ತಮ್ಮ ಸಂಕಲನ ಕೃತಿಗಳಲ್ಲಿ ಸರ್ವಾಂಗವನ್ನು ಲಿಂಗದಲ್ಲಿ ಲೀನಗೊಳಿಸಿದವನೂ, ಲಿಂಗದ ಅಭಿನ್ನಚಿಚ್ಛಕ್ತಿ ಸ್ವರೂಪ ಶರಣ. ಅವನು ಮಹಾಜ್ಞಾನಿಯಾಗಿದ್ದು, ಶರಣಸತಿ-ಲಿಂಗಪತಿ ಎಂಬ ಭಾವಹೊಂದಿ ಸ್ವಾನುಭಾವ ವಿವೇಕದಿಂದ ಸದಾನಂದದಿಂದ ಆಚರಿಸುವ ಆಚಾರವೇ ಶರಣಸ್ಥಲವಾಗಿದೆ ಎನ್ನುತ್ತಾರೆ. ಇಲ್ಲಿ ಶರಣನೇಸತಿ ಲಿಂಗವೇ ಪತಿ ಎಂಬ ಭಾವ ಹೊಂದಿದ ಸಾಧಕ ಶರಣನಾಗುತ್ತಾನೆ ಎಂಬ ಅಭಿಪ್ರಾಯ ವ್ಯಕ್ತವಾಗಿದೆ.

ಒಟ್ಟಾರೆ ಹೇಳುವುದಾದರೆ ವ್ಯಕ್ತಿ(ಸಾಧಕ) ಲಿಂಗಧ್ಯಾನಿಯಾಗಿದ್ದು ಸರ್ವಸ್ವವನ್ನೂ ಲಿಂಗಕ್ಕೆ ಅರ್ಪಿಸುವ, ಇಹ ಬಂಧನದಿಂದ ಮುಕ್ತಿ ಹೊಂದಿದ ವ್ಯಕ್ತಿ ಶರಣನಾಗುತ್ತಾನೆ. ಅವನಲ್ಲಿ ಶರಣನೇ ಸತಿ, ಲಿಂಗವೇ ಪತಿ ಎಂಬ ಭಾವ ಇರಬೇಕಾದದ್ದು ಅತ್ಯವಶ್ಯಕವಾಗಿದೆ.

### ೩.೬. ಐಕ್ಯಸ್ಥಲ

ವೀರಶೈವ ಸಾಧಕನ ಆತ್ಮವು ಪರಮಾತ್ಮನಲ್ಲಿ ಅಥವಾ ಲಿಂಗದಲ್ಲಿ ಲೀನವಾಗುವ ಪ್ರಕ್ರಿಯಿಯೇ ಐಕ್ಯ. ಐಕ್ಯವೆಂದರೆ ಪರಮಾತ್ಮನಲ್ಲಿ ಒಂದಾಗುವುದು ಎಂದರ್ಥ. ಜ್ಞೇಯ, ಜ್ಞಾನ, ಜ್ಞಾತೃ ಈ ಮೂರೂ ಒಂದೇ ಆಗುವುದು ಐಕ್ಯ ಎನಿಸುತ್ತದೆ. ಇದನ್ನು ಹೀಗೂ ಅರ್ಥೈಸಬಹುದು. ಲಿಂಗದಲ್ಲಿ ಬೆರೆತು ಲಿಂಗ ಸ್ವರೂಪನಾಗುವುದಕ್ಕೆ ಐಕ್ಯ ಹೊಂದುವುದು ಎನ್ನುತ್ತಾರೆ. ಶಿವಾಂಶ ಸಂಭೂತನಾದ ಸಾಧಕನು ಷಟ್‌ಸ್ಥಲ ವಿಧಾನವನ್ನು ಅನುಸರಿಸಿ ತನ್ನ ಸಾಧನೆಯಲ್ಲಿ ಸಿದ್ಧಿ ಪಡೆದು ಕೊನೆಗೆ ಶಿವನಲ್ಲಿ ಐಕ್ಯನಾಗುತ್ತಾನೆ. ಪುನಃ ಶಿವನೇ ತಾನಾಗುತ್ತಾನೆ. ಶರಣನು ಆತ್ಮಾಂಗದಲ್ಲಿ ನಿಂತ ಚಿತ್ ಶಕ್ತಿಯುತವಾದ ಮಹಾಲಿಂಗವನ್ನು ಭಕ್ತಿಯಿಂದ ಆರಾಧಿಸಿ ಸದ್ಭಾವ ಹಸ್ತದಿಂದ ತೃಪ್ತ ಪದಾರ್ಥವನ್ನು ಮನೋಮುಖದಲ್ಲಿ ಆ ಲಿಂಗಕ್ಕೆ ಅರ್ಪಿಸಿ ಐಕ್ಯಸ್ಥಲ ತಲುಪುವನು. ಅಂಗಲಿಂಗವೆಂಬ ಭೇದವಳಿದು ಅಂಗವು ಲಿಂಗದಲ್ಲಿ ಸಾಮರಸ್ಯವನ್ನು ಹೊಂದುತ್ತದೆ. ಆಗ ಶರಣನ ತನು, ಮನ, ಭಾವ, ಜ್ಞಾನ ಇವು ಮಹಾಲಿಂಗದಲ್ಲಿ ಲೀನವಾಗುತ್ತವೆ.[೨೨೫] ಇಲ್ಲಿ ಶರಣ ಸಂಪೂರ್ಣ ಸರ್ವಾಂಗ ಪರಿತ್ಯಾಗಿಯಾಗಿ ಏಕನಿಷ್ಠಾ ಭಾವ ಹೊಂದಿ ಶಿವ ಸ್ವರೂಪನಾಗಿ ಲಿಂಗದಲ್ಲಿ ಬೆರೆಯುತ್ತಾನೆ. ಇದನ್ನೇ ಅನುಭಾವಿಗಳು ಐಕ್ಯಸ್ಥಲವೆಂದು ಕರೆಯುತ್ತಾರೆ.

ಅಲ್ಲಮಪ್ರಭು ಐಕ್ಯಸ್ಥಲದ ಸ್ವರೂಪ ಕುರಿತು ತನ್ನ ಒಂದು ವಚನದಲ್ಲಿ

"ಬೆಳಗು ಕತ್ತಲೆಯ ನುಂಗಿ, ಒಳಗೆ ನಾನೊಬ್ಬನೆಯಾದೆ
ಕಾಂಬ ಕತ್ತಲೆಯ ಕಳೆದುಳಿದು, ನಿಮಗಾನು ಗುಹೆಯಾದೆ ಗುಹೇಶ್ವರಾ"[೨೨೬]

ಎಂದು ಹೇಳಿದ್ದಾರೆ. ಅಲ್ಲಮ ಹೇಳುವಂತೆ ಬೆಳಕು ಜ್ಞಾನ ಪ್ರಕಾಶವಾಗಲು ಅಜ್ಞಾನವಳಿದು, ಅಂತರಂಗದಲ್ಲಿ ತನ್ನ ನೋಡಿ ತಾನೆ ಶಿವನೆಂದು ಕಂಡು, ಶಿವೋಹಂ ಎನುತ ಚಿದಹಂಭಾವನೆ ಮರೆಯಾಗಿ, ಆ ಚಿದಹಂಭಾವನೆಯನ್ನು ಅಳಿಸಿ, ನಿರಹಂಭಾವನೆಯ ಮೂಲಕ ಭಕ್ತಿಯೋಗದಿಂದ ಶರಣ ಲಿಂಗದಲ್ಲಿ ಲೀನವಾದ ಇದೇ ಐಕ್ಯಸ್ಥಲ. ಇಲ್ಲಿ ಶರಣ ಐಕ್ಯಸ್ಥಲವೇರಲು ಜ್ಞಾನ ಮತ್ತು ಭಕ್ತಿಯೋಗ ಅವಶ್ಯಕ.

ಮೊಗ್ಗೆಯ ಮಾಯಿದೇವ ತನ್ನ ಷಟ್‌ಸ್ಥಲ ಗದ್ಯದಲ್ಲಿ ಐಕ್ಯಸ್ಥಲ ಕುರಿತು

"ಸುಮದ್ಭಾವತರಂ ಲಿಂಗೈಕ್ಯಂ ಸಮರಸರೂಪಧರಂ ಲಿಂಗೈಕ್ಯಂ
ಪರತರವಸ್ತುನಿಜಂ ಲಿಂಗೈಕ್ಯಂ ಪರಿಪೂರ್ಣ ನಿರಂಜನ ಲಿಂಗೈಕ್ಯಂ
...................................................................
ನಿಃಶೇಷಂ ನಿಷ್ಕಲ ಲಿಂಗೈಕ್ಯಂ ನಿಶ್ಯಬ್ದ ನಿಃಕಲ ಲಿಂಗೈಕ್ಯಂ
ಬಹಿರಂತರ ಶೂನ್ಯಂ ಲಿಂಗೈಕ್ಯಂ ಇಹಪರಲೋಕಾನ್ಯಂ ಲಿಂಗೈಕ್ಯಂ"[೨೨]

ಎಂದು ಹೇಳಿದ್ದಾನೆ. ಮಾಯಿದೇವನ ಪ್ರಕಾರ ಶರಣ ಇಹದ ಬದುಕಿನ ಬಯಕೆ ತೊರೆದ, ಸಮರಸದಿಂದ ಕೂಡಿದ ಸಹಜ ಸ್ವಭಾವ ಗುಣ ಹೊಂದಿದ, ಮೋಕ್ಷ ಸಾಧನೆಗೈದ, ಪರಿಪೂರ್ಣವಾಗಿ ಶಿವನಲ್ಲಿ ಒಂದಾದ ವಿರಕ್ತ, ದೋಷ ರಹಿತನೂ, ಚಂಚಲತೆ ಇಲ್ಲದವನೂ, ಮೌನತಾಳಿದ, ನಿರ್ಗುಣನಾದ, ಅಂತರಂಗ ಬಹಿರಂಗದಲ್ಲಿ ಬಯಲಾದವನು, ಈ ಲೋಕ ಮತ್ತು ಪರಲೋಕದಲ್ಲಿ ಮನುಷ್ಯನಾಗಿಯೇ ಉಳಿದ ವಿರಕ್ತ ಇಹಲೋಕದಿಂದ ಬಯಲಾದುದೇ ಐಕ್ಯ, ಅವನು (ಸಾಧಕ) ಭಾವಾಭಿವ್ಯಕ್ತಿಯ ಮೂಲಕ ಸಾಧನೆಗೈದು ಐಕ್ಯ ಸ್ಥಿತಿ ತಲುಪುವುದೇ ಐಕ್ಯಸ್ಥಲ ಎಂದಿದ್ದಾನೆ. ಶರಣ ಐಕ್ಯಸ್ಥಲ ತಲುಪಲು ಬಹಳ ಶ್ರಮ ಸಾಧನೆ ಅಗತ್ಯವಾಗಿದೆ.

ಹರಿಹರಾದಿ ಕವಿಗಳು ಐಕ್ಯಸ್ಥಲ ಕುರಿತು ತಮ್ಮ ಕಾವ್ಯ, ಸಂಕಲನ ಗ್ರಂಥಗಳಲ್ಲಿ ಹೀಗೆ ವಿಶ್ಲೇಷಿಸಿದ್ದಾರೆ.

**ಹರಿಹರ :** "ಸಾಕಾರವಲ್ಲದ ನಿರಾಕಾರವೆಡೆಗೊಂ(ಡಿನ್ನು)
ತೆರಪುಗೊಡು ತಂದೆ ಬಂದಿಹೆನು ಬಸವನು ನೊಂದು
.............................................
ನೋಡುತಿರೆ ಭಕ್ತರೆಲ್ಲರ ಮುಂದೆ ಬಸವಣ್ಣ
ಗಾಢದಿಂದ ಶಿವನೊಳಗೆ ಬೆರೆದು ತಾ ಬಯಲಾದ"[೨೩]

**ಚಾಮರಸ :** "ಮರಣವಿಲ್ಲದ ಜನನವಿಲ್ಲದ
ಕರಣವಿಲ್ಲದ ಕರ್ಮವಿಲ್ಲದ
ಯಿಹಪರಂಗಳೊಳೊಡಲ ಬಿಚ್ಚಿಯ ಹೊಜೆಗಳನು ಹೊಜಿದ

ನಿರುಪಮದ ನಿಶ್ಚಿಂತ ನಿಶ್ಚಲ''[೨೯]

ಲಕ್ಕಣ್ಣದಂಡೇಶ : ''ಪುದಿದ ಷಡ್ವಿಧ ಭಕ್ತಿಯಿಂ ಕೂಡಿ ಕೊಂಡಿಪ್ಪ
ವಿದಿತ ಮಾದಿಯೊಳೆಯಾಂ ನೀನೆಂಬ ಶಬ್ದಭೇ
ದದ ಮನಃ ಪ್ರಾಣದೇಹೇಂದ್ರಿಯಾದಿಗಳೆನ್ನೊ
ಉದಿಸವೆಂದಱುದ ಸಮರಸವೈಕ್ಯವೆಂದವನ.....''[೩೦]

ಮಹಾಲಿಂಗದೇವ : ''ಇಂತು ಶರಣ ಸ್ಥಲದಲ್ಲಿ ಮಹಾಜ್ಞಾನವಿವೇಕದಿಂ ಸರ್ವಸಂಶಯಮಂ ನಿವೃತ್ತಿ ಮಾಡಿ, ನಿಜವನಱಿದು ಪರಮಾನಂದ ಸುಖಿಯಾದ ಶರಣನು, ತಱಿವಱತು ಮಱಹು ನಷ್ಟವಾಗಿ, ಮಹಾಲಿಂಗದಲ್ಲಿ ಐಕ್ಯವಾದ ಬೇಧವೆಂತಿರ್ದುದೆಂದಡೆ, ಮುಂದೆ ಐಕ್ಯಸ್ಥಲವಾದುದು''[೩೧]

ಕಲ್ಲುಮಠದ ಪ್ರಭುದೇವ : ''ಶರಣನು ಮಹಾಘನಲಿಂಗ ತಾನೆಯಾಗಿರ್ದ ಬಳಿಕ ಬಯಸುವ ಅಱಿವಿನ ಅಱಿಕೆ ತನ್ನ ನಿಜದಲ್ಲಿ ಅಡಗಿ ನಿಂದು ಲಿಂಗವೆಯಾಗಿರ್ದುದೇ ಸಮರಸಭಕ್ತಿ. ಆ ಸಮರಸ ಭಕ್ತಿಯೆಂಬುದೀಗ ಲಿಂಗೈಕ್ಯ, ಅಂತು ಲಿಂಗೈಕ್ಯ ಸ್ಥಲವೆಂದು ಹೇಳಲಾದುದು''[೩೨]

ಕರಸ್ಥಲ ಮಲ್ಲಿಕಾರ್ಜುನೊಡೆಯ : ''ಇಂತು ಸದಾನಂದದಿಂ ಶರಣನಾಗಿ, ಆ ಸದಾನಂದದೊಳಗಣ ಸಮರಸ ಸುಖಭಾವದಿಂದ ಬ್ರಹ್ಮಜ್ಞಾನಿಯಪ್ಪ ಶರಣನು ತಾನೇ ಐಕ್ಯನಾದ ಐಕ್ಯಸ್ಥಲ''[೩೩]

ಹೀಗೆ ಹರಿಹರಾದಿ ಕವಿಗಳು ಐಕ್ಯಸ್ಥಲದ ಸ್ವರೂಪ ಕುರಿತು ತಮ್ಮ ಕಾವ್ಯ, ಸಂಕಲನ ಗ್ರಂಥಗಳಲ್ಲಿ ವಿಶ್ಲೇಷಿಸಿದ್ದಾರೆ. ಹರಿಹರ ತನ್ನ ಬಸವರಾಜದೇವರ ರಗಳೆಯಲ್ಲಿ ಬಸವಣ್ಣ ಐಕ್ಯಸ್ಥಲ ತಲುಪುವ ರೀತಿಯನ್ನು ಕುರಿತು ಹೇಳಿದ್ದಾನೆ. ಬಸವಣ್ಣ ಇಹಲೋಕದ ಬದುಕು ಸಾಕೆಂದು ಸಂಗಮನಾಥನ ಎದುರಿಗೆ ಬಂದು ''ದೇವಾ ನನ್ನೊಡೆಯ ಸಾಕಾರವಲ್ಲದ ನಿರಾಕಾರವು ಎಡೆಗೊಂಡು ತರಹುಗುಡು ತಂದೆ, ಬಂದಿರುವೆನೊಂದು, ತಂದೆ ಕೂಡಲಸಂಗ ಭಕ್ತಾಂಗ'' ಎಂದು ಬೇಡಿಕೊಂಡ, ಸಂಗಮನಾಥ ತನ್ನಲ್ಲೇ ತರಹ ಕೊಟ್ಟು, ಬಸವಣ್ಣನನ್ನು ಅಪ್ಪಿಕೊಂಡಾಗ ಅವನು ಶಿವನಲ್ಲಿ ಬೆರೆತು ಬಯಲಾದ ಎಂದು ಹರಿಹರ ಹೇಳುತ್ತಾನೆ. ಇಲ್ಲಿ ಬಸವಣ್ಣ ಸಮಾಜ ಸೇವೆ, ಶರಣರ ಸೇವೆ ಮಾಡುತ್ತಾ, ಸಾಕಾರದಿಂದ ನಿರಾಕಾರಕ್ಕೆ ತಿರುಗಿ ಸಂಗಮನಾಥನಲ್ಲಿ ಬಯಲಾದ, ಅಂದರೆ ಐಕ್ಯಸ್ಥಲ ತಲುಪಿದ ಎಂದರ್ಥ.

ಚಾಮರಸ ತನ್ನ ಪ್ರಭುಲಿಂಗಲೀಲೆ ಕಾವ್ಯದಲ್ಲಿ ಅಲ್ಲಮ ಬಸವಣ್ಣನಿಗೆ ಸಾವಿಲ್ಲದ, ಹುಟ್ಟಿಲ್ಲದ, ಇಂದ್ರಿಯಗಳಿಲ್ಲದ, ಕರ್ಮವಿಲ್ಲದ, ಇಹಪರಗಳಲ್ಲಿ ದೇಹದ ಬಟ್ಟೆಯ ಹೊರೆಗಳನ್ನು ಹೊರದ, ಹೋಲಿಕೆಯಿಲ್ಲದ ಚಿಂತೆಯಿಲ್ಲದ, ಚಾಂಚಲ್ಯವಿಲ್ಲದ, ಪರಮನಿತ್ಯಾನಂದ ಪದವಿಯನ್ನು ಅನುಗ್ರಹಿಸಿದ ಎಂದು ಕವಿ ಹೇಳುತ್ತಾನೆ. ಇಲ್ಲಿ ಸಾಧಕ ಐಕ್ಯಸ್ಥಲ ತಲುಪುವ ಮಾರ್ಗಸೂಚಿಸಲಾಗಿದೆ.

ಲಕ್ಕಣ್ಣ ದಂಡೇಶ ತನ್ನ ಶಿವತತ್ವ ಚಿಂತಾಮಣಿ ಕಾವ್ಯದಲ್ಲಿ ಷಡ್ವಿಧ ಭಕ್ತಿಯಿಂದ ಕೂಡಿಕೊಂಡು ಸಮಗ್ರ ಷಡ್ವಿಧ ಅಂಗಾಂಗಗಳಲ್ಲಿ ಆಚರಿಸಿ ಲಕ್ಷಣ ಭಾವ ಸಂಸ್ಥಿತಿಯನ್ನು ಅರಿತು, ನಾನು ನೀನೆಂಬ ಭೇದವನ್ನು ಮನಸ್ಸಿನಿಂದ ಕಿತ್ತು ಹಾಕಿ ದೇಹ ಮನಸ್ಸು ಇಂದ್ರಿಯ ವಿಷಯಾಸಕ್ತಿಯಿಂದ ನಿರಾಕಾರನಾಗಿ ಸಮರಸ ಭಾವದಲ್ಲಿ ಶರಣ ಐಕ್ಯವಾಗುತ್ತಾನೆಂದು ಕವಿ ಹೇಳುತ್ತಾನೆ. ಶರಣ ಐಕ್ಯ ಸ್ಥಿತಿ ತಲುಪುವುದೇ ಐಕ್ಯಸ್ಥಲ.

ಮಹಾಲಿಂಗದೇವ, ಕಲ್ಲುಮಠದ ಪ್ರಭುದೇವ, ಕರಸ್ಥಲ ಮಲ್ಲಿಕಾರ್ಜುನೊಡೆಯ ಇವರು ತಮ್ಮ ಸಂಕಲನಗ್ರಂಥಗಳಲ್ಲಿ ಸಾಧಕನು ಶರಣಸ್ಥಲದಲ್ಲಿದ್ದಾಗ, ಇಹದ ಬದುಕಿನಿಂದ ವಿಮುಖನಾಗಿ ಜ್ಞಾನ ಸಂಪಾದಿಸಿ ಪರಮಾನಂದ ಅನುಭವಿಸಿ, ಅರಿವು ಮರೆವು ಕಳೆದು ನಿಜದಲ್ಲಿ ಅಡಗಿ ಲಿಂಗವೇ ತಾನಾಗಿ ಸಮರಸ ಭಕ್ತಿ ಹೊಂದುವುದೇ ಐಕ್ಯ. ಇದನ್ನೇ ಐಕ್ಯಸ್ಥಲವೆಂದು ಈ ಸಂಕಲನಕಾರರು ಕರೆದಿದ್ದಾರೆ. ಇಲ್ಲಿ ಲಿಂಗದಲ್ಲಿ ಲೀನವಾಗುವ ಸಮರಸ ಭಕ್ತಿ ಮುಖ್ಯವಾಗಿರಬೇಕು.

ಒಟ್ಟಾರೆಯಾಗಿ ಹೇಳುವುದಾದರೆ ಐಕ್ಯವೆಂದರೆ ಶಿವನಲ್ಲಿ ಬೆರೆತು ಬಯಲಾಗುವುದು ಎಂದರ್ಥ. ಸಾಧಕನಿಗೆ ಲಿಂಗದಲ್ಲಿ ಲೀನವಾಗಲು ಸಮರಸ ಶಕ್ತಿ ಬೇಕೇ ಬೇಕು. ಈ ಸಮರಸ ಭಕ್ತಿ ಒಡಮೂಡಲು ಸಾಧಕನಿಗೆ ಇಹದ ಬದುಕಿನಿಂದ ಮುಕ್ತಿ ಹೊಂದುವ ಮನೋಭಾವ. ಈ ಮನೋಭಾವ ಬರಲು ಪರಮಜ್ಞಾನ ಮುಖ್ಯ ಎಂಬ ಅಂಶ ತಿಳಿದುಬರುತ್ತದೆ. ಐಕ್ಯಸ್ಥಲ ತಲುಪಿದ ವ್ಯಕ್ತಿ ಶಿವನಲ್ಲಿ ಬಯಲಾಗುತ್ತಾನೆ. ಆತನಿಗೆ ಹುಟ್ಟು ಸಾವುಗಳಿಲ್ಲ.

ಹೀಗೆ ಷಟ್‌ಸ್ಥಲ ಮಾರ್ಗವು ಭಕ್ತನಿಂದ ಆರಂಭಗೊಂಡು ಐಕ್ಯನಲ್ಲಿ ಕೊನೆಗೊಳ್ಳುತ್ತದೆ. ಈ ೬ ಹಂತಗಳನ್ನು ತಲುಪಲು ವೀರಶೈವ ಸಾಧಕ ನಾನಾ ಸಾಧನೆ ಸಿದ್ಧಿ ಆಚಾರ ಯೋಗ ಕೈಕೊಳ್ಳಬೇಕಾಗುತ್ತದೆ. ಷಟ್‌ಸ್ಥಲ ಸಿದ್ಧಾಂತವನ್ನು ಅನುಸರಿಸಿದ ವ್ಯಕ್ತಿ ತಪಸ್ವಿಯಾಗುತ್ತಾನೆ. ಅವನು ಸಾಮಾಜಿಕ ವ್ಯವಸ್ಥೆಯಲ್ಲಿ ಬಹು ಉನ್ನತ ಮಟ್ಟಕ್ಕೆ ಏರುವುದರಲ್ಲಿ ಅನುಮಾನವಿಲ್ಲ.

### ಈ. ಸ್ಥಲ ವಿಭಜನೆ

ಚೇತನಾಚೇತನಾತ್ಮಕವಾದ ಈ ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣೀಭೂತವಾದ, ಸಚ್ಚಿದಾನಂದ ಸ್ವರೂಪ 'ಪರಶಿವ'ನನ್ನು ವೀರಶೈವರು 'ಸ್ಥಲ'ವೆಂಬ ನಾಮ ನಿರ್ದೇಶನದಿಂದ ಗುರುತಿಸಿದ್ದಾರೆ. ಸ್ಥಾನ, ಮೆಟ್ಟಿಲು, ಜಾಗೆ, ಹಂತ, ಆಶ್ವಾಸ ಭಾಗ ಮೊದಲಾದ ಸಾಮಾನ್ಯಾರ್ಥಗಳಿಂದ ಕೂಡಿದ ಈ ಸ್ಥಲ ಪದಕ್ಕೆ ವೀರಶೈವರು (ಶರಣರು) ಪರಬ್ರಹ್ಮ, ಪರಶಿವ, ಶಿವ, ಶೂನ್ಯ, ಪರವಸ್ತು, ಘನ, ನಿಜ, ಲಿಂಗ, ಪರ, ಅನು ಎಂಬ ಮುಂತಾದ ಪದಗಳನ್ನು ಪರ್ಯಾಯವಾಗಿ ಬಳಸುವುದರ ಮೂಲಕ ಪಾರಿಭಾಷಿಕ ಪದವಾಗಿಸಿದ್ದಾರೆ.[೨೪]

ವೀರಶೈವದಲ್ಲಿ 'ಸ್ಥಲ'ವೆಂದರೆ ಶಕ್ತಿ ವಿಶಿಷ್ಟಪರ ಶಿವ. ಜೀವ ಜಗತ್ತುಗಳ ಸೃಷ್ಟಿ-ಸ್ಥಿತಿ-ಲಯಗಳಿಗೆ ಅವನೇ ಆಶ್ರಯ ಸ್ಥಲವೆಂದು ವೀರಶೈವದ ಗ್ರಹಿಕೆ. ಈ ಸ್ಥಲಪದ ವಾಚ್ಯವಾದ ಪರಶಿವನು ಉಪಾಸ್ಯ-ಉಪಾಸಕ ಲೀಲೆಗಾಗಿ ಮೊದಲು 'ಲಿಂಗಸ್ಥಲ' 'ಅಂಗಸ್ಥಲ' ಎಂದು ಎರಡಾಗುತ್ತಾನೆ. ಇದನ್ನೇ ಒಂದೆಂಬೆನೆ ಎರಡಾಗಿದೆ' ಎಂದು ಸೂತ್ರಪ್ರಾಯವಾಗಿ ವಚನವೊಂದರಲ್ಲಿ ಹೇಳಿರುವುದುಂಟು. ಇದರರ್ಥ ಅಂಗಲಿಂಗಗಳು ಸಿಡಿದು ಪರಸ್ಪರ ಸಂಪೂರ್ಣ ಬೇರೆಯಾದವೆಂದಲ್ಲ. ಅಂಗನಿಂದ ಪೂಜಿಸಿಕೊಳ್ಳುವ ಹಾಗೂ ಅವನನ್ನು ಉದ್ಧರಿಸುವ ಲೀಲೆಗಾಗಿ ಲಿಂಗನು ಅಂಗನಲ್ಲಿ ನೆಲೆಗೊಳ್ಳುತ್ತಾನೆ.

ಅಂಗನಿಗಿರುವುದು ಸ್ಥೂಲ-ಸೂಕ್ಷ್ಮ-ಕಾರಣ ಹೆಸರಿನ ಮೂರು ತನುಗಳು. ಆ ಮೂರರಲ್ಲಿ ಪೂಜೆಗೊಳ್ಳುವುದಕ್ಕಾಗಿ ಲಿಂಗನು ಕ್ರಮವಾಗಿ ಇಷ್ಟ-ಪ್ರಾಣ-ಭಾವಲಿಂಗವಾಗಿ ನೆಲೆಗೊಂಡಾಗ ಅವನ್ನು ಪೂಜಿಸುವ ಆ ಸ್ಥೂಲಾದಿ ತ್ರಿವಿಧ ದೇಹಗಳನ್ನೇ ಅನುಕ್ರಮವಾಗಿ ತ್ಯಾಗಾಂಗ, ಭೋಗಾಂಗ, ಯೋಗಾಂಗವೆಂಬ ಔಚಿತ್ಯಪೂರ್ಣ ಹೆಸರಿನಿಂದ ಕರೆಯಲಾಗುತ್ತದೆ. ಇನ್ನು ಅಂಗನ ಹೃದಯ ಮತ್ತು ಪಂಚ ಬಹಿರೀಂದ್ರಿಯ ಗಳಿಂದಲೂ ಪೂಜಿಸಿಕೊಳ್ಳುವ ಉದ್ದೇಶದಿಂದ, ಇಷ್ಟ-ಪ್ರಾಣ-ಭಾವಲಿಂಗಗಳಲ್ಲಿ ಪ್ರತಿಯೊಂದೂ ಎರಡೆರಡಾಗಿ ವಿಭಾಗಗೊಂಡು ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗ ಹೆಸರಿನಿಂದ ನಾಸಿಕಾದಿ ಇಂದ್ರಿಯಗಳಲ್ಲಿ ನೆಲೆಗೊಳ್ಳುತ್ತವೆ. ಇವೇ ಲಿಂಗ ಷಟ್‌ಸ್ಥಲಗಳು. ಈ ಆರು ಲಿಂಗಗಳ ಉಪಾಸನೆ, ಸಿದ್ಧಿಸುವ ದೃಷ್ಟಿಯಿಂದ ಅಂಗನ ತ್ಯಾಗಾಂಗ-ಭೋಗಾಂಗ-ಯೋಗಾಂಗಗಳು ಕೂಡ ಪ್ರತಿಯೊಂದು ಎರೆಡೆರಡಾಗಿ ವಿಭಾಗಗೊಂಡು ಕ್ರಮವಾಗಿ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂದು ಆರಾಗುತ್ತದೆ. ಇವೇ ಲಿಂಗ ಷಟ್‌ಸ್ಥಲಗಳು."[೨೩೪]

ಸ್ಥಲ ವಿಭಜನಾಕ್ರಮ ಮೊದಲು ವಚನಕಾರರಲ್ಲಿ ಕಂಡುಬರುತ್ತದೆ. ಸ್ಥಲವಿಭಜನೆಯನ್ನು ಮೊದಲು ಮಾಡಿದವರು ಚನ್ನಬಸವಣ್ಣನೆಂದು ಆತನ ವಚನಗಳ ಆಧಾರದಿಂದ ಹೇಳಬಹುದು. ಮಹಾಲಿಂಗದೇವನ ಏಕೋತ್ತರ ಶತಸ್ಥಲದ ಸರ್ವಾಚಾರ ಸಂಪತ್ತು ಸ್ಥಲದಲ್ಲಿ ವಚನ ಸಂಖ್ಯೆ ೧೦, ೧೯, ೨೦, ವಚನಗಳಲ್ಲಿ (ಚನ್ನಬಸವಣ್ಣನ ವಚನ) ಈ ಸ್ಥಲ ವಿವರಣೆಯನ್ನು ಕಾಣಬಹುದು. ಸ್ಥಲತತ್ವದಲ್ಲಿ ಸಾಮಾನ್ಯವಾಗಿ ಆರು ವಿಭಾಗಗಳಾಗಿರುತ್ತವೆ. ಆದರೆ ಶಿವಾನುಭವಿಗಳ ಅನುಭವಕ್ಕನುಗುಣವಾಗಿ ಸ್ಥಲ ವಿಭಜನ ಕ್ರಮ, ೧, ೨, ೩, ೬, ೧೮, ೩೬, ೧೦೧, ೨೧೬ ಹೀಗೆ ಸೂಕ್ಷ್ಮದಿಂದ ಸೂಕ್ಷ್ಮಕ್ಕೆ ಮುಂದುವರೆದಿರುವುದು ವಚನವಾಙ್ಮಯದ ಅಧ್ಯಯನದಿಂದ ತಿಳಿದುಬರುತ್ತದೆ. ಚನ್ನಬಸವಣ್ಣನವರ 'ಏಕೋತ್ತರ ಶತಸ್ಥಲ' ೧೦೧ರ ಶಾಸ್ತ್ರೀಯ ವಿಭಜನೆಯ ಪ್ರಥಮ ಕೃತಿಯಾಗಿದೆ. ಈ ಸ್ಥಲ ವಿಭಜನೆಗೆ ಮೂಲ ಕಾರಣ ಅನುಭಾವಿಗಳ ಅನುಭವ ಮತ್ತು ಜ್ಞಾನವೇ ಪ್ರಧಾನ ಕಾರಣವೆಂದು

ಹೇಳಬಹುದಾಗಿದೆ. ಅನುಭಾವಿಗಳು ತಮ್ಮ ಸಾಧನೆ ಸಿದ್ಧಿಯ ಮೂಲಕ ಪಡೆದ ಅನುಭಾವಾತ್ಮಕ ಜ್ಞಾನದ ಮೂಲಕ ಈ ಸ್ಥಲ ವಿಭಜನೆ ಮಾಡಿರುವುದು ಕಂಡುಬರುತ್ತದೆ.

ಹಂಪಿ ಪರಿಸರದ ತತ್ವಶಾಸ್ತ್ರಜ್ಞರು, ಸಂಕಲನಕಾರರೂ ಆದ ಮಹಾಲಿಂಗದೇವ, ಜಕ್ಕಣಾರ್ಯ, ಕಲ್ಲುಮಠದ ಪ್ರಭುದೇವ, ಮೊಗ್ಗೆಯ ಮಾಯಿದೇವ ಕರಸ್ಥಲ ಮಲ್ಲಿಕಾರ್ಜುನೊಡೆಯ ಮತ್ತು ಲಕ್ಕಣ್ಣ ದಂಡೇಶನಂಥ ಕವಿಗಳು ಬಸವಾದಿ ಶರಣ ಸ್ಥಲವಿಭಜನೆಯನ್ನು ಆಧರಿಸಿ ಆ ಸ್ಥಲಗಳಿಗೆ ವಿವರಣೆ ನೀಡಿ ವಚನಗಳನ್ನು ಸ್ಥಲಗಳಿಗನುಸಾರವಾಗಿ ಹೊಂದಿಸಿರುವುದನ್ನು ಕಾಣಬಹುದು. ಲಕ್ಕಣ್ಣದಂಡೇಶ ಮತ್ತು ಮೊಗ್ಗೆಯ ಮಾಯಿದೇವ ಇವರು ವಚನಗಳನ್ನು ಸ್ಥಲಗಳಿಗನುಸಾರವಾಗಿ ಹೊಂದಿಸದೆ ಕಾವ್ಯ ರೂಪದಲ್ಲಿ ಆ ಸ್ಥಲಗಳ ಸ್ವರೂಪ ಹೇಳಿ ವಿಭಜಿಸಿರುವುದು ಕಂಡುಬರುತ್ತದೆ. ಪ್ರಸ್ತುತ ಅಧ್ಯಯನಲ್ಲಿ ಮಹಾಲಿಂಗದೇವ, ಕಲ್ಲುಮಠದ ಪ್ರಭುದೇವ, ಕರಸ್ಥಲ ಮಲ್ಲಿಕಾರ್ಜುನೊಡೆಯ, ಮೊಗ್ಗೆಯ ಮಾಯಿದೇವ, ಚಾಮರಸ, ಲಕ್ಕಣ್ಣದಂಡೇಶ ಕವಿ, ಸಂಕಲನಕಾರರ ಕೃತಿಗಳ ಹಿನ್ನೆಲೆಯಲ್ಲಿ ಸ್ಥಲ ವಿಭಜನೆಯನ್ನು ವಿಶ್ಲೇಷಿಸಲಾಗಿದೆ.

ಬಸವಾದಿ ಶರಣರೇ ಸ್ಥಲ ವಿಭಜಕರು. ಅದರಲ್ಲೂ ಚನ್ನಬಸವಣ್ಣ ಸ್ಥಲವಿಭಜನೆಯ ಮೊದಲ ವ್ಯಕ್ತಿ ಎಂಬ ಅಂಶ ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿಯಲ್ಲಿ ಉಲ್ಲೇಖಿಸಲಾಗಿದೆ.

"ಸ್ಥಲಶಬ್ದ ನಿರ್ವಚನಮಂ ಸ್ಥಲಮಹತ್ವಮಂ
ಸ್ಥಲದಲ್ಲಿ ನಿಂದು ನಿಷ್ಕಲನಾಗಿ ಶುದ್ಧ ಕೇ
ವಲ ರೂಪನಾಗಿರ್ದ ಚೆನ್ನಬಸವೇಶ್ವರನ ಚರಣಾಂಬುಜಕ್ಕೆ ಶರಣು"[೨೩೬]

ಕವಿ ಲಕ್ಕಣ್ಣದಂಡೇಶನ ಪ್ರಕಾರ ಸ್ಥಲಶಬ್ದದ ವಿವರಣೆ, ಮಹತ್ವ, ಅದರ ಧಾರಣಶಕ್ತಿ, ನಿಷ್ಕಲತೆ ಮುಂತಾದ ಅಂಶಗಳನ್ನು ಕುರಿತು ಚಿಂತಿಸಿದವನು ಮತ್ತು ಅನುಷ್ಠಾಗೊಳಿಸಿದವನು ಚನ್ನಬಸವಣ್ಣನೆಂದು ಹೇಳುತ್ತಾನೆ.

ಚಾಮರಸ ತನ್ನ ಪ್ರಭುಲಿಂಗಲೀಲೆಯಲ್ಲಿ ಉಲ್ಲೇಖಿಸಿದ ಸ್ಥಲವಿವರ ಈ ಕೆಳಗಿನಂತಿದೆ.

"....ಶಿವಭಕ್ತ ಮಾಹೇಶ ಪ್ರಸಾದಿಗಳ
ಪರಮವರದ ಪ್ರಾಣಲಿಂಗಿಯ
ಶರಣನೈಕ್ಯನ ಭೇದ ನೆಲೆಗಳ..."[೨೩೭]

ಬಸವಣ್ಣ ಶೂನ್ಯಪೀಠವನ್ನು ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯ ಎಂಬ ಆರು ಸ್ಥಲಗಳಿಗನುಗುಣವಾಗಿ ರಚಿಸಿದ ಎಂದು ಹೇಳಿ ಇವುಗಳಿಗೆ ಭಿನ್ನವಾದ ಸ್ಥಲಗಳಿವೆ ಎಂಬ ಸೂಚನೆ ನೀಡುತ್ತಾನೆ.

ಲಕ್ಕಣ್ಣದಂಡೇಶ ತನ್ನ ಶಿವತತ್ವ ಚಿಂತಾಮಣಿಯಲ್ಲಿ ಸ್ಥಲ ವಿಭಜನೆ ಕುರಿತು

"ಪರಶಿವಂ ಶಿವೆಗೆ ಲಿಂಗಸ್ಥಲ ನಿರೂಪಣವ
ನುರು ಮುದದಿ ಪೇಳ್ದನದನಱಿದು ಸಂಕ್ಷೇಪದಿಂ"[೨೫೮]

ಎಂದು ಹೇಳಿದ್ದಾನೆ.

ಶಿವನು ಪಾರ್ವತಿಗೆ ಲಿಂಗಸ್ಥಲದ ವಿವರ ಹೇಳಿದ್ದನ್ನು ನಾನು ತಮಗೆ ಸಂಕ್ಷೇಪದಿಂದ ಹೇಳುತ್ತೇನೆ ಎಂದು ಕವಿ ಲಕ್ಕಣ್ಣದಂಡೇಶ ಹೇಳಿದ್ದಾನೆ. ಈತ ತನ್ನ ಕಾವ್ಯದ ೪೯ನೆಯ ಸಂಧಿಯಲ್ಲಿ ಲಿಂಗಸ್ಥಲದ ವಿವರ ಮತ್ತು ಅದರ ವಿಭಜನಾ ಕ್ರಮ ಹೇಳಿದ್ದಾನೆ.

"ಸಕಲ ನಿಷ್ಕಲ ರೂಪವಾಗಿ ಸಾಕ್ಷಾಚ್ಛಿವಂ ಲಿಂಗಮೆಂದೆನಿಸಿಕೊಳುತ
ಪ್ರಕಟವಾದಂ ಮೂಱು ತೆರನಾಗಿ ಮೊದಲತ್ಯ
ಧಿಕ ಭಾವಲಿಂಗವೆರಡನೆಯೊಳಂ ಪ್ರಾಣಸಂ
ಜ್ಞಿಕಲಿಂಗ ಮೂರನೆಯೊಳಿಷ್ಟವೆಂದಱಿವವರ..."[೨೫೯]

ಸಕಲ ಜೀವಿಗಳ ಲಯಕ್ಕೆ ಮುಕ್ತಿಗೆ ಕಾರಣನಾಗಿ ಶಿವ ತಾನೆ ಲಿಂಗವೆಂದೆನಿಸಿಕೊಂಡು ೧. ಭಾವಲಿಂಗ, ೨. ಪ್ರಾಣಲಿಂಗ ೩. ಇಷ್ಟಲಿಂಗ ಎಂದು ಮೂರು ಭಾಗಗಳಾಗಿ ರೂಪುಗೊಂಡ.

ಮತ್ತೆ ಈ ಮೂರು ಲಿಂಗಗಳು ೬ ಲಿಂಗಗಳಾಗಿದ್ದರ ಬಗ್ಗೆ ಕವಿ

"ವಿವರಿಸಲ್ ಸ್ವಾನುಭಾವಿಗಳಿಂದ ಭಾವಲಿಂ
ಗವೆ ಮಹಾಲಿಂಗ ಪ್ರಸಾದಲಿಂಗತ್ವದಿಂ
ದ್ವಿವಿಧವಾಯ್ತಾ ಪ್ರಾಣಲಿಂಗವೇ ಚರಲಿಂಗ ಶಿವಲಿಂಗವೆಂಬುದಾಯ್ತು
ಅವಧಾನದಿಷ್ಟಲಿಂಗವು ತಾನೆ ಗುರುಲಿಂಗ
ವ ವಿರಟಾಚಾರಲಿಂಗವೆನಿಪ್ಪ ಭೇದದಿಂ..."[೨೬೦]

ಎಂದು ಹೇಳಿದ್ದಾನೆ.

ಕವಿ ಹೇಳುವಂತೆ ಭಾವಲಿಂಗವು ಮಹಾಲಿಂಗ ಪ್ರಸಾದಲಿಂಗವೆಂದು, ಪ್ರಾಣಲಿಂಗವು ಚರಲಿಂಗ, ಶಿವಲಿಂಗವೆಂದು ಇಷ್ಟಲಿಂಗವು ಗುರುಲಿಂಗ, ಆಚಾರಲಿಂಗವೆಂದು ಆರು ಭಾಗಗಳಾದವು ಎಂದು ಹೇಳುತ್ತಾನೆ. ಅಲ್ಲದೆ ಇವುಗಳ ಸ್ವರೂಪ ಮಹತ್ವ ಕುರಿತು ವಿಶ್ಲೇಷಿಸುತ್ತಾನೆ.

ಕವಿ ಲಕ್ಕಣ್ಣದಂಡೇಶ ತನ್ನ ಕಾವ್ಯದ ಐವತ್ತನೆಯ ಸಂಧಿಯಲ್ಲಿ ಅಂಗಸ್ಥಲ ಕುರಿತು ಹೇಳುತ್ತಾ ಇದನ್ನು ಶಿವ ಪಾರ್ವತಿಗೆ ಅರ್ಪಿಸಿ ರಹಸ್ಯದಿಂದ ಭಕ್ತರೆದುರಿಗೆ ಹೇಳಿದ್ದನ್ನು ವಿವರಿಸುತ್ತೇನೆ ಎಂದಿದ್ದಾನೆ. ಭಕ್ತಿ ಆತ್ಮ ತತ್ವ ಇವುಗಳೇ ಅಂಗಸ್ಥಲವೆಂದೂ ಅವುಗಳ ವಿಭಜನ ಕ್ರಮವನ್ನು ಈ ಕೆಳಗಿನಂತೆ

ವಿಭಜಿಸಿದ್ದಾನೆ.

"ಅಂಗಸ್ಥಲಂ ತ್ರಿವಿಧಮೆಂತೆನಲು ಮೊದಲು ಯೋ
ಗಾಂಗಂ ದ್ವಿತೀಯದೊಳ್ ಭೋಗಾಂಗವಾ ತೃತೀ
ಯಾಂಗವೇ ತ್ಯಾಗಾಂಗ ವಿವರ....."[೨೪೧]

"ಯೋಗಾಂಗಮೆಂದೆನಿಕುಮ್ಮೈಕ್ಯ ಶರಣಸ್ಥಲಂ
ಭೋಗಾಂಗವೇ ಪ್ರಾಣಲಿಂಗಿ ಪ್ರಸಾದಿಯುಂ
ತ್ಯಾಗಾಂಗಮೆನಿಕು ಮಾಹೇಶ್ವರಸ್ಥಲ ಭಕ್ತಸ್ಥಲಗಳೆಂಬುಭಯಸ್ಥಲ...."[೨೪೨]

ಕವಿ ಲಕ್ಕಣ್ಣದಂಡೇಶ ಅಂಗಸ್ಥಲದಲ್ಲಿ ೩ ವಿಧಗಳಿವೆ. ೧. ಯೋಗಾಂಗಸ್ಥಲ ೨. ಭೋಗಾಂಗ ಸ್ಥಲ, ೩. ತ್ಯಾಗಾಂಗಸ್ಥಲ. ಈ ಮೂರು ಸ್ಥಲಗಳಲ್ಲಿ ಮತ್ತೆ ಒಂದೊಂದು ಸ್ಥಲವೂ ಎರಡೆರಡಾಗುತ್ತವೆ. ಅವುಗಳೆಂದರೆ ೧. ಯೋಗಾಂಗಸ್ಥಲ - ಅ. ಐಕ್ಯಸ್ಥಲ ಆ. ಶರಣಸ್ಥಲ, ೨. ಭೋಗಾಂಗ ಸ್ಥಲ - ೧. ಪ್ರಾಣಲಿಂಗಿಸ್ಥಲ, ಆ. ಪ್ರಸಾದಿಸ್ಥಲ, ೩. ತ್ಯಾಗಾಂಗಸ್ಥಲ - ಅ. ಮಾಹೇಶ್ವರಸ್ಥಲ ಆ. ಭಕ್ತಸ್ಥಲ ಎಂದು ಆರು ಸ್ಥಲಗಳಾಗಿ ವಿಭಜಿಸಿದ್ದಾನೆ. ಈ ಆರು ಸ್ಥಲಗಳಿಗೆ ಪರ್ಯಾಯ ಹೆಸರುಗಳನ್ನು ಸೂಚಿಸಿದ್ದಾರೆ.

"ಪರಿವಿಡಿಯೊಳೈಕ್ಯಸ್ಥಲವೆ ನಿರ್ಮಳಾತ್ಮಾಂಗ
ಶರಣಸ್ಥಲವೆ ಮಹಾವ್ಯೋಮಾಂಗವೆಂದು...
ನಿರುಪಮ ಪ್ರಾಣಲಿಂಗಿ ಸ್ಥಲವೆ ಮರುದಂಗ
ಪರಮ ಪ್ರಸಾದಿಸ್ಥಲಂ ತಿಳಿಯಲಗ್ನ್ಯಂಗ
ನಿರವದ್ಯ ಮಾಹೇಶ್ವರಸ್ಥಲಂ ನಿರ್ಮಲಜಲಾಂಗ ಸದ್ಭಕ್ತಿಸ್ಥಲಂ
ಸ್ಫುರಿತ ಭೂಮ್ಯಂಗ ವೀ ಷಟ್ಸ್ಥಲಂ....."[೨೪೩]

ಷಟ್‌ಸ್ಥಲಗಳಾದ ಭಕ್ತಸ್ಥಲ-ಭೂಮ್ಯಂಗ, ಮಾಹೇಶ್ವರ ಸ್ಥಲ - ನಿರ್ಮಲ ಜಲಾಂಗ, ಪ್ರಸಾದಿಸ್ಥಲ-ಲಗ್ನ್ಯಂಗ, ಪ್ರಾಣಲಿಂಗಿಸ್ಥಲ - ಮರುದಂಗ, ಶರಣಸ್ಥಲ - ಮಹಾವ್ಯೋಮಾಂಗ, ಐಕ್ಯಸ್ಥಲ- ನಿರ್ಮಳಾತ್ಮಾಂಗ ಎಂಬ ಪರ್ಯಾಯ ಹೆಸರುಗಳನ್ನು ಸೂಚಿಸಿದ್ದಾನೆ. ಹಾಗೆಯೇ ಜ್ಞಾನಾತ್ಮಕಸ್ಥಲ ಮತ್ತು ಕ್ರಿಯಾತ್ಮಕ ಸ್ಥಲ ಎಂಬೆರಡು ಸ್ಥಲಗಳನ್ನು ದಾಖಲಿಸಿದ್ದಾನೆ. ಇವುಗಳ ಸ್ವರೂಪ ಕುರಿತು ಹೀಗೆ ಹೇಳುತ್ತಾನೆ.

"ಪರಮೈಕ್ಯನುಂ ಶರಣನುಂ ಪ್ರಾಣಲಿಂಗಿಯುಂ
ನಿರುಪಮ ಜ್ಞಾನಾತ್ಮಕಸ್ಥಲಂ ತಿಳಿಯೆ ತ
ತ್ಪರಿಯಾಯದಮಲ ಪ್ರಸಾದಿ ಮಾಹೇಶ್ವರಂ ಭಕ್ತಸ್ಥಲಗಳೆಂಬ
ಪರಿವಿಡಿಯ ಮೂಱು ಸ್ಥಲಂ ಕ್ರಿಯಾತ್ಮಕವೆನು...."[೨೪೪]

ಕ್ರಿಯಾತ್ಮಕ ಸ್ಥಲವು ಭಕ್ತ, ಮಾಹೇಶ, ಪ್ರಸಾದಿ ಸ್ಥಲಗಳನ್ನೊಳಗೊಂಡರೆ. ಜ್ಞಾನಾತ್ಮಕ ಸ್ಥಲವು ಪ್ರಾಣಲಿಂಗಿ, ಶರಣ, ಐಕ್ಯ ಸ್ಥಲಗಳನ್ನು ಒಳಗೊಂಡಿದೆ ಎಂದು ಕವಿ ಹೇಳುತ್ತಾನೆ. ಹಾಗೆಯೇ ಕವಿ ೫೧ನೆಯ ಸಂಧಿಯಲ್ಲಿ ಲಿಂಗಾಂಗ ಸಂಯೋಗ ಸ್ಥಲ, ೫೩ನೆಯ ಸಂಧಿಯಲ್ಲಿ ಸರ್ವಾಂಗಲಿಂಗಸ್ಥಲ, ೫೪ನೆಯ ಸಂಧಿಯಲ್ಲಿ ಕರ್ಮಕಾಂಡ ಸ್ಥಲ, ಜ್ಞಾನಕಾಂಡಸ್ಥಲ(ಪದ್ಯ-೧೩) ಕುರಿತು ವ್ಯಾಖ್ಯಾನಿಸುತ್ತಾನೆ.

ಲಕ್ಕಣ್ಣದಂಡೇಶನ ಸ್ಥಲ ವಿಭಜನೆಯ ಸ್ವರೂಪ

ಲಿಂಗಸ್ಥಲ(೪೯ನೆಯ ಸಂಧಿ)

ಲಿಂಗ

ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ

ಆಚಾರಲಿಂಗ ಗುರುಲಿಂಗ ಶಿವಲಿಂಗ ಚರಲಿಂಗ ಪ್ರಸಾದಲಿಂಗ ಮಹಾಲಿಂಗ

ಅಂಗಸ್ಥಲ (೫೦ನೆಯ ಸಂಧಿ)

ಅಂಗ

ತ್ಯಾಗಾಂಗ ಭೋಗಾಂಗ ಯೋಗಾಂಗ

ಭಕ್ತ ಮಾಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ

ಅ. ವಿಶೇಷ ಸ್ಥಲಗಳು

೧. ಕ್ರಿಯಾತ್ಮಕ ಸ್ಥಲ - ಭಕ್ತ, ಮಾಹೇಶ, ಪ್ರಸಾದಿ

೨. ಜ್ಞಾನಾತ್ಮಕ ಸ್ಥಲ - ಪ್ರಾಣಲಿಂಗಿ, ಶರಣ, ಐಕ್ಯ

ಆ. ವಿಶೇಷ ಸ್ಥಲಗಳು

೧. ಲಿಂಗಾಂಗ ಸಂಯೋಗ ಸ್ಥಲ (೫೧ನೆಯ ಸಂಧಿ)

೨. ಕ್ರಿಯಾವಿಶ್ರಾಂತಿ (೫೪ನೆಯ ಸಂಧಿ)

ಅ. ಭಕ್ತಿಕಾಂಡಸ್ಥಲ ಆ. ಜ್ಞಾನಕಾಂಡ ಇ. ಕರ್ಮಕಾಂಡ ಸ್ಥಲ

ಹೀಗೆ ಲಕ್ಕಣ್ಣದಂಡೇಶ ತನ್ನ ಶಿವತತ್ವಚಿಂತಾಮಣಿಯಲ್ಲಿ ಸ್ಥಲವಿಭಜನೆ ಮಾಡಿದ್ದಾನೆ.

ಕಲ್ಲುಮಠದ ಪ್ರಭುದೇವ ತನ್ನ ಲಿಂಗಲೀಲಾವಿಲಾಸ ಚಾರಿತ್ರ ವಚನ ಸಂಕಲನಗ್ರಂಥದಲ್ಲಿ ಷಟ್‌ಸ್ಥಲಗಳನ್ನು ೧೬ ಸ್ಥಳಗಳಾಗಿ ವಿಂಗಡಿಸಿದ ರೀತಿ ಹೀಗಿದೆ.

"ಈ ಲಿಂಗಲೀಲಾ ವಿಲಾಸ ಚಾರಿತ್ರದ ಪರಿಯಾಯವೆಂತೆಂದೊಡೆ

ಪ್ರಥಮದಲ್ಲಿ ನಿಷ್ಕಲಲಿಂಗಸ್ಥಲ, ದ್ವಿತೀಯದಲ್ಲಿ ಮಹಾಲಿಂಗಸ್ಥಲ, ತೃತೀಯದಲ್ಲಿ ಲಿಂಗ ಮೂರ್ತಿಸ್ಥಲ, ಚತುರ್ಥದಲ್ಲಿ ಅಂಗಸ್ಥಲ, ಪಂಚಮದಲ್ಲಿ ಸಂಸಾರ ಸಂಬಂಧ ಸ್ಥಲ, ಷೋಡಶದಲ್ಲಿ ಸ್ವಲೀಲಾನಂದ ಭಕ್ತಿಸ್ಥಲ ಇಂತು ಹದಿನಾರರಲ್ಲಿ ಲಿಂಗಲೀಲಾವಿಲಾಸ ಚಾರಿತ್ರ ಸಂಪೂರ್ಣ"೨೫

ಕಲ್ಲುಮಠದ ಪ್ರಭುದೇವನು ಈ ೧೬ ಸ್ಥಲಗಳ ಉತ್ಪತ್ತಿ ಸ್ವರೂಪವನ್ನು ಸಹ ವಿಶ್ಲೇಷಿಸಿದ್ದಾನೆ. ಇವನ ೧೬ ಸ್ಥಲಗಳು ಹೀಗಿವೆ.

೧. ನಿಷ್ಕಲ ಲಿಂಗಸ್ಥಲ ೨. ಮಹಾಲಿಂಗಸ್ಥಲ, ೩. ಲಿಂಗಮೂರ್ತಿ ಸ್ಥಲ ೪. ಅಂಗಸ್ಥಲ, ೫. ಸಂಸಾರ ಸಂಬಂಧಸ್ಥಲ, ೬. ಪಿಂಡಸ್ಥಲ, ೭. ಪಿಂಡಜ್ಞಾನಸ್ಥಲ ೮. ಸಂಸಾರ ಹೇಯಸ್ಥಲ ೯. ಗುರು ಕರುಣಸ್ಥಲ ೧೦. ಭಕ್ತಿಸ್ಥಲ ೧೧. ಮಾಹೇಶ್ವರ ಸ್ಥಲ ೧೨. ಪ್ರಸಾದಿ ಸ್ಥಲ, ೧೩. ಪ್ರಾಣಲಿಂಗಿ ಸ್ಥಲ ೧೪. ಶರಣಸ್ಥಲ ೧೫. ಐಕ್ಯಸ್ಥಲ ೧೬. ಸ್ವಲೀಲಾನಂದ ಭಕ್ತಿಸ್ಥಲ.

ಈ ಮೇಲೆ ತಿಳಿಸಿರುವ ೧೬ ಸ್ಥಲಗಳನ್ನು ಬಸವಾದಿ ಶರಣರ ವಚನಗಳಿಂದ ವರ್ಗೀಕರಿಸಿ ಸಂಕಲಿಸಲಾಗಿದೆ. ಷೋಡಶಸ್ಥಲ ಪರಿಶ್ರಮದಿಂದ ಸೇರಿಸಿ ಅರ್ಥೈಸಿದ ವಚನಾಮವೆಂದೂ, ಇದು ಷಟ್‌ಸ್ಥಲ ಲಿಂಗಾಂಗ ಸಂಬಂಧ ಜ್ಞಾನ ಕ್ರಿಯಾಯುಕ್ತವಾದ ಶರಣ ಮಾರ್ಗವೆಂದು ಪ್ರಭುದೇವ ಹೇಳಿಕೊಂಡಿದ್ದಾನೆ. ಪೀಠಿಕಾ ಸೂತ್ರದಲ್ಲಿ ಲಿಂಗಸ್ಥಲ ಅಂಗಸ್ಥಲ ಸಂಬಂಧ ಸ್ಥಲಗಳನ್ನು ಸಂಕೋಚಿಸಿ ಹೇಳಲಾಗಿದೆ. ಹೀಗೆ ಕಲ್ಲುಮಠದ ಪ್ರಭುದೇವ ಬಸವಾದಿ ಶರಣರ ಪ್ರಮುಖ ವಚನಗಳನ್ನು ಆರಿಸಿಕೊಂಡು ಸಂಕಲಿಸಿ ಈ ಷೋಡಶ ಸ್ಥಲಗಳಲ್ಲಿ ವಿಭಾಗಿಸಿರುವುದನ್ನು ಕಾಣಬಹುದಾಗಿದೆ.

ಕರಸ್ಥಲ ಮಲ್ಲಿಕಾರ್ಜುನೊಡೆಯ ತನ್ನ ಬ್ರಹ್ಮಾದ್ವೈತ ಸಿದ್ಧಾಂತ ಷಟ್ಸ್ಥಲಾಭರಣ ಎಂಬ ವಚನ ಸಂಕಲನ ಗ್ರಂಥದಲ್ಲಿ ಬಸವಾದಿ ಶರಣರ ವಚನಗಳನ್ನೇ ಕ್ರೋಢೀಕರಿಸಿ ೬೧ ಸ್ಥಲಗಳಿಗನುಸಾರವಾಗಿ ಅವುಗಳನ್ನು ಜೋಡಿಸಲಾಗಿದೆ. ಈ ಕೃತಿಯಲ್ಲಿ ೬೧ ಸ್ಥಲಗಳ ವರ್ಗೀಕರಣ ಆ ಸ್ಥಲಗಳ ಸ್ವರೂಪವನ್ನು ವಿಶ್ಲೇಷಿಸಲಾಗಿದೆ.

"ಈ ಬ್ರಹ್ಮಾದ್ವೈತ ಸಿದ್ಧಾಂತ ಷಟ್ ಸ್ಥಲಾಭರಣದ ಸ್ಥಲಪರ್ಯಾಯವೆಂತೆಂದಡೆ, ಪ್ರಥಮದಲ್ಲಿ ಅನಿರ್ವಾಚ್ಯವಪ್ಪ ಮಹಾಶೂನ್ಯಸ್ಥಲ, ಎರಡನೆಯಲ್ಲಿ ಸ್ವಯಂಭೂಲಿಂಗಸ್ಥಲ, ಮೂರನೆಯಲ್ಲಿ ಉಮಾಪತಿ ಸ್ವಯಂಭು ಲಿಂಗಸ್ಥಲ, ನಾಲ್ಕನೆಯಲ್ಲಿ ವಿಶ್ವೋತ್ಪತ್ತಿಸ್ಥಲ, ಐದನೆಯಲ್ಲಿ ದೇಹದೇಹಿಗಳು ದಯಸ್ಥಲ, ಆರನೆಯಲ್ಲಿ ಸಂಸಾರಸ್ಥಲ, ಏಳನೆಯಲ್ಲಿ ಸಂಸಾರ ಯಾತನಸ್ಥಳ, ಎಂಟನೆಯಲ್ಲಿ ದೇಹಮೋಹನಿರಸನಸ್ಥಲ, ಒಂಭತ್ತನೆಯಲ್ಲಿ ಮಾಯಾ ವಿಲಾಸ-ನಿರಪನಸ್ಥಲ. ಹತ್ತನೆಯಲ್ಲಿ ಆಶಾಮಾಯಿಕ ನಿರಸನಸ್ಥಲ, ಹನ್ನೊಂದನೆಯಲ್ಲಿ ಪಾಶತ್ರಯ ನಿರಸನಸ್ಥಲ, ಹನ್ನೆರಡನೆಯಲ್ಲಿ ಅಜ್ಞಾನ-ನಿದ್ರಾ-ನಿರಸನಸ್ಥಲ, ಹದಿ

ಮೂರನೆಯಲ್ಲಿ ಮನೋವಿಕಾರ ನಿರಸನ ಸ್ಥಲ, ಹದಿನಾಲ್ಕನೆಯಲ್ಲಿ ಜ್ಞಾನ ಪ್ರಕಾಶಸ್ಥಲ, ಹದಿನೈದನೆಯದಲ್ಲಿ ಏಕೋದೇವ ಪ್ರತಿಷ್ಠೆ ಸಮಸ್ತದೇವತಾ ನಿರಸನಸ್ಥಲ, ಹದಿನಾರನೆಯಲ್ಲಿ ಸಮಸ್ತದೇವತಾ ಜನಕಸ್ಥಲ, ಹದಿನೇಳನೆಯಲ್ಲಿ ಗುರುಕಾರುಣ್ಯಾಹ್ವಾನ ಶಿವಚಿಂತನಸ್ಥಲ. ಹದಿನೆಂಟನೆಯಲ್ಲಿ ಗುರುಕೃಪಾಪ್ರಸನ್ನ ಸ್ಥಲ, ಹತ್ತೊಂಭತ್ತನೆಯಲ್ಲಿ ತಾಮಸ ದೀಕ್ಷಾ - ನಿರಸನ ಸ್ಥಲ, ಇಪ್ಪತ್ತನೆಯಲ್ಲಿ ಸ್ಥಾವರ ಲಿಂಗನಿರಸನ ಸ್ಥಲ. ಇಪ್ಪತ್ತೊಂದನೆಯಲ್ಲಿ ಗುರು ಕರುಣ ಲಿಂಗಾನುಗ್ರಹ ಸ್ಥಲ, ಇಪ್ಪತ್ತೆರಡನೆಯಲ್ಲಿ ಶ್ರೀ ವಿಭೂತಿಧಾರಣ ಸ್ಥಲ, ಇಪ್ಪತ್ತು ಮೂರನೆಯಲ್ಲಿ ಶ್ರೀರುದ್ರಾಕ್ಷಧಾರಣ ಸ್ಥಲ, ಇಪ್ಪತ್ತು ನಾಲ್ಕನೆಯಲ್ಲಿ ಶ್ರೀ ಪಂಚಾಕ್ಷರಿ ಜಪಸ್ಥಲ, ಇಪ್ಪತ್ತೈದನೆಯಲ್ಲಿ ಜ್ಞಾನ ಕ್ರಿಯಾ ವಿಶ್ವಾಸಸ್ಥಲ. ಇಪ್ಪತ್ತಾರನೆಯಲ್ಲಿ ಭಕ್ತಸ್ಥಲ, ಇಪತ್ತೇಳನೆಯಲ್ಲಿ ಭಕ್ತನ ಆಚಾರಲಿಂಗ ಮಹಾತ್ಮಸ್ಥಲ, ಇಪ್ಪತ್ತೆಂಟನೆಯಲ್ಲಿ ಭಕ್ತನ ಆಚಾರಲಿಂಗಾರ್ಚನಸ್ಥಲ, ಇಪ್ಪತ್ತೊಂಭತ್ತನೆಯಲ್ಲಿ ಭಕ್ತನ ಆಚಾರಲಿಂಗಾರ್ಪಣ ಸ್ಥಲ, ಮೂವತ್ತನೆಯಲ್ಲಿ ಭಕ್ತನ ಜಂಗಮ- ನಿಂದಾ-ನಿರಸನ-ವಿಶ್ವಾಸಸ್ಥಲ, ಮೂವತ್ತೊಂದನೆಯಲ್ಲಿ ಭಕ್ತನ ಜಂಗಮ ಪಾದೋದಕ ಪ್ರಸಾದ ವಿಶ್ವಾಸ ಸ್ಥಲ, ಮೂವತ್ತೆರಡನೆಯಲ್ಲಿ ಮಹೇಶ್ವರಸ್ಥಲ, ಮೂವತ್ತಮೂರನೆಯಲ್ಲಿ ಮಾಹೇಶ್ವರನ ಶ್ರುತ-ಭ್ರಾಂತಿ-ನಿರಸನಸ್ಥಲ, ಮೂವತ್ತನಾಲ್ಕನೆಯಲ್ಲಿ ಮಾಹೇಶ್ವರನೇ ಸ್ಥಿತಿ-ಭ್ರಾಂತಿ ನಿರಸನಸ್ಥಲ, ಮೂವತ್ತೈದನೆ ಯಲ್ಲಿ ಮಾಹೇಶ್ವರನ ಪ್ರಪಂಚ ಭಕ್ತ ನಿರಸನಸ್ಥಲ, ಮೂವತ್ತಾರನೆಯಲ್ಲಿ ಮಾಹೇಶ್ವರ ಕಾಮ್ಯಭ್ರಾಂತಿನಿರಸನಸ್ಥಲ, ಮೂವತ್ತೇಳನೆಯಲ್ಲಿ ಮಹೇಶ್ವರನೇ ಶಿವಲೋಕಭ್ರಾಂತಿ ನಿರಸನಸ್ಥಲ, ಮೂವತ್ತೆಂಟನೆಯಲ್ಲಿ ಪ್ರಸಾದಿ ಸ್ಥಲ, ಮೂವತ್ತೊಂಭತ್ತನೆಯಲ್ಲಿ ಪ್ರಸಾದಿಯ ಅಚ್ಚ ಪ್ರಸಾದಸ್ಥಲ, ನಾಲ್ವತ್ತನೆಯಲ್ಲಿ ಪ್ರಸಾದಿಯ ಸಾವಧಾನ ಲಿಂಗಾರ್ಪಣ ಪ್ರಸಾದಸ್ಥಲ, ನಾಲ್ವತ್ತೊಂದನೆಯಲ್ಲಿ ಪ್ರಸಾದಿಯ ಸ್ವಾತ್ಮಭೋಗಲಿಂಗಾರ್ಪಣ ಪ್ರಸಾದಸ್ಥಲ, ನಾಲ್ವತ್ತೆರಡನೆಯಲ್ಲಿ ಪ್ರಸಾದಿಯ ನಿರ್ದೇಹಲಿಂಗಾರ್ಪಣ ಪ್ರಸಾದಸ್ಥಳ, ನಾಲ್ವತ್ತಮೂರನೆಯಲ್ಲಿ ಪ್ರಸಾದಿಯ ಅರ್ಪಿತನರ್ಪಿ-ನಾಸ್ತಿಯಾದ ಅಭಿನ್ನಲಿಂಗ ಪ್ರಸಾದ ಸ್ಥಲ, ನಾಲ್ವತ್ತನಾಲ್ಕನೆಯಲ್ಲಿ ಪ್ರಾಣಲಿಂಗಿಸ್ಥಲ, ನಾಲ್ವತ್ತೈದನೆಯಲ್ಲಿ ಪ್ರಾಣಲಿಂಗಿಯ ಬಾಹ್ಯಕ್ರಿಯಾ ನಿರಸನಸ್ಥಲ, ನಾಲ್ವತ್ತಾರನೆಯಲ್ಲಿ ಪ್ರಾಣಲಿಂಗಿಯ ಇಷ್ಟಲಿಂಗ ಭ್ರಾಂತಿ-ನಿರಸನ ಸ್ಥಲ, ನಾಲ್ವತ್ತೇಳನೆಯಲ್ಲಿ ಪ್ರಾಣಲಿಂಗಿಯ ಇಷ್ಟಲಿಂಗ ವಿಯೋಗ-ಭ್ರಾಂತಿ-ನಿರಸನಸ್ಥಲ, ನಾಲ್ವತ್ತೆಂಟನೆಯಲ್ಲಿ ಪ್ರಾಣಲಿಂಗಿಯ ಬಾಹ್ಯಾಭ್ಯಂತರಲಿಂಗಸ್ಥಲ, ನಾಲ್ವತ್ತೊಂಭತ್ತನೆಯಲ್ಲಿ ಪ್ರಾಣಲಿಂಗಿಯ ಮನೋಭ್ರಾಂತಿ ನಿರಸನಸ್ಥಲ, ಐವತ್ತನೆಯಲ್ಲಿ ಶರಣಸ್ಥಲ, ಐವತ್ತೊಂದನೆಯಲ್ಲಿ ಶರಣನ ಆಶಾಲಾಂಛನ-ನಿರಸನಸ್ಥಲ, ಐವತ್ತೆರಡನೆಯಲ್ಲಿ ಶರಣನ ಮಾಯಾಭ್ರಾಂತಿ ನಿರಸನಸ್ಥಲ, ಐವತ್ತಮೂರನೆಯಲ್ಲಿ ಶರಣನ ನಿಸ್ಸಂಗಚಾರಿತ್ರಸ್ಥಲ.

ಐವತ್ತನಾಲ್ಕನೆಯಲ್ಲಿ ಶರಣನ ನಿರ್ಲೇಪಚಾರಿತ್ರ ಸ್ಥಲ, ಐವತ್ತೈದನೆಯಲ್ಲಿ ಶರಣ ಬಂಧಮೋಕ್ಷ ನಿರಸ್ಥಲ, ಐವತ್ತಾರನೆಯಲ್ಲಿ ಐಕ್ಯಸ್ಥಲ ಐವತ್ತೇಳನೆಯಲ್ಲಿ ಐಕ್ಯನ ಸ್ವಸಿದ್ಧಸ್ಥಲ, ಐವತ್ತೆಂಟನೆಯಲ್ಲಿ ಐಕ್ಯನಭಿನ್ನಜ್ಞಾನ ನಿರಸನಸ್ಥಲ, ಐವತ್ತೊಂಭತ್ತನೆಯಲ್ಲಿ ಐಕ್ಯನ ಭಿನ್ನಶಿವಯೋಗನಿರಸನಸ್ಥಲ, ಅರುವತ್ತನೆ

ಯಲ್ಲಿ ಐಕ್ಯನ ಅನನ್ಯ ಪರಿಪೂರ್ಣಸ್ಥಲ, ಅರುವತ್ತೊಂದನೆಯಲ್ಲಿ ಐಕ್ಯನ ಜ್ಞಾನಶೂನ್ಯವಪ್ಪ ಸರ್ವ ಶೂನ್ಯಸ್ಥಲ.

ಇಂತು ಸ್ಥಲ ಅರುವತ್ತೊಂದರಿಂ ಸಂಪೂರ್ಣಮಾಗಿ ವೇದವೇದಾಂತ ಸಿದ್ಧಾಂತಾದಿಯಾದ ಸರ್ವಾನುಭಾವ ಬೋಧೆಯನು(ಒಳಗೊಂಡ) ಈ ಬ್ರಹ್ಮಾದ್ವೈತ ಸಿದ್ಧಾಂತ ಷಟ್‌ಸ್ಥಲಾಭರಣ ನಿರೂಪಿಸಲ್ಪಟ್ಟಿತು''[೨೪೭]ಎಂದು ಕರಸ್ಥಲ ಮಲ್ಲಿಕಾರ್ಜುನೊಡೆಯ ಷಟ್‌ಸ್ಥಲವನ್ನು ೬೧ ಸ್ಥಲಗಳಾಗಿ ವಿಭಜಿಸಿದ್ದಾನೆ. ಇದರಲ್ಲಿಯೂ ಸಹ ಲಿಂಗಸ್ಥಲ ಮತ್ತು ಅಂಗಸ್ಥಲಗಳ ವಿವರ ವಚನಗಳ ಹಿನ್ನಲೆಯಲ್ಲಿ ಹೇಳಲಾಗಿದೆ.

**ಏಕೋತ್ತರ ಶತಸ್ಥಲ**

ಷಟ್‌ಸ್ಥಲವನ್ನು ವಿಭಜಿಸಿ ೧೦೧ ಸ್ಥಲಗಳಾಗಿ ವಿಭಜಿಸಿರುವುದೇ ಏಕೋತ್ತರ ಶತಸ್ಥಲ. ಮೊದಲು ಕನ್ನಡದಲ್ಲಿ ೧೦೧ ಸ್ಥಲಗಳನ್ನು ರೂಪಿಸಿದವನು ಚನ್ನವಸವಣ್ಣ. ನಂತರ ಈ ೧೦೧ ಸ್ಥಲಗಳಿಗನುಗುಣವಾಗಿ ಬಸವಾದಿ ಶರಣರ ವಚನಗಳನ್ನು ಸಂಗ್ರಹಿಸಿ ಜೋಡಿಸಿದವರು ಮಹಾಲಿಂಗದೇವ, ಈತನಿಗಿಂತಲೂ ಮೊದಲು ಏಕೋತ್ತರಶತಸ್ಥಲಗಳಿಗನುಸಾರವಾಗಿ ವಚನಗಳನ್ನು ಜೋಡಿಸಿದವನು ದಂಡನಾಯಕ ಜಕ್ಕಣಾರ್ಯ ಎಂದು ಡಾ.ಎಂ.ಎಂ.ಕಲಬುರ್ಗಿಯವರು ತಮ್ಮ 'ಏಕೋತ್ತರ ಶತಸ್ಥಲ ಸಿದ್ಧಾಂತದ ಪ್ರವರ್ತಕ ಯಾರು? ಎರಡು ವಾದಗಳು' ಎಂಬ ಅಪ್ರಕಟಿತ ಲೇಖನದಲ್ಲಿ ಹೇಳಿದ್ದಾರೆ. ಏಕೋತ್ತರ ಶತಸ್ಥಲವು ಷಟ್‌ಸ್ಥಲದ ಮೂಲ ಚೌಕಟ್ಟು, ಬಸವಾದಿ ಶರಣರು ತಮ್ಮ ದಿವ್ಯಾನುಭವದ ಓರೆಗಲ್ಲಿಗೆ ಷಟ್‌ಸ್ಥಲವನ್ನು ಉಜ್ಜಿ ಪರೀಕ್ಷಿಸಿ ಅದಕ್ಕೊಂದು ಹೊಸ ಮಾರ್ಪನ್ನು ಕೊಟ್ಟುದಲ್ಲದೆ, ತಮ್ಮದೇಯಾದ ರೀತಿಯಲ್ಲಿ ಅದನ್ನು ಸುವ್ಯವಸ್ಥಿತಗೊಳಿಸಿ ಲಿಂಗಾಂಗ ಸಾಮಾರಸ್ಯದ ಒಂದು ನವೀನ ಮಾರ್ಗವಾಗುವಂತೆ ನೇರ್ಪುಗೊಳಿಸಿದರು. ತತ್ಫಲವಾಗಿ ಅದು ವ್ಯಾಪಕತೆ ಪಡೆದುದಲ್ಲದೆ ಜೀವಂತ ಶಕ್ತಿಯಾಗಿಯೂ ಪರಿಣಮಿಸಿತು. ಸಾಧನಾನಿರತ ಸಾಧಕನ ವಿಶಿಷ್ಟ ಅನುಭವಗಳನ್ನನುಲಕ್ಷಿಸಿ, ಷಟ್‌ಸ್ಥಲದ ಒಂದೊಂದು ಸ್ಥಲದಲ್ಲಿಯೂ ಮತ್ತೆ ಉಪವಿಭಾಗಗಳನ್ನು ಮಾಡಲಾಗಿದೆ. ಶರೀರತ್ರಯದ ಅನುವಿಡಿದು ಆರುಸ್ಥಲಗಳಲ್ಲಿ ಪ್ರತಿಯೊಂದರಲ್ಲೂ ಮೂರು ವಿಭಾಗಗಳನ್ನು ಮಾಡಲಾಗಿದೆ. ಇದರಿಂದ ಭಕ್ತಾದಿ ಅಂಗಸ್ಥಲಗಳಲ್ಲಿ ೧೮ ಆಚಾರಾದಿ ಲಿಂಗಸ್ಥಲಗಳಲ್ಲಿ ೧೮ ವಿಭಾಗಗಳಾಗುತ್ತವೆ. ಇವುಗಳಲ್ಲಿ ಮೊದಲ ಮೂರು ಸ್ಥಲಗಳಲ್ಲಿ ಬರುವ ವಿಭಾಗಗಳನ್ನು ಅಂಗದಲ್ಲಿ ಆಚರಿಸುವ ಸಾಕಾರ ೧೮ ಸ್ಥಳಗಳೆಂದೂ, ಕೊನೆಯ ಮೂರು ಸ್ಥಲಗಳಲ್ಲಿ ಬರುವವುಗಳನ್ನು ಆತ್ಮನಲ್ಲಿ ಆಚರಿಸುವ ನಿರಾಕಾರ ೧೮ ಸ್ಥಲಗಳೆಂದೂ ಕರೆಯಲಾಗಿದೆ.[೨೪೮] ಶಿವಶರಣರ ಷಟ್‌ಸ್ಥಲ, ಸಮಸಮುಚ್ಚಯ ಷಟ್‌ಸ್ಥಲವಾಗಿರುವುದುದರಿಂದ ಷಟ್‌ಸ್ಥಲಗಳ ಪ್ರತಿಯೊಂದು ಸ್ಥಲದಲ್ಲಿಯೂ ಮತ್ತೆ ಆರು ಸ್ಥಲಗಳಾಗಿ ವಿಭಜಿಸಲ್ಪಡುತ್ತವೆ.

ಸಾಧಕನ ಅನುಭವ, ಸಾಧನೆಯ ಮಾರ್ಗದಲ್ಲಿ ಅವನು ತಲುಪುವ ಘಟ್ಟ ಇತ್ಯಾದಿಗಳನ್ನು ದೃಷ್ಟಿಯಲ್ಲಿರಿಸಿಕೊಂಡು ತನುತ್ರಯ, ಷಡಿಂದ್ರಿಯ ಮತ್ತು ಸಮಸಮುಚ್ಚಯದ ಅನುವಿಡಿದು ಸ್ಥಲ

ವಿಭಜನೆ ಮಾಡಿರುವುದು ಸ್ಪಷ್ಟವಾಗುತ್ತದೆ. ಇದು ಅನುಭವಾಧಾರಿತ ತಾತ್ತ್ವಿಕ ದೃಷ್ಟಿಯ ವಿಭಜನೆ, ನೂರೊಂದು ಸ್ಥಲದ ವಿಭಜನೆ ಇದೇ ಮಾದರಿಯಲ್ಲಿದೆ. ನೂರೊಂದು ಸ್ಥಲಗಳ ವಿಭಾಗ ಕ್ರಮದಲ್ಲಿ ಅಂಗಸ್ಥಲ, ಲಿಂಗಸ್ಥಲಗಳನ್ನಿಟ್ಟುಕೊಂಡು, ಅಂಗಷಟ್‌ಸ್ಥಲಗಳಲ್ಲಿ ಒಟ್ಟು ೪೪ ಮತ್ತು ಲಿಂಗಷಟ್ ಸ್ಥಲಗಳಲ್ಲಿ ಒಟ್ಟು ೫೭ ಭಾಗಗಳನ್ನಾಗಿ ವಿಭಜಿಸಲಾಗಿದೆ.

## ಮಹಾಲಿಂಗದೇವನ ಏಕೋತ್ತರ ಶತಸ್ಥಲದ ಸ್ವರೂಪ

ಕ್ರಿ.ಶ.೧೪೩೦ರಲ್ಲಿ ಪ್ರೌಢದೇವರಾಯನ ಕಾಲದಲ್ಲಿದ್ದನೆಂದು ಹೇಳಲಾಗುವ ಮಹಾಲಿಂಗದೇವನು ಪ್ರಮುಖ ವಚನ ಸಂಕಲನಕಾರನಾಗಿದ್ದಾನೆ. "ಭಕ್ತಿ ಭಂಡಾರಿ ಜಕ್ಕಣನು.... ಎನ್ನ ಷಡಾಂಗನು ಲಿಂಗದಲ್ಲಿ ಲೀಯವಹ ಬೇಧದ ನಿರೂಪವ ಕೊಟ್ಟು ಪಾಲಿಸುವುದು ಎಂದು ಕೇಳಿದಾಗ, ಮಹಾಲಿಂಗದೇವರು ತಮ್ಮ ಪರಮ ಜ್ಞಾನಾನುಭವ ಪ್ರಸನ್ನ ಪ್ರಕಾಶದಿಂದ ಷಟ್‌ಸ್ಥಲವನು ಬಸವರಾಜದೇವರು-ಚೆನ್ನಬಸವರಾಜದೇವರು-ಪ್ರಭುದೇವರು ಮುಖ್ಯವಾದ...ವಚನಗಳಿಂದ ತಚ್ಛಿಷ್ಯ ಜಕ್ಕಣಾರ್ಯರಿಗೆ ಬೋಧಿಸುತ್ತಿರಲು ಷಡುಸ್ಥಲದಲ್ಲಿ ಅಂಗಸ್ಥಲ-೪೪, ಲಿಂಗಸ್ಥಲ-೫೭ ಉಭಯಂ ಏಕೋತ್ತರ ಶತಸ್ಥಲಂಗಳಾದವು"[೨೪೮] ಎಂದು ಮಹಾಲಿಂಗದೇವ ತನ್ನ ಗ್ರಂಥದ ಆರಂಭದಲ್ಲಿ ಹೇಳಿಕೊಂಡಿದ್ದಾನೆ. ಇದರಲ್ಲಿ ಜಕ್ಕಣಾರ್ಯನ ಪ್ರೇರಣೆಯಿಂದ ಈ ಗ್ರಂಥ ರಚಿಸಿರುವಂತೆ ತಿಳಿದುಬರುತ್ತದೆ. ಅಲ್ಲದೆ ಏಕೋತ್ತರ ಶತಸ್ಥಲದ ವಿಭಜನಾ ಕ್ರಮವನ್ನೂ ಸಹ ತಿಳಿಸುತ್ತದೆ. ಈ ಕೃತಿಯು ಪಿಂಡಾದಿ ಜ್ಞಾನ ಶೂನ್ಯಾಂತ ೧೦೧ ಸ್ಥಲಗಳಡಿಯಲ್ಲಿ ಸ್ಥಲ-ಸ್ಥಲ ಸೂತ್ರ - ಸ್ಥಲ ವಚನ - ಸ್ಥಲನಿರ್ದೇಶನ ಪದವೆಂದು ೪ ರೀತಿಯಲ್ಲಿ ವ್ಯವಸ್ಥೆಗೊಳಿಸಿ ವಿಭಜಿಸಿ ನಿರೂಪಿಸಿದುದು ಕಂಡುಬರುತ್ತದೆ.

## ಏಕೋತ್ತರ ಶತಸ್ಥಲದ ವಿವರ

"ಪ್ರಥಮದಲ್ಲಿ : ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ಗುರುಕರುಣಸ್ಥಲ, ಲಿಂಗ ಧಾರಣಸ್ಥಲ, ವಿಭೂತಿಸ್ಥಲ, ರುದ್ರಾಕ್ಷಿಯಸ್ಥಲ, ಪಂಚಾಕ್ಷರಿಯಸ್ಥಲ, ಭಕ್ತಿಸ್ಥಲ, ಉಭಯಸ್ಥಲ, ತ್ರಿವಿಧ ಸಂಪತ್ತುಸ್ಥಲ, ಚತುರ್ವಿಧ ಸಾರಾಯಸ್ಥಲ, ಉಪಾಧಿಮಾಟಸ್ಥಲ, ನಿರುಪಾಧಿ ಮಾಟಸ್ಥಲ, ಸಹಜ ಮಾಟಸ್ಥಲ, ಅಂತು ಭಕ್ತಸ್ಥಲ ಹದಿನೈದು.

ದ್ವಿತೀಯಲ್ಲಿ : ಮಾಹೇಶ್ವರಸ್ಥಲ, ಲಿಂಗನಿಷ್ಠಾಸ್ಥಲ, ಪೂರ್ವಾಶ್ರಯ ನಿರಸನಸ್ಥಲ, ವಾಗದ್ವೈತ ನಿರಸನಸ್ಥಲ, ಆಹ್ವಾನನಿರಸನಸ್ಥಲ, ಅಷ್ಟತನುಮೂರ್ತಿ ನಿರಸನಸ್ಥಲ, ಸರ್ವಗತ ನಿರಸನಸ್ಥಲ, ಶಿವಜಗನ್ಮಯ ಸ್ಥಲ, ಭಕ್ತದೇಹಿಕ ಲಿಂಗಸ್ಥಲ; ಅಂತು ಮಾಹೇಶ್ವರಸ್ಥಲ ಒಂಭತ್ತು.

ತೃತೀಯದಲ್ಲಿ : ಪ್ರಸಾದಿಸ್ಥಲ, ಗುರುಮಹಾತ್ಮೆಯಸ್ಥಲ, ಲಿಂಗ ಮಹಾತ್ಮೆಯಸ್ಥಲ, ಜಂಗಮ ಮಹಾತ್ಮೆಯಸ್ಥಲ, ಭಕ್ತ ಮಹಾತ್ಮೆಯಸ್ಥಲ, ಶರಣ ಮಹಾತ್ಮೆಯಸ್ಥಲ, ಪ್ರಸಾದ ಮಹಾತ್ಮೆಯಸ್ಥಲ; ಅಂತು ಪ್ರಸಾದಿಸ್ಥಲ ಏಳು.

ಚತುರ್ಥದಲ್ಲಿ ಪ್ರಾಣಲಿಂಗಿಯ ಸ್ಥಲ ಪ್ರಾಣಲಿಂಗಾರ್ಚನೆಯ ಸ್ಥಲ, ಶಿವಯೋಗ ಸಮಾಧಿಸ್ಥಲ, ಲಿಂಗನಿಜಸ್ಥಲ, ಅಂಗಲಿಂಗಸ್ಥಲ; ಅಂತು ಪ್ರಾಣಲಿಂಗಿಯಸ್ಥಲ ಐದು.

ಪಂಚಮದಲ್ಲಿ : ಶರಣಸ್ಥಲ, ತಾಮಸನಿರಸನಸ್ಥಲ, ನಿರ್ದೇಶಸ್ಥಲ, ಶೀಲಸಂಪಾದನೆಯಸ್ಥಲ; ಅಂತು ಶರಣಸ್ಥಲ ನಾಲ್ಕು.

ಷಷ್ಠಮದಲ್ಲಿ : ಐಕ್ಯಸ್ಥಲ, ಸರ್ವಾಚಾರ ಸಂಪತ್ತುಸ್ಥಲ, ಏಕ ಭಾಜನಸ್ಥಲ, ಸಹ ಭೋಜನ ಸ್ಥಲ; ಅಂತು ಐಕ್ಯಸ್ಥಲ ನಾಲ್ಕು. ಇಂತು ಅಂಗಸ್ಥಲ ನಾಲ್ವತ್ತು ನಾಲ್ಕಕ್ಕೆ ವಿವರಂಗಳು

**ಇನ್ನು ಲಿಂಗಸ್ಥಲ ಐವತ್ತೇಳು**

ದೀಕ್ಷಾಗುರುಸ್ಥಲ, ಶಿಕ್ಷಾಗುರುಸ್ಥಲ, ಜ್ಞಾನಗುರುಸ್ಥಲ, ಕ್ರಿಯಾಲಿಂಗಸ್ಥಲ, ಭಾವ-ಲಿಂಗಸ್ಥಲ, ಜ್ಞಾನಲಿಂಗಸ್ಥಲ, ಸ್ವಯಸ್ಥಲ, ಚರಸ್ಥಲ, ಪರಸ್ಥಲ. ಅಂತು ಆಚಾರಲಿಂಗಸ್ಥಲ ಒಂಭತ್ತು.

ಇನ್ನು ಕ್ರಿಯಾಗಮಸ್ಥಲ, ಭಾವಾಗಮಸ್ಥಲ, ಜ್ಞಾನಾಗಮಸ್ಥಲ, ಸಕಾಯಸ್ಥಲ, ಅಕಾಯಸ್ಥಲ, ಪರಕಾಯಸ್ಥಲ, ಧರ್ಮಾಚಾರ ಸ್ಥಲ, ಭಾವಾಚಾರಸ್ಥಲ, ಜ್ಞಾನಾಚಾರಸ್ಥಲ, ಅಂತು ಗುರುಸ್ಥಲ ಒಂಭತ್ತು. ಉಭಯಸ್ಥಲ ಹದಿನೆಂಟು.

ಇನ್ನು ಕಾಯಾನುಗ್ರಹಸ್ಥಲ, ಇಂದ್ರಿಯಾನುಗ್ರಹ ಸ್ಥಲ, ಪ್ರಾಣಾನುಗ್ರಹಸ್ಥಲ, ಕಾಯಾರ್ಪಿತಸ್ಥಲ, ಕರಣಾರ್ಥಿತ ಸ್ಥಲ, ಭಾವಾರ್ಪಿತಸ್ಥಲ, ಶಿಷ್ಯಸ್ಥಲ, ಸುಶ್ರೂಷಾ ಸ್ಥಲ, ಸೇವ್ಯಸ್ಥಲ, ಅಂತು ಶಿವಲಿಂಗ ಸ್ಥಲ ಒಂಭತ್ತು. ಇಂತು ತೃತೀಯಸ್ಥಳ ಇಪ್ಪತ್ತೇಳು.

ಇನ್ನು ಜೀವಾತ್ಮಕಸ್ಥಲ, ಅಂತರಾತ್ಮಸ್ಥಲ, ಪರಮಾತ್ಮಸ್ಥಲ, ನಿರ್ದೇಹಾಗಮಸ್ಥಲ, ನಿರ್ಭಾವಾಗಮ ಸ್ಥಲ, ನಷ್ಟಾಗಮಸ್ಥಲ, ಆದಿಪ್ರಸಾದಿಸ್ಥಲ, ಅಂತ್ಯಪ್ರಸಾದಿಸ್ಥಲ, ಸೇವ್ಯ ಪ್ರಸಾದಿಸ್ಥಲ, ದೀಕ್ಷಾ ಪಾದೋದಕಸ್ಥಲ, ಶಿಕ್ಷಾ ಪಾದೋದಕಸ್ಥಲ, ಜ್ಞಾನ ಪಾದೋದಕಸ್ಥಲ. ಅಂತು ಜಂಗಮಸ್ಥಲ ಹನ್ನೆರಡು, ಅಂತು ಚತುರ್ಥಸ್ಥಲ ಮೂವತ್ತೊಂಬತ್ತು.

ಇನ್ನು ಕ್ರಿಯಾನಿಷ್ಪತ್ತಿ ಸ್ಥಲ, ಭಾವನಿಷ್ಪತ್ತಿಸ್ಥಲ, ಜ್ಞಾನನಿಷ್ಪತ್ತಿಸ್ಥಲ, ಪಿಂಡಾಕಾಶಸ್ಥಲ, ಬಿಂದ್ವಾಕಾಶ ಸ್ಥಲ, ಮಹದಾಕಾಶಸ್ಥಲ, ಕ್ರಿಯಾಪ್ರಕಾಶಸ್ಥಲ, ಭಾವ ಪ್ರಕಾಶಸ್ಥಲ, ಜ್ಞಾನಪ್ರಕಾಶಸ್ಥಲ; ಅಂತು ಪ್ರಸಾದಲಿಂಗಸ್ಥಲ ಒಂಬತ್ತು. ಅಂತು ಪಂಚಮಸ್ಥಲ ನಾಲ್ವತ್ತೆಂಟು.

ಇನ್ನು ಕೊಂಡುದು ಪ್ರಸಾದಸ್ಥಲ, ನಿಂದುರೋಗರಸ್ಥಲ, ಚರಾಚರನಾಸ್ತಿಸ್ಥಲ, ಭಾಂಡಸ್ಥಲ, ಭಾಜನಸ್ಥಲ, ಅಂಗಲೇಪನಸ್ಥಲ, ಸ್ವಯಪರವಜಿಯದ ಸ್ಥಲ, ಭಾವಾಭಾವ ನಷ್ಟಸ್ಥಲ, ಜ್ಞಾನಶೂನ್ಯಸ್ಥಲ; ಅಂತು ಮಹಾಲಿಂಗಸ್ಥಲ ಒಂಬತ್ತು. ಅಂತು ಲಿಂಗಸ್ಥಲ ಐವತ್ತೇಳು. ಉಭಯಂ ಸ್ಥಲ ನೂಱೊಂದಕ್ಕಂ ಸಂಪೂರ್ಣ''[೨೮]

ಹೀಗೆ ಮಹಾಲಿಂಗದೇವ ೧೦೧ ಸ್ಥಲಗಳನ್ನು ವಿಭಜಿಸಿದ್ದಾನೆ. ಈ ೧೦೧ ಸ್ಥಲಗಳ ಸ್ವರೂಪ ಸ್ಥಲ ಸೂತ್ರ ನಿರ್ದೇಶನ ಮುಂತಾದ ಮಾಹಿತಿ ನೀಡಿದ್ದಾನೆ. ಇದು ಕೇವಲ ವಚನಗಳ ಸಂಕಲನವಾಗಿದೆ, ಅಂಗ ಲಿಂಗದತ್ತ ಸಾಗಿ ನಡೆವ ಸಾಧಕಾವಸ್ಥೆಯ ಹಂತಗಳನ್ನು ಗುರುತಿಸುವುದರ ಮೂಲಕ ವೀರಶೈವ ಸಾಧಕ ಮಾರ್ಗವನ್ನು ನಿರೂಪಿಸುವ ಕೃತಿಯಾಗಿದೆ.

## ಮೊಗ್ಗೆಯ ಮಾಯಿದೇವನ ಏಕೋತ್ತರ ಶತಸ್ಥಲ

ಷಟ್‌ಸ್ಥಲ ನಿರ್ಣಾಯಕನೆಂದು ಪ್ರಸಿದ್ಧನಾದ ಮೊಗ್ಗೆಯ ಮಾಯಿದೇವ ಪ್ರೌಢದೇವರಾಯನ ಕಾಲದ ಅನುಭಾವಿ ಕವಿ ತತ್ವವೇತ್ತ. ಈತ ತನ್ನ ಸ್ವವಿಷಯವನ್ನು ತನ್ನ ಶಿವಾನುಭವ ಸೂತ್ರ ಕೃತಿಯಲ್ಲಿ ಹೇಳಿಕೊಂಡಿದ್ದಾನೆ. ಏಕೋತ್ತರಶತಸ್ಥಲ ಈತನ ಪ್ರಮುಖ ಕೃತಿ. ಇದು ೧೦೮ ಷಟ್ಪದಿಯಲ್ಲಿ ರಚನೆಯಾದ ನೂರೊಂದು ಸ್ಥಲಗಳ ಸ್ವರೂಪವನ್ನು ಕಾವ್ಯರೂಪದಲ್ಲಿ ಹೇಳುವ ಪ್ರಥಮ ಕೃತಿಯಾಗಿದೆ. ಈ ಕಾವ್ಯದ ಆರಂಭದಲ್ಲಿ

> "ದೇವಸಭೆಯೊಳಗೆ ದೇವರದೇವನೊಲಿದು ಗಿರಿ
> ಜಾ ವತಿನತೆಗೊರೆದನೇಕೊತ್ತರ ಶತಸ್ಥಲದ
> ಭಾವದನುಭಾವಮಂ ಭೂಮಿಯೊಳು ಪೇಳ್ದ ಬಸವೇಶ ಸದ್ಭಕ್ತ ಜನಕೆ"[೨೫೦]

ಎಂದಿದ್ದಾನೆ.

ಕವಿ ಆರಂಭದ ಸೂಚನಾ ಪದ್ಯದಲ್ಲಿ ಶಿವನು ಗಿರಿಜೆಗೆ ಭೂಮಿಯಲ್ಲಿ ಬಸವನು ಸದ್ಭಕ್ತ ಜನತೆಗೆ ಏಕೋತ್ತರಶತಸ್ಥಲವನ್ನು ಹೇಳಿದಂತೆ ತಿಳಿಸಲಾಗಿದೆ. ಗುರುಸ್ತುತಿಯೊಂದಿಗೆ ಪಿಂಡಾದಿ ಜ್ಞಾನ ಶೂನ್ಯಾಂತಮಾದ ೧೦೧ ಸ್ಥಲಗಳ ವಿವರಣೆಯನ್ನು ಒಂದೊಂದು ಷಟ್ಪದಿಯಲ್ಲಿ ವಿವರಸಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ೧೦೧ ಸ್ಥಲಗಳ ವಿಭಜನೆಯಲ್ಲಿ ಸ್ಥಲನಾಮ ನಿರ್ದೇಶನದಲ್ಲಿ ಮಹಾಲಿಂಗ ದೇವನ ಸ್ಥಲಗಳನ್ನು ಹೋಲುತ್ತಿದ್ದರೂ ಅಲ್ಪಮಟ್ಟಿನ ವ್ಯತ್ಯಾಸವನ್ನು ಇಲ್ಲಿ ಕಾಣುತ್ತೇವೆ. ಇದು ಲಿಂಗಸ್ಥಲದಲ್ಲಿಯ ಜಂಗಮ ಲಿಂಗದ ೧೨ ಸ್ಥಲಗಳು ಇಲ್ಲಿರದೆ ಮಹಾಲಿಂಗಸ್ಥಲವು ೧೨ ಅವಾಂತರ ಕುಲಸ್ಥಲಗಳನ್ನು ಒಳಗೊಂಡುದುದು ಇಲ್ಲಿನ ವಿಶೇಷ. ಮಾಯಿದೇವ ನಿರೂಪಿಸಿದ ನೂರೊಂದು ಸ್ಥಲಗಳು ಹೀಗಿವೆ.

ಅಂಗಸ್ಥಲ : ೪೪

ಭಕ್ತಸ್ಥಲ-೧೫ : ೧. ಪಿಂಡಸ್ಥಲ ೨. ಪಿಂಡಜ್ಞಾನಸ್ಥಲ ೩. ಸಂಸಾರ ಹೇಯಸ್ಥಲ ೪. ಗುರುಕರುಣಸ್ಥಲ ೫. ಲಿಂಗಧಾರುಣಸ್ಥಲ ೬. ವಿಭೂತಿಸ್ಥಲ ೭. ರುದ್ರಾಕ್ಷಿಸ್ಥಲ ೮. ಪಂಚಾಕ್ಷರಿಸ್ಥಲ ೯. ಭಕ್ತಿಸ್ಥಲ ೧೦. ಉಭಯಸ್ಥಲ ೧೧. ತ್ರಿವಿಧ ಸಂಪತ್ತುಸ್ಥಲ ೧೨. ಚತುರ್ವಿಧ ಸಾರಸ್ಥಲ ೧೩. ಉಪಾಧಿಮಾಟಸ್ಥಲ ೧೪. ನಿರುಪಾಧಿಮಾಟಸ್ಥಲ ೧೫. ಸಹಜ ಮಾಟಸ್ಥಲ - ಇವು ೧೫ ಭಕ್ತಸ್ಥಲ

ಮಾಹೇಶ್ವರ ಸ್ಥಲ-೯ : ೧. ಮಾಹೇಶ ಮಾಹೇಶ್ವರಸ್ಥಲ ೨. ಏಕನಿಷ್ಠೆಯ (ಲಿಂಗನಿಷ್ಠೆ) ಸನುಮತಸ್ಥಲ ೩. ಪರಮಪೂರ್ವಾಶ್ರಯ ನಿರಸನಸ್ಥಲ ೪. ವಾಗದ್ವೈತ ನಿರಸನಸ್ಥಲ ೫. ಆಹ್ವಾನ ನಿರಸನಸ್ಥಲ (ಭಾ.ಭೂಸ್ಥಲ) ೬. ಅಷ್ಟಮೂರುತಿ ನಿರಸನಸ್ಥಲ ೭. ಸರ್ವಗತ ನಿರಸನಸ್ಥಲ ೮. ಶಿವಜನ್ಮಯಸ್ಥಲ ೯. ಭಕ್ತದೇಹಿಕ ದೇವಸ್ಥಲ.

ಪ್ರಸಾದಿಸ್ಥಲ-೭ : ೧. ಪ್ರಸಾದಿಸ್ಥಲ ೨. ಗುರುಮೂರ್ತಿ ಮಹಾತ್ಮೆಯಸ್ಥಲ ೩. ಶಿವಲಿಂಗ ಮಾಯಾತೀತ ಮಹಾತ್ಮೆಯಸ್ಥಲ ೪. ಜಂಗಮ ಮೂರ್ತಿ ಮಹಾತ್ಮೆಯಸ್ಥಲ ೫. ಭಕ್ತಿಮಹಾತ್ಮೆಯಸ್ಥಲ ೬. ಶರಣ ಮಹಾತ್ಮೆಯಸ್ಥಲ ೭. ಪ್ರಸಾದ ಮಹಾತ್ಮೆಯಸ್ಥಲ.

ಪ್ರಾಣಲಿಂಗಿಸ್ಥಲ-೫ : ೧. ಪ್ರಾಣಲಿಂಗಿಸ್ಥಲ ೨. ಪ್ರಾಣಲಿಂಗಾರ್ಚನೆಯಸ್ಥಲ ೩. ಶಿವಯೋಗ ಸಮಾಧಿಸ್ಥಲ ೪. ಲಿಂಗನಿಜಸ್ಥಲ ೫. ಅಂಗಲಿಂಗಸ್ಥಲ.

ಶರಣಸ್ಥಲ-೪ : ೧. ಶರಣಸ್ಥಲ ೨. ತಾಮಸ ನಿರಸನ ಸ್ಥಲ ೩. ನಿರ್ದೇಶಸ್ಥಲ ೪. ಶೀಲಸಂಪಾದನೆಯಸ್ಥಲ

ಐಕ್ಯಸ್ಥಲ - ೪ : ೧. ಐಕ್ಯಸ್ಥಲ ೨. ಸರ್ವಾಚಾರ ಸಂಪತ್ತು ಸ್ಥಲ ೩. ಏಕಭಾಜನಸ್ಥಲ ೪. ಸಹಭೋಜನ ಸ್ಥಲ.

ಲಿಂಗಸ್ಥಲ-೫೬

ಆಚಾರಲಿಂಗಸ್ಥಲ-೯ : ೧. ದೀಕ್ಷೆಯ ಗುರುಸ್ಥಲ ೨. ಶಿಕ್ಷಾಗುಣಸ್ಥಲ ೩. ಜ್ಞಾನಗುರುಸ್ಥಲ ೪. ಕ್ರಿಯಾಲಿಂಗಸ್ಥಲ ೫. ಭಾವಲಿಂಗಸ್ಥಲ ೬. ಜ್ಞಾನಲಿಂಗಸ್ಥಲ ೭. ಸ್ವಯಸ್ಥಲ ೮. ಚರಸ್ಥಲ ೯. ಪರಸ್ಥಲ

ಗುರುಲಿಂಗಸ್ಥಲ-೯ : ೧. ಕ್ರಿಯಾಗಮಸ್ಥಲ ೨. ಭಾವಾಗಮಸ್ಥಲ ೩. ಜ್ಞಾನಾಗಮಸ್ಥಲ ೪. ಸಕಾಯಸ್ಥಲ ೫. ಅಕಾಯಸ್ಥಲ ೬. ಪರಕಾಯಸ್ಥಲ ೭. ಧರ್ಮಾಚಾರಸ್ಥಲ ೮. ಭಾವಾಚಾರಸ್ಥಲ ೯. ಜ್ಞಾನಾಚಾರಸ್ಥಲ

ಶಿವಲಿಂಗಸ್ಥಲ-೯ : ೧. ಕಾಯಾನುಗ್ರಹಸ್ಥಲ ೨. ಇಂದ್ರಿಯಾನುಗ್ರಸ್ಥಲ ೩. ಪ್ರಾಣಾನುಗ್ರಹಸ್ಥಲ ೪. ಕಾಯಾರ್ಪಿತಸ್ಥಲ ೫. ಕರಣ ಸಮರ್ಪಿತಸ್ಥಲ ೬. ಭಾವಾರ್ಪಿತಸ್ಥಲ ೭. ಶಿಷ್ಯಸ್ಥಲ ೮. ಶುಶ್ರೂಷಾಸ್ಥಲ ೯. ಸೇವ್ಯಸ್ಥಲ

ಜಂಗಮ ಲಿಂಗಸ್ಥಲ-೯ : ೧. ಜೀವಾತ್ಮಸ್ಥಲ ೨. ಅಂತರಾತ್ಮಸ್ಥಲ ೩. ಪರಮಾತ್ಮಸ್ಥಲ ೪. ನಿರ್ದೇಹಾಗಮ ಸ್ಥಲ ೫. ಸದ್ಭಾವಾಗಮಸ್ಥಲ ೬. ನಷ್ಟಾಗಮಸ್ಥಲ ೭. ಆದಿಪ್ರಸಾದಿಸ್ಥಲ ೮. ಅಂತ್ಯಪ್ರಸಾದಿಸ್ಥಲ ೯. ಸೇವ್ಯಪ್ರಸಾದಿಸ್ಥಲ

ಪ್ರಸಾದಲಿಂಗ ಸ್ಥಲ-೯ : ೧. ದೀಕ್ಷಾ ಪಾದೋದಕ ಸ್ಥಲ ೨. ಶಿಕ್ಷಾ ಪಾದೋದಕಸ್ಥಲ ೩. ಜ್ಞಾನಪಾದೋದಕಸ್ಥಲ ೪. ಕ್ರಿಯಾನಿಷ್ಪತ್ತಿಸ್ಥಲ ೫. ಭಾವನಿಷ್ಪತ್ತಿಸ್ಥಲ ೬. ಜ್ಞಾನನಿಷ್ಪತ್ತಿಸ್ಥಲ ೭. ಪಿಂಡಾಕಾಶಸ್ಥಲ ೮. ಬಂದ್ವಾಕಾಶ ಸ್ಥಲ ೯. ಮಹಾದಾಕಾಶಸ್ಥಲ

ಮಹಾಲಿಂಗಸ್ಥಲ-೧೨ : ೧. ಕೊಂಡುದುಪ್ರಸಾದ ಸ್ಥಲ ೨. ನಿಂದು ದೋಗರಸ್ಥಲ ೩. ಸಚರಾಚರನಾಸ್ತಿಸ್ಥಲ ೪. ಕ್ರಿಯಾಪ್ರಕಾಶಸ್ಥಲ ೫. ಭಾವಪ್ರಕಾಶಸ್ಥಲ ೬. ಜ್ಞಾನಪ್ರಕಾಶ ಸ್ಥಲ ೭. ಭಾಂಡಸ್ಥಲ ೮. ಭಾಜನಸ್ಥಲ ೯. ಅಂಗಲೇಪನಸ್ಥಲ ೧೦. ಸ್ವಯಪರವರಿಯದಸ್ಥಲ ೧೧. ಭಾವಾಭಾವನಷ್ಟ ಸ್ಥಲ ೧೨. ಜ್ಞಾನ ಶೂನ್ಯಸ್ಥಲ.

ಹೀಗೆ ಮಾಯಿದೇವ ೧೦೧ ಷಟ್ಪದಿಗಳಲ್ಲಿ ಸ್ಥಲಕ್ಕೊಂದರಂತೆ ಏಕೋತ್ತರಶತಸ್ಥಲಗಳನ್ನು ಪದ್ಯರೂಪದಲ್ಲಿ ನಿರೂಪಿಸಿದ್ದಾನೆ. ಇದು ಷಟ್ಪದಿರೂಪದ ಏಕೋತ್ತರ ಶತಸ್ಥಲದ ಪ್ರಥಮ ಕೃತಿಯಾಗಿದೆ.

**ಜಕ್ಕಣಾರ್ಯನ ಏಕೋತ್ತರಶತಸ್ಥಲ**

ಪ್ರೌಢದೇವರಾಯನ ದಂಡನಾಯಕ ಜಕ್ಕಣಾರ್ಯ ಮಹಾಲಿಂಗದೇವನ ಶಿಷ್ಯ ಈತನಿಂದ ಮಾರ್ಗದರ್ಶನದಿಂದ ನೂರೊಂದು ಸ್ಥಲ ಎಂಬ ಕೃತಿ ರಚಿಸಿದ್ದಾನೆ. ಇದು ಮಹಾಲಿಂಗದೇವನ ಕೃತಿಯ ಸ್ವರೂಪವನ್ನೇ ಪಡೆದಿದ್ದರೂ ಇಲ್ಲಿ ವಚನಗಳಿಲ್ಲ. ಸೂತ್ರ ಮತ್ತು ಸ್ವರವಚನಗಳು ಮಾತ್ರ ಇವೆ. ಇದರಲ್ಲಿ ಜಕ್ಕಣ್ಣನ ಸ್ವಂತಿಕೆಯೇನೂ ಕಾಣಿಸುವುದಿಲ್ಲ. ಇದನ್ನು ಜಕ್ಕಣಾರ್ಯ ಸ್ವತಃ ತೆರೆದ ಮನಸ್ಸಿನಿಂದ ಹೇಳಿಕೊಂಡಿರುವುದನ್ನು ಗಮನಿಸಬಹುದು. "...ಉಭಯ ಪಿಂಡಾದಿ ಜ್ಞಾನ ಶೂನ್ಯಂತವಾದ ನೂರೊಂದು ಸ್ಥಲಂಗಳು ಅವನೇ ನಿರೂಪಿಸಿದ ಪುರಾತನರ ಮಹಾವಚನಂಗಳಿಗೆ ಜಕ್ಕಣಾರ್ಯರು ಅದರೊಳಗೆ ಸಾರಾಯವಾದ ನೂರೊಂದು ಸ್ಥಲ ವಚನಂಗಳ ತೆಗೆದುಕೊಂಡು ಸೂತ್ರವಿಟ್ಟು ಸಂಗ್ರಹಿಸಿದರು."[೨೫೧] ಅಂತು ಅಂಗಸ್ಥಲ ೪೪ಕ್ಕಂ ಸೇರಿಸಿದ ಪದನು ೨೫೩, ಲಿಂಗಸ್ಥಲ ೫೭ಕ್ಕಂ ಸೇರಿಸಿದ ಪದನು ೨೯೭; ಉಭಯ ೫೫೦" ಎಂಬ ವಿವರಣೆಯು ಈ ಕೃತಿಯು ಸಂಕಲನಗ್ರಂಥವಾಗಿರದೆ ಸಂಗ್ರಹ ಕೃತಿಯೆಂಬುದನ್ನು ಸ್ಪಷ್ಟಪಡಿಸುತ್ತದೆ. ಗುರು ಮಹಾಲಿಂಗದೇವರಿಂದ ಸಂಕಲನಗೊಂಡ ಕೃತಿಯನ್ನು ಇಲ್ಲಿ ಜಕ್ಕಣಾರ್ಯರು ಸ್ಥಲ - ಸ್ಥಲಸೂತ್ರ - ಸ್ಥಲ ಪದಗಳನ್ನು ಮಾತ್ರ ಸಂಗ್ರಹಿಸಿ ನಿರೂಪಿಸಿದ ಗ್ರಂಥವೆಂದು ಹೇಳುವಲ್ಲಿ ಈ ಕೃತಿಯ ಸ್ವರ ಪದ(ವಚನ)ಗಳಿಗೆ ಮಾತ್ರ ಮಹತ್ವಕೊಟ್ಟಿದೆಯೆಂಬುದು ಸ್ಪಷ್ಟವಾಗುತ್ತದೆ.[೨೫೨] ಈ ಕೃತಿಯು ಸಹ ಶರಣರ ವಚನ ಸಂಕಲನದಲ್ಲಿ ಇದು ಕೇವಲ ನೂರೊಂದು ಸ್ಥಲಗಳ ನಿರೂಪಣೆ ಗಳನ್ನೊಳಗೊಂಡ ಜಕ್ಕಣಾರ್ಯನ ಸ್ವರವಚನಗಳ ಕೃತಿಯಾಗಿದೆ.

ಹೀಗೆ ವೀರಶೈವ ಧರ್ಮದ ಆತ್ಮವಾಗಿರುವ ಷಟ್‌ಸ್ಥಲವನ್ನು ಪ್ರತಿಯೊಬ್ಬ ವೀರಶೈವನು ಹೇಗೆ ಆಚರಿಸಬೇಕು ಅದರ ಆಚರಣಾ ಕ್ರಮ ಏನು? ಇತರ ಸಮುದಾಯದವರೊಂದಿಗೆ ವೀರಶೈವ ಹೇಗೆ ವರ್ತಿಸಬೇಕು. ಸಾಧಕ ಭಕ್ತಸ್ಥಲದಿಂದ ಐಕ್ಯಸ್ಥಲಕ್ಕೆ ಹೇಗೆ ಏರುತ್ತಾನೆ ಎಂಬುದನ್ನು ತಿಳಿಸುತ್ತದೆ. ಹಾಗೆಯೇ ಆ ಷಟ್‌ಸ್ಥಲವು ಶಿವಾನುಭವಿಗಳ ಅನುಭವ, ಕ್ರಿಯಾಜ್ಞಾನ, ಸಾಧನೆ ಸಿದ್ಧಿ ಹೆಚ್ಚಿದಂತೆಲ್ಲಾ ಹೇಗೆ ವಿಭಜನೆಗೊಳ್ಳುತ್ತಾ ಹೋಗಿ ೧೦೧ ಸ್ಥಲಗಳಾಗುತ್ತವೆ ಎಂಬ ಅಂಶವನ್ನು ಹಂಪಿ ಪರಿಸರದ

ಕವಿಗಳು, ದಾರ್ಶನಿಕರು ಸಂಕಲನಕಾರರು ತಮ್ಮ ಕೃತಿಗಳಲ್ಲಿ ತೋರಿಸಿಕೊಟ್ಟಿದ್ದಾರೆ. ಹಂಪಿ ಪರಿಸರದ ಕವಿ ದಾರ್ಶನಿಕರೇ ಬಸವಾದಿ ಶರಣರ ವಚನಗಳನ್ನು ಸಂಗ್ರಹಿಸಿ ಸ್ಥಲಗಳಿಗನುಸಾರವಾಗಿ ಹೊಂದಿಸಿ, ಸಂಗ್ರಹಿಸಿರುವುದರಲ್ಲಿ ಮೊದಲಿಗರು ಎನ್ನಬಹುದು. ಮತ್ತೆ ಕೆಲವರು ನೂರೊಂದು ಸ್ಥಲಗಳನ್ನು ಕುರಿತು ಕಾವ್ಯದಲ್ಲಿ ವಿವರಿಸಿರುವುದೂ ಸಹ ಪ್ರಥಮವೆಂದೇ ಹೇಳಬಹುದಾಗಿದೆ.

**ರಾಜಧರ್ಮ**

ಯಾವುದೇ ಒಂದು ಧಾರ್ಮಿಕ ಸಿದ್ಧಾಂತ ಧರ್ಮವಾಗಿ ರೂಪುಗೊಳ್ಳಲು ಆ ಧಾರ್ಮಿಕ ಪಂಥದ ನೇತಾರರು, ಅನುಭಾವಿಗಳ ಶ್ರಮ ಅತ್ಯಗತ್ಯ. ಹಾಗೆಯೇ ಇದಕ್ಕೆ ರಾಜಕೀಯ ಪೋಷಣೆ, ರಕ್ಷಣೆ, ಪ್ರೋತ್ಸಾಹ ಅಷ್ಟೇ ಅವಶ್ಯಕವಾದದ್ದು. ೧೨ನೇ ಶತಮಾನದ ಲಿಂಗಾಯತ ಸಿದ್ಧಾಂತದ ಚಳುವಳಿ ಆ ಮೊದಲಿನ ಎಲ್ಲಾ ಶೈವ ಧಾರ್ಮಿಕ ಪಂಥಗಳನ್ನು ತನ್ನತ್ತ ಸೆಳೆದು ತನ್ನೊಡಲೊಳಗೆ ವಿಲೀನಗೊಳಿಸಿಕೊಂಡ ಮೇಲೆ ಚಳುವಳಿ ಕ್ರಾಂತಿರೂಪ ತಾಳಿ ಸ್ಫೋಟಗೊಂಡದ್ದು ಇತಿಹಾಸದ ಸತ್ಯ ಸಂಗತಿಯಾಗಿದೆ. ಈ ಚಳುವಳಿಯಲ್ಲಿದ್ದ ಶರಣರು ಚದುರಿ ಹೋದದ್ದು ಅಷ್ಟೇ ಸತ್ಯ ಸಂಗತಿ. ಅಲ್ಲಿ ಚದುರಿಹೋದ ಶರಣರ ಅನುಯಾಯಿಗಳು ಮತ್ತೆ ಒಂದುಗೂಡಿ ಲಿಂಗಾಯತ ಸಿದ್ಧಾಂತಕ್ಕೆ ಚೌಕಟ್ಟು ನಿರ್ಮಿಸಿ ಧರ್ಮವಾಗಿ ರೂಪಿಸಿದ್ದು ಹಂಪಿಯಲ್ಲಿಯೇ. ಆರಂಭಿಕ ಸಂಗಮವಂಶದ ಅರಸರು ಅಲ್ಪಮಟ್ಟಿನ ಪ್ರೋತ್ಸಾಹ ನೀಡಿದ್ದರೂ ಅದಕ್ಕೆ ಪೂರ್ಣ ಪ್ರಮಾಣದ ಬೆಂಬಲ ದೊರೆತದ್ದು ಮಾತ್ರ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿ ಪ್ರೌಢದೇವರಾಯನ ಕಾಲದಲ್ಲಿಯೇ. ಇದಕ್ಕೆ ಕಾರಣ ಪ್ರೌಢದೇವರಾಯ ವೀರಶೈವಧರ್ಮ ಸ್ವೀಕರಿಸಿದ್ದು ಪ್ರಮುಖ ಕಾರಣ ಎಂದು ಹೇಳಬಹುದು. ಪ್ರೌಢದೇವರಾಯ ವೀರಶೈವ ಧರ್ಮವನ್ನು ರಾಜಧರ್ಮವಾಗಿ ಘೋಷಿಸಿದ ಮೇಲೆ ಅದರ ಪ್ರಗತಿಯತ್ತ ಗಮನಹರಿಸಿದವರು ಲಕ್ಕಣ್ಣದಂಡೇಶ, ಜಕ್ಕಣಾರ್ಯ ಮುಂತಾದ ಅಧಿಕಾರಿಗಳು ಹಾಗೂ ಚಾಮರಸ, ಮಹಾಲಿಂಗದೇವ, ಕುಮಾರಬಂಕನಾಥ, ಮೊಗ್ಗೆಯ ಮಾಯಿದೇವ, ಕಲ್ಲುಮಠದ ಪ್ರಭುದೇವ, ಗುರುಬಸವ, ನೂರೊಂದು ವಿರಕ್ತರು, ಕರಸ್ಥಲ ವೀರಣ್ಣೊಡೆಯ ಮುಂತಾದ ಕವಿಗಳು ದಾರ್ಶನಿಕರು ಪ್ರಮುಖರಾಗಿದ್ದಾರೆ.

ಕವಿ ಹರಿಹರನ ಕಾಲಕ್ಕೆ ವೀರಶೈವ ಸಿದ್ಧಾಂತ ಧರ್ಮವಾಗುವ ಚಿಂತನೆ ಚಿಗುರೊಡೆದಿದ್ದರೂ ಅದು ಸಕಾರಗೊಂಡದ್ದು ಮಾತ್ರ ಸಂಗಮ ಅರಸ ಪ್ರೌಢದೇವರಾಯನ ಕಾಲದಲ್ಲಿಯೇ. ಈ ಪ್ರೌಢದೇವರಾಯನ ಆಳ್ವಿಕೆಯ ಕಾಲವೆಂದರೆ ಅದು ವೀರಶೈವ ಧರ್ಮರೂಪಗೊಂಡ ಕಾಲವೆಂದೇ ಪರಿಗಣಿತವಾಗಿದೆ.

**ಸಂಗಮ ಅರಸರು**

ಧರ್ಮ ರಕ್ಷಣೆಗಾಗಿಯೇ ಉದಯವಾದ ವಿಜಯನಗರ ಸಾಮ್ರಾಜ್ಯದ ಆರಂಭಿಕ ಸಂಗಮವಂಶದ ಅರಸರು ಕಟ್ಟಾ ಶೈವಧರ್ಮಾನುಯಾಯಿಗಳಾಗಿದ್ದರೆಂಬುದು ಎಲ್ಲರಿಗೂ ತಿಳಿದ ವಿಚಾರವಾಗಿದೆ. ಸಂಗಮ

ವಂಶದ ಆರಂಭಿಕ ಅರಸರು ಹಂಪಿಯ ಹರಿಹರ ಕವಿಯ ಸಾಹಿತ್ಯದ ಪ್ರಭಾವಕ್ಕೆ ಒಳಗಾಗಿ ತಮ್ಮ ಅಂತರಾತ್ಮದಲ್ಲಿ ವೀರಶೈವ ಸಿದ್ಧಾಂತ ಒಪ್ಪಿಕೊಂಡಂತೆ ತೋರುತ್ತದೆ. ಕಾರಣ ಹಂಪಿಗೆ ವಿರೂಪಾಕ್ಷನನ್ನು ಒಡೆಯನನ್ನಾಗಿ ಮಾಡಿದವನು ಹರಿಹರನೇ ಮೊದಲಿಗ. ನಂತರ ವೀರಶೈವ ಸಿದ್ಧಾಂತದ ಅನುಯಾಯಿಗಳಾದ ಕುರುಗೋಡು ಸಿಂಧರು, ಶೈವ-ವೀರಶೈವ ಅನುಯಾಯಿಗಳಾದ ಆರಂಭಿಕ ಸಂಗಮವಂಶದ ಅರಸರು ತಾವು ಸ್ಥಾಪಿಸಿದ ರಾಜ್ಯಕ್ಕೆ ಒಡೆಯ ವಿರೂಪಾಕ್ಷನೆಂದು ಘೋಷಿಸಿದರು. ವಿರೂಪಾಕ್ಷನನ್ನು ವೀರಶೈವ ದೇವತೆಯಾಗಿ ರೂಪಿಸಿದ ಹರಿಹರನ ಮಾರ್ಗವನ್ನು ಸಂಗಮವಂಶದ ಆರಂಭಿಕ ಅರಸರು ಅನುಸರಿಸಿದಂತೆ ಕಂಡುಬರುತ್ತದೆ. ಅಂದರೆ ವಿರೂಪಾಕ್ಷನ ಹೆಸರಿನಿಂದ ಆಡಳಿತ ಮಾಡಿರುವುದನ್ನು ಕಾಣಬಹುದು. ಶಾಸನ ಭಾಷೆ ಮತ್ತು ಲಿಪಿ ಯಾವುದೇ ಆಗಿದ್ದರೂ "ಶ್ರೀ ವಿರೂಪಾಕ್ಷ" ಎಂಬ ಹಸ್ತಾಕ್ಷರವು ಸಾಮಾನ್ಯವಾಗಿ ಕನ್ನಡ ಲಿಪಿಯಲ್ಲಿರುತ್ತದೆ. "ಶ್ರೀ ವಿರೂಪಾಕ್ಷ" ಹಸ್ತಾಕ್ಷರ ವಿಜಯನಗರ ಅರಸರದೇ ಆಗಿದೆ ಎಂಬುದಕ್ಕೆ ೨ನೇ ಹರಿಹರನ ಅನೇಕ ಶಾಸನಗಳು ಪುಷ್ಠಿ ನೀಡುತ್ತವೆ. ತುಮಕೂರು ಜಿಲ್ಲೆಯ ನಾಗಸಂದ್ರದ ಶಾಸನದಲ್ಲಿ "ಹರಿಹರರಾಯನ ಶ್ರೀಹಸ್ತದ ಬರಹ ಶ್ರೀವಿರೂಪಾಕ್ಷ"[೨೫೩] ಎಂದೂ ದಾವಣಗೇರಿ ಜಿಲ್ಲೆಯ ಹರಿಹರ ಶಾಸನದಲ್ಲಿ "ಶ್ರೀ ಹರಿಹರರಾಯನ ಮೊಪ್ಪ ಶ್ರೀ ವಿರೂಪಾಕ್ಷ"[೨೫೪] ಎಂದು ದಾಖಲಿಸಿದೆ. ಅಲ್ಲದೆ ೧ನೇ ಹರಿಹರ ರಾಯನಿಗೆ ಕಾಶಿವಿಲಾಸ ಕ್ರಿಯಾಶಕ್ತಿಗಳು,[೨೫೫] ಕುಮಾರ ಕಂಪಣ್ಣ, ಇಮ್ಮಡಿ ಬುಕ್ಕ, ಮಾರಪ್ಪರಿಗೆ ಕ್ರಿಯಾಶಕ್ತಿಗಳು ರಾಜಗುರುಗಳಾಗಿದ್ದರು.[೨೫೬]

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಸಂಗಮವಂಶದ ಆರಂಭಿಕ ಅರಸರು ಪ್ರಬಲ ಶೈವ ಧರ್ಮೀಯರಾಗಿದ್ದು ವೀರಶೈವ ಸಿದ್ಧಾಂತದ ಪ್ರಭಾವಕ್ಕೆ ಒಳಗಾಗಿದ್ದರು ಎಂದು ಹೇಳಬಹುದಾಗಿದೆ. ೧ನೇ ಹರಿಹರನಿಂದ (ಕ್ರಿ.ಶ.೧೩೩೬-೧೩೫೬) ಹಿಡಿದು ವಿಜಯ ಬುಕ್ಕರಾಯ (ಕ್ರಿ.ಶ.೧೪೨೨-೨೪)ರವರೆಗೆ ಆಳ್ವಿಕೆ ಮಾಡಿದ ಎಲ್ಲಾ ಸಂಗಮ ವಂಶದ ಅರಸರು ವೀರಶೈವದ ಕಡೆ ಒಲವು ಹೊಂದಿದ್ದರೆಂದು ಹೇಳಬಹುದಾಗಿದೆ. ಕ್ರಿ.ಶ.೧೩೬೬ರ ಬುಕ್ಕರಾಯನ ಬಾಳೆಹೊನ್ನೂರು ರಂಭಾಪುರಿ ಪೀಠದ ವೀರಭದ್ರ ದೇವಾಲಯದ ಹಿಂಬದಿಯ ಹೊರ ಅಂಗಳದಲ್ಲಿರುವ ಅಪ್ರಕಟಿತ ಶಾಸನವು ಸ್ವಹಸ್ತ ಹಾಕಿದ ವೀರಬುಕ್ಕರಾಯನು ತನ್ನ ಕುಲದೇವರಾದ ಅಲ್ಲಿನ ವೀರಭದ್ರನಿಗೆ ದೇವದಾನ ನೀಡಿದ ಸಂಗತಿಯನ್ನೊಳಗೊಂಡಿದೆ.[೨೫೭]

ಆದರೆ ಹಂಪಿಯ ಕ್ರಿ.ಶ.೧೩೭೯,[೨೫೮] ಕ್ರಿ.ಶ.೧೪೧೦[೨೫೯] ಶಾಸನಗಳು ಸಂಗಮ ವಂಶದ ದೊರೆಗಳನ್ನು ಯದುಕುಲ, ಯದುವಂಶದವರೆಂದು ದಾಖಲಿಸಿವೆ. ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇವರು ಜಾತಿಯಿಂದ ಯಾದವರಾಗಿದ್ದು, ವೀರಶೈವ ಸಿದ್ಧಾಂತವನ್ನು ಹರಿಹರ ಕವಿಯ ಪ್ರಭಾವಕ್ಕೆ ಒಳಗಾಗಿ ಒಪ್ಪಿ ಬದುಕಿನಲ್ಲಿ ಅಳವಡಿಸಿಕೊಂಡಂತೆ ತೋರುತ್ತದೆ. ೨ನೇ ದೇವರಾಯ ವೀರಶೈವ

ಸಿದ್ಧಾಂತವನ್ನೇ ಆಡಳಿತದಲ್ಲಿ ಅಳವಡಿಸಿಕೊಂಡು ಅದು ಧರ್ಮವಾಗಿ ರೂಪುಗೊಳ್ಳಲು ಪ್ರೋತ್ಸಾಹಿಸಿದಂತೆ ಈತನ ಕಾಲದ ಕನ್ನಡ ಸಾಹಿತ್ಯ ಕೃತಿಗಳಿಂದ ತಿಳಿದುಬರುತ್ತದೆ.

**ಇಮ್ಮಡಿ ದೇವರಾಯ (ಕ್ರಿ.ಶ.೧೪೨೪-೧೪೪೬)**

ಸಂಗಮವಂಶದ ಅರಸರಲ್ಲಿಯೇ ಅತ್ಯಂತ ಪ್ರಬಲ ಅರಸನೆಂದರೆ ಇಮ್ಮಡಿ ದೇವರಾಯ. ಈತ ಕ್ರಿ.ಶ.೧೪೧೭ರಲ್ಲೇ ಅಧಿಕಾರದ ಚುಕ್ಕಾಣಿ ಹಿಡಿದಿದ್ದನೆಂದು ಶಾಸನಗಳಿಂದ ತಿಳಿದುಬರುತ್ತದೆ. ಹಂಪಿಯ ಕ್ರಿ.ಶ.೧೪೨೬ರ ಶಾಸನವು ಇಮ್ಮಡಿ ದೇವರಾಯನಿಗೆ ಅಭಿನವ ದೇವರಾಯ, ವೀರದೇವರಾಯ ಎಂದು ಕರೆದಿದ್ದು, ಈತನ ತಂದೆ ವಿಜಯ ಎಂದು ಹೇಳಿದೆ.[೫೦] ಈ ಶಾಸನದಲ್ಲಿ ಈತನನ್ನು ಯದುಕುಲ ತಿಲಕನೆಂದು ಕರೆಯಲಾಗಿದೆ. ಅಂದರೆ ಇಮ್ಮಡಿ ದೇವರಾಯ (ಪ್ರೌಢದೇವರಾಯ) ಹುಟ್ಟಿನಿಂದ ಯಾದವ ಕುಲದವನಾಗಿದ್ದು ಬದುಕಿನಲ್ಲಿ ಪಾಲಿಸುತ್ತಿದ್ದ ಧಾರ್ಮಿಕ ಪಂಥ(ಧರ್ಮ) ಮಾತ್ರ ವೀರಶೈವವಾಗಿತ್ತೆಂದು ಅರ್ಥೈಸಬೇಕಾಗುತ್ತದೆ. ಏಕೆಂದರೆ ಈತನ ಕಾಲದಲ್ಲಿಯೇ ವೀರಶೈವ ಅನೇಕ ಧಾರ್ಮಿಕ ಕೃತಿಗಳು ರಚನೆಯಾಗಿರುವುದನ್ನು ಕಾಣಬಹುದು.

ಸಂಗಮವಂಶದ ಆರಂಭಿಕ ಅರಸರು ಮೂಲತಃ ಶೈವಧರ್ಮದ ಕಾಳಾಮುಖ ಪಂಥದ ಅನುಯಾಯಿಗಳಾಗಿದ್ದರು. ಆದರೆ ಪ್ರೌಢದೇವರಾಯನ ಕಾಲಕ್ಕೆ ವೀರಶೈವರಾಗಿ ಪರಿವರ್ತನೆಯಾಗಿರುವುದನ್ನು ಕಾಣಬಹುದು. ಡಾ.ಎಂ.ಚಿದಾನಂದಮೂರ್ತಿಯವರು ಪ್ರೌಢದೇವರಾಯನ ಕಾಲದ ವೀರಶೈವದ ಸ್ವರೂಪ ವನ್ನೂ, ತತ್ಕಾಲೀನ ವೀರಶೈವದ ವರ್ಚಸ್ಸನ್ನೂ ಕುರಿತು ಕೆಲವಂಶಗಳನ್ನುಮುಂದಿಟ್ಟಿದ್ದಾರೆ.

೧. ಅಂದು ಕಾಳಾಮುಖರಿಗೂ, ಪಾಶುಪತರಿಗೂ ಅಂತಹ ಪ್ರಬಲ ವ್ಯತ್ಯಾಸಗಳಿರಲಿಲ್ಲ.

೨. ೧೫ನೆಯ ಶತಮಾನದಲ್ಲಿ ವೀರಶೈವರು ಕಾಳಾಮುಖ, ಪಾಶುಪತರುಗಳನ್ನು ಗೌರವಿಸುತ್ತಿದ್ದದಕ್ಕೆ ಅವರು ವೀರಶೈವರಾಗಿ ಪರಿವರ್ತನೆ ಹೊಂದಿದುದೇ ಬಹುಮಟ್ಟಿಗೆ ಕಾರಣ.

೩. ಕ್ರಿ.ಶ.೧೪೧೦ ರಿಂದ ಈಚೆಗೆ ಕಾಳಾಮುಖ ಗುರುಗಳ ಹೆಸರು ಕಂಡುಬರುವುದಿಲ್ಲ. ಕ್ರಿ.ಶ.೧೪೩೦ರಲ್ಲಿ ಲಕ್ಕಣ್ಣ ದಂಡೇಶನು ಕಾಳಾಮುಖ ಪಂಥವನ್ನು ಹೊಗಳುತ್ತಾನೆ. ಕಾಳಾಮುಖರು ವೀರಶೈವರಾಗಿ ಪರಿವರ್ತನೆ ಹೊಂದಿದ ಕಾರ್ಯ ಸರಿಸುಮಾರು ೧೪೧೦-೨೦ರಲ್ಲಿ ಅಥವಾ ಅದಕ್ಕೂ ಹಿಂದೆ ಆರಂಭವಾಗಿ ನಿಧಾನವಾಗಿ ಮುಂದುವರೆದಂತೆ ತೋರುತ್ತದೆ.[೫೧] ಈ ಆಧಾರಗಳ ಹಿನ್ನೆಲೆಯಿಂದ ಕಾಳಾಮುಖ, ಪಾಶುಪತಗಳು ಕ್ರಿ.ಶ.೧೫ನೆಯ ಶತಮಾನದ ಹಿಂದೆಯೇ ವೀರಶೈವದಲ್ಲಿ ಲೀನವಾಗುತ್ತಾ ಬಂದಿರುವುದು ತಿಳಿದುಬರುತ್ತದೆ.

ಈ ಮೇಲಿನ ಅಂಶ ಆಧರಿಸಿ ಹೇಳುವುದಾದರೆ ಪ್ರೌಢದೇವರಾಯ ಸಂಪೂರ್ಣ ವೀರಶೈವ ಧರ್ಮೀಯನಾಗಿದ್ದನೆಂದು ಹೇಳಬಹುದು. ಈತನ ಅನೇಕ ಶಾಸನಗಳಲ್ಲಿ ವೀರಶೈವ ಪಾರಿಭಾಷಿಕ ಪದ ಪ್ರಯೋಗವಾಗಿರುವುದನ್ನು ಕಾಣಬಹುದು.

ಕ್ರಿ.ಶ.೧೪೩೨ರ ನಂಜನಗೂಡು ಶಾಸನವು "ಹರಿಯಪ್ಪವೊಡೆಯರಿಗೆ ಧರ್ಮವಾಗಬೇಕೆಂದು ಗಣಾಚಾರಿ ಹರಿಯಂಣನು..."[೫೨] ಎಂದೂ, ಕ್ರಿ.ಶ.೧೪೩೪ರ ಹಿರೇ ಆವಳಿಯ ಶಾಸನವು "ಶ್ರೀನಂದಿನಾಥ ಭ್ರುಂಗಿನಾಥ ಶ್ರೀವೀರಭದ್ರದೇವರು ಮುಖ್ಯವಾದ ಶ್ರೀಕಯಿಲಾಸ ನಿವಾಸಿನಿಯರುಮಪ್ಪ ಶ್ರೀಮಂಮಹಾ ಮಲ್ಲಿಕಾರ್ಜುನ ಮ.ಲಿಂಗದೇವರ ದಿಬ್ಯ ಶ್ರೀಪಾದಪದ್ಮಾರಾಧಕರುಮಪ್ಪ. ಜನ ಸುಧಸಿವಾಚಾರ ಸಂಪಂನರುಮಪ್ಪ ದೇವ...."[೫೩] ಎಂದು ಉಲ್ಲೇಖಿಸಿದರೆ, ಕ್ರಿ.ಶ.೧೪೩೬ರ ಕೃಷ್ಣಾಪುರ ಶಾಸನವು "ಲಿಂಗಮುದ್ರೆಯ ಕಲ್ಲಂನೆಟ್ಟು ಕೊಟ್ಟಕ್ರಮ......... ಗುರುಲಿಂಗ ಜಂಗಮಕ್ಕೆ ಆಂನ್ನ ಉದಕ ಸಮರ್ಪ್ಪಣೆಯಾಗ..."[೫೪] ಎಂದೂ ದಾಖಲಿಸಲಾಗಿದೆ. ಈ ಮೇಲಿನ ಶಾಸನಗಳನ್ನು ಗಮನಿಸಿದ್ದಾರೆ ಪ್ರೌಢದೇವರಾಯ ವೀರಶೈವ ಧರ್ಮ ಸ್ವೀಕರಿಸಿದ್ದನೆಂದೂ ಮತ್ತು ಅದರ ಪೋಷಕನಾಗಿದ್ದನೆಂದು ಅರಿಯಬಹುದು.

ಈ ಮೇಲಿನ ಶಾಸನಗಳಿಂದ ತಿಳಿದುಬರುವ ಅಂಶವೆಂದರೆ ಹಿರೇ ಆವಳಿಯ ಶಾಸನದ ಪ್ರಕಾರ ಪ್ರೌಢದೇವರಾಯ ಶ್ರೀನಂದಿನಾಥ, ಭೃಂಗಿನಾಥ ಶ್ರೀವೀರಭದ್ರದೇವರು, ಶ್ರೀಮಲ್ಲಿಕಾರ್ಜುನ, ಮಹಾಲಿಂಗದೇವರ ಪಾದಪದ್ಮಾರಾಧಕನಾಗಿದ್ದನೆಂದು ತಿಳಿಯುತ್ತದೆ. ಈ ಶಾಸನವನ್ನು ಮುಕ್ತಿನಾಥ ಒಡೆಯರಿಂದ ಮಾಡಿಸಿದಂತೆ ಹೇಳಲಾಗಿದೆ. ಅಲ್ಲದೆ ಶುದ್ಧಶಿವಾಚಾರ ಸಂಪನ್ನರು ಎಂದು ಶಾಸನ ಹೊಗಳಿರುವುದನ್ನು ಕಾಣಬಹುದು. ಕೃಷ್ಣಾಪುರ ಶಾಸನವು ಆ ಭಾಗದ ಗುರುಲಿಂಗ ಜಂಗಮಕ್ಕೆ ಅನ್ನ ಉದಕ ಸಂತರ್ಪಣೆಗಾಗಿ ಲಿಂಗಮುದ್ರೆ ಕಲ್ಲನ್ನು ನೆಟ್ಟು ದಾನ ಕೊಟ್ಟ ವಿವರ ತಿಳಿದುಬರುತ್ತದೆ. ಈ ಶಾಸನಗಳಲ್ಲಿ ವ್ಯಕ್ತವಾಗಿರುವ ವೀರಶೈವ ಪಾರಿಭಾಷಿಕ ಪದಗಳು ಪ್ರೌಢದೇವರಾಯ ವೀರಶೈವನಾಗಿದ್ದನೆಂದು ತಿಳಿಯಬಹುದಾಗಿದೆ.

ಕೆಂಜಗಾಪುರದ ಕ್ರಿ.ಶ.೧೪೪೯ರ ಶಾಸನವು "...ಶೈವಾಗಮ ಸಾರ ಸಂಪನ್ನರು..."[೫೫] ಎಂದೂ, ಕ್ರಿ.ಶ.೧೪೪೫ರ ಗೋವಿನಹಳ್ಳಿ ಶಾಸನವು "ಮಲ್ಲಿಕಾರ್ಜುನ ದೇವಸ್ಯ ಶ್ರೀಗೀತಾ ಸಂವಿವಾಸಿನಃ...."[೫೬] ಎಂದು ದಾಖಲಿಸಿದೆ. ಕೆಂಜಿಗಾಪುರ ಶಾಸನವು ತ್ರುಟಿತವಿದ್ದು ಇದನ್ನು ವೀರಶೈವಾಗಮ ಸಾರಸಂಪನ್ನರು ಎಂದು ವಿದ್ವಾಂಸರು ಅರ್ಥೈಸಿರುವುದನ್ನು ಡಾ.ಡಿ.ವಿ.ಪರಮಶಿವಮೂರ್ತಿಯವರು ತಿರಸ್ಕರಿಸಿ ಅದನ್ನು ಶುದ್ಧ ಶೈವಾಗಮ ಸಾರಸಂಪನ್ನರಿರಬೇಕೆಂದು ಕೆಲವು ಆಧಾರದಿಂದ ನಿರೂಪಿಸಿದ್ದಾರೆ.[೫೭] ಪ್ರೌಢದೇವರಾಯ ಯುವರಾಜನಾಗಿದ್ದಾಗ ಶುದ್ಧ ಶೈವನಾಗಿದ್ದು ಚಕ್ರವರ್ತಿಯಾದ ಕೆಲವೇ ವರ್ಷಗಳಲ್ಲಿ (ಕ್ರಿ.ಶ.೧೪೩೦ರ ನಂತರ) ವೀರಶೈವನಾಗಿ ವೀರಶೈವ ಧರ್ಮ ಪೋಷಕನಾದನೆಂದು ತಿಳಿಯಬಹುದಾಗಿದೆ. ಈತನು ಆಡಳಿತದ ಕೊನೆಯ ಹಂತದಲ್ಲಿ ಧರ್ಮಪೋಷಕನಾದನೆಂದು ತಿಳಿಯಬಹುದಾಗಿದೆ. ಈತನು ಆಡಳಿತದ ಕೊನೆಯ ಹಂತದಲ್ಲಿ ಹಾಕಿಸಿದ ಶಾಸನದ ಪ್ರಕಾರ ಶ್ರೀಶೈಲ ಮಲ್ಲಿಕಾರ್ಜುನ ದೇವರಲ್ಲಿ ಅನನ್ಯ ಭಕ್ತಿ

ಹೊಂದಿದ್ದು, ಈ ದೇವರ ವರ ಪ್ರಸಾದದಿಂದ ಪ್ರೌಢದೇವೇಶ(ಮಲ್ಲಿಕಾರ್ಜುನ)ನೆಂಬ ಮಗ ಹುಟ್ಟಿದನೆಂದು ತಿಳಿದುಬರುತ್ತದೆ.[೨೮] ಶಾಸನಗಳ ದಾಖಲೆಗಳ ಹಿನ್ನೆಲೆಯಲ್ಲಿ ಅಲ್ಲಿ ಬಳಸಿರುವ ವೀರಶೈವ ಪಾರಿಭಾಷಿಕ ಪದಗಳಿಂದ ಪ್ರೌಢದೇವರಾಯ(ಇಮ್ಮಡಿ ದೇವರಾಯ) ವೀರಶೈವನಾಗಿದ್ದನೆಂದು ಹೇಳಬಹುದಾಗಿದೆ.

ಕನ್ನಡ ಸಾಹಿತ್ಯ(ಕಾವ್ಯ) ಕೃತಿಗಳ ಹಿನ್ನಲೆಯಲ್ಲಿ ಪ್ರೌಢದೇವರಾಯ ಹೇಗೆ ವೀರಶೈವನಾದ ಮತ್ತು ಆ ಧರ್ಮ ರೂಪಿಸುವಲ್ಲಿ ವಹಿಸಿದ ಪಾತ್ರ ಪೋಷಣೆ ಏನು? ಎಂಬ ಅಂಶಗಳನ್ನು ಈ ಕೆಳಗಿನ ಕೃತಿಗಳ ಆಧಾರದಿಂದ ವಿಶ್ಲೇಷಿಸಲಾಗಿದೆ.

ಲಕ್ಕಣ್ಣ ದಂಡೇಶ ತನ್ನ ಶಿವತತ್ವಾ ಚಿಂತಾಮಣಿಯಲ್ಲಿ

"ಸುಜನರಂ ಪರೀಕ್ಷಿಸುತ ಶಿವಾರ್ಚಕರಿಗನಿಶಂ ಸಮಾಧಾನವಿತ್ತು
ವೃಜಿನಹರ ಪಂಪಾವಿರಪಾಕ್ಷ ಚರಣಮಂ
ಭಜಿಸುತಂ ವಿಜಯಕಲ್ಯಾಣ ಪುರದೊಳು ಮೆಚ್ಚೆ
ವಿಜಯನೆನೆ ದೇವರಾಜೇಂದ್ರನಿರವಜಿವವರ......"

"ಪೂಜಕನು ತಾನೆಯಾದಪೆನೆನುತೆ ಮನವೊಲಿದು
ರಾಜಶೇಖರ ವಿರೂಪಾಕ್ಷಂ ಸ್ವಲೀಲೆಯಿಂ
ರಾಜಾಧಿರಾಜ ಪರಮೇಶ್ವರಂ ಶ್ರೀ ವೀರದೇವರಾಜೇಂದ್ರನಾಗಿ...."[೨೯]

ಎಂದಿದ್ದಾನೆ.

ಲಕ್ಕಣ್ಣದಂಡೇಶ ದೇವರಾಜೇಂದ್ರನ ರಾಜಧಾನಿ ಹಂಪಿಯನ್ನು ವಿಜಯ ಕಲ್ಯಾಣವೆಂದೂ, ಅದು ಸಂತಸದ ಬೀಡು ಸೌಭಾಗ್ಯದಾಗರವಾಗಿದ್ದಂತೆ ಲಿಂಗ ತೀರ್ಥಗಳಿಂದಲೂ ಶಿವಭಕ್ತರಿಂದಲೂ ತುಂಬಿತ್ತು. ಇಮ್ಮಡಿ ದೇವರಾಯನು ಸುಜನರನ್ನು ಪರೀಕ್ಷಿಸುತ್ತಾ ಶಿವಾರ್ಚಕರನ್ನು ಸಂತೃಪ್ತಿಗೊಳಿಸುತ್ತಾ ಪಂಪಾ ವಿರೂಪಾಕ್ಷನ ಚರಣವನ್ನು ಭಜಿಸುತ್ತಾ ವಿಜಯ ಕಲ್ಯಾಣದಲ್ಲಿದ್ದನು. ಅಲ್ಲದೆ ಸಾಕ್ಷಾತ್ ವಿರೂಪಾಕ್ಷನು ಸ್ವಲೀಲೆಯಿಂದ ತಾನೇ ಪೂಜಕನಾದೆಯೋ ಎಂಬಂತೆ ವೀರದೇವರಾಜೇಂದ್ರವಿದ್ದನೆಂದೂ ಈತನಿಂದ ವಿಜಯ ಕಲ್ಯಾಣಪುರ ಸದಾಚಾರ ಸದ್ಭಕ್ತಿಗಳ ಜನ್ಮಭೂಮಿಯಾಗಿತ್ತೆಂದು ಲಕ್ಕಣ್ಣದಂಡೇಶ ತನ್ನ ಕಾವ್ಯದಲ್ಲಿ ಹೇಳುತ್ತಾನೆ. ಬಸವಾದಿ ಶರಣರು ನೆಲೆಸಿದ್ದ ಬಿಜ್ಜಳನ ರಾಜಧಾನಿ ಕಲ್ಯಾಣವಾದರೆ ವೀರಶೈವ ಕವಿಗಳು ದಾರ್ಶನಿಕರು, ವಿರಕ್ತರು ನೆಲಸಿದ್ದ (ಹಂಪಿ) ವಿಜಯನಗರವು ಪ್ರೌಢದೇವರಾಯನ ಕಾಲದಲ್ಲಿ ವಿಜಯಕಲ್ಯಾಣವಾಗಿದ್ದುದು ಗಮನಾರ್ಹ ಅಂಶವಾಗಿದೆ.

ಚಂದ್ರಶೇಖರ ಕವಿ ತನ್ನ ಪಂಪಾಸ್ಥಾನ ವರ್ಣನಂ ಕಾವ್ಯದಲ್ಲಿ

"ನೆಗಳ್ದ ನಳ ನಹುಷ ದಶರಥ
ಸಗರ ಹರಿಶ್ಚಂದ್ರ ಧುಂಧುಮಾರ ಭಗೀರಥ

ನೃಗ ಕಾರ್ತವೀರ್ಯ ನೃಪರೋ
ರಗೆಯೆನಿಪಂ ಪ್ರೌಢದೇವರಾಯ ನರೇಂದ್ರಂ"[೨೦]

ಚಂದ್ರಶೇಖರ ಕವಿ ತನಗೆ ಆಶ್ರಯ ನೀಡಿದ ಪ್ರೌಢದೇವರಾಯ ನಳ, ನಹುಷ, ದಶರಥ ಸಗರ ಹರಿಶ್ಚಂದ್ರ, ಭಗೀರಥ ಮೊದಲಾದ ರಾಜರುಗಳಿಗಿಂತ ಶ್ರೇಷ್ಠನೆಂದು ಹೇಳಿದ್ದಾನೆ.

ಅದೃಶ್ಯ ಕವಿ ತನ್ನ ಪ್ರೌಢರಾಯನ ಕಾವ್ಯದಲ್ಲಿ ಹೇಳುವಂತೆ "ಲಕ್ಕಣಾಚಾರ್ಯ, ಜಕ್ಕಣಾರಂಥ ಮಹಾಮಂತ್ರಿಗಳು ವೀರಶೈವರಾಗಿದ್ದು ಸ್ವತಃ ಕೃತಿ ರಚನೆ ಮಾಡಿ ಪ್ರೌಢರಾಯನಿಗೆ ತಮ್ಮ ಧರ್ಮದಲ್ಲಿ ಭಕ್ತಿ, ವಿಶ್ವಾಸಗಳನ್ನು ಹುಟ್ಟಿಸುವಂತೆ ಮಾಡಿದರು. ಪ್ರೌಢರಾಯನು ಇವರ ಪ್ರಭಾವಕ್ಕೊಳಗಾಗಿ ವೀರಶೈವಧರ್ಮ ಹಾಗೂ ವೀರಶೈವ ಕವಿಗಳಿಗೆ ರಾಜಾಶ್ರಯವನಿತ್ತನು ಎಂದಿದ್ದಾನೆ.[೨೧] ಪ್ರೌಢದೇವರಾಯ ವೀರಶೈವನಾಗಿ ವೀರಶೈವ ಧರ್ಮಕ್ಕೆ ರಾಜಾಶ್ರಯ ನೀಡಿದ್ದರ ಬಗ್ಗೆ ಅದೃಶ್ಯ ಕವಿ

"ಶ್ರೀ ಪರಮ ಶಿವಭಕ್ತ ಜಕ್ಕಣಾರ್ಯನಿಂ
ಶ್ರೀ ಪನುತ ಪದಭಕ್ತ ಮಹಿಮೆಗಳ ನೆರೆ ಕೇಳ್ದು ಗೋಪನತ ಪದಭಕ್ತನಾಗಿ
ಭೂಪಾಲರೊಳು ಮೆರೆದನುರೆ ಪ್ರೌಢ ಭೂಪಂ"[೨೨]

ಎಂದು ಹೇಳಿದ್ದಾನೆ. ಕವಿಯ ಪ್ರಕಾರ ಜಕ್ಕಣಾರ್ಯನಿಂದ ಪ್ರೌಢದೇವರಾಯ ಶಿವಭಕ್ತರ ವಿಷಯ ತಿಳಿದು ವೀರಶೈವನಾದ (ಪದಭಕ್ತ-ವಚನಗಳ ಅನುಯಾಯಿ) ಎಂದು ಅರ್ಥೈಸಿದ್ದಾನೆ.

ಅದೃಶ್ಯ ಕವಿ ಮುಂದುವರೆದು ಪ್ರೌಢದೇವರಾಯನ ಆಸ್ಥಾನದಲ್ಲಿದ್ದ ಕವಿಗಳ ವಿವರ ನೀಡುತ್ತಾನೆ.

"ಹರರೂಪನಾದ ನೂರೊಂದು ಸುವಿರಕ್ತರುರೆ
ಕರಸ್ಥಲದ ನಾಗಿದೇವನು ಕಲ್ಲಮಠದ ಪ್ರಭು
ವರನು ವೀರಣ್ಣೊಡೆಯರಂ ಚಾಮರಸರಾದಿ ಶಿವಭಕ್ತತತಿಯ ನೆರೆದು
........................................................................
ಧರೆಯೊಳಚ್ಚರಿಯೆನಿಸೆ, ಮೆರೆಯಿಸಿದರಾಯಿರುಳು ಏಕೋತ್ರ ಶತಸ್ಥಲವನು"[೨೩]

ಅದೃಶ್ಯ ಕವಿ ಹೇಳುವಂತೆ ಪ್ರೌಢದೇವರಾಯನ ಆಸ್ಥಾನದಲ್ಲಿ ನೂರೊಂದು ವಿರಕ್ತರು ಕರಸ್ಥಲದ ನಾಗಿದೇವ, ಕಲ್ಲುಮಠದ ಪ್ರಭುದೇವ, ವೀರಣ್ಣೊಡೆಯ, ಚಾಮರಸ ಮುಂತಾದ ಕವಿ ದಾರ್ಶನಿಕರು, ಶಿವಭಕ್ತರಿದ್ದರು ಅವರು ಜಕ್ಕಣಾರ್ಯನ ಏಕೋತ್ತರ ಶತಸ್ಥಲ ಕೃತಿಯನ್ನು ದೊರೆಯ ಸಮ್ಮುಖದಲ್ಲಿ ಮೆರವಣಿಗೆ ಮಾಡಿ ಮೆರೆಸಿದರೆಂದು ತಿಳಿಸುತ್ತಾನೆ.

ವಿರೂಪಾಕ್ಷ ಪಂಡಿತನು ತನ್ನ ಚೆನ್ನಬಸವ ಪುರಾಣದಲ್ಲಿ 'ಕಾಲಜ್ಞಾನ ಸಂಧಿ'ಯಲ್ಲಿ "ಕರಸ್ಥಲದ ವೀರಣ್ಣೊಡೆಯ, ಕರಸ್ಥಲದ ನಾಗಿದೇವನ ಗುರು, ಇವನು ವಿದ್ಯಾನಗರಿಗೈತರಲು ವೀರಣ್ಣೊಡೆಯನಿಗೆ ದೊರೆ ತನ್ನ ಮಗಳನ್ನು ಕೊಟ್ಟು, ವೀರಣ್ಣೊಡೆಯ ಪ್ರೌಡ ಭೂವರನೊಡನೆ ಅಲ್ಲಿಯೇ ಶಿವಗೋಷ್ಠಿ

ಯಲ್ಲಿದ್ದ''[೨೭೪]ನೆಂದು ಉಲ್ಲೇಖಿಸಿದ್ದಾನೆ. ಮೋದಿಯ ರುದ್ರನು ತನ್ನ 'ನೂರೊಂದು ವಿರಕ್ತರ' ಕಾವ್ಯದಲ್ಲಿ ಕರಸ್ಥಲದ ವೀರಣ್ಣೊಡೆಯನಿಂದ ವಿರಕ್ತರ ಕಥೆಗಳನ್ನು ಹೇಳುತ್ತಾ, ರಾಯನಿಗೆ ವೀರಶೈವದ ದೀಕ್ಷೆಯನ್ನೇ ಕೊಡಿಸಿದಂತಿದೆ.[೨೭೫]

ಈ ಮೇಲಿನ ಕೃತಿಗಳಲ್ಲದೆ ಸಿದ್ಧನಂಜೇಶನ 'ರಾಘವಾಂಕ ಚರಿತೆ', 'ಗುರುರಾಜ ಚಾರಿತ್ರ' ಶಂಕರ ಕವಿಯ ಚೋರಬಸವಚರಿತೆ ಮುಂತಾದ ಕೃತಿಗಳಲ್ಲಿ ಪ್ರೌಢದೇವರಾಯ ವೀರಶೈವಧರ್ಮಕ್ಕೆ ಪ್ರೋತ್ಸಾಹಿಸಿದ ವಿವರ ದೊರೆಯುತ್ತದೆ.

ಪ್ರೌಢದೇವರಾಯ ''ಚಾಮರಸ (ಪ್ರಭುಲಿಂಗಲೀಲೆ), ಲಕ್ಕಣ್ಣ ದಂಡೇಶ (ಶಿವತತ್ತ್ವ ಚಿಂತಾಮಣಿ) ಜಕ್ಕಣಾರ್ಯ(ನೂರೊಂದು ಸ್ಥಲ), ಮೊಗ್ಗೆಯ ಮಾಯಿದೇವ(ಷಟ್‌ಸ್ಥಲಗದ್ಯ ಮುಂತಾದ ೧೨ ಕೃತಿಗಳು) ಗುರುಬಸವ(ವೃಷಭಗೀತೆ ಮುಂತಾದ ೭ ಕೃತಿಗಳು), ಚಂದ್ರಶೇಖರ (ಪಂಪಸ್ಥಾನ ವರ್ಣನಂ, ಶಂಕರಶತಕ) ಕರಸ್ಥಲದ ವೀರಣ್ಣೊಡೆಯ (ನಿಷ್ಕಲಶತಕ ಮುಂತಾದ ೯ ಕೃತಿಗಳು), ಕರಸ್ಥಲ ನಾಗಿದೇವ (ಷಟ್‌ಸ್ಥಲದ ನಿರ್ಣಯ ಮುಂತಾದ ೧೧ ಕೃತಿಗಳು) ಮಹಾಲಿಂಗದೇವ (ಏಕೋತ್ತರ ಶತಸ್ಥಲ ಮುಂತಾದ ೩ ಕೃತಿಗಳು) ಕಲ್ಲುಮಠದ ಪ್ರಭುದೇವ(ಲಿಂಗಲೀಲಾ ವಿಲಾಸ ಚಾರಿತ್ರ, ಪ್ರಭುದೇವರ ಮಂತ್ರಗೋಪ್ಯ ಟೀಕೆ) ಕರಸ್ಥಲದ ಮಲ್ಲಿಕಾರ್ಜುನೊಡೆಯ(ಬ್ರಹ್ಮಾದ್ವೈತ ಸಿದ್ಧಾಂತ ಷಟ್ ಸ್ಥಲಾಭರಣ), ಶ್ರೀಗಿರೀಂದ್ರ (ಏಕೋತ್ತರ ಶತಸ್ಥಲ ಟೀಕೆ) ಮುಂತಾದ ಕವಿ, ಸಂಕಲನಕಾರರಿಗೆ ರಾಜಾಶ್ರಯ ನೀಡಿದ್ದನು. ಈತನ ಆಸ್ಥಾನದಲ್ಲಿ ಇತರ ಮತೀಯ, ಭಾಷೆಯ ಕವಿಗಳಿಗಿಂತ ವೀರಶೈವ ಕವಿಗಳು, ಕನ್ನಡ ಕಾವ್ಯಗಳು (ವೀರಶೈವ ಧರ್ಮಕ್ಕೆ ಸಂಬಂಧಿಸಿದ) ಅತೀ ಹೆಚ್ಚು ಪ್ರಮಾಣದಲ್ಲಿ(೫೦ಕ್ಕೂ ಹೆಚ್ಚು ಕೃತಿಗಳು) ರಚನೆಯಾಗಿರುವುದನ್ನು ಕಾಣಬಹುದು.

ಮಲ್ಲಣ್ಣ, ದೇವಣ್ಣವೊಡೆಯ[೨೭೬], ಲಕ್ಕಣ್ಣವೊಡೆಯ[೨೭೭], ಯಿರುಗಪ್ಪವೊಡೆಯ[೨೭೮], ಬೈಚೆದಣ್ಣಾಯಕ[೨೭೯], ತ್ರಯಂಬಕ ದೇವವೊಡೆಯ[೨೮೦]. ಹರಿಯಪ್ಪ ಒಡೆಯ[೨೮೧], ದೇವರಾಜವೊಡೆಯ [೨೮೨], ದೇವರಾಜೊಡೆಯ[೨೮೩], ಅಣ್ಣಪ್ಪ ಒಡೆಯ[೨೮೪] ಇನ್ನು ಮುಂತಾದ ಶಾಸನೋಕ್ತ ಪ್ರೌಢದೇವರಾಯನ ಹತ್ತಾರು ಮಂತ್ರಿಗಳ ಹೆಸರುಗಳನ್ನು ಗಮನಿಸಿದರೆ ಬಹುತೇಕರು ವೀರಶೈವರಾಗಿದ್ದರೆಂದು ತಿಳಿದುಬರುತ್ತದೆ. ಈ ಮಂತ್ರಿಗಳು ತಾವು ಆಳ್ವಿಕೆ ಮಾಡುತ್ತಿದ್ದ ಪ್ರದೇಶಗಳಲ್ಲಿ ಶಿವದೇವಾಲಯ ಕಟ್ಟಿಸಿ ಅವುಗಳಿಗೆ ದಾನ ಬಿಟ್ಟಿರುವ ವಿಷಯ ಇವರುಗಳು ಹಾಕಿಸಿದ ಶಾಸನಗಳಿಂದ ತಿಳಿದುಬರುತ್ತದೆ.

ಹೀಗೆ ಪ್ರೌಢದೇವರಾಯ ವೀರಶೈವವು(ಲಿಂಗಾಯತ)ಧರ್ಮವಾಗಿ ರೂಪುಗೊಳ್ಳಲು ಬೇಕಾದ ವಾತಾವರಣ ನಿರ್ಮಿಸಿ, ಅದನ್ನು ರಾಜಧರ್ಮವಾಗಿ ಸ್ವೀಕರಿಸಿ ಪೋಷಿಸಿ, ಪ್ರೋತ್ಸಾಹಿಸಿದನೆಂದು ಶಾಸನಗಳು ಮತ್ತು ವೀರಶೈವ ಕಾವ್ಯ, ಸಂಕಲನ ಕೃತಿಗಳಿಂದ ಅರಿಯಬಹುದು. ಈ ದೊರೆಯ

ಪ್ರೋತ್ಸಾಹದಿಂದ ರಚನೆಯಾದ ವೀರಶೈವ ಧಾರ್ಮಿಕ ಕೃತಿಗಳೆಲ್ಲವೂ ವೀರಶೈವ ತತ್ವಸಿದ್ಧಾಂತಗಳಿಗೆ ಅರ್ಥ ವಿಶ್ಲೇಷಣೆ, ಟೀಕು, ವ್ಯಾಖ್ಯಾನ ಮಾಡುವುದರ ಮೂಲಕ ವೀರಶೈವ ಸಿದ್ಧಾಂತವನ್ನು ವೈದಿಕ, ಇಸ್ಲಾಂ, ಜೈನ ಮುಂತಾದ ಸಮಕಾಲೀನ ಧರ್ಮಗಳಂತೆ ಧರ್ಮವಾಗಿ ರೂಪಿಸಲಾಯಿತೆಂಬ ವಿಚಾರ ಆ ಕೃತಿಗಳಿಂದ ತಿಳಿದುಬರುತ್ತದೆ. ಅಲ್ಲದೆ ೧೨ನೇ ಶತಮಾನದ ಶಿವಶರಣರ ವಚನಗಳನ್ನು ಒಂದು ಕಡೆ ಸಂಗ್ರಹಿಸಿ ಅವುಗಳನ್ನು ಷಟ್‌ಸ್ಥಲ, ಷೋಡಶ ಸ್ಥಲ ಮತ್ತು ಏಕೋತ್ತರ ಶತಸ್ಥಲಗಳಿಗನುಸಾರವಾಗಿ ಹೊಂದಿಸಿ ಅವುಗಳನ್ನು ವೀರಶೈವ ಧರ್ಮಗ್ರಂಥಗಳಾಗಿ ರೂಪಿಸಿದ್ದು ಪ್ರೌಢದೇವರಾಯನ ಕಾಲದಲ್ಲಿಯೇ ಎಂಬುದು ಗಮನಾರ್ಹ ಅಂಶವಾಗಿದೆ.

### ವೀರಶೈವಧರ್ಮ ಪ್ರೋತ್ಸಾಹಿಸಿ ಬೆಳೆಸಿದ ಮಂತ್ರಿಗಳು ಮತ್ತು ಅಧಿಕಾರಿಗಳು

ಚಕ್ರವರ್ತಿ ಪ್ರೌಢದೇವರಾಯ ವೀರಶೈವ ಧರ್ಮ ಸ್ವೀಕರಿಸಿ ಅದನ್ನು ರಾಜಧರ್ಮವಾಗಿ ಮಾಡಿದ ಮೇಲೆ ಅವನ ಮಂತ್ರಿಗಳು, ಸಾಮಂತರು, ಅಧಿಕಾರಿಗಳು ವೀರಶೈವಧರ್ಮ ಸ್ವೀಕರಿಸಿರಲೇಬೇಕು. ಆ ಮಂತ್ರಿಗಳಲ್ಲಿ ಕೆಲವರು ಶಿವದೇವಾಲಯಗಳು, ವೀರಶೈವ ಮಠಗಳನ್ನು ಕಟ್ಟಿಸಿ ಆ ಧರ್ಮದ ಬೆಳವಣಿಗೆಗೆ ಶ್ರಮಿಸಿರುವುದನ್ನು ಕಾಣಬಹುದಾಗಿದೆ. ಮತ್ತೆ ಕೆಲವರು ಆ ಧರ್ಮದ ತತ್ತ್ವ-ಸಿದ್ಧಾಂತಗಳನ್ನು ಅದರ ಸಾರವನ್ನು ಪ್ರಚಾರ ಮಾಡಲು ಮತ್ತು ಜನಸಾಮಾನ್ಯರಿಗೂ ವೀರಶೈವ ಧಾರ್ಮಿಕ ತತ್ವಗಳು ಮುಟ್ಟಲು ವೀರಶೈವ ತತ್ತ್ವ ಸಿದ್ಧಾಂತಗಳ ಸಾರವನ್ನೇ ಪ್ರಧಾನೀಕರಿಸಿ ಕಾವ್ಯರಚಿಸಿ ಕವಿಗಳಾಗಿ ಧರ್ಮ ಬೆಳೆಸಿರುವುದನ್ನು ಕಾಣಬಹುದಾಗಿದೆ.

೧. ಲಕ್ಕಣ್ಣ ದಂಡೇಶ : ಲಕ್ಕಂಣ ದಂಡೇಶ, ಲಕ್ಕಂಣವೊಡೆಯ, ಲಕ್ಕಂಣ ದಂಡನಾಯಕ ಮುಂತಾದ ಹೆಸರುಗಳಿಂದ ಚಿರಪರಿಚಿತನಾದ ಲಕ್ಕಂಣವೊಡೆಯನು ಇಮ್ಮಡಿ ದೇವರಾಯನ ಕಾಲದಲ್ಲಷ್ಟೇ ಅಲ್ಲದೆ ಈತ ೧ನೇ ದೇವರಾಯನ ತಂದೆ ವಿಜಯರಾಯ ಮತ್ತು ಮಗ ಮಲ್ಲಿಕಾರ್ಜುನನ ಕಾಲದಲ್ಲಿಯೂ ಪ್ರಭಾವಿಯಾದ ಅಧಿಕಾರಿಯಾಗಿದ್ದನು. ಇಮ್ಮಡಿ ದೇವರಾಯನ ಆಡಳಿತ, ಸಾಮಾಜಿಕ ಮತ್ತು ಸಾಹಿತ್ಯದ ಕಾರ್ಯಗಳಲ್ಲಿ ಲಕ್ಕಣ್ಣದಂಡೇಶನ ಪಾತ್ರ ಹಿರಿದಾದುದು.[೨೨೫]

ವಿರೂಪಾಕ್ಷಿಯ (ಮುಳುಬಾಗಿಲು ತಾ.) ಕ್ರಿ.ಶ.೧೪೩೮ರ ಶಾಸನವು ಲಕ್ಕಣ್ಣವೊಡೆಯನ ತಂದೆ ವಿಷ್ಣುವರ್ಧನಗೋತ್ರದ ಹೆಗ್ಗಡೆದೇವ ತಾಯಿ ವೊಂಮಾಯಮ್ಮಗಳು, ಮಾದಂಣ ದಣ್ಣಾಯಕ ಈತನ ಸಹೋದರ. ಇವನು ವಿರೂಪಾಕ್ಷಿಯಲ್ಲಿ ಪ್ರಸನ್ನ ವಿರೂಪಾಕ್ಷ ದೇವಾಲಯ ಕಟ್ಟಿಸಿ, ಅದರ ಶಿಖರಕ್ಕೆ ಚಿನ್ನದ ಹೊದಿಕೆ, ಮನ್ಮಥ ನೀರಿನ ಕೊಳ, ಮಂಟಪ, ಒಂದು ಭಿಕ್ಷಾಮಠ ಕಟ್ಟಿಸಿದ ವಿಚಾರ ತಿಳಿದುಬರುತ್ತದೆ.[೨೨೬] ಕ್ರಿ.ಶ.೧೪೦೦ ರಿಂದ ೧೪೬೩ರವರೆಗೆ ಲಕ್ಕಣ್ಣದಂಡೇಶನು ಅಧಿಕಾರದಲ್ಲಿದ್ದನೆಂದು ವಿದ್ವಾಂಸರು ನಿರ್ಧರಿಸಿದ್ದಾರೆ.[೨೨೭] ಆರಂಭದಲ್ಲಿ ಒಬ್ಬ ಸಾಮಾನ್ಯ ಅಧಿಕಾರಿಯಾಗಿ ನೇಮಕಗೊಂಡಿದ್ದ

ಲಕ್ಕಣ್ಣದಂಡೇಶ ತನ್ನ ಆಡಳಿತ ಕೌಶಲತೆಯಿಂದ ಕೆಲವು ಭಾಗದ ಮಂತ್ರಿಯಾಗಿ ನಂತರ ಇಡೀ ಸಾಮ್ರಾಜ್ಯದ ಮಹಾಪ್ರಧಾನಿಯಾಗಿ ಆಡಳಿತ ನಡೆಸಿರುವುದು ಅವನ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ಇಂಥ ಲಕ್ಕಣ್ಣದಂಡೇಶ ಕ್ರಿ.ಶ.೧೪೩೦ರ ಅವಧಿಯಲ್ಲಿ ಹಂಪಿಯಲ್ಲಿ ವೀರಶೈವಧರ್ಮ ರೂಪಿಸಲು ಸೇರಿದ್ದ ನೂರೊಂದು ವಿರಕ್ತರು, ದಾರ್ಶನಿಕರು, ಅನುಭಾವಿಗಳು, ಶರಣರು ಮುಂತಾದವರ ಪ್ರಭಾವಕ್ಕೆ ಒಳಗಾದ ಈ ಪ್ರಧಾನಿ ತಾನೂ ಮಾನಸಿಕವಾಗಿ ವೀರಶೈವನಾಗಿ ಮಾರ್ಪಟ್ಟು ತಾನೂ ಆ ಕಾರ್ಯದಲ್ಲಿ ಭಾಗಿಯಾಗಿ ವೀರಶೈವ ತತ್ವ, ಸಿದ್ಧಾಂತ, ಶಿವಶರಣರ ಕಥೆ, ಶಿವನ ಲೀಲೆಗಳು ಮುಂತಾದ ಅಂಶಗಳನ್ನು ಒಳಗೊಂಡ ಶಿವತತ್ತ್ವ ಚಿಂತಾಮಣಿ ಎಂಬ ಮಹಾಕಾವ್ಯ ಬರೆದು ವೀರಶೈವ ಧರ್ಮ ಬೆಳವಣಿಗೆಗೆ ಶ್ರಮಿಸಿದ.

ಲಕ್ಕಣ್ಣದಂಡೇಶ ರಚಿಸಿದ ವೀರಶೈವ ಧರ್ಮದ ವಿಶ್ವಕೋಶದಂತಿರುವ ಶಿವತತ್ತ್ವಚಿಂತಾಮಣಿಯಲ್ಲಿ ೫೪ ಸಂಧಿಗಳಿದ್ದು, ೨೨೨೧ ವಾರ್ಧಕ ಷಟ್ಪದಿಗಳಿಂದ ಎಣೆಯಲ್ಪಟ್ಟಿದೆ. ಕಾವ್ಯದ ಆರಂಭದಲ್ಲಿ ಶ್ರೀವಿರೂಪಾಕ್ಷ, ಮಲ್ಲಿಕಾರ್ಜುನ ಗುರು ಅಲ್ಲಮಪ್ರಭು, ಬಸವಣ್ಣ ಚೆನ್ನಬಸವಣ್ಣ - ಇವರನ್ನು ಮಾತ್ರ ಸ್ಮರಿಸಿ ಆ ಕೂಡಲೇ ತನ್ನ ಪರಿಚಯವನ್ನೂ, ಕಾವ್ಯದ ಹಿರಿಮೆಯನ್ನು ಹೇಳಿ ಗ್ರಂಥದ ಪರಿವಿಡಿಯನ್ನು ಹೇಳಲು ಪ್ರಾರಂಭಿಸುತ್ತಾನೆ. ತನ್ನ ಪೂರ್ವದ ಯಾವುದೇ ಕವಿಯ ಹೆಸರನ್ನು ಸ್ತುತಿಸಿಲ್ಲ. ಈ ಕೃತಿಯು ಕೇವಲ ಶಿವತತ್ತ್ವ ಕುರಿತದ್ದು ಕಾವ್ಯವರ್ಗಕ್ಕೆ ಸೇರಿದುದಲ್ಲ ಎಂಬುದು ಆತನ ಅಭಿಪ್ರಾಯವಾದಂತಿದೆ.

ಈ ಕಾವ್ಯವು ೧. ನಿತ್ಯಾನಿತ್ಯ ವಸ್ತುವಿನ ವಿವರಣೆ ಸಕಲ ನಿಷ್ಕಲದ ಪರಿ, ೨. ನಿಷ್ಕಲ ತತ್ತ್ವ ಸಕಲವಾದ ಭೇದ, ೩. ಭುವನ ಕೋಶ, ೪. ಶಿವಲೋಕದಭಿವರ್ಣನ, ೫. ಹರನ ದಿವ್ಯಾಸ್ಥಾನ, ೬. ನಾರದ ದರುಶನ, ೭. ಪುರಹರ ನಂದೀಶ ಸಂವಾದ, ೮. ಜಗವಪಾಲಿಸುವೊಡುದಯವಾದ ಬಸವನವತಾರ, ಬಸವನ ನಾಮ ನಿರ್ವಚನ ಬಾಲಲೀಲೆ ಪವಾಡಗಳು, ೯. ಶಿವಧರ್ಮ ಮಾರ್ಗಮಂ ನೆಜೆತೋಜಿ ಮೆಜೆದಾ ಗಣಪ್ರಶಂಸೆ, ೧೦. ಧರ್ಮಾಧರ್ಮ, ಪಿಂಡದುತ್ಪತ್ತಿ, ೧೧. ಸಂಸ್ಕೃತಿ ಹೇಯ, ೧೨. ಪಂಚಾಕ್ಷರಿಯ ಮಹಿಮೆ, ೧೩. ಭಸಿತ ರುದ್ರಾಕ್ಷಿಗಳ ಮಹಾತ್ಮೆ, ೧೪. ಲಿಂಗಧಾರಣ, ೧೫. ಶಿವನ ಪೂಜಾನಿಯಮ, ೧೬. ಪಾದೋದಕ ಪ್ರಸಾದ ಕ್ರಮ, ೧೭. ಶಿವಾಧಿಕ್ಯ ಮಾಹೇಶ್ವರಾಚರಣೆ, ೧೮. ಷಟ್‌ಸ್ಥಲ -ಹೀಗೆ ೧೮ ಅಂಗಗಳನ್ನು ಒಳಗೊಂಡಿದೆ.[೨೮೮]

ಹೀಗೆ ಶಿವತತ್ತ್ವ ಚಿಂತಾಮಣಿ ಕಾವ್ಯ ರಚಿಸುವುದರ ಮೂಲಕ ವೀರಶೈವಧರ್ಮ ಪ್ರಚಾರ ಮಾಡಿದವರಲ್ಲಿ ಲಕ್ಕಣ್ಣ ದಂಡೇಶ ಪ್ರಮುಖನಾಗಿದ್ದಾನೆ.

೨. ಜಕ್ಕಣಾರ್ಯ : ಪ್ರೌಢದೇವರಾಯನ ಮತ್ತೊಬ್ಬ ಮಂತ್ರಿ ಜಕ್ಕಣಾರ್ಯ. ಭಕ್ತಿಭಂಡಾರಿ ಜಕ್ಕಣಾರ್ಯ, ಜಕ್ಕಣ್ಣಾಮಾತ್ಯ ಎಂದು ಮುಂತಾಗಿ ಕರೆಯಿಸಿಕೊಳ್ಳುವ ಈತನನ್ನು ಅನೇಕ ವೀರಶೈವ ಪುರಾಣಗಳು ಈತನ

ದಾನಗುಣ. ಉದಾರತೆ, ಧರ್ಮಶ್ರದ್ಧೆ, ಪ್ರಜಾನುರಾಗ, ಸಾಹಿತ್ಯ ಪ್ರೀತಿ, ಸ್ನೇಹ ಪರತೆ, ಅನುಭಾವದ ಅಕಾಂಕ್ಷೆಗಳನ್ನು ಮನದುಂಬಿ ಹೊಗಳುತ್ತವೆ. ಲಕ್ಕಣ್ಣ ದಂಡೇಶ, ಚಾಮರಸ -ಮೊದಲಾದ ಕವಿಗಳು ಬೆಳಕಿಗೆ ಬರಲು ಈತನ ಪ್ರೋತ್ಸಾಹವೇ ಕಾರಣ.[೨೯]

ಜಕ್ಕಣಾರ್ಯ ವೀರಶೈವ ಕವಿಗಳನ್ನು, ಅವರ ಕಾವ್ಯಗಳನ್ನು ಮೆರೆಸಿದ ರೀತಿಯನ್ನು ಅದೃಶ್ಯ ಕವಿ ತನ್ನ ಪ್ರೌಢರಾಯನ ಕಾವ್ಯದಲ್ಲಿ ಹೀಗೆ ಹೇಳಿದ್ದಾನೆ.

"ಜನಪನಿತ್ತನಿತನಲ್ಲವ ತಾನು ಕೈಕೊಂಡು
ಅನುನಯದಿ ಚಾಮರಸಾರಾಧ್ಯರಿಗೆ ತನ್ನಂತೆ
ಘನವುಚಿತಮಂ ಕೊಡಿಸಿ ಪ್ರಭುಲಿಂಗಲೀಲೆಯನು ಗಜದ ಮೇಲಿಟ್ಟು ಮೆರೆಸಿ
ತನಗೆ ತರವಲ್ಲೆಂದು ಲಕ್ಕಣಾರ್ಯರ್ಗೆ
ವಿನಯದಿಂ ಮಂತ್ರಿತನಮಂ ಕೊಟ್ಟು...."[೩೦]

ಕವಿ ಹೇಳುವಂತೆ ಜಕ್ಕಣಾರ್ಯ ತನಗೆ ಪ್ರೌಢದೇವರಾಯನಿಂದ ದೊರೆತ ಸನ್ಮಾನವನ್ನು ಕವಿ ಚಾಮರಸನಿಗೂ ಕೊಡಿಸಿದ. ಅಲ್ಲದೆ ಚಾಮರಸನ ಪ್ರಭುಲಿಂಗಲೀಲೆಯನ್ನು ಆನೆಯ ಮೇಲಿಡಿಸಿ ಮೆರವಣಿಗೆ ಮಾಡಿಸಿದನು. ತನ್ನ ಮಂತ್ರಿಪದವಿಯನ್ನು ಇನ್ನು ಇದು ತನಗೆ ಯೋಗ್ಯವಲ್ಲವೆಂದರಿತು ತನ್ನ ಪದವಿಯನ್ನು ಲಕ್ಕಣ್ಣದಂಡೇಶನಿಗೆ ಕೊಡಿಸಿದನು. ನಂತರ ಈತ ಬಹುಶಃ ವೀರಶೈವ ಧರ್ಮ ಪ್ರಚಾರ ಕಾರ್ಯದಲ್ಲಿ ತೊಡಗಿದ್ದಿರಬಹುದಾದ ಸಾಧ್ಯತೆ ಇದೆ.

ಜಕ್ಕಣ್ಣನು ಈ ಯುಗದ ಘನ ವೀರಶೈವಕ್ಕೆ ಮುಖ್ಯವಾದ ೨ನೆಯ ಗುರು ಸಾಂಪ್ರದಾಯದ ಶ್ರೇಷ್ಠ ಸುಕುಮಾರ ಬಂಕನಾಥನ ಕರಸಂಜಾತನು; ಬಂಕನಾಥನು ಸ್ವತಃ ವಚನಕಾರನೂ ಆಗಿದ್ದಲ್ಲದೆ, ಏಕೋತ್ತರ ಶತಸ್ಥಲದ ಕರ್ತೃ ಮಹಾಲಿಂಗದೇವನ ಶಿಷ್ಯನೂ ಆಗಿದ್ದನು. ಈ ಇಬ್ಬರೂ ಪ್ರಕಾಂಡಪಂಡಿತರ ಶಿಷ್ಯತ್ವವನ್ನಂಗೀಕರಿಸಿಕೊಂಡವನು ಜಕ್ಕಣಾರ್ಯ. ವಿಜಯನಗರದಲ್ಲಿ ಆಗ ರಾಯನು ಅನ್ಯಮತದವರ ಪ್ರಭಾವಕ್ಕೊಳಗಾಗಿದ್ದಾಗ ಅಲ್ಲಿನ ವಿದ್ಯಾಮಾನಗಳನ್ನರಿತು, ಇಬ್ಬರನ್ನೂ ರಾಜಧಾನಿಗೆ ಬರಸಿಕೊಂಡು ವೀರಶೈವ ಸಿದ್ಧಾಂತಕ್ಕೆ ತಾತ್ತ್ವಿಕ ತಳಹದಿಯನ್ನು ಹಾಕಲೆತ್ನಿಸಿದ. ಸ್ವತಃ ಮಹಾಲಿಂಗದೇವನು ಹೇಳುವಂತೆ ಜಕ್ಕಣಾರ್ಯನೇ ಅವನ ಏಕೋತ್ತರ ಶತಸ್ಥಲ ಹಾಗೂ ಪ್ರಭುದೇವರ ವಚನ ಟೀಕಾಗ್ರಂಥಗಳ ರಚನೆಗೆ ಕಾರಣನಾದನು.[೩೧]

ಪ್ರೌಢದೇವರಾಯನ ಆಸ್ಥಾನದಲ್ಲಿ ಮುಕ್ಕುಂದ ಪೆದ್ದಿ ಮತ್ತು ವೃಂದಾಚಾರ್ಯರೆಂಬ ವೈಷ್ಣವ ಗುರುಗಳು ರಾಯನಿಗೆ ನವಮಾಸ ಭಾರತವ ಬೋಧಿಸುತಲನುನಯದಿ ಮೆರವಣಿಗೆಯಂ ಮಾಡಿ ಸುಖವಿದ್ದರು. ಆ ಆಚಾರ್ಯರ ಪ್ರಭಾವ 'ಭಾರತದ' ಅಗ್ಗಳಿಕೆ ಹೆಚ್ಚಿದ್ದ ಕಾಲದಲ್ಲಿ ವೀರಶೈವಾಭಿಮಾನಿಯಾದ ಮಹಾಮಂತ್ರಿ ಜಕ್ಕಣಾರ್ಯ ತಾನೂ ತನ್ನ ಧರ್ಮದ ಶ್ರೇಷ್ಠತೆಯನ್ನು ಸಾರಲೆಂದು ಬಗೆದು, ಆಗ

ಸುಪ್ರಸಿದ್ಧ ವೀರಶೈವ ಪೀಠ ಪರಂಪರೆಯ ಆಚಾರ್ಯರಾಗಿದ್ದ ಮಹಾಲಿಂಗದೇವರಿಗೆ ಏಕೋತ್ತರ ಶತಸ್ಥಲ ಮಹಿಮೆಯನ್ನು ತನಗೆ ಬೋಧಿಸಬೇಕೆಂದು ಪ್ರಾರ್ಥಿಸಿಕೊಂಡನು. ಅಲ್ಲದೆ ಅದರಿಂದ ಪ್ರಭಾವಿತನಾಗಿ ತಾನೂ ಒಂದು ಏಕೋತ್ತರ ಶತಸ್ಥಲವನ್ನು ಹಾಡುಗಳ ರೂಪದಲ್ಲಿ ಸಂಕಲನ ಮಾಡಿದನು. ಮುಂದೆ ಅದರ ಮೆರವಣಿಗೆ ಮಾಡಿಸಿದನು.[೫೨]

ಏಕೋತ್ತರ ಶತಸ್ಥಲ ಜ್ಞಾನಶೂನ್ಯ ಸ್ಥಲ ಒಂದೆ ಉತ್ತರವಾಗಿ, ನೂರುಸ್ಥಲತೆ ಕಡೆಯಾಗಿ ನೂರೊಂದು ಸ್ಥಳವು ಶಿವನಿಂ ನಿರೂಪಿಸಲು ತಕ್ಕ ಕಾರ್ಮಿಕರೆಂಬ ಮೇಲು ಭಾಗೆಯಲ್ಲಿ ಶ್ರೇಷ್ಠವಾದ ವೀರಶೈವ ಮತವು ಹೇಳಲ್ಪಟ್ಟಿತು. ಇದನ್ನು ಜಕ್ಕಣಾರ್ಯ "ತಮ್ಮ ಗುರು ನಿರೂಪದಿಂದ ಸಕಲ ಪುರಾತನರ ವಚನಂಗಳಿಂದ ಏಕೋತ್ತರ ಶತಸ್ಥಲವಂ ಸೂತ್ರವ ಕಲ್ಪಿಸಿ, ಸ್ಥಲನಿಟ್ಟು ವಸ್ತುಕ ವರ್ಣಕದಿಂದ ಸಂಗ್ರಹಿಸಿ ಪ್ರಭುದೇವರು ನಿರೂಪಿಸಿದ ವಚನಗಳಿಗೆಯೂ ಸೂತ್ರಸ್ಥಲವಿಟ್ಟು, ಅರ್ಥಪದ್ಧತಿಯ ವ್ಯಾಖ್ಯಾನವಂ ಮಾಡಿ"[೫೩] ಅಂದರೆ ಜಕ್ಕಣಾರ್ಯನು ಏಕೋತ್ತರ ಶತಸ್ಥಲವನ್ನು ಪುರಾತನರ ವಚನಗಳಿಂದ ವಸ್ತುಕ ವರ್ಣಕ ರೂಪವಾಗಿ ಸಂಗ್ರಹಿಸಿದನು. ಅಲ್ಲದೆ ಅಲ್ಲಮ ಪ್ರಭುದೇವರ ವಚನಗಳಿಗೆ ಸೂತ್ರ ಸ್ಥಲವಿಟ್ಟು, ವ್ಯಾಖ್ಯಾನ ಮಾಡಿರುವ ಸಂಗತಿ ತಿಳಿದುಬರುತ್ತದೆ. ಈ ಏಕೋತ್ತರ ಶತಸ್ಥಲವು ಭಕ್ತಸ್ಥಲ-೧೫, ಮಾಹೇಶ್ವರಸ್ಥಲ-೯, ಪ್ರಸಾದಿಸ್ಥಲ-೭, ಪ್ರಾಣಲಿಂಗಿಸ್ಥಲ-೫, ಶರಣಸ್ಥಲ-೯, ಐಕ್ಯಸ್ಥಲ ೪, ಅನಂತರಂ ಅಂಗಸ್ಥಲಂಗಳನಾಶ್ರೈಸಿದ ಲಿಂಗಸ್ಥಲಂಗಳೊಳಗೆ ಆಚಾರಲಿಂಗಸ್ಥಲ-೯, ಗುರುಲಿಂಗಸ್ಥಲ-೯, ಜಂಗಮಸ್ಥಲ-೧೨, ಪ್ರಸಾದಲಿಂಗ ಸ್ಥಲ-೯, ಮಹಾಲಿಂಗಸ್ಥಲ-೯ ಒಟ್ಟು ಅಂಗಸ್ಥಲ ೪೪, ಲಿಂಗಸ್ಥಲ ೫೭ = ೧೦೧ ಸ್ಥಲ. ಈ ನೂರೊಂದು ಸ್ಥಲವು ಕೇವಲ ಸ್ವರ ವಚನಗಳನ್ನು ಹಾಗೂ ಆಯಾಸ್ಥಲ ಸಂಬಂಧಿಯಾದ ಸೂತ್ರಗಳನ್ನಷ್ಟೇ ಒಳಗೊಂಡಿದೆ.[೫೪]

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಜಕ್ಕಣಾರ್ಯ ಯಾವ ಶಾಸನಗಳಲ್ಲಿ ದಾಖಲಾಗದಿದ್ದರೂ ವೀರಶೈವ ಕವಿಗಳು ಮಾತ್ರ ತಮ್ಮ ಕಾವ್ಯಗಳಲ್ಲಿ ಈತನ ಕಾರ್ಯ ಸಾಧನೆಗಳನ್ನು ಸ್ತುತಿಸಿರುವುದರಿಂದ ಈತ ವೀರಶೈವ ಧರ್ಮದ ಬೆಳವಣಿಗೆಗೆ ಶ್ರಮಿಸಿದ ರೀತಿ ತಿಳಿಯುತ್ತದೆ. ಪ್ರೌಢದೇವರಾಯನ ಜೊತೆಯಲ್ಲಿದ್ದುಕೊಂಡು (ಹಂಪಿಯಲ್ಲಿಯೇ) ಮಂತ್ರಿಯಾಗಿ ಕಾರ್ಯನಿರ್ವಹಿಸಿದ್ದರೂ ತನ್ನ ಹೆಸರಿನ ಯಾವುದೇ ಶಾಸನ ಹಾಕಿಸಿಲ್ಲದಿರುವುದು ಕಂಡುಬರುತ್ತದೆ. ವೈಷ್ಣವರ ವಿರುದ್ಧ ವಾದದಲ್ಲಿ ಗೆದ್ದು ವೀರಶೈವ ಸಿದ್ಧಾಂತ ತತ್ತ್ವ ಪ್ರಚಾರ ಮಾಡಲು ಅನೇಕ ವೀರಶೈವ ಕವಿಗಳೂ, ದಾರ್ಶನಿಕರನ್ನು ಕರೆತಂದು, ತಾನೂ ಅವರ ಜೊತೆ ಸೇರಿ ವೀರಶೈವ ಸಿದ್ಧಾಂತ ಸಾರುವ ಏಕೋತ್ತರ ಶತಸ್ಥಲ ಬರೆದು ಪ್ರಚಾರ ಕಾರ್ಯದಲ್ಲಿ ತೊಡಗಿದಂತೆ ತೋರುತ್ತದೆ. ವೀರಶೈವಧರ್ಮ ಪ್ರಚಾರ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಲು ತನ್ನ ಮಂತ್ರಿಪದವಿಯನ್ನು ಲಕ್ಕಣ್ಣದಂಡೇಶನಿಗೆ ವಹಿಸಿದಂತೆ ತಿಳಿದುಬರುತ್ತದೆ.

೩. ಹೆಗ್ಗಡೆ ಬಸವಣ್ಣ : 'ಹೆಗ್ಗಡೆ' ಎಂದರೆ ಗ್ರಾಮದ ಮುಖ್ಯಾಧಿಕಾರಿ, ಒಡೆಯ, ಅರಮನೆ ಮುಂತಾದ ಕಡೆಗಳಲ್ಲಿ ಒಳಾಡಳಿತವನ್ನು ನೋಡಿಕೊಳ್ಳುವವನು; ಮನೆವಾರ್ತೆಯ ಮೇಲ್ವಿಚಾರಕ, ಮಂತ್ರಿ; ಪ್ರಧಾನಿ, ಉನ್ನತಾಧಿಕಾರಿ; ಮುಖ್ಯಸ್ಥ[೨೯೫] ಎಂದು ಮುಂತಾಗಿ ಅರ್ಥೈಸಬಹುದು. ಇಲ್ಲಿ ಹೆಗ್ಗಡೆ ಎಂದರೆ ಅರಮನೆಯ ಒಳಾಡಳಿತ ನೋಡಿಕೊಳ್ಳುವ ಮಂತ್ರಿ ಎಂದರ್ಥ. ಹಂಪಿಯ ವಿರೂಪಾಕ್ಷರಾಯನ ಕಾಲದ ಶಾಸನವು "ಶ್ರೀ ವಿರೂಪಾಕ್ಷರಾಯರ ನಿರೂಪದಿಂದ ಹೆಗಡೆ ಹಿತ್ತಲಬಾಗಿಲ ಬಸವಂಣ ಅಣ್ಣಗಳೂ ಮಳಲ ವೊಡೆಗೊಂಡನು ವೊಡಸಿ ಕಟ್ಟಿಸಿದರು"[೨೯೬] ಎಂದು ದಾಖಲಿಸಿದೆ. ಹೆಗ್ಗಡೆ ಹಿತ್ತಲಬಾಗಿಲ ಬಸವಣ್ಣನು ವಿರೂಪಾಕ್ಷರಾಯನ ನಿರೂಪದಿಂದ ವೊದೆಗುಂಡನ್ನು ಒಡೆದು ನಾಲೆಯನ್ನು ಕಟ್ಟಿಸಿದ ವಿವರ ತಿಳಿಯುತ್ತದೆ. ಈ ಹೆಗ್ಗಡೆ ಬಸವಣ್ಣನು ವಿರೂಪಾಕ್ಷ ರಾಯನ ಅರಮನೆಯ ಒಳಾಡಳಿತ ಸಚಿವ(ಮಂತ್ರಿ)ನಾಗಿದ್ದನೆಂಬ ಅಂಶ ತಿಳಿದುಬರುತ್ತದೆ. 'ಬಸವಣ್ಣ' ಎಂಬ ಹೆಸರಿನ ಹಿನ್ನೆಲೆಯಲ್ಲಿ ಈತ ವೀರಶೈವನಾಗಿದ್ದನೆಂದು ಹೇಳಬಹುದಾಗಿದೆ. ಈತನನ್ನು ಕುರಿತು ಯಾವುದೇ ವೀರಶೈವ ಕಾವ್ಯ ಉಲ್ಲೇಖಿಸಿಲ್ಲ.

೪. ಅಲ್ಲಮರಸ : 'ಅಲ್ಲಮ' ಎಂಬ ತಕ್ಷಣ ನಮಗೆ ನೆನಪಿಗೆ ಬರುವುದು ೧೨ನೇ ಶತಮಾನದ ಶೂನ್ಯಪೀಠಾಧ್ಯಕ್ಷ ಅಲ್ಲಮಪ್ರಭು. ಈತನ ಹೆಸರಿನಂತೆಯೇ ಇರುವ ಅಲ್ಲಮರಸ[೨೯೭] ಕೃಷ್ಣದೇವರಾಯನ ಒಬ್ಬ ಅಧಿಕಾರಿ ಎಂದು ತಿಳಿದುಬರುತ್ತದೆ. ಈ ವ್ಯಕ್ತಿ ವೀರಶೈವನಾಗಿರುವ ಸಾಧ್ಯತೆ ಇದೆ. ಈತನನ್ನೂ ಕುರಿತು ಯಾವ ವೀರಶೈವ ಕಾವ್ಯಗಳು ದಾಖಲಿಸಿಲ್ಲ.

೩. ದಳವಾಯಿ

'ದಳವಾಯಿ' ಎಂದರೆ ಸೇನಾಪತಿ, ದಳಪತಿ, ಪ್ರಧಾನಿ, ಮಹಾಮಾತ್ಯ[೨೯೮], ಸೇನಾದಂಡನಾಯಕ ಎಂಬಿತ್ಯಾದಿಯಾಗಿ ಅರ್ಥೈಸಬಹುದು.

ದಳವಾಯಿ ಜಂಗಮಯ್ಯ : ದಳವಾಯಿ ಜಂಗಮಯ್ಯನು ಸದಾಶಿವ ದೇವರಾಯನ ಸೇನಾದಂಡನಾಯಕನಾಗಿದ್ದನು. ಈತನನ್ನು ಕುರಿತು ಹಂಪಿಯ ಕ್ರಿ.ಶ.೧೫೪೫ರ ಎರಡು ಶಾಸನಗಳು ಉಲ್ಲೇಖಿಸುತ್ತವೆ. ಕಟ್ಟಾ ವೀರಶೈವನಿಷ್ಠನಾದ ಈತನು ಹಿರಿಯ ಕಾಲುವೆಯ ಛತ್ರದ ಬಳಿ ಮುದುವೀರಣ್ಣನ ಪ್ರತಿಷ್ಠೆ ಮಾಡಿಸುತ್ತಾನೆ. ಇದನ್ನೇ ಶಾಸನವು

> "ದಳವಾಯಿ ಜಂಗಮೈಯ್ಯ
> ನವರು ಸದಾಶಿವದೇವ(ಹಾ)ರಾಯರಿ(ಗೂ).....
> ಪುಣ್ಯವಾಗಬೇಕೆಂದು ಕ್ಷಷ್ಣಾಪುರದ ಪೇಟೆಯ ಹಿರಿಯ ಕಾಲುವೆಯ
> ಛತ್ರದ ಬಳಿಯಲೂ ಕಟಿಸ್ತಂಥಾ ಮುದುವೀರಂಣನ ಪ್ರತಿಷ್ಠೆಯನೂ..."[೨೯೯]

ಎಂದು ದಾಖಲಿಸಿದೆ. ದಳವಾಯಿ ಜಂಗಮಯ್ಯನು ತನ್ನ ಕುಲದೇವರಾದ ಮುದ್ದುವೀರಣ್ಣನ (ಉದ್ದಾನ ವೀರಭದ್ರ)ನನ್ನು ಕೃಷ್ಣಾಪುರ ಪೇಟೆಯ ಹಿರಿಯ ಕಾಲುವೆ ಛತ್ರದ ಬಳಿ ದೇವಾಲಯ ಕಟ್ಟಿಸಿ ಸದಾಶಿವರಾಯ, ರಾಮರಾಜಯ್ಯ, ಎರತಿಮ್ಮರಾಜಯ್ಯನವರಿಗೆ ಪುಣ್ಯವಾಗಬೇಕೆಂದು ಪ್ರತಿಷ್ಠಾಪಿಸಿ, ಅಲ್ಲಿ ನಿತ್ಯ ದಾಸೋಹ ನಡೆಸಲು ದವಸಧಾನ್ಯಗಳ ವ್ಯವಸ್ಥೆ ಮಾಡಿರುವುದು ಶಾಸನದಿಂದ ತಿಳಿದುಬರುತ್ತದೆ. ಆ ಮೂಲಕ ಜಂಗಮಯ್ಯ ವೀರಶೈವ ಧರ್ಮದ ಪ್ರಚಾರ ಮಾಡುತ್ತಾ ಅದರ ಬೆಳವಣಿಗೆ ಪ್ರೋತ್ಸಾಹಿಸಿದಂತೆ ತೋರುತ್ತದೆ.

ಹೀಗೆ ಚಕ್ರವರ್ತಿಯಿಂದ ಹಿಡಿದು ದಳವಾಯಿಗಳವರೆಗೆ ಎಲ್ಲಾ ಅಧಿಕಾರಿಗಳು ವೀರಶೈವಧರ್ಮ ಪ್ರೋತ್ಸಾಹಿಸುತ್ತಾ, ಅದರ ಬೆಳವಣಿಗೆಗೆ ಒಂದಲ್ಲ ಒಂದು ರೀತಿಯಲ್ಲಿ ಕಾರಣರಾಗಿದ್ದಾರೆ. ಚಕ್ರವರ್ತಿ ಧರ್ಮ ಬೆಳೆಯಲು ಅಗತ್ಯ ಸೌಲಭ್ಯ ಕಲ್ಪಿಸಿ ಪ್ರೋತ್ಸಾಹಿಸಿದರೆ, ಪ್ರಧಾನಿ ಅಧಿಕಾರಿಗಳು ವೀರಶೈವ ತತ್ತ್ವ, ಸಿದ್ಧಾಂತದ ಕಾವ್ಯ ಬರೆದು ದೇವಾಲಯ ಕಟ್ಟಿಸಿ ದಾಸೋಹ ಏರ್ಪಡಿಸಿ ಆ ಮೂಲಕ ಧರ್ಮ ಬೆಳೆಯಲು ಪ್ರೋತ್ಸಾಹಿಸಿ ಬೆಳೆಸಿದ್ದಾರೆಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ಯಳನಾಡು ಅಂಜನಪ್ಪ (ಸಂ) ಧರ್ಮ ಮತ್ತು ಮುಕ್ತ ವಿಚಾರ, ಪು.೧೪-೧೫

೨. ಬಸವಾರಾಧ್ಯ ಎನ್.(ಪ್ರ.ಸಂ), ಸಂಕ್ಷಿಪ್ತ ಕನ್ನಡ ನಿಘಂಟು, ಪು.೬೨೨

೩. ಅದೇ, ಪು.೯೬೮

೪. ಭೂಸನೂರ ಮಠ ಸಂ.ಶಿ.(ಸಂ), ಕಲ್ಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ ಪು.೩

೫. ದೇವೀರಪ್ಪ ಎಚ್. (ಪ್ರ.ಸಂ), ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೫೦೭

೬. ಶ್ರೀ ಚನ್ನಮಲ್ಲಿಕಾರ್ಜುನ (ಸಂ), ಮೊಗ್ಗೆಯ ಮಾಯಿದೇವ ಪ್ರಭುವಾಣಿ, ಪು.೧೭೦

೭. ವಿದ್ಯಾಶಂಕರ ಎಸ್. (ಸಂ), ಚಾಮರಸನ ಪ್ರಭುಲಿಂಗಲೀಲೆ, ಪು.೧೮

೮. ಬಸವರಾಜ ಮಲಶೆಟ್ಟಿ(ಸಂ), ಎನಗಿಂತ ಕಿರಿಯರಿಲ್ಲ(ಅ.ಗ್ರಂಥ), ಪು.೨೩೬

೯. ಕಲಬುರ್ಗಿ ಎಂ.ಎಂ.(ಸಂ), ಹರಿಹರನ ರಗಳೆಗಳು, ಪು.೩೨೨-೩೨೩

೧೦. ವಿವೇಕರೈ ಬಿ.ಎ.(ಸಂ), ರಾಘವಾಂಕನ ಸಮಗ್ರ ಕಾವ್ಯ, ಪು.೨೯೯

೧೧. ದೇವೀರಪ್ಪ ಎಚ್.(ಪ್ರ.ಸಂ), ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೩೧೫

೧೨. ಹಳ್ಳಿಕೇರಿ ಎಫ್.ಟಿ.(ಸಂ), ಕರಸ್ಥಲಸಾಹಿತ್ಯ, ಪು.೧೧೯

೧೩. ಬಸವಾರಾಧ್ಯ ಎನ್.(ಪ್ರ.ಸಂ), ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೧೩-೧೧೪

೧೪. ಮಲ್ಲಾಪುರ ಬಿ.ವಿ., ವೀರಶೈವ ತತ್ತ್ವಾರ್ಥ ವಿವೇಚನೆ, ಪು.೬೨

೧೫. ಅದೇ,

೧೬. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೩೮೮

೧೭. ಚಿದಾನಂದಮೂರ್ತಿ ಎಂ., ಸ್ಥಾವರ-ಜಂಗಮ, ಪು.೬೪೩

೧೮. ಭೂಸನೂರು ಮಠ ಸಂ.ಶಿ.(ಸಂ), ಮಹಾಲಿಂಗದೇವರು ನಿರೂಫಿಸಿದ ಏಕೋತ್ತರ ಶತಸ್ಥಲ, ಪು.೧೧೧

೧೯. ಅದೇ, ಪು.೧೧೧

೨೦. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೨೯೮

೨೧. ಪೂರ್ವೋಕ್ತ, ರಾಘವಾಸಂಕನ ಸಮಗ್ರ ಕಾವ್ಯ, ಪು.೧೭೪

೨೨. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ (ಗದ್ಯಾನುವಾದ), ಪು.೧೪೩)

೨೩. ಅದೇ, ಪು.೧೬೮

೨೪. ದೇವೀರಪ್ಪ ಎಚ್. (ಪ್ರ.ಸಂ), ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೯೧

೨೫. ಹಳ್ಳಿಕೇರಿ ಎಫ್.ಟಿ. (ಸಂ), ಕರಸ್ಥಲ ಸಾಹಿತ್ಯ, ಪು.೩೫

೨೬. ಅದೇ, ಪು.೯೯

೨೭. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೧೧೫

೨೮. ಪುರಾಣಿಕ ಡಿ.ವಿ., ಮಗ್ಗೆಯ ಮಾಯಿದೇವ; ಒಂದು ಅಧ್ಯಯನ (ಪಿಎಚ್ .ಡಿ ಪ್ರಭಂಧ), ಪು.೧೮೭

೨೯. ವಿದ್ಯಾಶಂಕರ ಎಸ್.(ಸಂ), ವಚನ ಪರಿಭಾಷಾ ಕೋಶ ಪು.೧೮೬

೩೦. ಪೂರ್ವೋಕ್ತ, ಕಲ್ಮಠದ ಪ್ರಭುದೇವರು ನಿರೂಪಿಸಿದ ಲಿಂಗಲೀಲಾವಿಲಾಸ ಚಾರಿತ್ರ, ಪು.೨೬೪

೩೧. ಅದೇ, ಪು.೩೧೩

೩೨. ಅದೇ, ಪು.೨೪೫

೩೩. ಅದೇ, ಪು.೪೧೦

೩೪. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೧೯೭

೩೫. ಅದೇ, ಪು.೨೦೨

೩೬. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿ, ಪು.೪೮೪

೩೭. ಅದೇ, ಪು.೪೮೭

೩೮. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ (ಗದ್ಯಾನುವಾದ), ಪು.೨೨೫

೩೯. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೧೨೦

೪೦. ಅದೇ, ಪು.೧೦೦

೪೧. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೪೫೬

೪೨. ಪೂರ್ವೋಕ್ತ, ವಚನ ಪರಿಭಾಷಾಕೋಶ, ಪು.೬೭

೪೩. ಅದೇ, ಪು.೬೯

೪೪. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೬೫

೪೫. ಅದೇ, ಪು.೧೦೯

೪೬. ಅದೇ, ಪು.೪೨೦

೪೭. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ, ಪು.೧೪೯

೪೮. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೧೧

೪೯. ಅದೇ, ಪು.೩೨೨

೫೦. ಅದೇ, ಪು.೪೦೬

೫೧. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೧೮೮

೫೨. ಅದೇ, ಪು.೨೯೫

೫೩. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ (ಗದ್ಯಾನುವಾದ), ಪು.೨೦೭

೫೪. ಅದೇ, ಪು.೨೧೦

೫೫. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿ, ಪು.೨೪೪

೫೬. ಅದೇ, ಪು.೪೮೯

೫೭. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೬೮

೫೮. ಪೂರ್ವೋಕ್ತ, ಮಗ್ಗೆಯ ಮಾಯಿದೇವ : ಒಂದು ಅಧ್ಯಯನ (ಪಿಎಚ್.ಡಿ.ಪ್ರಬಂಧ), ಪು.೧೯೧

೫೯. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೩೩೦

೬೦. ಅದೇ, ಪು.೩೩೧

೬೧. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೨೯

೬೨. ಅದೇ, ಪು.೪೦೬

೬೩. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೧೨೨

೬೪. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ (ಗದ್ಯಾನುವಾದ), ಪು.೨೫೦

೬೫. ಅದೇ, ಪು.೩೧೭

೬೬. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೯೯

೬೭. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೧೦೩

೬೮. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೮೩೪

೬೯. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೩೧೮-೩೧೯

೭೦. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೨೮೭

೭೧. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೨೫೩

೭೨. ಅದೇ, ಪು.೩೨೬-೩೨೭

೭೩. ಅದೇ, ಪು.೩೩೩

೭೪. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೩೦೧

೭೫. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ (ಗ.೮), ಪು.೨೨೯

೭೬. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿ, ಪು.೫೦೨

೭೭. ಅದೇ, ಪು.೫೦೪

೭೮. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೧೬೩

೭೯. ಪೂರ್ವೋಕ್ತ, ವಚನ ಪರಿಭಾಷಾ ಕೋಶ, ಪು.೨೦೫

೮೦. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೪೦೩-೪೦೪

೮೧. ಅದೇ, ಪು.೪೦೨-೪೦೩

೮೨. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೯೦

೮೩. ಪೂರ್ವೋಕ್ತ, ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ, ಪುಟ.೪೭೨-೪೭೩

೮೪. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ, ಪು.೧೪೩

೮೫. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೬೧

೮೬. ಅದೇ, ಪು.೯೯

೮೭. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೭೫-೪೭೬

೮೮. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೯೮

೮೯. ಪೂರ್ವೋಕ್ತ, ವಚನ ಪರಿಭಾಷಾಕೋಶ, ಪು.೧೮೩

೯೦. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವ ಲಿಂಗಲೀಲಾ ವಿಲಾಸ ಚಾರಿತ್ರ, ಪು.೧೨೭

೯೧. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೩೨

೯೨. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೯೨-೪೯೩

೯೩. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೩೦೨

೯೪. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ, ಪು.೩೧೫

೯೫. ಪೂರ್ವೋಕ್ತ, ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೭೯

೯೬. ಅದೇ, ಪು.೪೮೦-೪೮೧

೯೭. ಅದೇ, ಪು.೪೮೨

೯೮. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೧೦೧

೯೯. ಪೂರ್ವೋಕ್ತ, ಹರಿಹರ ಕವಿಯ ಗಿರಿಜಾಕಲ್ಯಾಣ ಮಹಾಪ್ರಬಂಧಂ, ಪು.೨೭೯

೧೦೦. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೯೫೭

೧೦೧. ಪೂರ್ವೋಕ್ತ, ಮಗ್ಗೆಯ ಮಾಯಿದೇವ : ಒಂದು ಅಧ್ಯಯನ (ಪಿಎಚ್.ಡಿ.ಪ್ರಬಂಧ) ಪು.೧೯೮

೧೦೨. ಅದೇ, ಪು.೧೦೧

೧೦೩. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೪೯೪-೪೯೫

೧೦೪. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೧೭೭

೧೦೫. ಅದೇ, ಪು.೧೯೭

೧೦೬. ಅದೇ, ಪು.೨೦೯

೧೦೭. ಅದೇ, ಪು.೭೯

೧೦೮. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ, ಪು.೧೪೧

೧೦೯. ಅದೇ, ಪು.೧೪೩

೧೧೦. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೬೨

೧೧೧. ಅದೇ, ಪು.೪೬೫

೧೧೨. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೯೬

೧೧೩. ಪೂರ್ವೋಕ್ತ, ಮಗ್ಗೆಯ ಮಾಯಿದೇವ : ಒಂದು ಅಧ್ಯಯನ (ಪಿಎಚ್ ಡಿ ಪ್ರಬಂಧ), ಪು.೨೦೧

೧೧೪. ಪೂರ್ವೋಕ್ತ, ವೀರಶೈವ ತತ್ತ್ವಾರ್ಥ ವಿವೇಚನೆ, ಪು.೬೮

೧೧೫. ರಾಮಯ್ಯಂಗಾರ್ ಎಚ್.ಜೆ., ಶೈವಧರ್ಮ ದರ್ಶನ, ಪು.೪೩-೪೪

೧೧೬. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ, ಪು.೨೦೮

೧೧೭. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೦೩

೧೧೮. ಅದೇ, ಪು.೩೨೨

೧೧೯. ಅದೇ, ಪು.೪೦೪

೧೨೦. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೨೦೨

೧೨೧. ಪೂರ್ವೋಕ್ತ, ಚಾಮರಸನ ಪ್ರಭುಲಿಂಗ ಲೀಲೆ, ಪು.೨೨೮

೧೨೨. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೫೪

೧೨೩. ಅದೇ, ಪು.೧೦೦

೧೨೪. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೮೭

೧೨೫. ಪೂರ್ವೋಕ್ತ, ವಚನ ಪರಿಭಾಷಾ ಕೋಶ, ಪು.೨೬೧

೧೨೬. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ, ಪು.೧೪೩

೧೨೭. ಅದೇ, ಪು.೩೨೨

೧೨೮. ಅದೇ, ಪು.೪೦೦

೧೨೯. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೨೦೭

೧೩೦. ಅದೇ, ಪು.೨೦೮

೧೩೧. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ, ಪು.೧೪೮

೧೩೨. ಪೂರ್ವೋಕ್ತ, ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೯೨

೧೩೩. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೩೫

೧೩೪. ಪಾಟೀಲ ಬಿ.ಎಸ್., ವೀರಶೈವ ದರ್ಶನಸಾರ, ಪು.೩೬-೩೭

೧೩೫. ಪೂರ್ವೋಕ್ತ, ಮಗ್ಗೆಯ ಮಾಯಿದೇವ : ಒಂದು ಅಧ್ಯಯನ (ಪಿಎಚ್ ಡಿ ಪ್ರಬಂಧ), ಪು.೨೦೬

೧೩೬. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರಶತಸ್ಥಲ, ಪು.೨೩೪

೧೩೭. ಪೂರ್ವೋಕ್ತ, ಹರಿಹರನ ರಗಳೆಗಳು ಪು.೩೨೭

೧೩೮. ಅದೇ ಪು.೩೨೮

೧೩೯. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ, ಪು.೧೯೩

೧೪೦. ಪೂರ್ವೋಕ್ತ, ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೨೬೬

೧೪೧. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೫೪

೧೪೨. ಅದೇ, ಪು.೬೮

೧೪೩. ಅದೇ, ಪು.೧೦೨

೧೪೪. ಪೂರ್ವೋಕ್ತ, ವಚನ ಪರಿಭಾಷಾ ಕೋಶ, ಪು.೫೦

೧೪೫. ಪೂರ್ವೋಕ್ತ, ಶೈವಧರ್ಮ ದರ್ಶನ, ಪು.೪೭

೧೪೬. ಪೂರ್ವೋಕ್ತ, ಮಗ್ಗೆಯ ಮಾಯಿದೇವ : ಒಂದು ಅಧ್ಯಯನ (ಪಿಎಚ್.ಡಿ ಪ್ರಬಂಧ), ಪು.೨೦೫

೧೪೭. ಪೂರ್ವೋಕ್ತ, ವಚನ ಪರಿಭಾಷಾಕೋಶ, ಪು.೫೧

೧೪೮. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೨೬೬

೧೪೯. ಅದೇ, ಪು.೩೬೦

೧೫೦. ಪೂರ್ವೋಕ್ತ, ರಾಘವಾಂಕನ ಸಮಗ್ರ ಕಾವ್ಯ, ಪು.೩೩೧

೧೫೧. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೩೮

೧೫೨. ಅದೇ, ಪು.೪೪

೧೫೩. ಅದೇ, ಪು.೧೩೦

೧೫೪. ಪೂರ್ವೋಕ್ತ, ಮಗ್ಗೆಯ ಮಾಯಿದೇವ : ಒಂದು ಅಧ್ಯಯನ (ಪಿ.ಎಚ್ .ಡಿ.ಪ್ರಬಂಧ), ಪು.೨೦೭

೧೫೫. ಪೂರ್ವೋಕ್ತ, ವೀರಶೈವ ದರ್ಶನ ಸಾರ, ಪು.೪೧

೧೫೬. ಪೂರ್ವೋಕ್ತ, ಶೈವ ಧರ್ಮದರ್ಶನ, ಪು.೪೭-೪೮

೧೫೭. ಸಂ.ಶಿ.ಭೂಸನೂರಮಠ(ಸಂ), ವಚನ ಸಾಹಿತ್ಯ ಸಂಗ್ರಹ, ಪು.೨೧೫

೧೫೮. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೧೭-೩೧೮

೧೫೯. ಅದೇ, ಪು.೩೨೧

೧೬೦. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ, ಪು.೨೦೯

೧೬೧. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೩೯

೧೬೨. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೩೪೮

೧೬೩. ಮಲ್ಲಾಪುರ ಬಿ.ವಿ., ವೀರಶೈವ ತತ್ವಾರ್ಥ ವಿವೇಚನೆ, ಪು.೭೫

೧೬೪. ಪೂರ್ವೋಕ್ತ, ವೀರಶೈವ ದರ್ಶನ ಸಾರ, ಪು.೪೩

೧೬೫. ಪೂರ್ವೋಕ್ತ, ಮಗ್ಗೆಯ ಮಾಯಿದೇವ : ಒಂದು ಅಧ್ಯಯನ (ಪಿಎಚ್ .ಡಿ ಪ್ರಬಂಧ), ಪು.೨೦೮

೧೬೬. ಅದೇ, ಪು.೨೦೮-೨೦೯

೧೬೭. ಪೂರ್ವೋಕ್ತ, ವಚನ ಸಾಹಿತ್ಯ ಸಂಗ್ರಹ, ಪು.೫೫೬

೧೬೮. ಅದೇ,

೧೬೯. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ (ಗ.ಅ), ಪು.೨೯೨

೧೭೦. ಪೂರ್ವೋರಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾ ವಿಲಾಸಚಾರಿತ್ರ, ಪು.೩

೧೭೧. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ವಚಿಂತಾಮಣಿ, ಪು.೫೦೭

೧೭೨. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೨೧೧-೨೧೨

೧೭೩. ಶ್ರೀ ಚನ್ನಮಲ್ಲಿಕಾರ್ಜುನ (ಸಂ). ಮೊಗ್ಗೆಯ ಮಾಯಿದೇವ ಪ್ರಭುವಾಣಿ, ಪು.೧೬೯-೧೭೦

೧೭೪. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೨

೧೭೫. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೨೦೭

೧೭೬. ಪೂರ್ವೋಕ್ತ, ಶೈವಧರ್ಮ ದರ್ಶನ, ಪು.೪೦

೧೭೭. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೨೭೨

೧೭೮. ಪೂರ್ವೋಕ್ತ ಮೊಗ್ಗೆಯ ಮಾಯಿದೇವ, ಪ್ರಭುವಾಣಿ, ಪು.೧೬೫

೧೭೯. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೨೨

೧೮೦. ಅದೇ, ಪು.೪೦೨

೧೮೧. ಅದೇ, ಪು.೪೦೭

೧೮೨. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ (ಗ.ಅ) ಪು.೨೫೦

೧೮೩. ಪೂರ್ವೋಕ್ತ, ಲಕ್ಕಣ್ಣದಂಡೇಸನ ಶಿವತತ್ವ ಚಿಂತಾಮಣಿ, ಪು.೫೨೦

೧೮೪. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರಶತಸ್ಥಲ, ಪು.೪೦

೧೮೫. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾ ವಿಲಾಸ ಚಾರಿತ್ರ, ಪು.೧೩೯

೧೮೬. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೨೭೦

೧೮೭. ಪೂರ್ವೋಕ್ತ, ವೀರಶೈವ ದರ್ಶನ ಸಾರ, ಪು.೪೬

೧೮೮. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೭೩

೧೮೯. ಪೂರ್ವೋಕ್ತ, ಮೊಗ್ಗೆಯ ಮಾಯಿದೇವ ಪ್ರಭುವಾಣಿ, ಪು.೧೬೫

೧೯೦. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೨೨

೧೯೧. ಪೂರ್ವೋಕ್ತ, ಚಾಮರಸನ ಪ್ರಭುಲಿಂಗ ಲೀಲೆ, ಪು.೨೦೮

೧೯೨. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮನಿ, ಪು.೫೨೦

೧೯೩. ಪೂರ್ವೋಕ್ತ, ಮಹಾಲಿಂಗ ದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೭೧

೧೯೪. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾ ವಿಲಾಸ ಚಾರಿತ್ರ, ಪು.೧೭೭

೧೯೫. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೨೮೯

೧೯೬. ಪೂರ್ವೋಕ್ತ, ವೀರಶೈವ ದರ್ಶನಸಾರ, ಪು.೪೯

೧೯೭. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾ ವಿಲಾಸಚಾರಿತ್ರ, ಪು.೧೯೯

೧೯೮. ಪೂರ್ವೋಕ್ತ, ಮೊಗ್ಗೆಯ ಮಾಯಿದೇವ, ಪ್ರಭುವಾಣಿ, ಪು.೧೬೬

೧೯೯. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೧೯-೩೨೦

೨೦೦. ಪೂರ್ವೋಕ್ತ, ಚಾಮರಸನ ಪ್ರಭುಲಿಂಗ ಲೀಲೆ, ಪು.೨೫೪

೨೦೧. ಪೂರ್ವೋಕ್ತ, ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ಪು.೫೨೦

೨೦೨. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೧೦೬

೨೦೩. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾ ವಿಲಾಸ ಚಾರಿತ್ರ, ಪು.೧೯೫

೨೦೪. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೩೦೭

೨೦೫. ಪೂರ್ವೋಕ್ತ, ವೀರಶೈವ ದರ್ಶನ ಸಾರ, ಪು.೫೨

೨೦೬. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೩೨೫

೨೦೭. ಪೂರ್ವೋಕ್ತ, ಮೊಗ್ಗೆಯ ಮಾಯಿದೇವ ಪ್ರಭುವಾಣಿ, ಪು.೧೬೬

೨೦೮. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೧೧

೨೦೯. ಅದೇ, ಪು.೪೧೦

೨೧೦. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ (ಗ.೮), ಪು.೨೩೨

೨೧೧. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಪು.೫೭೦

೨೧೨. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೧೩೪

೨೧೩. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ, ಪು.೨೩೫

೨೧೪. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೩೨೪

೨೧೫. ಪೂರ್ವೋಕ್ತ, ವೀರಶೈವ ಧರ್ಮಸಾರ, ಪು.೫೪-೫೫

೨೧೬. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರಶತಸ್ಥಲ, ಪು.೧೫೭

೨೧೭. ಪೂರ್ವೋಕ್ತ, ಮೊಗ್ಗೆಯ ಮಾಯಿದೇವ ಪ್ರಭುವಾಣಿ, ಪು.೧೬೮.

೨೧೮. ಪೂರ್ವೋಕ್ತ, ಹರಿಹರನ ರಗಳೆಗಳು, ಪು.೩೨೬

೨೧೯. ಅದೇ, ಪು.೩೩೪

೨೨೦. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ, ಪು.೨೪೨

೨೨೧. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಪು.೫೧೯

೨೨೨. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರಶತಸ್ಥಲ, ಪು.೧೫೫

೨೨೩. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ, ಪು.೨೭೭

೨೨೪. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೩೪೪

೨೨೫. ಪೂರ್ವೋಕ್ತ, ವೀರಶೈವ ದರ್ಶನಸಾರ, ಪು.೫೬-೫೭

೨೨೬. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ, ಪು.೩೨೪

೨೨೭. ಪೂರ್ವೋಕ್ತ, ಮೊಗ್ಗೆಯ ಮಾಯಿದೇವ ಪ್ರಭುವಾಣಿ, ಪು.೧೬೮

೨೨೮. ಪೂರ್ವೋಕ್ತ, ಹರಿಹರನ ರಗಳೆಗಳು, ಪುಟ.೩೩೫

೨೨೯. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ, ಪು.೩೪೩

೨೩೦. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಪು.೫೧೯

೨೩೧. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರಶತಸ್ಥಲ, ಪು.೧೭೪

೨೩೨. ಪೂರ್ವೋಕ್ತ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ, ಪು.೩೧೩

೨೩೩. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೩೬೩

೨೩೪. ಆರ್.ಸಿ.ಹಿರೇಮಠ(ಸಂ), ಶಿವದೀಪ್ತಿ, ಪು.೩೨೧-೩೨೨

೨೩೫. ಮಲ್ಲಾಪುರ ಬಿ.ವಿ., ವೀರಶೈವ ತತ್ವಾರ್ಥವಿವೇಚನೆ, ಪು.೫೩

೨೩೬. ಪೂರ್ವೋಕ್ತ, ಲಕ್ಕಣ್ಣನದಂಡೇಶನ ಶಿವತತ್ವ ಚಿಂತಾಮಣಿ, ಪು.೫೦೮

೨೩೭. ಪೂರ್ವೋಕ್ತ, ಚಾಮರಸನ ಪ್ರಭುಲಿಂಗಲೀಲೆ, ಪು.೨೯೨

೨೩೮. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಪು.೫೧೧

೨೩೯. ಅದೇ, ಪು.೫೧೧

೨೪೦. ಅದೇ, ಪು.೫೧೨

೨೪೧. ಅದೇ, ಪು.೫೧೭

೨೪೨. ಅದೇ, ಪು.೫೧೮

೨೪೩. ಅದೇ, ಪು.೫೨೧

೨೪೪. ಅದೇ, ಪು.೫೨೧

೨೪೫. ಪೂರ್ವೋಕ್ತ, ಲಿಂಗಲೀಲಾವಿಲಾಸ ಚಾರಿತ್ರ, ಪು.೧

೨೪೬. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೨೧೨-೨೧೩

೨೪೭. ಪೂರ್ವೋಕ್ತ, ವೀರಶೈವ ತತ್ತ್ವಾರ್ಥ ವಿವೇಚನೆ, ಪು.೭೮

೨೪೮. ಪೂರ್ವೋಕ್ತ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಪು.೨

೨೪೯. ಅದೇ, ಪು.೨-೪

೨೫೦. ಪೂರ್ವೋಕ್ತ, ಮೊಗ್ಗೆಯ ಮಾಯಿದೇವ ಪ್ರಭುವಾಣಿ, ಪು.೧೯೬

೨೫೧. ಭೂಸನೂರಮಠ ಸಂ.ಶಿ., ವಿಜಯ ಕಲ್ಯಾಣ, ಪು.೧೫೧

೨೫೨. ಪೂರ್ವೋಕ್ತ, ಶಿವದೀಪ್ತಿ, ಪು.೩೩೦

೨೫೩. ಎಪಿಗ್ರಾಫಿಯಾ ಕರ್ನಾಟಕ, XII ಕುಣಿಗಲ್ ೪೩

೨೫೪. ಅದೇ, XI ದಾವಣಗೆರೆ ೩೪

೨೫೫. ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪು.೨೩

೨೫೬. ಅದೇ, ಪು.೨೩

೨೫೭. ಕೃಷ್ಣಪ್ಪ ಎಂ.ವಿ. ಮತ್ತು ಎಚ್.ಟಿ.ತಳವಾರ(ಸಂ), ವಿಜಯನಗರ ಅಧ್ಯಯನ ಸಂಪುಟ-೬, ಪು.೪

೨೫೮. ದೇವರಕೊಂಡಾರೆಡ್ಡಿ ಭಟ್‌ಸೂರಿ ಕೆ.ಜಿ., ಕಲವೀರ ಮನ್ವಾಚಾರ, ಡಿ.ವಿ.ಪರಮಶಿವಮೂರ್ತಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಪು.೩೪

೨೫೯. ಅದೇ, ಪು.೫೮, ಶಾ.ಸಂ.೬೯

೨೬೦. ಅದೇ, ಪು.೨೪೧-೨೪೨, ಶಾ.ಸಂ.೩೨೭

೨೬೧. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೫೭

೨೬೨. ಪರಮಶಿವಮೂರ್ತಿ ಡಿ.ವಿ.(ಸಂ), ಪ್ರೌಢದೇವರಾಯನ ಶಾಸನಗಳು, ಪು.೨೨೦, ಶಾ.ಸಂ.೧೦೧

೨೬೩. ಅದೇ, ಪು.೨೬೦, ಶಾ.ಸಂ.೧೧೮

೨೬೪. ಅದೇ, ಪು.೩೧೦, ಶಾ.ಸಂ.೧೪೭

೨೬೫. ಅದೇ, ಪು.೫, ಶಾ.ಸಂ.೨

೨೬೬. ಅದೇ, ಪು.೩೬೩, ಶಾ.ಸಂ.೧೭೮

೨೬೭. ಅದೇ, ಪು.೨೭ (ಪ್ರಸ್ತಾವನೆ)

೨೬೮. ಅದೇ, ಪು.೨೩ (ಪ್ರಸ್ತಾವನೆ)

೨೬೯. ಪೂರ್ವೋಕ್ತ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಪು.೪೩೯, ಪದ್ಯ-೨೪೯-೨೫೦

೨೭೦. ಶಿವಮೂರ್ತಿಶಾಸ್ತ್ರಿ ಬಿ.(ಸಂ), ಪಂಪಾಸ್ಥಾನವರ್ಣನಂ, ಪು.೨

೨೭೧. ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ (ಪಿಎಚ್.ಡಿ.ಪ್ರಬಂಧ), ಪು.೨೯

೨೭೨. ಭೂಸನೂರಮಠ ಸಂ.ಶಿ.(ಸಂ), ಅದೃಶ್ಯಕವಿಯ ಪ್ರೌಢರಾಯನ ಕಾವ್ಯ, ಪು.೧

೨೭೩. ಅದೇ, ಪು.೧೨

೨೭೪. ಕೊಪ್ಪಳ ಕೆ.ಆರ್.(ಸಂ), ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ, ಪು.೬೩

೨೭೫. ಪೂರ್ವೋಕ್ತ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ (ಪಿಎಚ್.ಡಿ. ಪ್ರಬಂಧ), ಪು.೩೧

೨೭೬. ಪೂರ್ವೋಕ್ತ, ಪ್ರೌಢದೇವರಾಯನ ಶಾಸನಗಳು, ಪು.೫೦೦, ಶಾ.ಸಂ.೧೯

೨೭೭. ಅದೇ, ಪು.೭೭, ೧೨೧, ೨೦೦, ೨೮೬, ೩೫೧, ೫೧೧, ಶಾ.ಸಂ.೩೭, ೫೭, ೯೦, ೧೩೭, ೨೮ (ತಮಿಳು)

೨೭೮. ಅದೇ, ಪು.೩೪೨, ಶಾ.ಸಂ.೧೬೬

೨೭೯. ಅದೇ, ಪು.೨೪೪, ಶಾ.ಸಂ.೧೧೧

೨೮೦. ಅದೇ, ಪು.೮, ಶಾ.ಸಂ.೫

೨೮೧. ಅದೇ, ಪು.೧೭೬, ಶಾ.ಸಂ.೭೯

೨೮೨. ಅದೇ, ಪು.೨೧೪, ಶಾ.ಸಂ.೯೮

೨೮೩. ಅದೇ, ಪು.೧೦೦, ಶಾ.ಸಂ.೫೧

೨೮೪. ಅದೇ, ಪು.೩, ೨೭೦, ಶಾ.ಸಂ.೧,೧೨೬

೨೮೫. ಅದೇ, ಪು.೩೨-೩೩ (ಪ್ರಸ್ತಾವನೆ)

೨೮೬. ಅದೇ, ಪು.೧೫೯, ಶಾ.ಸಂ.೭೦

೨೮೭. ಅದೇ, ಪು.೩೩ (ಪ್ರಸ್ತಾವನೆ)

೨೮೮. ದೇವೀರಪ್ಪ ಎಚ್., ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ (ವಿಮರ್ಶೆ), ಪು.೨೫-೨೬

೨೮೯. ಭೂಸನೂರಮಠ ಸಂ.ಶಿ.(ಸಂ), ವಿಜಯ ಕಲ್ಯಾಣ, ಪು.೧೫೧

೨೯೦. ಪೂರ್ವೋಕ್ತ, ಅದೃಶ್ಯ ಕವಿಯ ಪ್ರೌಢರಾಯನ ಕಾವ್ಯ, ಪು.೨೯೯

೨೯೧. ಪೂರ್ವೋಕ್ತ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ ಪು.೨೪೪-೨೪೫

೨೯೨. ಅದೇ, ಪು.೨೪೧

೨೯೩. ಅದೇ, ಪು.೨೪೧

೨೯೪. ಪೂರ್ವೋಕ್ತ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪು.೨೪೭

೨೯೫. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೪೮೯

೨೯೬. ಪೂರ್ವೋಕ್ತ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಪು.೨೨೦, ಶಾ.ಸಂ.೩೦೨

೨೯೭. ಅದೇ, ಪು.೧೯೮, ಶಾ.ಸಂ.೨೫೭

೨೯೮. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೫೯೦

೨೯೯. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿ ಶಾಸನಗಳು, ಪು.೮೫, ಶಾ.ಸಂ.೮೪

ಅಧ್ಯಾಯ ೫

# ಸಾಂಸ್ಥೀಕರಣ

೧. ವೀರಶೈವ ಮಠಗಳು, ಆಶ್ರಮ ಮತ್ತು ಗವಿಗಳು

೨. ನೂರೊಂದು ವಿರಕ್ತರು

೩. ಶಾಸನೋಕ್ತ ಶಿವಶರಣರು

೪. ಶಾಸನೋಕ್ತ ಶಿವಲಿಂಗಗಳು

೫

## ಸಾಂಸ್ಥೀಕರಣ

ಒಂದು ಧಾರ್ಮಿಕ ಸಿದ್ಧಾಂತ ಧರ್ಮವಾಗಿ ರೂಪುಗೊಂಡ ಮೇಲೆ ಅದು ಸಿದ್ಧಾಂತಗಳ ಅಡಿಯಲ್ಲಿ ನೆಲೆ ನಿಲ್ಲುತ್ತದೆ. ಅಂದರೆ ಸಿದ್ಧಾಂತ ಧರ್ಮವಾದ ಮೇಲೆ ಅದನ್ನು ಸಂರಕ್ಷಿಸುವ, ಬೋಧಿಸುವ ಸಂಸ್ಥೆ ಮತ್ತು ಅನುಭಾವಿಗಳ, ಧರ್ಮಗುರುಗಳ ವರ್ಗ ಹುಟ್ಟಿಕೊಳ್ಳುತ್ತದೆ. ಧರ್ಮವಾಗುವ ಮೊದಲು ಧಾರ್ಮಿಕ ಸಿದ್ಧಾಂತವನ್ನು ಬೋಧಿಸುವ ಗುರು ಪರಂಪರೆ ಇದ್ದೇ ಇರುತ್ತದೆ. ಆದರೆ ಧಾರ್ಮಿಕ ಸಂಸ್ಥೆಗಳಿರುವುದು ವಿರಳ. ಸಿದ್ಧಾಂತವು ಧರ್ಮವಾದ ಮೇಲೆ ಅದನ್ನು ಸಂರಕ್ಷಿಸಲು, ಪ್ರಚಾರ ಮಾಡಲು ಧಾರ್ಮಿಕ ಸಂಸ್ಥೆಗಳು, ಆಶ್ರಮಗಳು ಧಾರ್ಮಿಕ ಅನುಭಾವಿಗಳು ಹುಟ್ಟಿ, ಧರ್ಮಪ್ರಚಾರ ಕಾರ್ಯದಲ್ಲಿ ತೊಡಗುವುದು ಸಹಜವೇ ಆಗಿದೆ. ಇದನ್ನೇ ಸಾಂಸ್ಥೀಕರಣ ಎನ್ನುತ್ತೇವೆ. ಸಾಂಸ್ಥೀಕರಣ ಎಂದರೆ ಸ್ಥಗಿತಗೊಂಡದ್ದು, ನೆಲೆ ನಿಲ್ಲುವುದು ಎಂದರ್ಥ. ೧೪-೧೫ನೇ ಶತಮಾನದಲ್ಲಿ ಹಂಪಿಯಲ್ಲಿ ಪ್ರೌಢದೇವರಾಯನ ಕಾಲದಲ್ಲಿ ವೀರಶೈವ ಸಿದ್ಧಾಂತವು ಧರ್ಮವಾಗಿ ರೂಪುಗೊಂಡು ಸಾಂಸ್ಥೀಕರಣಗೊಂಡದ್ದನ್ನು ಅನೇಕ ಸಾಹಿತ್ಯ ಕೃತಿಗಳಿಂದ ತಿಳಿದುಬರುತ್ತದೆ. ಹಂಪಿಯಲ್ಲಿ ಧರ್ಮದ ಸಂರಕ್ಷಣೆ, ಪ್ರಚಾರ ಮಾಡಲು ಅನೇಕ ಮಠಗಳು, ಆಶ್ರಮಗಳು, ಗವಿಗಳು ಧರ್ಮಬೋಧಕರು ಹುಟ್ಟಿ, ವೀರಶೈವ ಧರ್ಮಪ್ರಚಾರ ಮಾಡಿರುವುದನ್ನು ಶಾಸನ, ಸಾಹಿತ್ಯ ಕೃತಿಗಳು ಅಳಿದುಳಿದ ಮಠಗಳ ಅವಶೇಷಗಳಿಂದ ಅರಿಯಬಹುದು. ಹಂಪಿಯಲ್ಲಿ ಅನೇಕ ವೀರಶೈವಮಠಗಳು, ಗವಿಗಳು, ಅವುಗಳ ಅವಶೇಷಗಳು ಕಂಡುಬರುತ್ತವೆ. ವಿಜಯನಗರ ಸಾಮ್ರಾಜ್ಯದ ಸಂಗಮ ವಂಶದ ಅರಸರ ರಾಜಗುರು ಕ್ರಿಯಾಶಕ್ತಿ ಪರಂಪರೆಯ ಗುರುಗಳ ಮಾರ್ಗದರ್ಶನವನ್ನು ಶಾಸನಗಳಿಂದ ಅರಿಯಬಹುದಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ಹಂಪಿಯಲ್ಲಿ ಕಂಡುಬರುವ ವೀರಶೈವ ಮಠಗಳು, ಗವಿಗಳು, ಆಶ್ರಮ ಮತ್ತು ಅವುಗಳ ಅವಶೇಷಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಲ್ಲದೆ ಸಂಗಮ ವಂಶದ ಅರಸರ ರಾಜಗುರು ಪರಂಪರೆ, (ಕನ್ನಡ) ಸಾಹಿತ್ಯ ಕೃತಿಗಳಲ್ಲಿ, ಶಾಸನಗಳಲ್ಲಿ ಉಲ್ಲೇಖಗೊಂಡ ಶಿವಶರಣರು, ನೂರೊಂದು ವಿರಕ್ತರು ಅವರ ನೆಲೆಗಳು ಇನ್ನೂ ಮುಂತಾದ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಿ ವಿಶ್ಲೇಷಿಸಲಾಗಿದೆ.

## ಅ. ವೀರಶೈವ ಮಠಗಳು, ಆಶ್ರಮ ಮತ್ತು ಗವಿಗಳು

ಭಾರತ ಹಲವು ಸಂಸ್ಕೃತಿಗಳ ಬೀಡು, ಬೌದ್ಧ, ಜೈನ, ಶೈವ ಮತ್ತು ವೈದಿಕ ಧರ್ಮಗಳು ತಮ್ಮ ತಮ್ಮ ಧರ್ಮ ತತ್ತ್ವಗಳಿಗೆ ಸಂಬಂಧಿಸಿದ ಅಧ್ಯಾತ್ಮಿಕ ಶ್ರದ್ಧಾಕೇಂದ್ರಗಳನ್ನು ತೆರೆದಿದ್ದವು. ಇವುಗಳನ್ನು ಮಠಗಳೆಂದು ಕರೆಯಲಾಗಿದೆ. ಭಾರತದಲ್ಲಿ ಪುರಾತನ ಕಾಲದಿಂದಲೂ ಈ ಪರಂಪರೆ, ಪ್ರಕ್ರಿಯೆ ನಡೆದುಕೊಂಡು ಬಂದಿದೆ.

'ಮಠ'ವೆಂದರೆ "ಸಂನ್ಯಾಸಿಗಳು ವಾಸಿಸುವ ಕುಟೀರ, ಆಶ್ರಮ, ವಿದ್ಯೆ, ಜೈನ, ಧರ್ಮಬೋಧನೆ ಮತ್ತು ಪ್ರಸಾರ ಕಾರ್ಯ ನಡೆಸುವ ಆಧ್ಯಾತ್ಮಿಕ ಸಂಸ್ಥೆ. ಸಂಸ್ಥಾನ, ಗುಡಿ, ದೇವಾಲಯ, ಮಹಾವ್ಯಕ್ತಿಗಳು ದೇಹ ತ್ಯಜಿಸಿದ ಮೇಲೆ ಅವರ ಯಾವುದಾದರೂ ಕುರುಹನ್ನು ಪೂಜಿಸುವ ಸ್ಥಳ, (ಯಾತ್ರಾರ್ಥಿಗಳು, ಸಾಧು ಸಂತರಿಗೆ ನಿರಂತರವಾಗಿ ಅನ್ನದಾನ ನಡೆಸುವ ಭೋಜನ ಶಾಲೆ, ಅನ್ನಛತ್ರ, ಶಿಕ್ಷಣ ಶಾಲೆ, ಪಾಠಶಾಲೆ"[೧] ಸಂನ್ಯಾಸಿಗಳು ಮತ್ತು ಆಧ್ಯಾತ್ಮ ಸಾಧಕರು ವಾಸಿಸುವ ಸ್ಥಳ, ಆಧ್ಯಾತ್ಮ ಸಾಧಕಗುರು ಮತ್ತು ವಿದ್ಯಾರ್ಥಿಗಳು ವಾಸಿಸುವ ಕುಟೀರ ಎಂಬಿತ್ಯಾದಿಯಾಗಿ ಅರ್ಥೈಸಬಹುದು. 'ಮಠ' ಎಂಬ ಪದವನ್ನು ಮೂಲತಃ ಸಂಸ್ಕೃತದಿಂದ ಕನ್ನಡಕ್ಕೆ ತೆಗೆದುಕೊಳ್ಳಲಾಗಿದೆ. 'ಮಠ'-ಮಠತಿ ಎಂದರೆ 'ವಾಸಿಸು' ಎಂಬ ಅರ್ಥವನ್ನು ಕೊಡಲಾಗಿದೆ. ಮಠವೆಂಬ ಪದಕ್ಕೆ ಮೂಲ ಅರ್ಥವು 'ವಾಸಸ್ಥಾನ' ಎಂದಿದ್ದರೂ ತದನಂತರ ಅದು ವಿದ್ಯಾರ್ಥಿಗಳ ಇಲ್ಲವೆ ಗುರುಗಳ ವಾಸಸ್ಥಾನ ಎಂದೇ ಬಳಕೆಯಾದಂತಿದೆ. ಆದುದರಿಂದಲೇ ಈ ಪದಕ್ಕೆ ಈ ಅರ್ಥದ ಮೇಲಿಂದ 'ಶಾಲೆ', 'ಕಾಲೇಜು', 'ವಿದ್ಯಾಕೇಂದ್ರ', 'ದೇವಾಲಯ' ಎಂಬ ಅರ್ಥಗಳೂ ಬಂದಿವೆ. ಅಲ್ಲದೆ, 'ಪಾವಿತ್ರ್ಯವನ್ನು ಕಾಪಾಡಿಕೊಂಡು ಬರುವ ಸ್ಥಳ' ಎಂದೂ ಅರ್ಥವನ್ನು ಹೇಳಬಹುದಾಗಿದೆ. ಅಮರ ಕೋಶದ ಪ್ರಕಾರ 'ಮಠ' ಛಾತ್ರಾದಿನಿಲಯ ಮತ್ತು 'ಮಠಂತಿ ಛಾತ್ರಾದಯ : ಅತ್ರಮಠ: ಎಂದಿರುವುದರಿಂದ ವಿದ್ಯಾರ್ಥಿಗಳು ವಾಸಿಸುವ ಸ್ಥಳವೆಂದೂ ಮಠಕ್ಕೆ ಅರ್ಥೈಸಬಹುದಾಗಿದೆ."[೨] ವೀರಶೈವ ಪರಿಭಾಷೆಯಲ್ಲಿ ಮಠವೆಂದರೆ ವಿರಕ್ತರು ಮತ್ತು ವಿದ್ಯಾರ್ಥಿಗಳು ವಾಸಿಸುವ ಸ್ಥಳ, ವಿರಕ್ತರ ಸಮಾಧಿಯ ಸ್ಥಳ, ಲಿಂಗಾಯತ ಧಾರ್ಮಿಕ ಶ್ರದ್ಧಾಕೇಂದ್ರ, ಲಿಂಗಾಯತ ಧರ್ಮ ಬೋಧನೆಯ ಸ್ಥಳ, ವೀರಶೈವರ ಅಧ್ಯಾತ್ಮಿಕ ಕೇಂದ್ರ ಸ್ಥಳ, ವೀರಶೈವರ (ಲಿಂಗಾಯತರ) ಆಧ್ಯಾತ್ಮಗುರು ವಿರಕ್ತರು ವಾಸಿಸುವ ಸ್ಥಳ, ಎಂಬಿತ್ಯಾದಿಯಾಗಿ ಅರ್ಥೈಸಬಹುದು.

೧೨ನೇ ಶತಮಾನದ ವಚನಕಾರರ ಪ್ರಕಾರ ಮಠದ ಪರಿಕಲ್ಪನೆಯೇ ಬೇರೆಯಾಗಿದೆ.

"ತನ್ನ ಮಠಕ್ಕೆ ತಾ ಬಹಡೆ ಮುನಿಸುವಂತೆ?
ಕೂಡಲಸಂಗನ ಶರಣರ ಮನೆಯ ಬಾಗಿಲುಗಾಹಿ ನಾನಾಗಿರ್ದು
ಕರ್ತರು ಗೃಹಕ್ಕೆ ಬಂದಡೆ ಬೇಕು ಬೇಡೆನ್ನೆ"[೩]

ಈ ವಚನದಲ್ಲಿ ಮಠ-ಮನೆ-ಗೃಹ ಎಂಬ ಮೂರು ಶಬ್ದಗಳು ವಾಸಸ್ಥಾನ ಎಂಬ ಅರ್ಥದಲ್ಲಿ ಬಳಕೆಯಾಗಿವೆ.

"ಭಕ್ತನ ಮಠಕ್ಕೆ ಜಂಗಮ ಬಂದು
ಆ ಭಕ್ತ ಮಾಡಿದಂತೆ ಭಕ್ತಿಯ ಮಾಡಿಸಿಕೊಂಡು"[೪]

ಈ ವಚನದಲ್ಲಿ ಭಕ್ತನ ಮನೆಯನ್ನು ಮಠವೆಂದು ಕರೆಯಲಾಗಿದೆ.

"ಎರಡು ಲಕ್ಷ ಎಂಭತ್ತೈದು ಸಾವಿರದ
ಏಳುನೂರ ಇಪ್ಪತ್ತು ದಾಸೋಹದ ಮಠಗಳು"[೫]

ಇದ್ದು ಅದರಲ್ಲಿ 'ಆ ದಾಸೋಹದ ಮಠಂಗಳಿಗೆ ಮುಖ್ಯವಾದ ಬಸವರಾಜ ದೇವರ ಮಠ'ವೆಂದು ಹೇಳಿ ಅದರ ವಿಸ್ತೀರ್ಣವನ್ನು ವಿವರಿಸುವಲ್ಲಿ ಮಠವೆಂದರೆ ಶರಣರ ವಾಸದ ಮನೆಯೆಂಬ ಅರ್ಥವನ್ನು ನೀಡುತ್ತದೆ. ಹಾಗೆಯೇ ಚೆನ್ನಬಸವಣ್ಣವರ ವಚನದಲ್ಲಿ

"ಜಡರುಗಳ ಮನದ ಕತ್ತಲೆಯ ಕಳೆಯಬೇಕೆಂದು
ಕಟ್ಟಿತ್ತು ಕಲ್ಯಾಣದಲ್ಲಿ ಮಹಾಮಠವು"[೬]

ಈ ವಚನದಲ್ಲಿ ಮಠವೆಂದರೆ 'ಮಹಾಮನೆ' ಅಥವಾ ಅನುಭವ ಮಂಟಪ ಎಂಬ ಅರ್ಥದಲ್ಲಿದೆ. ಅಂದರೆ ಶರಣರ ಸಾಮೂಹಿಕ ಚರ್ಚಾಕೇಂದ್ರ ಎಂದು ಮಹಾಮಠಕ್ಕೆ ಅರ್ಥ ನೀಡಬಹುದು.

ಬಸವರಾಜ ದೇವರ ರಗಳೆಯಲ್ಲಿ "ಬಸವರಾಜನ ಮಹಮನೆಯಂ ಪೊರಮಟ್ಟ"[೭] ಎಂದು ಧಾಖಲಿಸಿದೆ. ಇಲ್ಲಿ ಬಹುಶಃ ಮಠವನ್ನು ಮಹಾಮನೆಯೆಂದು ಕರೆದಿರುವ ಸಾಧ್ಯತೆ ಇದೆ. ಮಹಾದೇವಿಯಕ್ಕನ ರಗಳೆಯಲ್ಲಿ "ಕಲುಮಠದ ರಾಜಗುರುಗಳಿಗೆ ಹೊನ್ನೀವುತಂ, ಹುಲುಮಠದ ಮುಖ್ಯರ್ಗೆ ಲಂಚಮುಮನೀವುತಂ"[೮] ಎಂದು ದಾಖಲಿಸಿದೆ. ಇಲ್ಲಿ ಮಠವೆಂದರೆ ರಾಜಗುರುಗಳು ವಾಸಿಸುವ ಸ್ಥಳವೆಂದು ಅರ್ಥೈಸಬಹುದು. ವಚನಕಾರರಲ್ಲಿ ಮನೆ ಮತ್ತು ಮಠ ಎರಡೂ ಒಂದೇ ಅರ್ಥದಲ್ಲಿ ಬಳಕೆಯಾಗಿದ್ದರೆ, ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಮನೆ ಬೇರೆ, ಮಠ ಬೇರೆ ಎಂಬ ಅರ್ಥ ಹೊರಹೊಮ್ಮಿರುವುದನ್ನು ಕಾಣಬಹುದಾಗಿದೆ.

"ಬಿಡು ಮರುಳೆ ಮನೆಯೇನು ಮಠವೇ
ನಡವಿಯೇನೂರೇನು ಬೇಜೊಂದೆಡೆಗಳುಂಟೇ?
ಸರ್ವಗತನಾದಾ ಮಹಾತ್ಮಂಗೆ"[೯]

ಎಂದು ಉಲ್ಲೇಖಿಸಿದೆ.

ಮಹಾತ್ಮನಾದವನಿಗೆ ಮನೆಯೇನು, ಮಠವೇನು, ಅಡವಿಯೇನು ಊರೇನು? ಪ್ರತ್ಯೇಕ ಸ್ಥಳಗಳುಂಟೇ? ಎಂದು ಚಾಮರಸ ಮನೆ ಬೇರೆ, ಮಠ ಬೇರೆ ಎಂದು ದಾಖಲಿಸುತ್ತಾನೆ. ಹೀಗೆ ವಿವಿಧ ಕಾಲಘಟ್ಟದಲ್ಲಿ 'ಮಠ' ಎಂಬ ಪದ ಅರ್ಥವ್ಯಾಪ್ತಿ ಪಡೆದಿದೆ.

ಕರ್ನಾಟಕದಲ್ಲಿ ಮಠದ ಚರಿತ್ರೆ ಪ್ರಾರಂಭವಾಗುವುದು ಜೈನ ಮತದಿಂದ. ಅದು ಕ್ರಿ.ಶ.೬ನೇ ಶತಮಾನದಿಂದ ಆರಂಭವಾಗುತ್ತದೆ. ಶೈವಧರ್ಮದ ಮಠಗಳ ಚರಿತ್ರೆ ಶಾಸನಗಳ ಪ್ರಕಾರ ಕ್ರಿ.ಶ.೧೦ನೇ ಶತಮಾನದಿಂದ ಪ್ರಾರಂಭವಾಗುತ್ತದೆ. ಹಂಪಿ ಪರಿಸರದಲ್ಲಿ ಮಠದ ಉಲ್ಲೇಖ ಕ್ರಿ.ಶ.೧೦೭೬ರ ಮಹಾನವಮಿ ದಿಬ್ಬದ ಮುಂದೆ ಹಾಸಿದ್ದ ಕಲ್ಲಿನಲ್ಲಿ "ಯೀ ಮಠದೊಳ್ ಪುರಾಣ ವ್ಯಾಖ್ಯಾನಮುಮಂ ಮಾಡುವುಪಾಧ್ಯಾಯರ್ಗ್ಗೆ"[೧೦] ಎಂದು ದಾಖಲಿಸಿದೆ. ಅಂದರೆ ಹಂಪಿಯಲ್ಲಿದ್ದ ಯಾವುದೋ ಮಠದಲ್ಲಿ ಪುರಾಣ ವ್ಯಾಖ್ಯಾನ ಮಾಡುವ ಉಪಾಧ್ಯಾಯರಿಗೆ ದಾನ ಬಿಟ್ಟ ವಿವರ ನೀಡುತ್ತದೆ. ಬಹುಶಃ ಇದು ಶೈವ ಮಠವೇ ಆಗಿರಬೇಕೆನಿಸುತ್ತದೆ.

ವೀರಶೈವ ಮಠಗಳು ಶೈವ ಮಠಗಳ ಜೊತೆಯಲ್ಲಿಯೇ ಬೆಳೆದು ಬಂದವು ಎಂಬುದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಬಸವಪೂರ್ವ ಯುಗದಲ್ಲಿ ಶಿವಶರಣರು (ವಚನಕಾರರು) ಇದ್ದರೂ ಸಹ ಅವರ ಮಠಗಳ ಬಗ್ಗೆ ಆಧಾರ ದೊರೆಯುವುದಿಲ್ಲ. ೧೨ನೇ ಶತಮಾನದಲ್ಲಿಯೇ ವೀರಶೈವ ಮಠಗಳು ಹುಟ್ಟಿದವು ಎಂದು ಶಿವಶರಣರ ವಚನಗಳ ಆಧಾರದಿಂದ ಖಚಿತವಾಗಿ ಹೇಳಬಹುದಾಗಿದೆ. ಅಲ್ಲದೇ ಇದೇ ಸಂದರ್ಭದಲ್ಲಿ ಅನೇಕ ಶೈವಮಠಗಳು ವೀರಶೈವಮಠಗಳಾಗಿ ಪರಿವರ್ತನೆಯಾದವೆಂದು ಗ್ರಹಿಸಬಹುದಾಗಿದೆ. ೧೪-೧೫ನೇ ಶತಮಾನದಿಂದೀಚೆಗೆ ಅನೇಕ ವೀರಶೈವ ಮಠಗಳು ಹುಟ್ಟಿ-ಬೆಳೆವಣಿಗೆ ಹೊಂದಿರುವುದನ್ನು ಕಾಣಬಹುದು.

ಹಂಪಿ ಬಹುಪೂರ್ವದಿಂದ, ನಿಶ್ಚಿತವಾಗಿ ಶರಣಕವಿ ಹರಿಹರ ದೇವನ ಕಾಲದಿಂದಲೂ ವೀರಶೈವ ಧಾರ್ಮಿಕ ಮಠಗಳ, ಗುರುಗಳ, ಜಿಜ್ಞಾಸುಗಳ, ದಾರ್ಶನಿಕರ ಗ್ರಂಥಕಾರರ ಮತ್ತಿತರ ಅಭಿಮಾನಗಳ ಹಾಗೂ ಅನುಯಾಯಿಗಳ ಚಟುವಟಿಕೆಗಳ ಕೇಂದ್ರವಾಗಿತ್ತು. ಅದು ಸಂಗಮ ವಂಶದ ಹೆಸರಾಂತ ಸಾಮ್ರಾಟನಾದ ೨ನೇ ದೇವರಾಯನ ಆಳ್ವಿಕೆಯ ಕಾಲದಲ್ಲಿ ಯಶಸ್ಸಿನ ಪರಾಕಾಷ್ಠೆಯನ್ನು ಪಡೆಯಿತು. ಅವರ ಜೀವನೋದ್ದೇಶಗಳು ವೀರಶೈವ ಧರ್ಮದ ತತ್ತ್ವಗಳಿಗನುಗುಣವಾಗಿ ಜೀವನ ನಡೆಸುವುದು. ಧರ್ಮ ಪ್ರಚಾರ ಮಾಡುವುದು ಧರ್ಮ ಗ್ರಂಥಗಳನ್ನು ರಚನೆ ಮಾಡುವುದು ಮತ್ತು ಜೀವನದ ಕೊನೆಯಲ್ಲಿ ಪರಶಿವನಲ್ಲಿ ಐಕ್ಯಹೊಂದಿ ಮೋಕ್ಷ ಪಡೆಯುವುದು ಮುಂತಾದವುಗಳೇ ಆಗಿದ್ದವು. ಆ ಚಟುವಟಿಕೆಗಳನ್ನು ಸುಗಮವಾಗಿ ನಡೆಯಿಸಿಕೊಂಡು ಹೋಗಲು ಅನುಕೂಲವಾಗುವಂತೆ ಮಠ ಸಂಘ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಪೋಷಿಸಿದರು.[೧೧]

ಹಂಪಿಯ ಪರಿಸರದ ಹೇಮಕೂಟ, ಮಾಲ್ಯವಂತ, ಮತಂಗ, ಪಂಪಾಸರಸ್ಸು ಇನ್ನು ಮುಂತಾದ ಕಡೆ ಇರುವ ಸಹಜ ಗವಿಗಳಲ್ಲಿ ವೀರಶೈವ ಚರಲಿಂಗ ಮೂರ್ತಿಗಳು ವಾಸವಿದ್ದ ಬಗ್ಗೆ ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿಯಿಂದ ತಿಳಿಯುತ್ತದೆ. ಅಲ್ಲದೆ ಅನೇಕ ವೀರಶೈವ ಮಠಗಳು ಹಂಪಿಯಲ್ಲಿ ಸ್ಥಾಪಿತವಾದ ಬಗ್ಗೆ ಶಾಸನಗಳು ದಾಖಲಿಸಿವೆ. ಅವುಗಳಲ್ಲಿ ಮುಖ್ಯವಾದವೆಂದರೆ ಹಿರೇಮಠ, ಕರಿಸಿದ್ದೇಶ್ವರ ಮಠ, ಮಹಂತಿನ ಮಠ, ನಿರಾಸಿಮಠ, ಕೊಟ್ಟೂರುಸ್ವಾಮಿ ಮಠ, ಪರಮೇಶ್ವರ ಮಠ, ಸಿದ್ಧಯೋಗೀಶ್ವರ ಗವಿ, ಚಾಮರಸನಗವಿ, ವೀರಭಿಕ್ಷಾವೃತ್ತಿ ಮಠ, ಇನ್ನು ಮುಂತಾದವುಗಳು.

೧. 'ಶ್ರೀ ಪಂಪಾವಿರೂಪಾಕ್ಷ ಪೀಠ' ಅಥವಾ 'ಹರಿಹರ ದೇವನ ಮಠ'

ಹಂಪಿಯ ಚಕ್ರವರ್ತಿ, ವಿಜಯನಗರ ಸಾಮ್ರಾಟರ ಅಧಿದೈವ, ಪಂಪಾಂಬಿಕೆ ವಿರೂಪಾಕ್ಷ ದೇವಾಲಯ ಹಂಪಿಯ ಪ್ರಾಚೀನ ಶೈವದೇವಾಲಯಗಳಲ್ಲಿ ಒಂದು ಮತ್ತು ಬಹಳಷ್ಟು ಪ್ರಸಿದ್ಧವಾದದ್ದು. ಹಂಪಿಯಲ್ಲಿ ಕಾವ್ಯವನ್ನು ಬರೆಯಲಿ, ರಾಜ್ಯವನ್ನೇ ಆಳಲಿ ಅದರ ಅಧಿಕಾರ ಮಾತ್ರ ವಿರೂಪಾಕ್ಷನದು. ಕಾಮದಹನ ಮಾಡಿದ ವಿರೂಪಾಕ್ಷ ಗಿರಿಜೆಯೊಂದಿಗೆ ವಿವಾಹವಾಗಿ ಪಂಪಾ ವಿರೂಪಾಕ್ಷನಾಗಿ ಹಂಪಿಯ ಹೇಮಕೂಟದಲ್ಲಿಯೇ ನೆಲೆಸಿದ. ಈತನು ನೆಲೆಸಿದ ಕ್ಷೇತ್ರ ವಿರೂಪಾಕ್ಷ ಕ್ಷೇತ್ರವಾಯಿತು. ಕ್ರಿ.ಶ.೧೦೭೮ರಹಂಪಿಯ ಶಾಸನವು

''ಮಹಾಪ್ರಧಾನ ದಂಡನಾಯಕಂ ಸೋಮೇಶ್ವರ ಭಟ್ಟೋಪಾಧ್ಯಾಯರು ಚಾಳುಕ್ಯ ವಿಕ್ರಮವರ್ಷ ೧ನೆಯ ನಳ ಶಂವತ್ಸರದ ಭಾದ್ರಪದ ಬಹುಳ ಆದಿತ್ಯವಾರ ಯೀ ಮಠದೊಳ್ ಪುರಾಣ ವ್ಯಾಖ್ಯಾನಮುಮಂ ಮಾಡುವುಪಾಧ್ಯಾಯರ್ಗ್ಗೆ ಪ್ರತಿವರ್ಷ....ಯೊಳ್ ಕೊಟ್ಟ ಲೊಕ್ಕಿಗದ್ಯಾಣ ಎಣ್ಬತ್ತು ಅಂಕದೊಳಂ ೮೦...''[೨] ಎಂದು ದಾಖಲಿಸಿದೆ. ಮಹಾಪ್ರಧಾನ ದಂಡನಾಯಕ ಸೋಮೇಶ್ವರ ಭಟ್ಟೋಪಾಧ್ಯಾಯರು ಕ್ರಿ.ಶ.೧೦೭೮ರ ಆದಿತ್ಯವಾರದಂದು ಹಂಪಿಯ ಮಠವೊಂದರಲ್ಲಿ ಪುರಾಣ ವ್ಯಾಖ್ಯಾನ ಮಾಡುವ ಉಪಾಧ್ಯಾಯರಿಗೆ ಪ್ರತಿವರ್ಷ ೮೦ ಲೊಕ್ಕಿ ಗದ್ಯಾಣ ದಾನ ನೀಡಿರುವುದನ್ನು ಗಮನಿಸಿದರೆ ಶಾಸನ ಉಲ್ಲೇಖಿಸುವ ಮಠ ಬಹುಶಃ ಈ ವಿರೂಪಾಕ್ಷ ದೇವಾಲಯವೇ ಆಗಿರಬಹುದಾಗಿದೆ. ೧೧ನೇ ಶತಮಾನದ ಸಂದರ್ಭದಲ್ಲಿ ಇಡೀ ಹಂಪಿ ಪರಿಸರ ವಿರೂಪಾಕ್ಷನ ಆಳ್ವಿಕೆಗೆ ಒಳಪಟ್ಟಿತ್ತು. ವಿರೂಪಾಕ್ಷ ದೇವಾಲಯ ಆ ಸಂದರ್ಭದಲ್ಲಿ ಪ್ರಸಿದ್ಧಿ ಪಡೆದಿತ್ತು. ಆದ್ದರಿಂದ ಆ ಕಾಲದಲ್ಲಿ ಪ್ರಚಲಿತವಿದ್ದ ಶೈವ ಮಠವಾಗಿರುವ ಸಾಧ್ಯತೆ ಇದೆ. ಆ ಕಾರಣದಿಂದ ಇದನ್ನು ಶ್ರೀ ಪಂಪಾ ವಿರೂಪಾಕ್ಷ ಪೀಠ ಎಂದು ಕರೆಯಲು ಔಚಿತ್ಯವೆನಿಸುತ್ತದೆ. ಸ್ಥಾವರಲಿಂಗ ಆರಾಧನೆಯೇ ಶೈವಮಠದ ಪ್ರಧಾನ ಲಕ್ಷಣವಾಗಿದೆ. ಶೈವ ಮಠಾಧಿಪತಿಗಳು ಸ್ಥಾವರಲಿಂಗ ಪೂಜಿಸುತ್ತಿದ್ದರು. ಅವರಿಗೆ ಶೈವ ದೇವಾಲಯವೇ ಮಠವಾಗಿತ್ತೆಂದು ಕರ್ನಾಟಕದ ಅನೇಕ ಶಾಸಗಳು ದೃಢಪಡಿಸುತ್ತವೆ.

ಕನ್ನಡದ ಮಹಾಕವಿ ಹರಿಹರ ದೇವ ವಿರೂಪಾಕ್ಷನಿಗೆ ತನು ಮನ ಅರ್ಪಿಸಿ ಅವನಿಗೆ ಸಾಹಿತ್ಯಕ, ಸಾಂಸ್ಕೃತಿಕ ಅಧಿಕಾರ ನೀಡಿ ಲೋಕ ವಿಖ್ಯಾತಗೊಳಿಸಿ ಬೆಳೆಸಿದ. ಹರಿಹರನಿಗೆ ಕಥಾ ನಾಯಕ, ಕಾವ್ಯದ ಸ್ಫೂರ್ತಿ, ಉಸಿರು ಎಲ್ಲವೂ ವಿರೂಪಾಕ್ಷನೇ ಆಗಿದ್ದಾನೆ. ಆದ್ದರಿಂದ ಹರಿಹರದೇವ ಶ್ರೀ ಪಂಪಾ ವಿರೂಪಾಕ್ಷ ಪೀಠದ ಅಧಿಪತಿಯಾಗಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಈತನ ಗುರುಪರಂಪರೆಯಲ್ಲಿ ಬರುವ ವ್ಯಕ್ತಿಗಳೆಲ್ಲರೂ ಈ ವಿರೂಪಾಕ್ಷ ಪೀಠದ ಅಧಿಪತಿಗಳಾಗಿದ್ದಂತೆ ತೋರುತ್ತದೆ.

ಹರಿಹರನ ತಂದೆ ಮಹಾದೇವ, ತಾಯಿ ಶರ್ವಾಣಿ, ಸೋದರಿ ರುದ್ರಾಣಿ. ಈ ರುದ್ರಾಣಿಯ ಮಗ ರಾಘವಾಂಕ. ಹರಿಹರದೇವ ಹೊಯ್ಸಳರ ಆಸ್ಥಾನದಲ್ಲಿ ಕರಣಿಕನಾಗಿದ್ದಾಗ ಹಂಪಿಯಲ್ಲಿ ವಿರೂಪಾಕ್ಷನ ತೆರೆಗೆ ಆವರಿಸಿದ್ದ ಉರಿ ಆರಿಸಿದುದು. ಹರಿಹರ ಗ್ರಾಮದ ಹರಿಹರೇಶ್ವರ ದೇವಾಲಯದಲ್ಲಿ ವಾಸವಾಗಿದ್ದ ಬ್ರಹ್ಮರಾಕ್ಷಸವನ್ನು ಓಡಿಸಿ, ಅಲ್ಲಿ ನಿತ್ಯ ಪೂಜೆ, ಅರ್ಚನೆ ನಡೆಯುವಂತೆ ಮಾಡಿದ ಪವಾಡವನ್ನು ಗಮನಿಸಿದರೆ ಈತನೊಬ್ಬ ಅನುಭಾವಿ ಶರಣ. ಪವಾಡ ಪುರುಷನಾಗಿದ್ದನೆಂದು ಭಾವಿಸಬಹುದಾಗಿದೆ. ಹರಿಹರ ತನ್ನ ಗುರು ಪರಂಪರೆಯನ್ನು ಗಿರಿಜಾ ಕಲ್ಯಾಣ ಮಹಾಪ್ರಬಂಧ ಕಾವ್ಯದಲ್ಲಿ ಹೇಳಿಕೊಂಡಿದ್ದಾನೆ.

"ಮುತ್ತಿ ಸುಖ ಮೂರ್ತಿ ಮನೋಹರ ಮೂರ್ತಿ ಚಂದ್ರಶೇ
ಖರ ಗುರುಮೂರ್ತಿ ಕೀರ್ತಿಪತಿ ಹಂಪೆಯ ಶಂಕರದೇವರೊಪ್ಪುವರ್"

"ಆಶೈವಾಗಮಸಿದ್ಧರಪ್ಪ ಪರಮ ಶ್ರೀ ಶಂಕರಾಚಾರ್ಯರಿಂ
ಪಾಶಚ್ಛೇದಮನಿಂಬುಗೊಂಡು ಮೆಚೆದಂ ಶ್ರೀ ಶುದ್ಧಪಂಚಾಕ್ಷರೀ
...........ಕೀರ್ತಿಭರಿತಂ ಶ್ರೀ ಮಾದಿರಾಜಾಹ್ವಯಂ"

"ಇಂತಿಂತೊಪ್ಪುವ ಮಾದಿರಾಜನ ಮನೋದುಗ್ಧಾಬ್ಧಿಚಂದ್ರಶೀವಂ
...........................
ಸಂತಂ ಹಂಪೆಯ ಮಾಯಿದೇವನೆಸೆದಿರ್ಪಂ ಶೈವಸಾರೋದಯಂ"[೧೩]

"....ವರವಿದ್ಯಾಗುರು ಸುಖೈಕಗುರು ವಸುಧಾಗುರು
ಶೈವಗುರು ಶಾಂತಗುರು ಮಾಯ್ದೇವಂ"

"ಧರೆಯೊಳಗಾ ಮಾಯ್ದೇವರ ವರ ಕರುಣಂ ಬಡೆದು
ಮೆಚೆವನುನ್ನತತೇಜಂ ಗುರುಪದ ಭಕ್ತಂ ಹಂಪೆಯ
ಹರಿದೇವಂ ದೇವ ಕವಿ ಕಳಾವಿದರರಸಂ"[೧೪]

ಹರಿಹರನ ಕುಲಗುರು ಹಂಪಿಯ ಶಂಕರ ದೇವರು. ಅವರು ಅನೇಕ ಸದ್ಗುಣಗಳಿಂದ ಮೂರ್ತಿವೆತ್ತ ಚಂದ್ರಶೇಖರನಂತೆ ವಿಖ್ಯಾತರಾದವರು. ಅಲ್ಲದೇ ವೇದವೇದಾಂತಾಗಮ ಪಾರಂಗತರಾದವರು.

ಇಂಥ ಶಂಕರಾಚಾರ್ಯ (ಶಂಕರ ದೇವರು)ರಿಂದ ಪಾಶವಿಚ್ಛೇದನ ರೂಪವಾದ ಶಿವದೀಕ್ಷೆಯನ್ನು ಪಡೆದು, ಶುದ್ಧ ಪಂಚಾಕ್ಷರಿ ಮಹಾಮಂತ್ರೋಪದೇಶ ಪಡೆದು ಕೀರ್ತಿಶಾಲಿಯಾದವರು ಮಾದಿರಾಜ. ಈ ಮಾದಿರಾಜನ ಮನಸ್ಸಿಗೆ ನೆಮ್ಮದಿಯನ್ನು ಉಂಟು ಮಾಡುವ ಮಹಾಸಂತನೇ ಹಂಪಿಯ ಮಾಯಿದೇವ ಆಚಾರ್ಯ. ಶಿವನೂ ಶಾಂತನೂ ಶಾಶ್ವತ ಶೈಪ ಚಿಹ್ನೆಗಳಿಂದ ಮನೋಹರವಾದ ವ್ಯಕ್ತಿತ್ವ ಹೊಂದಿದ್ದು ಪ್ರತ್ಯಕ್ಷ ಪರಶಿವನಂತಿದ್ದ. ಈ ಭಕ್ತರಿಗೆ ಧರ್ಮೋಪದೇಶ ಮಾಡಿ ಮಹಾಗುರು ವಿದ್ಯಾಗುರು, ಜಗದ್ಗುರುವೆನಿಸಿದ್ದ. ಇಂಥ ಮಾಯಿದೇವ ಆಚಾರ್ಯರ ಕೃಪೆಗೆ ಪಾತ್ರನಾದವನು ಗುರುಪದ ಭಕ್ತನೂ ಕಲಾ ಪ್ರವೀಣನೂ ಆದ ದೇವಕವಿ ಹಂಪಿಯ ಹರಿಹರದೇವ. ಈತ ಸುಜನರಿಗೆ ಪ್ರಾಣ, ಕವಿತೆಗೆ ನಿಧಾನ ಅಧಿಕ ಪುಣ್ಯಶಾಲಿ, ವಿವೇಕಿಯಾಗಿದ್ದಾನೆ.

ಹೀಗೆ ಹರಿಹರ ಕವಿ ತನ್ನ ಗುರುಪರಂಪರೆಯಲ್ಲಿ ಬರುವ ಶಂಕರದೇವರು, ಮಾದಿರಾಜ, ಹಂಪಿಯ ಮಾಯಿದೇವ ಆಚಾರ್ಯ ಇವರುಗಳ ಗುಣ-ಸದ್ಗುಣ, ವ್ಯಕ್ತಿತ್ವ, ಜ್ಞಾನ ಸಂಪತ್ತು ಸ್ವಭಾವ ಮುಂತಾದ ಅಂಶಗಳನ್ನು ಹೇಳಿರುವುದನ್ನು ಮತ್ತು ಇವರುಗಳು ವೇದ ಆಗಮಗಳಲ್ಲಿ ಪಾರಂಗತರಾಗಿ ಜನಮನ್ನಣೆಗೆ ಪಾತ್ರರಾಗಿರುವುದನ್ನು ಗಮನಿಸಿದರೆ ಇವರೆಲ್ಲರೂ ಪಂಪಾ ವಿರೂಪಾಕ್ಷ ಪೀಠದ ಅಧಿಪತಿಗಳಾಗಿದ್ದರೆಂದು ಹೇಳಬಹುದಾಗಿದೆ. ಕಾವ್ಯಗಳಲ್ಲಿ ಹರಿಹರನನ್ನು ಹರಿಪ, ಹರಿಗ, ಹರಿಯಣ್ಣಪಂಡಿತ, ಹರಿಹರ ಶಿವಾಚಾರ್ಯನೆಂದು ಮುಂತಾಗಿ ಕರೆಯಲಾಗಿದೆ.[೧೫] ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದಲ್ಲಿ "ಶುದ್ಧ ಶೈವ ಭಕ್ತಿನಿಷ್ಠೆಯಿಂದ ಹಂಪೆಯ ವಿರೂಪಾಕ್ಷನನ್ನು" ಹರಿಹರ ಅರ್ಚಿಸುತ್ತಿದ್ದನೆಂದು ಹೇಳಿರುವುದರಿಂದ, ಈತನು ಮೂಲತಃ ಶೈವರಲ್ಲಿ ಶುದ್ಧಶೈವನಾಗಿರಬೇಕು. ೧೩ನೆಯ ಶತಮಾನದ ಹೊತ್ತಿಗೆ ಶುದ್ಧಶೈವವು ವೀರಶೈವವಾಗುವುದರ ಜೊತೆ, ಇವನೂ ಸಹಜವಾಗಿಯೇ ವೀರಶೈವನಾಗಿರಬೇಕು.[೧೬] ಹರಿಹರ ವೀರಶೈವನಾದ ಮೇಲೆ ಈ ಪಂಪಾ ವಿರೂಪಾಕ್ಷ ಪೀಠ (ಮಠ)ವನ್ನು ನಾಗನಾಥ ದೇವಾಲಯದ ಪುರೋಭಾಗಕ್ಕೆ ವರ್ಗಾಯಿಸಿದಂತೆ ತೋರುತ್ತದೆ. ಕಾರಣ ವೀರಶೈವ ಮಠದಲ್ಲಿ ಸ್ಥಾವರಲಿಂಗ ಪೂಜೆಗೆ ಅವಕಾಶವಿಲ್ಲ. ಹರಿಹರದೇವ ತನ್ನ ವಿರೂಪಾಕ್ಷ ಪೀಠವನ್ನು ವಿರೂಪಾಕ್ಷ ದೇವಾಲಯದಿಂದ ವರ್ಗಾಯಿಸಿದ್ದನ್ನು ಸಿದ್ದನಂಜೇಶ(೧೬೫೦) ತನ್ನ ರಾಘವಾಂಕ ಚರಿತ್ರೆಯಲ್ಲಿ "ಹಳೇಬೀಡಿನಿಂದ ಬಂದ ಹರಿಹರನಿಗೆ ವಿರೂಪಾಕ್ಷ ದೇವಾಲಯದ ಎಡಭಾಗದಲ್ಲಿರುವ ನಾಗನಾಥ ದೇವಾಲಯದ ಪುರೋಭಾಗದಲ್ಲಿ ವಸತಿ ಏರ್ಪಾಡು ಮಾಡಲಾಯಿತೆಂದು" ಹೇಳಿದ್ದಾನೆ.[೧೭] ಪಂಪಾ ವಿರೂಪಾಕ್ಷ ಪೀಠ ವರ್ಗಾವಣೆ ಕ್ರಮದ ಬಗ್ಗೆ ಸಿದ್ದನಂಜೇಶ ಹೇಳಿರುವ ಸಂಗತಿ ಹೆಚ್ಚು ವಿಶ್ವಾರ್ಹವಲ್ಲ. ಕಾರಣ ಹರಿಹರನಿಗೂ ಸಿದ್ದನಂಜೇಶನಿಗೂ ಸು.೪೫೦ ವರ್ಷಗಳಷ್ಟು ಅಂತರವಿದೆ. ಹಂಪಿ ಅಷ್ಟೇ ಏಕೆ ಇಡೀ ಭೂಮಂಡಲಕ್ಕೆ ಒಡೆಯನಾದ ವಿರೂಪಾಕ್ಷನ ಕೀರ್ತಿ ಶಕ್ತಿ ಸಾಮರ್ಥ್ಯ ಹೆಚ್ಚಿಸಲು ಹರಿಹರದೇವ ವಿರೂಪಾಕ್ಷನನ್ನು ದೇವರಾಗಿಯೇ ಉಳಿಸಿ ತನ್ನ ಮಠವನ್ನು ದೇವಾಲಯದಿಂದ ಬೇರೆ ಕಡೆ ವರ್ಗಾಯಿಸಿರುವ ಸಾಧ್ಯತೆ ಇದೆ. ಇದಕ್ಕೆ ಕಾರಣ

ವಿರೂಪಾಕ್ಷನ ಮೌಲ್ಯ ಹೆಚ್ಚಿಸುವುದಾಗಿದೆ. ಈ ಮೌಲ್ಯ ಹೆಚ್ಚಿಸಲು ಹರಿಹರದೇವ ತನ್ನ ನಾಲಿಗೆಯನ್ನು (ಸಾಹಿತ್ಯವನ್ನು) ವಿರೂಪಾಕ್ಷನಿಗೆ ಮೀಸಲಿಟ್ಟ ತನ್ನೆಲ್ಲಾ ಕಾವ್ಯ ಕೃತಿಗಳಿಗೆ ವಿರೂಪಾಕ್ಷನ ಅಂಕಿತ ಹಾಕಿದ ಹೀಗೆ ಹರಿಹರ ಶಿವಾಚಾರ್ಯ ವಿರೂಪಾಕ್ಷ ಪೀಠದ ಘನತೆ ಹೆಚ್ಚಿಸಿದ.

ಹರಿಹರ ಶಿವಾಚಾರ್ಯನ ವಿರೂಪಾಕ್ಷ ಪೀಠ ಪರಂಪರೆ ಮತ್ತು ಕಾವ್ಯ ಪರಂಪರೆಯನ್ನು ಮುಂದುವರೆಸಿದವನು ರಾಘುವಾಂಕ ಪಂಡಿತ. ಈತನೇ ಹರಿಹರ ಶಿವಾಚಾರ್ಯನ ಉತ್ತರಾಧಿಕಾರಿಯಾಗಿದ್ದ ನೆಂಬುದಕ್ಕೆ ಸಾಹಿತ್ಯಿಕ ಆಧಾರವಿದೆ. ರಾಘುವಾಂಕ ತನ್ನೆಲ್ಲಾ ಕಾವ್ಯಗಳ ಪಾಲಕ ಪಂಪಾವಿರೂಪಾಕ್ಷನೆಂದೂ, ತನ್ನ ಹಂಪೆ ಹರೀಶ್ವರನ ವರಸುತನೆಂದು ಹೇಳಿಕೊಂಡಿದ್ದಾನೆ. ಅಲ್ಲದೆ ಸೋಮನಾಥ ಚಾರಿತ್ರದಲ್ಲಿ ''ಹಂಪೆಯ ಶಂಕರ ಪ್ರಭು, ಹಂಪೆಯ ಮಾದಿರಾಜ, ಹಂಪೆಯ ಮಹಾದೇವ(ಮಾಯಿದೇವ?) ಗುರುರಾಯ ಎಂದು ಹರಿಹರದೇವ ನೀಡುವ ಗುರುಪಂಪರೆ(ಹಂಪೆಯ ಹರೀಶ್ವರನನ್ನು ಸೇರಿಸಿ)ಯನ್ನು ನೀಡುತ್ತಾನೆ.[೧೮] ಹಾಗೆಯೇ ತನ್ನ ವೀರೇಶ ಚರಿತೆ ಕಾವ್ಯದಲ್ಲಿ ''ಯತಿಪತಿ ಹಂಪೆಯ ಹರಿದೇವರ ಕಾರುಣ್ಯದ ಸುತ ಶಿವಕವಿ ಭೃತ್ಯಂ ಹಂಪೆಯ ರಾಘುವಪಂಡಿತ''[೧೯] ಎಂದು ರಾಘುವಾಂಕ ಕರೆದುಕೊಂಡಿದ್ದಾನೆ. ಈ ಕಾವ್ಯದಲ್ಲಿ ರಾಘುವಾಂಕ ಪಂಡಿತ ಹರಿಹರನನ್ನು ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡ ಅಥವಾ ಇಂದ್ರಿಯ ನಿಗ್ರಹ ಮಾಡಿಕೊಂಡ ಯೋಗಿಗಳ ಒಡೆಯ 'ಯತಿಪತಿ' ಎಂದು ಕರೆದು ಅವನು ಮಠಾಧೀಶನಾಗಿದ್ದನ್ನು ದೃಢೀಕರಿಸುತ್ತಾನೆ. ತಾನು ಅವನ ಕಾರುಣ್ಯದ ಶಿಶು ಅಂದರೆ ಉತ್ತರಾಧಿಕಾರಿ, ಶಿವನಂತಿರುವ ಹರಿಹರ ಶಿವಾಚಾರ್ಯನ ಪಾದಸೇವಕನೆಂದು ಸಮರ್ಥಿಸುತ್ತಾನೆ.

ಹಂಪಿಯ ವಿರೂಪಾಕ್ಷ ದೇವಾಲಯವು ಹಂಪಿಯ ಪ್ರಥಮ ಶೈವ ಮಠವಾಗಿದ್ದು ಹರಿಹರ ದೇವನ ಕಾಲಕ್ಕೆ ಅದು ವೀರಶೈವ ಮಠವಾಗಿ ರೂಪಾಂತರಗೊಂಡು ಬೇರೆ ಕಡೆ ವರ್ಗಾಯಿಸಲ್ಪಟ್ಟರೂ ರಾಘುವಾಂಕ ಪಂಡಿತನ ತನಕ ಪಂಪಾವಿರೂಪಾಕ್ಷ ಪೀಠವಾಗಿ ಮುಂದುವರೆದಿರುವುದನ್ನು ಕಾಣಬಹುದಾಗಿದೆ. ಈ ಕುರಿತು ಇನ್ನೂ ಹೆಚ್ಚಿ ಅಧ್ಯಯನವಾಗಬೇಕಿದೆ.

### ೨. ರಾಜಗುರು ಪರಂಪರೆ ಮತ್ತು ವೀರಭಿಕ್ಷಾವೃತ್ತಿಮಠ

ಮಠಾಧೀಶರೋರ್ವರು ಅಥವಾ ಯೋಗಿಯೋರ್ವರು ಒಂದು ರಾಜ್ಯದ ನಿರ್ಮಾಣ ಕಾರ್ಯಕ್ಕೆ ಪ್ರೋತ್ಸಾಹಿಸಿ, ಆ ರಾಜ್ಯದ ಸರ್ವಾಂಗೀಣ ಪ್ರಗತಿ ಮತ್ತು ಬೆಳವಣಿಗೆಗೆ ತಾವೇ ಮಾರ್ಗದರ್ಶಕರಾಗಿ ರಾಜಗುರುಗಳೆನಿಸಿದ್ದು, ಭಾರತದ ಇತಿಹಾಸದಲ್ಲಿ ಬಹುಶಃ ವಿಜಯನಗರ ಸಾಮ್ರಾಜ್ಯಕ್ಕೆ ಮೊದಲೆನಿಸುತ್ತದೆ. ವಿಜಯನಗರ ಸಾಮ್ರಾಜ್ಯ ನಿರ್ಮಾಣಕ್ಕೆ ಮೂಲ ಪ್ರೇರಣೆ ಕರ್ತೃಗಳು ಕೆಲವು ಶಾಸನಗಳ (ಬೆಸ್ತರಹಳ್ಳಿ, ಕಾಪಲೂರು, ಹಾಲ್ಕಾವಟಗಿ) ದಾಖಲಿಸುವಂತೆ ಶೃಂಗೇರಿ ಪೀಠ ಪರಂಪರೆಯ ವಿದ್ಯಾರಣ್ಯಯತಿಗಳಾಗಿದ್ದರೂ, ಅವರನ್ನು ಯಾವ ಶಾಸನಗಳು 'ರಾಜಗುರು' ಎಂದು ದಾಖಲಿಸಿರುವುದಿಲ್ಲ. ಆದ್ದರಿಂದ ಕ್ರಿಯಾಶಕ್ತಿಗುರುಗಳು

ವಿಜಯನಗರ ಸಾಮ್ರಾಜ್ಯದ ಸಂಗಮ ವಂಶದ ಅರಸರ ಕುಲಗುರು ಮತ್ತು ರಾಜಗುರುಗಳಾಗಿ ಅವರ ಆಡಳಿತಕ್ಕೆ ಮಾರ್ಗದರ್ಶಕರಾಗಿ ಅನೇಕ ದಾನ-ದತ್ತಿ ಪಡೆದು ಗುರುವಂದಿತರಾಗಿದ್ದಾರೆ. ಈ ಗುರು ಪರಂಪರೆಯವರು ತಮ್ಮ ತಪೋಬಲ ಶಕ್ತಿಯನ್ನು ಧಾರೆ ಎರೆದು, ವಿಜಯನಗರ ಸಾಮ್ರಾಜ್ಯದ ಬೆಳವಣಿಗೆಗೆ ಶ್ರಮಿಸಿದ್ದಾರೆಂದರೆ ತಪ್ಪಾಗಲಾರದು. ಕ್ರಿಯಾಶಕ್ತಿ ಗುರು ಪರಂಪರೆಯವರು ಆರಂಭದಲ್ಲಿ ಶೈವ ಧರ್ಮದ ಕಾಳಾಮುಖ ಪಂಥಕ್ಕೆ ಸೇರಿದ್ದರು. ಹಾಗೆಯೇ ಸಂಗಮ ವಂಶದ ಅರಸರೂ ಸಹ ಇದೇ ಪಂಥಕ್ಕೆ ಸೇರಿದವರಾಗಿದ್ದರು.

ಕ್ರಿಯಾಶಕ್ತಿ ಗುರುಗಳನ್ನು ಶಾಸನಗಳಲ್ಲಿ ಗುರು, ಆಚಾರ್ಯ, ಗುರುಮುನೀಶ್ವರ, ಯತೀಶ್ವರ, ಒಡೆಯ, ದೇಸಿಕ ಮುಂತಾದ ವಿಶೇಷಣಗಳಿಂದ ಕರೆಯಲಾಗಿದೆ. ಕಂಪಣನ ಪತ್ನಿ ಗಂಗಾದೇವಿಯ ಸಂಸ್ಕೃತ ಗ್ರಂಥ 'ಮಧುರಾವಿಜಯ' ಅಥವಾ 'ವೀರ ಕಂಪಣರಾಯ ಚರಿತೆ'ಯಲ್ಲಿ ಕ್ರಿಯಾಶಕ್ತಿಗುರು ಕಂಪಣನ ಕುಲಗುರುವಾಗಿದ್ದನೆಂದು ತಿಳಿಸಲಾಗಿದೆ.[೨೦] ಅನೇಕ ಶಾಸನಗಳು ಇವರನ್ನು 'ರಾಜಗುರು', 'ಮಹಿಮಂಡಲಾಚಾರ್ಯ'[೨೧], 'ರಾಯರಾಜಗುರು ಪಿತಾಮಹ' ಎಂದು ಮುಂತಾಗಿ ದಾಖಲಿಸಿವೆ.

ಹಂಪಿ ಪರಿಸರದಲ್ಲಿ ಕ್ರಿಯಾಶಕ್ತಿ ದೇವರನ್ನು ಕುರಿತು ಕೇವಲ ಒಂದು ಶಾಸನ ದಾಖಲಿಸುತ್ತದೆ. ಹಂಪಿಯ ಗಾಯತ್ರಿ ಪೀಠದ ದಕ್ಷಿಣಕ್ಕಿರುವ ದಾರಿಯ ಪಕ್ಕದಲ್ಲಿರುವ ಗುಂಡಿನ ಮೇಲೆ ಇರುವ ಕ್ರಿ.ಶ.೧೩೫೦ರ ಶಾಸನವು "ಕ್ರಿಯಾಶಕ್ತಿವೊಡೆಯರ ಶಿಷ್ಯಭಕ್ತರ ನಾಗಪ್ಪಗಳು ಮಾಡಿಸಿದಂಥಾ ವಿನಾಯಕ ಅಶ್ವತ್ಥ ಬಾವಿಯನೂ"[೨೨] ಎಂದು ದಾಖಲಿಸುತ್ತದೆ. ಕ್ರಿಯಾಶಕ್ತಿ ವೊಡೆಯರ ಶಿಷ್ಯ ಭಕ್ತರ ನಾಗಪ್ಪ ಅಶ್ವತ್ಥಕಟ್ಟೆ, ಬಾವಿ ಮತ್ತು ವಿನಾಯಕನನ್ನು ಮಾಡಿಸಿದಂತೆ ತಿಳಿಸುತ್ತದೆ. ಇದೇ ಶಾಸನದ ಹತ್ತಿರ ಇರುವ ಮತ್ತೊಂದು ಶಾಸನವು "ಶ್ರೀಮತುತ್ರಿಯಂಬಕ ದೇವರ ವರಪ್ರಸಾಧ ಭಕ್ತರ ನಾಗಪ್ಪಗಳು ಯೀತೀರ್ಥ ಅಸ್ವಸ್ಥವ್ರಿಕ್ಷ ಕಟಿಸಿದ ಬಾವಿ ಪ್ರಸಂನ ಬೆನಕಗೆ..."[೨೩] ಎಂದು ದಾಖಲಿಸುತ್ತದೆ. ಈ ಶಾಸನವು ಅದೇ ಭಕ್ತರ ನಾಗಪ್ಪನು ಹಿಂದಿನ ಶಾಸನದಂತೆ ಅಶ್ವತ್ಥವೃಕ್ಷ, ಬಾವಿ, ಪ್ರಸನ್ನ ಬೆನಕನನ್ನು ಪ್ರತಿಷ್ಠಾಪಿಸುವಂತೆ ತಿಳಿಸುವುದರ ಜೊತೆಗೆ ಈ ನಾಗಪ್ಪನನ್ನು ತ್ರಿಯಂಬಕ ದೇವರ ವರಪ್ರಸಾದ (ಭಕ್ತ) ಎಂದು ದಾಖಲಿಸುತ್ತದೆ. ಬಹುಶಃ ಕ್ರಿಯಾಶಕ್ತಿ ಒಡೆಯರು ತ್ರಯಂಬಕ ದೇವರ ಆರಾಧಕರಾಗಿರುವ ಸಾಧ್ಯತೆ ಇದೆ.

ಕ್ರಿ.ಶ.೧೩೪೭ರ ಸೊರಬ ಶಾಸನವು (ತಾಮ್ರ ಶಾಸನ) "ಮಾಧವ ಮಂತ್ರಿಯ ಗುರುವು ಕ್ರಿಯಾಶಕ್ತಿ ಅವನು ತೇಜಸ್ಸಿನಲ್ಲಿ ಸಾಕ್ಷಾತ್ ತ್ರಯಂಬಕನು. ಭಾರ್ಗವನಿಗೆ ಶಂಕರನು ಗುರುವಾಗಿದ್ದಂತೆ ವೈರಿಗಳನ್ನು ಜಯಿಸುವ ಮಾಧವನಿಗೆ ಕ್ರಿಯಾಶಕ್ತಿಯು ಗುರುವೂ ಮಾರ್ಗದರ್ಶಕನೂ ಆಗಿದ್ದನು. ಮೂರು ವೇದಗಳನ್ನು ಪುರಾಣಾಗಮಗಳನ್ನು ಸಮಾಲೋಚಿಸಿ ಲೋಕ ಹಿತಕ್ಕಾಗಿ ಮತ್ತು ಮಂತ್ರಿ ಮಾಧವನ ಪ್ರೀತಿಗಾಗಿ

ತ್ರಯಂಬಕ ಶಾಸನೋಕ್ತ ಸಮಸ್ತ ಶೈವಾಗಮಸಾರ ಸಂಗ್ರಹವನು ರಚಿಸಿದನು...''[೨೪] ಅಂದರೆ ಸಾಕ್ಷಾತ್ ತ್ರಯಂಬಕನಾದ ಕ್ರಿಯಾಶಕ್ತಿಯು ಮಾಧವ ಮಂತ್ರಿಗೂ ಗುರುವಾಗಿದ್ದು, ಶೈವಾಗಮ ಸಾರಸಂಗ್ರಹ ಕೃತಿ ರಚಿಸಿದ್ದಾನೆ ಎಂದು ತಿಳಿಸುತ್ತದೆ.

ಕ್ರಿ.ಶ.೧೩೬೮ರ ಬುಕ್ಕನ ಹಾರೋಮುಚ್ಚಳ್ಳಿ ಅಗ್ರಹಾರದ ಶಾಸನವು ''ಮಾಧವಾಮಾತ್ಯ... ಶ್ರೀಮತ್ ಕಾಶೀವಿಳಾಸ ಕ್ರಿಯಾಶಕ್ತಿ ಶಿವದೇಶಿಕನಿಂದ ಉಪದೇಶವನ್ನು ಪಡೆದು ಶುದ್ಧ ಶೈವಾಮ್ನಾಯ ವರ್ತನಾನಿ ಜೇಷ್ಠಲಿಂಗ ವ್ರತಾಧಿಷ್ಟನನಾಗಿದ್ದನು. ದೇವ ದೇವನಾದ ಶ್ರೀಮತ್ರ್ಯಂಬಕನಾಥನನ್ನು ನಿತ್ಯ ನೈಮಿತ್ತಿಕ ಆತ್ಮಕ್ರಿಯಾನೇಮಗಳಿಂದ ಜಪಿಸುತ್ತಿದ್ದನು...''[೨೫] ಈ ಹಿಂದಿನ ಶಾಸನದಲ್ಲಿ ಉಲ್ಲೇಖವಾಗಿರುವ ಮಾಧವ ಮಂತ್ರಿ ಕಾಶೀ ವಿಲಾಸ ಕ್ರಿಯಾಶಕ್ತಿ ಶಿವದೇಶಿಕನಿಂದ ಉಪದೇಶ(ಪಂಚಾಕ್ಷರಿ ಮಂತ್ರೋಪದೇಶ) ಮೂಲಕ ಇಷ್ಟಲಿಂಗ ಪಡೆದ ಎಂಬ ಅಂಶ ಮತ್ತು ಈ ಕಾಲಕ್ಕೆ ಬುಕ್ಕ ವಿಜಯನಗರದ ಚಕ್ರವರ್ತಿಯಾಗಿದ್ದ ಎಂಬ ವಿಷಯವನ್ನು ಈ ಶಾಸನ ಉಲ್ಲೇಖಿಸುತ್ತದೆ. ಈ ಕಾಲಕ್ಕಾಗಲೇ ಕ್ರಿಯಾಶಕ್ತಿ ಶಿವದೇಶಿಕ ವೀರಶೈವನಾಗಿದ್ದಂತೆ ತೋರುತ್ತದೆ. ಕಾರಣ ಈ ಕ್ರಿಯಾಶಕ್ತಿ ಶಿವದೇಶಿಕ ಮಾಧವ ಮಂತ್ರಿಗೆ ಇಷ್ಟಲಿಂಗ ದೀಕ್ಷೆ ನೀಡಿ ಮಂತ್ರೋಪದೇಶ ಮಾಡಿರುವ ಸುಳಿಹನ್ನು ಹಾರೋಮುಚ್ಚಳ್ಳಿ ಶಾಸನ ನೀಡುತ್ತದೆ.

ಹಾಗೆಯೇ ಇಮ್ಮಡಿ ಹರಿಹರನ ಹುಲಿಕೇರಿಯ ಕ್ರಿ.ಶ.೧೩೭೮ರ ಶಾಸನವು ''ವಿರೂಪಾಕ್ಷ ಸಾಕ್ಷಾತ್ ಕುಲ ಪರಮದೈವಂ ಕುಲುಗುರು: ಕ್ರಿಯಾಶಕ್ತ್ಯಾಚಾರ್ಯ ಕಲಿಕಲಭ ಕಂಠೀರವಯಶಃ''[೨೬] ಎಂದು ದಾಖಲಿಸುತ್ತದೆ. ಇಮ್ಮಡಿ ಹರಿಹರನ ಕುಲಪರಮದೈವ ವಿರೂಪಾಕ್ಷನಾದರೆ, ಕುಲಗುರು ಮತ್ತು ರಾಜಗುರು ಕ್ರಿಯಾಶಕ್ತಿ ಆಚಾರ್ಯನಾಗಿದ್ದಾನೆಂದು ಉಲ್ಲೇಖಿಸುತ್ತದೆ. ಕುಕನೂರಿನ ಇದೇ ಇಮ್ಮಡಿ ಹರಿಹರರಾಯನ ಕ್ರಿ.ಶ.೧೩೭೯ರ ಶಾಸನವು ''ಶ್ರೀಮದ್ರಾಜಗುರು ಮಹಿಮಂಡಲಾಚಾರ್ಯ ಶ್ರೀಮದ್ವಾಣೀ ವಿಲಾಸ ಶ್ರೀಕ್ರಿಯಾಶಕ್ತಿ ಗುರು ನಿರೂಪದಿಂ..... ಶ್ರೀವೀರ ಪ್ರತಾಪ ಹರಿಹರ ಮಹಾರಾಯರು ಅನಾದಿ ಅಗ್ರಹಾರವಾದಸ ಕುಕನೂರ ಸಾಸಿರ್ವ್ವರಿಗೆ....''[೨೭] ಎಂದು ಉಲ್ಲೇಖಿಸುತ್ತದೆ. ಈ ಶಾಸನದ ಪ್ರಕಾರ ಇಮ್ಮಡಿ ಹರಿಹರನ ರಾಜಗುರು ಮಹಿಮಂಡಲಾಚಾರ್ಯ ಶ್ರೀಮದ್ವಾಣೀ ವಿಲಾಸ ಶ್ರೀಕ್ರಿಯಾಶಕ್ತಿ ಗುರುಗಳ ನಿರೂಪದಿಂದ (ಆಜ್ಞೆ) ಕುಕನೂರಿನ ಮುಖ್ಯಸ್ಥನಾದ ಶ್ರೀಗಂಡಿನ ಭಟ್ಟಪ್ಪಯ್ಯನಿಗೆ ಕುಕನೂರ ಗ್ರಾಮ ಪ್ರಭುತ್ವಕ್ಕೆ ಸಲ್ಲುವ ತೇಜಸ್ವಾಮ್ಯ ನೀಡುತ್ತಾನೆ. ಅಂದರೆ ಇಮ್ಮಡಿ ಹರಿಹರ ಕ್ರಿಯಾಶಕ್ತಿಗುರುಗಳ ಆಜ್ಞೆಯಂತೆ ಅವರ ಮಾರ್ಗದರ್ಶನದಂತೆ ರಾಜ್ಯಭಾರ ಮಾಡುತ್ತಿದ್ದನೆಂಬ ವಿಷಯ ತಿಳಿದುಬರುತ್ತದೆ.

ಕ್ರಿ.ಶ.೧೩೬೨ರ ವೀರ ಬುಕ್ಕರಾಯನ ಕಾಲದ ಭಾವೀಕೇರಿ ಶಾಸನವು ''.....ಚತುಸ್ಸೀಮೆ ಸಮನ್ವಿತ ವಹ ಗ್ರಾಮವನು ನಮ್ಮ ಶ್ರೀಗುರು ಕ್ರಿಯಾಶಕ್ತಿಯತೀಶ್ವರ ಶ್ರೀಪಾದ (ಪದ್ಮ) ಪ್ರೀತ್ಯರ್ಥ ಧಾರಾಪೂರ್ವಕವಾಗಿ ಕೊಟ್ಟೆ, ಯಿಂತಪ್ಪುದಕ್ಕೆ ಆ ಬಸವೆಯ ದಣಾಯ(ಕ)ರ ವೊಪ್ಪ, ಶ್ರೀ ತ್ರಿಯಂಬಕ,

ಶ್ರೀ ಕ್ರಿಯಾಶಕ್ತಿಯತೀಶ್ವರರು ಈ ಗ್ರಾಮವನು ಪ್ರತಿಷ್ಟಾ(ಪಿ)ಸಿ’’[೨೮] ಎಂದು ದಾಖಲಿಸುತ್ತದೆ. ಈ ಶಾಸನದ ಪ್ರಕಾರ ವೀರಬುಕ್ಕನ ಕುಲಗುರು ಕ್ರಿಯಾಶಕ್ತಿಯತೀಶ್ವರ. ವೀರಬುಕ್ಕನ ಮಹಾಪ್ರಧಾನನಾದ ಬಸವಯ್ಯ ದಂಡನಾಯಕ ಭಾವಿಕೇರಿ ಗ್ರಾಮವನ್ನು ವೀರ ಬುಕ್ಕನಿಂದ ಪಡೆದು ರಾಜಗುರು ಕ್ರಿಯಾಶಕ್ತಿ ಯತೀಶ್ವರನಿಗೆ ದಾನ ಮಾಡಿದ್ದನ್ನು ದಾಖಲಿಸುತ್ತದೆ. ಈ ಕ್ರಿಯಾಶಕ್ತಿಯತೀಶ್ವರನು ಪ್ರಸ್ತುತ ದಾನವನ್ನು ಗೋಕರ್ಣ ಕ್ಷೇತ್ರದ ಮಹಾಬಲೇಶ್ವರನ ನಿತ್ಯ ಪೂಜೆಗೂ ಅಲ್ಲಿನ ಛತ್ರಕ್ಕೆ ಬರುವ ಬ್ರಾಹ್ಮಣರ ಭೋಜನಕ್ಕಾಗಿ ದಯಪಾಲಿಸಿ ದಾನವನ್ನು ಶಾಶ್ವತವಾಗಿಸಿದ ವಿವರ ತಿಳಿದುಬರುತ್ತದೆ.[೨೯] ಈ ಶಾಸನದಲ್ಲಿ ರಾಜಗುರು ಕ್ರಿಯಾಶಕ್ತಿಯನ್ನು ತುಂಬು ಗೌರವದಿಂದ ‘ನಮ್ಮ ಶ್ರೀಗುರು ಕ್ರಿಯಾಶಕ್ತಿಯತೀಶ್ವರ’ನೆಂದು ಉಲ್ಲೇಖಿಸಿರುವುದು ಗಮನಾರ್ಹ ಅಂಶವಾಗಿದೆ.

ಕ್ರಿ.ಶ.೧೪೧೦ರ ೧ನೇ ದೇವರಾಯನ ಹರಿಹರ ಶಾಸನವು ‘‘ಕೋಟಿಪಾಟನ ಪ್ರಚಟಿತ ಪ್ರತಾಪ ವಿದಳಿತ ಸಕಲಜನಾನುತಾಪ ಶ್ರೀಸ್ವಯಂಭೂ ತ್ರಿಯಂಬಕ ಚರಣಾರವಿಂದಾರಾಧಕ ಶ್ರೀಮದ್ರಾಯ ರಾಜಗುರು ಮಂಡಲಾಚಾರ್ಯ ಆಚಾರ್ಯವರ್ಯ ಅಭಂಗರಾವುತ್ತರಾಯ ತಪೋರಾಜ್ಯಲಕ್ಷ್ಮೀ ನಿಜನಿವಾಸ ಕಾಯ ಶ್ರೀ ಕ್ರಿಯಾಶಕ್ತಿ ಗುರುವರ ಚರಣ ಪರಿಚರಣ ಪ್ರಸಾದಾಸಾದಿತ ಮಹಿತ ಸರ್ವಜ್ಞ ಸಾಮ್ರಾಜ್ಯವೈಭವ ಸಮಾಜ ಶ್ರೀ ಮದ್ರಾಜಾಧಿರಾಜ ಪರಮೇಶ್ವರ ವೀರಪ್ರತಾಪ ದೇವರಾಜ.....’’[೩೦] ಎಂದು ಉಲ್ಲೇಖಿಸಿದೆ. ಈ ಶಾಸನವು ೧ನೇ ದೇವರಾಯನನ್ನು ‘ಕ್ರಿಯಾಶಕ್ತಿ ಗುರುವರನ ಚರಣ ಪರಿಚರಣ ಪ್ರಸಾದಾ ಸಾದಿತ’ ಎಂದು ಕರೆದಿದೆ. ಅಲ್ಲದೆ ಕ್ರಿಯಾಶಕ್ತಿ ಗುರುಗಳನ್ನು ‘ಶ್ರೀಸ್ವಯಂಭೂ ತ್ರಿಯಂಬಕ ಚರಣಾರವಿಂದಾರಾಧಕ ಶ್ರೀ ಮದ್ರಾಯ ರಾಜಗುರು ಮಂಡಲಾಚಾರ್ಯ ಆಚಾರ್ಯವರ್ಯ’ ಎಂದು ಹೊಗಳಿದೆ. ಕ್ರಿಯಾಶಕ್ತಿದೇವರ (ಗುರುಗಳು)ನ್ನು ತ್ರಿಯಂಬಕದೇವರ ಆರಾಧಕರಾಗಿದ್ದರೆಂದು ಉಲ್ಲೇಖಿಸುತ್ತದೆ. ವಿಜಯ ಭೂಪತಿಗೆ (ಕ್ರಿ.ಶ.೧೪೨೨-೨೪) ‘ಚಂದ್ರಭೂಷಣ ಕ್ರಿಯಾಶಕ್ತಿ ರಾಜಗುರುವಾಗಿದ್ದನೆಂದು ಹೊಸಕೋಟೆ ಶಾಸನ ದಾಖಲಿಸುತ್ತದೆ.[೩೧] ಇದೇ ‘ಚಂದ್ರಭೂಷಣ ಕ್ರಿಯಾಶಕ್ತಿ’ ಪ್ರೌಢದೇವರಾಯನಿಗೆ ಆರಂಭದಲ್ಲಿ ರಾಜಗುರುವಾಗಿದ್ದನೆಂದು[೩೨], ಡಾ. ಶಿವಾನಂದ ವಿರಕ್ತಮಠರು ತಮ್ಮ ಪಿಎಚ್ ಡಿ ಮಹಾಪ್ರಬಂಧದಲ್ಲಿ ದಾಖಲಿಸಿದ್ದಾರೆ. ಕ್ರಿ.ಶ.೧೪೨೯ರ ಚೋಳೇನಹಳ್ಳಿ ತಾಮ್ರಶಾಸನವು (ಪ್ರೌಢದೇವರಾಯನ ಕಾಲದ್ದು) ‘‘ಭುವನ ಗುರೋಃ ಶ್ರೀ ಕ್ರಿಯಾಶಕ್ತಿ ಗುರೋಃ’’[೩೩] ಎಂದು ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ ಬರುವ ಭುವನ ಗುರು ಶ್ರೀ ಕ್ರಿಯಾಶಕ್ತಿಯೇ ಚಂದ್ರಭೂಷಣ ಕ್ರಿಯಾಶಕ್ತಿ ಆಗಿರಬೇಕೆನಿಸುತ್ತದೆ.

ಕ್ರಿ.ಶ.೧೪೩೧ರ ಪ್ರೌಢದೇವರಾಯನ ಕಾಲದ ಪುತ್ತೂರಿನ ಶಾಸನವು ‘ಕ್ರಿಯಾಶಕ್ತಿ ದೇವರುಗಳು ಪುತ್ತೂರಿಗೆ ವಿಜೆಯ ಮಾಡಿದ್ದಲ್ಲಿ ಕ್ರಿಯಾಶಕ್ತಿ ದೇವರುಗಳು ಅಂಣಪ್ಪಗಳ ಬುಧಿವಂತ ಮನುಷ್ಯ ದೇವರಸನು.....’’[೩೪] ಎಂದೂ, ಇದೇ ಅರಸನ ಕ್ರಿ.ಶ.೧೪೪೨ರ ಸೋಮೇಶ್ವರದ ಶಾಸನವು ‘‘ಶ್ರೀ

ಮದ್ರಾಯ ರಾಜಗುರು ಮಹಾಮಂಡಲಾಚಾರಿಯ ಕ್ರಿಯಾಶಕ್ತಿ ದೇವ... ವೊಡೆಯರು ದ ಆ ಸೋಮೇಶ್ವರ ದೇವರ ಜೀರ್ನ್ಣೋದ್ಧಾರ ಅಂಗರಂಗಭೋಗ ನಯಿವೇದ್ಯವಾರಿ ಕ್ಷೇತ್ರಮುಂ..."[೩೫] ಎಂದು ದಾಖಲಿಸುತ್ತವೆ. ಕ್ರಮವಾಗಿ ಈ ಶಾಸನಗಳು ಕ್ರಿಯಾಶಕ್ತಿ ದೇವರುಗಳು, ಶ್ರಿ ಮದ್ರಾಯ ರಾಜಗುರು ಮಹಾಮಂಡಲಾಚಾರ್ಯ ಕ್ರಿಯಾಶಕ್ತಿ ದೇವ ಒಡೆಯರು ಎಂದು ಉಲ್ಲೇಖಿಸಿ, ಇವರು ಪ್ರೌಢದೇವರಾಯನ ರಾಜಗುರುವಾಗಿದ್ದರೆಂಬ ವಿವರ ತಿಳಿಸುತ್ತವೆ.

ಲಕ್ಕಣ್ಣ ದಂಡೇಶನು ದೊರೆ ಪ್ರೌಢದೇವರಾಯನಿಗೆ ಮಲ್ಲಿಕಾರ್ಜುನ ಕ್ರಿಯಾಶಕ್ತಿ ರಾಜಗುರು ಆಗಿದ್ದರ ಬಗ್ಗೆ ತನ್ನ ಶಿವತತ್ತ್ವಚಿಂತಾಮಣಿ ಕಾವ್ಯದಲ್ಲಿ

"ಶಕ್ತಿಯೇ ಬಹಿಷ್ಕರಿಸಿ ಸತ್ಕ್ರಿಯಾಶಕ್ತಿ ನಾಮಂಬಡೆದು ವರ್ತಿಸುತ್ತ
ಭುಕ್ತಿಮುಕ್ತಿಗಳನೀವುತ ಸಂಸ್ಕೃತಿಯೊಳತಿ ವಿ
ರಕ್ತಿ ಭಾವದೊಳಾಚರಿಪ ಸುಮಾರ್ಗಕ್ರಿಯಾ
ಶಕ್ತಿಯತಿರಾಯನೆ ವಿರೂಪಾಕ್ಷನೆಂದವನ ಚರಣಾಂಬುಜಕೆ ಶರಣು"[೩೬]

ಎಂದು ಹೇಳಿದ್ದಾನೆ. ಈ ಕಾವ್ಯದಲ್ಲಿ ಕ್ರಿಯಾಶಕ್ತಿಯ ವ್ಯಕ್ತಿತ್ವವನ್ನು ಹೊಗಳಲಾಗಿದೆ. ಕ್ರಿಯಾಶಕ್ತಿಯು ಸಂಸ್ಕೃತಿಯಲ್ಲಿ ಅತಿವಿರಕ್ತಿ ಹೊಂದಿದವನು. ಭಾವದೊಳು ಆಚರಿಸುವ ಸುಮಾರ್ಗಿಯಾಗಿದ್ದಾನೆ. ಅಲ್ಲದೆ ಈ ಕ್ರಿಯಾಶಕ್ತಿಯತಿರಾಯನೆ ವಿರೂಪಾಕ್ಷನಾಗಿದ್ದಾನೆಂದು ಹೇಳಿದೆ. ಇದೇ ಕ್ರಿಯಾಶಕ್ತಿ ಮಲ್ಲಿಕಾರ್ಜುನ ಕ್ರಿಯಾಶಕ್ತಿಯಾಗಿದ್ದಾನೆ. ಈತನನ್ನು ಲಕ್ಕಣ್ಣದಂಡೇಶ ಗ್ರಂಥಾದಿಯಲ್ಲಿ, ಅಲ್ಲಮ ಪ್ರಭು, ಬಸವಣ್ಣ, ಚನ್ನಬಸವಣ್ಣನವರನ್ನು ಸ್ತುತಿಸುವ ಮೊದಲೇ "ಮಲ್ಲಿಕಾರ್ಜುನ ನಾಮಧರನಾದ ಪಾಶುಪತ ಸದ್ವ್ರತ ಗುಣಾಗ್ರಣಿ" ಎಂದು ಅನನ್ಯ ಭಕ್ತಿಯಿಂದ ಸ್ಮರಿಸಿದ್ದಾನೆ. ಈತನೇ ಲಕ್ಕಣ್ಣದಂಡೇಶನಿಗೂ ಗುರುವಾಗಿದ್ದನು.[೩೭] ಎಂಬ ಅಂಶ ತಿಳಿದುಬರುತ್ತದೆ.

ಕ್ರಿಯಾಶಕ್ತಿ ಗುರುಪರಂಪರೆ

|

ವಿರೂಪಾಕ್ಷ ರುದ್ರ

|

ಕ್ರಿಯಾಶಕ್ತಿ ಗುರು (ಕ್ರಿ.ಶ.೧೩೪೭)

|

ಕಾಶೀವಿಳಾಸ ಕ್ರಿಯಾಶಕ್ತಿ ಶಿವದೇಶಿಕ(ಕ್ರಿ.ಶ.೧೨೬೮)

|

ವಾಣೀವಿಲಾಸ ಕ್ರಿಯಾಶಕ್ತಿಗುರು(ಕ್ರಿ.ಶ.೧೩೭೯)

|

ಚಂದ್ರಭೂಷಣ ಕ್ರಿಯಾಶಕ್ತಿ(ಕ್ರಿ.ಶ.೧೪೧೦)

|

ಮಲ್ಲಿಕಾರ್ಜುನ ಕ್ರಿಯಾಶಕ್ತಿ(ಕ್ರಿ.ಶ.೧೪೩೦)

|

ಕ್ರಿಯಾಶಕ್ತಿದೇವ ಒಡೆಯ(ಕ್ರಿ.ಶ.೧೪೪೨)

ಕ್ರಿಯಾಶಕ್ತಿ ಪರಂಪರೆಯ ಗುರುಗಳು ಸ್ಥಳೀಯರೋ ಅಥವಾ ಬೇರೆ ಪ್ರದೇಶದವರೋ ಎಂಬ ಸಂದೇಹ ಹುಟ್ಟುತ್ತದೆ. ಇವರನ್ನು ಇಂಥ ಪ್ರದೇಶದವರೆಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟಕರ ಸಂಗತಿಯಾಗಿದೆ. ವಿಜಯನಗರದ ಸಾಮ್ರಾಜ್ಯ ಸ್ಥಾಪನೆಯ ಕಾಲಕ್ಕೆ ಕ್ರಿಯಾಶಕ್ತಿಗುರುಗಳು ಹಂಪಿಯಲ್ಲಿದ್ದು ಹಕ್ಕ-ಬುಕ್ಕರಿಗೆ ರಾಜ್ಯಕಟ್ಟಲು ಮಾರ್ಗದರ್ಶನ ಮಾಡಿರುವುದರಿಂದಲೇ ಇವರನ್ನೇ ರಾಜಗುರುಗಳಾಗಿ ಸ್ವೀಕರಿಸಿ ಇವರ ಸಲಹೆ ಮಾರ್ಗದರ್ಶನದಲ್ಲಿ ರಾಜ್ಯದ ಆಡಳಿತ ನಡೆಸಿರುವುದಕ್ಕೆ ಅರಸರು ಇವರಿಗೆ ದಾನ ನೀಡಿದ ಶಾಸನಗಳೇ ಸಾಕ್ಷಿ. ವಿಜಯನಗರ ಸಾಮ್ರಾಜ್ಯದ ರಾಜಗುರುಗಳಾದ ಮೇಲೆ ಸಾಮ್ರಾಟರು ಅವರಿಗೆ ರಾಜಧಾನಿಯಲ್ಲಿ ಮಠ ಕಟ್ಟಿಸಿಕೊಟ್ಟಿರುವ ಸಾಧ್ಯತೆ ಇದೆ. ಕ್ರಿ.ಶ.೧೦ ರಿಂದ ೧೪ನೇ ಶತಮಾನದ ತನಕ ಕರ್ನಾಟಕ, ಆಂಧ್ರ, ತಮಿಳುನಾಡು ರಾಜ್ಯಗಳಲ್ಲಿ ಗೋಲಕಿ, ಭಿಕ್ಷಾವೃತ್ತಿ, ಲಕ್ಷ್ಯಾಧ್ಯಾಯಿ, ಭಿಕ್ಷಾಸಂತಾನ ಮುಂತಾದ ಪರ್ಯಾಯ ಹೆಸರುಗಳಿಂದ ಪ್ರಚಲಿತವಿದ್ದ ಶುದ್ಧಶೈವ ಮಠ ಸಂಪ್ರದಾಯಕ್ಕೆ ಕ್ರಿಯಾಶಕ್ತಿಗುರು ಪರಂಪರೆಯವರು ಸೇರಿರಬಹುದಾಗಿದೆ. ಬಹುಶಃ ಈ ಕ್ರಿಯಾಶಕ್ತಿ ಗುರುಪರಂಪರೆಯವರು ಕಾಳಾಮುಖ-ಶುದ್ಧ ಶೈವದ ಪ್ರಸಿದ್ಧ ಕೇಂದ್ರವಾದ ಶ್ರೀಶೈಲದಿಂದ ಬಂದು ರಾಜಗುರುಗಳಾಗಿ ಹಂಪಿಯಲ್ಲಿ ನೆಲೆಸಿದಂತೆ ತೋರುತ್ತದೆ. ಕ್ರಿ.ಶ.೧೪-೧೫ನೇ ಶತಮಾನದ ಕಾಲಕ್ಕೆ ಆಂಧ್ರದ ಶ್ರೀಶೈಲದಲ್ಲಿ ಪ್ರಸಿದ್ಧವಾಗಿದ್ದ ವೀರಭಿಕ್ಷಾವೃತ್ತಿಮಠ ಪರಂಪರೆಗೆ ಕ್ರಿಯಾಶಕ್ತಿ ರಾಜಗುರುವರ್ಗದವರು ಸೇರಿರಬಹುದೆನಿಸುತ್ತದೆ. ಶಾಸನಗಳಲ್ಲಿ ಇವರನ್ನು ವಿರೂಪಾಕ್ಷ(ರುದ್ರ)ನ ಅವತಾರಿಗಳು, ರುದ್ರನ ಅವತಾರವಾದ ತ್ರಯಂಬಕರುದ್ರನ ಆರಾಧಕರೆಂದು ಹೊಗಳಲಾಗಿದೆ. ವೀರಭಿಕ್ಷಾವೃತ್ತಿ ಮಠದವರು ಸಹ ಇದೇ ಪರಂಪರೆಗೆ ಸೇರಿದವರಾಗಿದ್ದಾರೆ. ಆದ್ದರಿಂದ ಕ್ರಿಯಾಶಕ್ತಿ ಗುರುಪರಂಪರೆಯವರನ್ನು ವೀರಭಿಕ್ಷಾವೃತ್ತಿಮಠ ಪರಂಪರೆಗೆ ಸೇರಿದ್ದಾರೆಂಬ ಅಂಶವನ್ನು ತಳ್ಳಿ ಹಾಕುವಂತಿಲ್ಲ.

ವಿಜಯನಗರದ ಆರಂಭಿಕ ಅರಸರಿಗೆ ರಾಜಗುರುಗಳೂ, ವಿರೂಪಾಕ್ಷದೇವರ ಅವತಾರಿಗಳು ಅಥವಾ ಸಮಾನರಾಗಿದ್ದರಿಂದ, ವಿರೂಪಾಕ್ಷ ದೇವಾಲಯ ಪರಿಸರದಲ್ಲಿಯೇ ಕ್ರಿಯಾಶಕ್ತಿ ಗುರುಗಳ ಮಠವಿದ್ದಿರಬೇಕೆನಿಸುತ್ತದೆ. ವಿರೂಪಾಕ್ಷ ದೇವಾಲಯದ ಎದುರುಗಡೆ ಅಂದರೆ ವಿರೂಪಾಕ್ಷ ದೇವಾಲಯ ದಿಂದ ಹೊರಗಡೆ ಬರುವಾಗ ರಾಜಬೀದಿಯ ಎಡಗಡೆಯ ಮಂಟಪಗಳ ಹಿಂಭಾಗದಲ್ಲಿ (ಈಗ ರಥಗಳು ನಿಂತಿರುವ ಜಾಗಕ್ಕೆ ಸಮನಾಂತರವಾಗಿ) ಒಂದು ಅಂತಸ್ತಿನ ಸು.೨೫೦ ಕಂಬಗಳ ಮಠದ ಅವಶೇಷವಿದೆ. ಮಠದ ಒಳಗಡೆಯ ನಡು ಮಧ್ಯಭಾಗದಲ್ಲಿ ೪ ಕಂಬಗಳು ವಿಶಿಷ್ಟವಾಗಿದ್ದು, ನಂದಿ, ಶಿವಲಿಂಗ ಉಬ್ಬುಶಿಲ್ಪಗಳನ್ನೊಳಗೊಂಡಿವೆ. ಮೇಲ್ಭಾಗದಲ್ಲಿ ಸುತ್ತಲೂ ಎರಡು ಸಾಲಿನ ಕಲ್ಲುಮಂಟಪ ಹೊಂದಿದೆ.

ರಾಜಬೀದಿಯನ್ನು ನಿರ್ಮಿಸುವಾಗ ಈ ಮಠದ ಕೆಲವು ಭಾಗ ಹಾಳಾಗಿರುವ ಅಥವಾ ಕೆಲವು ಭಾಗವನ್ನು ಉದ್ದೇಶ ಪೂರ್ವಕವಾಗಿ ತೆಗೆದು ಹಾಕಿರುವ ಸಾಧ್ಯತೆ ಇದೆ. ನಂತರ ಮಠದ ಕಟ್ಟಡಕ್ಕೆ ರಾಜ ಬೀದಿಯ ಮಂಟಪವನ್ನು ಹೊಂದಿಸಿದಂತಿದೆ. ಈ ಮಠವು ಈ ಶಿಥಿಲಾವಸ್ಥೆಯಲ್ಲಿದ್ದು ರಕ್ಷಣೆ ಬಯಸುತ್ತದೆ. ಇದನ್ನು ಕ್ರಿಯಾಶಕ್ತಿ ದೇವರ ಮಠ ಅಥವಾ ವೀರಭಿಕ್ಷಾವೃತ್ತಿ ಮಠವೆಂದು ಕರೆಯಬಹುದಾಗಿದೆ.

ವೀರಭಿಕ್ಷಾವೃತ್ತಿ ಮಠದ ಸ್ವಾಮಿಗಳನ್ನು ಕೃತಿ ಲಕ್ಕಣ್ಣದಂಡೇಶ ತನ್ನ ಕಾವ್ಯದಲ್ಲಿ

"ದುಷ್ಟನಿಗ್ರಹನು ಶಿಷ್ಟ ಪ್ರಜಾಪಾಲಕಂ
ಕಟ್ಟಧಿಕ ಪರಸಮಯ ಮಾನಮರ್ದನ ಶಂಭು
ನಿಷ್ಠಾ ಪ್ರಯುಕ್ತ ಸಜ್ಜನ ಶುದ್ಧ ಸರ್ವಜ್ಞ ಶಿವಸಮಯ ಸಾರ್ವಭೌಮ
ಶ್ರೇಷ್ಠ ಸದಾಚಾರ ಸನ್ನಿಹಿತ ಭಕ್ತಿ ಸು
ಪಟ್ಟ ಜಂಗಮದ ದಾಸೋಹಿ ಪರಮ ವಿವೇಕ
ದೃಷ್ಟ ಪರಮುಕ್ತಿ ಭಿಕ್ಷಾವೃತ್ತಿರಾಯರ ಸುಚರಣಾಂಬುಜಕ್ಕೆ ಶರಣು"[೩೮]

ಎಂದು ದಾಖಲಿಸಲಾಗಿದೆ. ಈ ಕಾವ್ಯದಲ್ಲಿ ವೀರಭಿಕ್ಷಾವೃತ್ತಿ ಮಠಾಧೀಶರನ್ನು ಶಿಷ್ಟ ಪ್ರಜಾಪಾಲಕರು, ಶಿವಸಮಯ ಸಾರ್ವಭೌಮರು ಜಂಗಮದ ದಾಸೋಹಿಗಳು ಎಂದು ನಾನಾ ರೀತಿಯಲ್ಲಿ ಹೊಗಳಲಾಗಿದೆ. ಕ್ರಿ.ಶ.೧೪೪೨ರ ಉಪ್ಪಲಪಾಡು ಶಾಸನವು "ಶ್ರೀ ಅಜಾತಿ ವೀರಶೈವ (ಶ್ರೀ) ಭಿಕ್ಷಾವೃತ್ತಿ ಅಯ್ಯವಾರು" ಎಂದೂ ಕ್ರಿ.ಶ.೧೪೪೩ರ ಇದೇ ಗ್ರಾಮದ ಶಾಸನವು "ಶ್ರೀ ಅಜಾತಿ ವೀರಶೈವ ವೀರಭಿಕ್ಷಾವೃತ್ತಿ ಅಯ್ಯವಾರು"[೩೯] ಎಂದು ದಾಖಲಿಸುತ್ತವೆ. ಶ್ರೀಶೈಲ ಪರಿಸರದ ಪ್ರೌಢದೇವರಾಯನ ಕಾಲದ ಈ ಎರಡು ಶಾಸನಗಳು ಅಜಾತಿ ವೀರಶೈವ ವೀರ ಭಿಕ್ಷಾವೃತ್ತಿ ಮಠದ ಬಗ್ಗೆ ಉಲ್ಲೇಖಿಸುತ್ತವೆ. ಹೀಗಾಗಿ ಹಂಪಿಯಲ್ಲಿಯ ರಾಜಗುರು ಪರಂಪರೆಯ ಮಠವು ಕ್ರಿ.ಶ.೧೩೭೮ರ ನಂತರ ವೀರಶೈವ ವೀರಭಿಕ್ಷಾವೃತ್ತಿ ಮಠದ ಪರಂಪರೆಗೆ ಸಂಬಂಧಿಸಿದುದಾಗಿರಬಹುದೆಂದು ತರ್ಕಿಸಬಹುದು. ಅಂದರೆ ಮೊದಲು ಶೈವಮಠವಾಗಿ ನಂತರ ವೀರಶೈವ ಮಠವಾಗಿರುವ ಸಾಧ್ಯತೆ ಇದೆ.

**೩. ಮಹಂತಿನ ಮಠ :** ವಿರೂಪಾಕ್ಷ ಪೇಟೆ ಮತ್ತು ಕಮಲಾಪುರ, ಹೊಸಪೇಟೆ ದಾರಿ ಸಂಧಿಸುವ ಸ್ಥಳದ ಬಳಿ ಎತ್ತರಕ್ಕೆ ಇರುವ ಮಂಟಪದ ಎದುರು ನೆಟ್ಟಿರುವ ಕಲ್ಲಿನ ಮೇಲಿನ ಶಾಸನವು (ರಾಜಬೀದಿಯ ಎಡಭಾಗದ ಸಾಲುಮಂಟಪಗಳಲ್ಲಿ) "ಮಹಮಂತಿನ ಮಟದ ಮಂಟಪ"[೪೦] ಎಂದು ದಾಖಲಿಸುತ್ತದೆ. ಈ ಶಾಸನ ಇರುವ ಸ್ಥಳದ ಒಂದು ಅಂತಸ್ಥಿನ ಮಂಟಪವು ಮಹಂತಿನ ಮಠವಾಗಿದೆ. ಈಗ ಇದು ಸುಸ್ಥಿತಿಯಲ್ಲಿದ್ದು, ಸ್ಥಳೀಯರು ಇದನ್ನು ವಾಸದ ಮನೆಯನ್ನಾಗಿ ಮಾಡಿಕೊಂಡಿದ್ದಾರೆ.

**೪. ಕರಿಸಿದ್ಧೇಶ್ವರ ಮಠ :** ವಿರೂಪಾಕ್ಷ ತೇರು ಬೀದಿಯ ದಕ್ಷಿಣಕ್ಕೆ ಕರಿಸಿದ್ಧಪ್ಪನ ಮಠದ ಉತ್ತರಕ್ಕಿರುವ ಕಲ್ಲಿನ ಮೇಲಿರುವ ಶಾಸನವು "ಕರಿಯಸಿದ್ಧಪ್ಪನ ಮಟದ ಮಾನ್ಯ"[೪೧] ಎಂದು ದಾಖಲಿಸುತ್ತದೆ. ಈ

ಮಠವು ಹಂಪಿಯ ರಥ ಬೀದಿಯಲ್ಲಿ ಬಲಗಡೆಯ ಭಾಗದಲ್ಲಿ ಕಾಣಬರುವ ಸಾಲು ಕಟ್ಟಡಗಳಲ್ಲಿ ಒಂದಾಗಿದೆ, ಅದುವೇ ಕಾಶೀ ಮಠವೆಂದು''[೪೨] ಸಿ.ಚಿ.ಎಂ.ಕೊಟ್ಟಯ್ಯನವರು ಹೇಳುತ್ತಾರೆ. ಇವರ ಈ ಹೇಳಿಕೆ ಸರಿಯಲ್ಲವೆನಿಸುತ್ತದೆ. ಕರಿಯಸಿದ್ದಪ್ಪನ ಮಠದ ಮಾನ್ಯ ಎಂದು ದಾಖಲಿಸುವ ಶಾಸನದ ಎದುರುಗಡೆ, ಪೂರ್ವಾಭಿಮುಖವಾಗಿರುವ ಕಟ್ಟಡವೇ ಕರಿಸಿದ್ಧೇಶ್ವರ ಮಠವೆಂದು ಸಂಸ್ಥಾನಮಠವೆಂದು ಇತ್ತೀಚೆಗೆ ಬರೆಯಲಾಗಿದೆ. ಇದರ ಹತ್ತಿರದಲ್ಲಿ ಶಾಸನ ಇರುವುದರಿಂದ ಇದುವೇ ಕರಿಸಿದ್ದೇಶ್ವರ ಮಠವೆಂದು ಹೇಳಬಹುದಾಗಿದೆ. ದ್ವಾರ ಬಾಗಿಲ ಇಕ್ಕೆಲಗಳ ಮುಂದೆ ನಂದಿಶಿಲ್ಪಗಳಿವೆ. ಬಾಗಿಲ ಎರಡೂ ಕಡೆ ಬಾಗಿಲಿಗೆ ಹೊಂದಿಕೊಂಡು ಕಲ್ಲು ಮಂಟಪವಿದೆ. ಈ ದ್ವಾರಬಾಗಿಲು ದಾಟಿ ಎಡಕ್ಕೆ ನೋಡಿದರೆ ವಿಜಯನಗರ ಕಾಲದ ಒಂದು ಚಿಕ್ಕ ಬಾವಿ ಇದೆ. ಇದರಲ್ಲಿ ಈಗಲೂ ನೀರಿದೆ. ಇದರ ದಂಡೆಯ ಮೇಲೆ ಮತ್ತು ಇದಕ್ಕೆ ಸಮಾನಾಂತರವಾಗಿ ಮಠದ ಆವರಣದಲ್ಲಿ ಐದಾರು ಬಿಲ್ವಪತ್ರಿ ಮರಗಳಿವೆ. ಮತ್ತೊಂದು ಬಾವಿ ಇದೆ. ನಂತರ 'ಎಲ್' ಆಕಾರದ ಮಂಟಪಗಳನ್ನೊಳಗೊಂಡ ಮಠದ ಕಟ್ಟಡ ಇದೆ. ಈ ಕಟ್ಟಡದ ಎದುರಿನಲ್ಲಿ ಒಂದು. ಇದಕ್ಕೆ ಸಮನಾಗಿ ಅನತಿ ದೂರದಲ್ಲಿ ಇಟ್ಟಿಗೆ ಗಾರೆಯಿಂದ ನಿರ್ಮಿಸಿದ ಹಿಂದಿನ ಸ್ವಾಮಿಗಳ ಸಮಾಧಿಗಳಿವೆ. ಮಠದ ಆವರಣ ತುಂಬಾ ವಿಶಾಲವಾಗಿದೆ. ಮಠದ ಕಟ್ಟಡ ತಕ್ಕಮಟ್ಟಿಗೆ ಸುಸ್ಥಿತಿಯಲ್ಲಿದೆ. ಆದರೂ ಜೀರ್ಣೋದ್ಧಾರ ಬಯಸುತ್ತದೆ. 'ಎಲ್ ' ಆಕಾರದ ಕಟ್ಟಡದಲ್ಲಿ ಉತ್ತರಾಭಿಮುಖವಾಗಿರುವ ಕಟ್ಟದ ಒಳಗಡೆ ನಂದಿ, ಶಿವಲಿಂಗ, ವಿನಾಯಕರ ಶಿಲ್ಪಗಳಿವೆ. ೨೦ಕ್ಕೂ ಹೆಚ್ಚು ಕಂಬಗಳಿಂದ ಕೂಡಿದೆ.

ಬುಕ್ಕಸಾಗರದ ವಿರೂಪಾಕ್ಷ ಗೌಡರ ಬಳಿಯಿರುವ ಕ್ರಿ.ಶ.೧೬೧೨ರ ತಾಮ್ರ ಶಾಸನವು ''ಮಹಾಮಹತ್ತಿನೊಳಗಾದ ಹಂಪೆಯ ಸಿಂಹ್ಮಾಸನದ ಪ(ಂ)ಚಮಠ ಪಂಚಗೃಹದೊಳಗಾದ ಬುಕ್ಕಸಾಗರದ ಕರಿಸಿದ್ದೇವರ ಶಿಷ್ಯರಾದ ಚಿಕ್ಕಕರಿಸಿದ್ದೇವರು ಶಿಷ್ಯರು ಬುಕ್ಕಸಾಗರ ಹಂಪೆ ಮಠಕ್ಕೆ ಕರ್ತರಾದಂಥಾ ಸಿದ್ಧಬಸವರಾಜದೇವರಿಗಂ...''[೪೩] ಎಂದು ದಾಖಲಿಸಿದೆ. ಈ ಶಾಸನದ ಪ್ರಕಾರ ಅರವೀಡು ವಂಶದ ವೆಂಕಟಪತಿರಾಯರು ಹಂಪಿಯ ಸಿಂಹಾಸನದ ಪಂಚಮಠ ಪಂಚಗೃಹದ ಒಳಗಾದ ಬುಕ್ಕಸಾಗರ ಮಠದ ಕರಿಸಿದ್ದೇವನ ಶಿಷ್ಯರಾದ ಚಿಕ್ಕಕರಿಸಿದ್ದೇವ ಮತ್ತು ಮಠದ ಕರ್ತರಾದ ಸಿದ್ದಬಸವರಾಜ ದೇವರಿಗೆ ಕಲ್ಲುಗುಡಿ ಗ್ರಾಮವನ್ನು ಸರ್ವಮಾನ್ಯವಾಗಿ ನೀಡಿರುತ್ತಾನೆ. ಈ ಗ್ರಾಮದಿಂದ ಬಂದ ಆದಾಯವನ್ನು ವೀರಶೈವ ಜಂಗಮಾರ್ಚನೆಗೆ ಮತ್ತು ಅನ್ನದಾಸೋಹಕ್ಕೆ ಉಪಯೋಗಿಸಬೇಕೆಂದು ತಿಳಿಸುತ್ತದೆ.

ಈ ಶಾಸನದಿಂದ ತಿಳಿದುಬರುವ ಮುಖ್ಯ ಅಂಶವೆಂದರೆ ಹಂಪೆ ಸಿಂಹಾಸನದ ಪಂಚಗೃಹ ಮಠವು ಐದು ಶಾಖಾಮಠಹೊಂದಿತ್ತು. ಅದರಲ್ಲಿ ಒಂದು ಬುಕ್ಕಸಾಗರದಲ್ಲಿದೆ. ಅದು ಈಗ ಕಾಶೀಪೀಠದ ಶಾಖಾಮಠವಾಗಿದೆ.

**೬. ಕುರುಗೋಡು ನೀಲಮ್ಮನ ಮಠ :** ರಥ ಬೀದಿಯ ಬಲಭಾಗದ ಉಪ್ಪರಿಗೆಯ ಮಂಟಪಕ್ಕೆ ಕುರುಗೋಡು ನೀಲಮ್ಮನ ಮಠವೆಂದು ಸ್ಥಳೀಯ ಜನರು ಮತ್ತು ಆ ಮಠದ ನಿವೇಶನದಲ್ಲಿ ವಾಸವಾಗಿರುವ ನಿವಾಸಿಗಳು ಹೇಳುತ್ತಾರೆ. ಆದರೆ ಇದಕ್ಕೆ ನಿರ್ದಿಷ್ಟ ಆಧಾರಗಳಿಲ್ಲ. ಉಪ್ಪರಿಗೆ ಹೊಂದಿರುವ ಶ್ರೀಮಠದ ಮುಂಭಾಗದ ೬ ಕಂಬಗಳು ಉಪ್ಪರಿಗೆಗೆ ವಿಸ್ತರಿಸಿವೆ. ಬುನಾದಿಯಿಂದ ಮಾಳಿಗೆಯ ತನಕ ಗೋಡೆ ಕಟ್ಟಲಾಗಿದೆ.(ಇತ್ತೀಚೆಗೆ) ಈ ಕಂಬಗಳಲ್ಲಿ ಒಂದರಲ್ಲಿ ನಂದಿ, ಮತ್ತೊಂದರಲ್ಲಿ ವಿನಾಯಕ, ಇನ್ನೊಂದರಲ್ಲಿ ಶಿವಲಿಂಗ ಮತ್ತು ನಾಗಶಿಲ್ಪಗಳಿವೆ. ಉಪ್ಪರಿಗೆ ಏರಲು ಒಳಗಡೆ ಮೆಟ್ಟಿಲುಗಳಿವೆ. ಉಪ್ಪರಿಗೆಯಲ್ಲಿ ೨ ಕೊಠಡಿಗಳಿದ್ದು ೧ಕ್ಕೆ ಜಾಲಂದ್ರ ಕಿಟಕಿ ಇದೆ. ಮಠದ ಒಳಗಡೆ ಹತ್ತಾರು ಕಂಬಗಳಿವೆ. ಕುರುಗೋಡು ನೀಲಮ್ಮ ಆಧುನಿಕ ಶರಣೆಯಾಗಿರುವ ಸಾಧ್ಯತೆ ಇದೆ. ಬಹುಶಃ ಆಕೆ ಇಲ್ಲಿ ವಾಸವಾಗಿದ್ದಿರಬಹುದಾಗಿದೆ. ಈಗ ಈ ಕಟ್ಟಡ ಸ್ಥಳೀಯರ ವಾಸಸ್ಥಾನವಾಗಿದೆ. ಶ್ರೀಮಠದ ಹಿಂಬದಿಯ ಎಡಭಾಗದಲ್ಲಿ ಇದಕ್ಕಿಂತಲೂ ಒಂದು ದೊಡ್ಡ ಮಂಟಪವಿದೆ ಇದನ್ನೂ ಸಹ ಅಲ್ಲಿಯ ನಿವಾಸಿಗಳು ಕುರುಗೋಡು ನೀಲಮ್ಮನ ಮಠವೆಂದು ಹೇಳುತ್ತಾರೆ.

**೭. ಹಾನುವಾಳ ಮಠ :** ಹಂಪಿಯ ಪ್ರಭಾವಿ ವೀರಶೈವ ಮಠಗಳಲ್ಲೊಂದಾದ ಹಾನುವಾಳ ಮಠವು ಗಂಗಾವತಿ ಮಠವೆಂದು ಅದರಲ್ಲಿ ವಾಸವಾಗಿರುವ ನಿವಾಸಿಗಳು ಹೇಳುತ್ತಾರೆ. ಪ್ರೌಢದೇವರಾಯನ ಕಾಲದಲ್ಲಿ ಶ್ರೀಮಠದ ಅಧಿಪತಿಗಳಾದ ಶರಣ ಪಂಪಯ್ಯ ಎಂಬುವವರಿದ್ದರು. ಅವರು ಒಂದೆತ್ತಿನಯ್ಯಗಳೆಂದು ಪ್ರಸಿದ್ಧರಾಗಿದ್ದರು. ಒಂದು ಎತ್ತಿನ ಮೇಲೆ ಓಡಾಡುತ್ತ ಇತರೆ ಶಾಖಾ ಮಠಗಳ ದಾಸೋಹ-ಧಾರ್ಮಿಕ ಚಟುವಟಿಕೆಗಳನ್ನು ಪರಿಶೀಲಿಸುತ್ತಿದ್ದರಿಂದ ಆ ಹೆಸರಿನಿಂದ ಇವರನ್ನು ಕರೆಯಲಾಗುತ್ತಿತ್ತೆಂಬ ಪ್ರತೀತಿಯಿದೆ.[೪೪] ರಥಬೀದಿಯ ಎಡಭಾಗದ ಮಂಟಪಗಳಲ್ಲೊಂದಾಗಿರುವ ಶ್ರೀಮಠದ ದ್ವಾರಬಾಗಿಲ ಎಡ-ಬಲ ಭಾಗದಲ್ಲಿ ತಲಾ ಒಂದೊಂದು ನಂದಿ ಸಿಲ್ಪವನ್ನು ನಿಲ್ಲಿಸಲಾಗಿದೆ. ೩೦ ಕಂಬಗಳನ್ನು ಹೊಂದಿದೆ. ಒಂದೆತ್ತಿನ ಅಯ್ಯಗಳನ್ನು ಕುರಿತು ಲಕ್ಕಣ್ಣ ದಂಡೇಶ ತನ್ನ ಶಿವತತ್ವ ಚಿಂತಾಮಣಿಯಲ್ಲಿ

> ‘‘.... ಪಂಪಾಪತಿಯ ರಥವೀಧಿಯಲ್ಲಿ ಮುದ .
> ದಿಂದೊಂದು ಮಂದಿರವ ರಚಿಸಿ ಸೋಹಂ ಭಾವವಳಿದು ದಾಸೋಹಮೆನುತಾ
> ಸಂದಳಿಪ ಚರಲಿಂಗದಲ್ಲಿ ತೆರಹಿಲ್ಲದಾ
> ನಂದದಿಂದಮೃತಾನ್ನ ಪಾನವಸ್ತ್ರಮನಿತ್ತು
> ವಂದಿಸುವ ಗುರುಮೂರ್ತಿ ಒಂದೆತ್ತಿನಯ್ಯಗಳ ಚರಣಾಬುಜಕ್ಕೆ ಶರಣು’’[೪೫]

ಈ ಕಾವ್ಯದ ಪ್ರಕಾರ ಒಂದೆತ್ತಿನಯ್ಯಗಳ ಮಠವು ಪಂಪಾಪತಿ ವಿರೂಪಾಕ್ಷನ ರಥಬೀದಿಯಲ್ಲಿದ್ದು, ಅವರು ಸೋಹಂ ಭಾವ ಕಳೆದು ದಾಸೋಹ ಭಾವದಿಂದ ಧಾರ್ಮಿಕ ಚಟುವಟಿಕೆಗಳಿಂದ ಕಾರ್ಯ

ನಿರ್ವಹಿಸುತ್ತಿದ್ದರೆಂಬ ಅಂಶ ತಿಳಿದು ಬರುತ್ತದೆ. ಕಾಲಾಂತರದಲ್ಲಿ ಶ್ರೀಮಠವು ಗಂಗಾವತಿಗೆ ಸ್ಥಳಾಂತರಗೊಂಡಿದ್ದರೂ ಆ ಮಠಾಧಿಕಾರಿಗಳು ಪರಂಪರಾಗತವಾಗಿ ಬಂದಿರುವ ತಮ್ಮ ಕಾಯಕಗಳನ್ನು ಮರೆತಿರುವುದಿಲ್ಲ. ಹಂಪಿಯ ರಥೋತ್ಸವದ ಸಮಯದಲ್ಲಿ ಅವರು ಹಂಪಿಗೆ ಬಂದು, ತಮ್ಮ ಮಠದಲ್ಲಿದ್ದು, ಭಕ್ತರಿಗೆ ವಸತಿ ಸೌಲಭ್ಯ ಹಾಗೂ ಅನ್ನ ಸಂತರ್ಪಣೆಗಳನ್ನು ಸುಮಾರು ಒಂದು ವಾರದವರೆಗೆ ಉಚಿತವಾಗಿ ಏರ್ಪಡಿಸುತ್ತಾರೆ.[೪೬] ಇದು ಅಂದಿನಿಂದ ಇಂದಿನತನಕ ನಡೆದುಕೊಂಡು ಬಂದಿರುವ ಸಂಗತಿಯಾಗಿದೆ.

೮. ಪ್ರಭುದೇವರ ಕಲ್ಲುಮಠ : 'ಲಿಂಗಲೀಲಾ ವಿಲಾಸ ಚಾರಿತ್ರ'ದ ಕರ್ತೃ ಪ್ರಭುದೇವರ ಕಲ್ಲುಮಠವು ಹಂಪಿಯ ಪ್ರಭಾವಿ ವೀರಶೈವ ಮಠಗಳಲ್ಲಿ ಒಂದು. ಕ್ರಿ.ಶ.೧೫ನೇ ಶತಮಾನದಲ್ಲಿ ಪ್ರೌಢದೇವರಾಯನ ಕಾಲದಲ್ಲಿ ಅಸ್ತಿತ್ವದಲ್ಲಿತ್ತು. ಈ ಮಠದ ಕಟ್ಟಡ ಹಂಪಿಯ ಇತರ ವೀರಶೈವ ಮಠಗಳ ಕಟ್ಟಡಗಳಿಗಿಂತ ಉತ್ತಮವಾದ ಸ್ಥಿತಿಯಲ್ಲಿದೆಯೆಂದು ಹೇಳಬಹುದು. ಇದು ಮಹಡಿಯಿಂದ ಕೂಡಿದ ಕಟ್ಟಡವಾಗಿದೆ ಇದರ ಮುಂಭಾಗದಲ್ಲಿ ಒಂದು ಜಗಲಿಯಿಂದ ಕೂಡಿದ ಮೊಗಸಾಲೆ ಇದೆ. ಅದು ಬಹು ಎತ್ತರವಾದ ಕಲ್ಲಿನ ಸ್ತಂಭಗಳಿಂದ ನಿರ್ಮಿತವಾಗಿದ್ದು, ಭವ್ಯವಾಗಿ ಶೋಭಿಸುತ್ತದೆ. ಆ ಎತ್ತರವಾದ ಸ್ತಂಭಗಳು ಕೆಳಗಿನ ನೆಲೆಗಟ್ಟಿನಿಂದ ಮೇಲಿನ ಅಂತಸ್ತಿನ ಒಳಮಾಳಿಗೆಯವರೆಗೂ ಚಾಚಿ ನಿಂತಿವೆ. ಮತ್ತು ಅವು ಒಂದೊಂದೇ ಅಖಂಡ ಕಲ್ಲಿನಲ್ಲಿ ನಿರ್ಮಿತವಾದ ಸ್ತಂಭಗಳಾಗಿರುವುದರಿಂದ ಆ ಮೊಗಸಾಲೆಯ ಗಂಭೀರತೆಯನ್ನು ಮತ್ತಷ್ಟು ಹೆಚ್ಚಿಸುತ್ತವೆ.[೪೭] ಆ ಅಖಂಡ ಸ್ತಂಭಗಳಲ್ಲಿಯ ಒಂದೆರಡರಲ್ಲಿ ನಂದಿ ಶಿವಲಿಂಗ ಇದೆ. ಹಾಗೆಯೇ ಮಠದ ದ್ವಾರಬಾಗಿಲ ಮೇಲೆ ನಂದಿ ಶಿಲ್ಪವಿದೆ. ಈ ಮಠದಲ್ಲಿ ಈಗಲೂ ಎರಡು ವಿಶಾಲ ಸಭಾಂಗಣ-ಮಂಟಪಗಳು ಇದೆ. ಒಂದು ಕೆಳಗೆ ಮತ್ತೊಂದು ಮಹಡಿಯಲ್ಲಿದೆ. ಮಠದ ಕಟ್ಟಡದಲ್ಲಿ ವಿಶಿಷ್ಟ ವಾಸ್ತುಶೈಲಿ ಕಾಣಬಹುದು. ಅದೇಂದರೆ ಮಹಡಿಯ ನೆಲಗಟ್ಟಿನ ಮುಂದಿನ ಮಧ್ಯಭಾಗದಿಂದ ಸ್ವಲ್ಪಮುಂದಕ್ಕೆ ಚಾಚಿಕೊಂಡಿರುವ ಅರ್ಧವೃತ್ತಾಕಾರದ ಜಗಲಿ-ಕೈಸಾಲೆಯಂತಹ ಕಿರುಕಟ್ಟಡವಿದೆ. ಉತ್ಸವದ ಸಮಯದಲ್ಲಿ ಅಥವಾ ಮಠದ ದೊಡ್ಡ ಕಾರ್ಯಕ್ರಮದಲ್ಲಿ ಮುಂಚಾಚಿದ ಕೈಸಾಲೆಯಲ್ಲಿ ಮಠಾಧಿಶರು ಆಸೀನರಾಗಿ ಕೆಳಗೆ ನೆರೆದಿರುತ್ತಿದ್ದ ಭಕ್ತವೃಂದಕ್ಕೆ ದರ್ಶನ ನೀಡುವ ಪ್ರವಚನ ಹೇಳುವ ಕಾರ್ಯ ಕ್ರಮಕ್ಕಾಗಿ ಆ ಕೈಸಾಲೆಯನ್ನು ಮಾಡಿರುವ ಸಾಧ್ಯತೆ ಇದೆ.

ಕಲ್ಲುಮಠದ ಪ್ರಭುದೇವರು ಈ ಮಠದ ಅಧಿಪತಿಯಾಗಿದ್ದನೆಂದು ತನ್ನ ಲಿಂಗಲೀಲಾವಿಲಾಸ ಚಾರಿತ್ರ ಗ್ರಂಥದಲ್ಲಿ ತನ್ನನ್ನು ವಿದ್ಯಾನಗರದ ಕಲ್ಲುಮಠದ ಪ್ರಭುದೇವರಾಯನೆಂದು ಹೇಳಿಕೊಂಡಿದ್ದಾನೆ.[೪೮] ಹಾಗೆಯೇ ಲಂಡನ್ನಿನಲ್ಲಿ ಲಭ್ಯವಿರುವ 'ಮಂತ್ರಗೋಪ್ಯದ ಟೀಕೆಯ' ಒಂದು ಹಸ್ತಪ್ರತಿಯಲ್ಲಿ ಇದರ ಕರ್ತೃ 'ಕಲ್ಲುಮಂಟಪದ ಪ್ರಭುದೇವ' ಎಂದು ಕರೆದಿರುವುದು ಅನ್ವರ್ಥವೆನಿಸುತ್ತದೆ.[೪೯] ಕಲ್ಲುಮಠದ ಪ್ರಭುದೇವರು ಪ್ರೌಢದೇವರಾಯನ ಕಾಲದಲ್ಲಿದ್ದು ತಮ್ಮ ಮಠದ ಇತರ ಕಾರ್ಯಗಳ ಜೊತೆಗೆ

ವೀರಶೈವ ಧರ್ಮಗ್ರಂಥಗಳಾದ ಲಿಂಗಲೀಲಾ ವಿಲಾಸ ಚರಿತ್ರ, 'ಪ್ರಭುದೇವರ ಮಂತ್ರಗೋಪ್ಯದ ಟೀಕೆ' ಎಂಬ ಗ್ರಂಥಗಳನ್ನು ಇದೇ ಮಠದಲ್ಲಿದ್ದುಕೊಂಡು ರಚಿಸಿದಂತೆ ತೋರುತ್ತದೆ.

ಕಾಲಾಂತರದಲ್ಲಿ ಈ ಮಠದ ಅಧಿಪತಿಗಳು ತಮ್ಮ ಕಾರ್ಯಸ್ಥಾನವನ್ನು (ವಿಜಯನಗರ ಹಾಳಾದ ಮೇಲೆ) ಹಂಪಿಯಿಂದ ಕಂಪ್ಲಿಗೆ ಸ್ಥಳಾಂತರಿಸಿದಂತೆ ತಿಳಿದುಬರುತ್ತದೆ. ವೀರಶೈವ ಧರ್ಮ ಕಟ್ಟುವಲ್ಲಿ ಕಲ್ಲುಮಠದ ಪ್ರಭುದೇವರ ಪಾತ್ರ ಅಮೋಘವಾದದ್ದು.

**೯. ಕೊಟ್ಟೂರು ಸ್ವಾಮಿ ಮಠ :** ಕೊಟ್ಟೂರು ಸ್ವಾಮಿ ಮಠವು ವಿರೂಪಾಕ್ಷ ದೇವಾಲಯದ ಎಡಭಾಗದಲ್ಲಿ ಅಂದರೆ ತುಂಗಭದ್ರಾ ನದಿಯ ಬಲದಂಡೆಯ ಮೇಲೆ ಉತ್ತರಾಭಿಮುಖವಾಗಿದೆ. ಈ ಮಠವು ಕೊಟ್ಟೂರು ಸ್ವಾಮಿಗಳಿಂದ ಸ್ಥಾಪಿತವಾಗಿರುವ ಸಾಧ್ಯತೆ ಇದೆ(ಇವರು ಬಹುಶಃ ಪ್ರೌಢದೇವರಾಯನ ಕಾಲದಲ್ಲಿರಬಹುದು). ಈಚೆಗೆ ಕಾಮಿಡಿಹಳ್ಳಿಯಲ್ಲಿ ದೊರಕಿದ ಶಾಸನದ ಪ್ರಕಾರ ತೋಂಟದ ಸಿದ್ಧಲಿಂಗಯತಿಗಳು ಕ್ರಿ.ಶ.೧೫೨೧ ಏಪ್ರಿಲ್ ೧೭ರಂದು ಹಂಪಿಗೆ ಬಂದು ವಿರೂಪಾಕ್ಷನ ದರ್ಶನ ಪಡೆದರೆಂದು ಇದರ ಸವಿನೆನಪಿಗಾಗಿ ಅರಸ ಕೃಷ್ಣದೇವರಾಯನ ರಾಣಿ ಚಿನ್ನದೇವಿಯು ಕಗ್ಗೆರೆಯ ಸಮೀಪದ ಕಾಮಿಡಿ ಹಳ್ಳೀಯನ್ನು ದಾನವಾಗಿ ನೀಡಿರುವ ವಿಷಯ ತಿಳಿದುಬರುತ್ತದೆ.[೫೦] ಅಂದರೆ ತೋಂಟದ ಸಿದ್ಧಲಿಂಗಯತಿಗಳು ಹಂಪಿಗೆ ಬಂದು(ಕ್ರಿ.ಶ.೧೫೨೧) ತುಂಗಭದ್ರಾ ನದಿದಂಡೆಯ ಕೊಟ್ಟೂರುಸ್ವಾಮಿಮಠದಲ್ಲಿ ತಪೋನುಷ್ಠಾನ ಮಾಡಿದರೆಂಬ ಪ್ರತೀತಿ ಈಗಲೂ ಸ್ಥಳೀಯರಲ್ಲಿದೆ. ಮಠದ ದಾಖಲೆಗಳ ಪ್ರಕಾರ 'ಕ್ರಿ.ಶ.೧೫೧೮ ರಿಂದ ಆರಂಭವಾಗುವ ಗುರುಪರಂಪರೆಯಲ್ಲಿ ಮೊದಲಿಗರು ಕಪ್ಪಿನ ಚನ್ನಬಸವಸ್ವಾಮಿಗಳು'[೫೧] ಇವರು ತೊಂಟದ ಸಿದ್ಧಲಿಂಗಯತಿಗಳು ಹಂಪಿಗೆ ಬೇಟಿಯಿತ್ತಾಗ ಬಹುಶಃ ಮಠದ ಉತ್ತರಾಧಿಕಾರಿಗಳಾಗಿರಬಹುದಾದ ಸಾಧ್ಯತೆ ಇದೆ. ತೋಂಟದ ಸಿದ್ಧಲಿಂಗಯತಿಗಳಿಂದ ಜಂಗಮದೀಕ್ಷೆ ಪಡೆದು ಮಠಾಧ್ಯಕ್ಷರಾದರೆಂಬ ಅಂಶ ಸ್ಥಳೀಯರಿಂದ ತಿಳಿದುಬರುತ್ತದೆ. ಬಹುಶಃ ಈ ಮಠವು ವಾಸ್ತುವೈಶಿಷ್ಟ್ಯ ಗಮನಿಸಿ ಹೇಳುವುದಾದರೆ ಪ್ರೌಢದೇವರಾಯನ ಕಾಲದಲ್ಲಿ ನಿರ್ಮಾಣವಾಗಿರಬೇಕೆನಿ ಸುತ್ತದೆ. ಕ್ರಿ.ಶ.೧೬೪೮ರಲ್ಲಿದ್ದ ಈ ಮಠದ ಶ್ರೀ ಮರಿಮಹಾಂತ ಸ್ವಾಮಿಗಳಿಗೆ ವಿದ್ಯಾನಗರ ಆನೆಗೊಂದು ಮಹಾರಾಜ ವೆಂಕಟಪತಿರಾಯರು ಬಹು ಭಕ್ತಿಯಿಂದ ಹಲವು ಗ್ರಾಮಗಳನ್ನು ಭೂಮಿ ಮತ್ತು ಇತರ ರುಸುಮುಗಳನ್ನು ದಾನವಾಗಿ ಕೊಟ್ಟಂತೆ ತಿಳಿದುಬರುತ್ತದೆ.[೫೨] ಮಠದ ಮಂಟಪದಲ್ಲಿ ಪೂರ್ವಾಭಿಮುಖವಾಗಿ ಒಂದೆರಡು ಹಿಂದಿನ ಸ್ವಾಮಿಗಳ ಗದ್ದುಗೆಗಳಿವೆ.

ಪ್ರಸ್ತುತ ಇರುವ ಮಠಾಧೀಶರಾದ ಶ್ರೀ ಸಂಗನ ಬಸವಸ್ವಾಮಿಗಳು ಹೊಸಪೇಟೆಯ ಕೊಟ್ಟೂರುಸ್ವಾಮಿ ಮಠದಲ್ಲಿದ್ದು "ಮಹಾಕವಿ ಹರಿಹರ ಸ್ಮಾರಕ ಸಂಶೋಧನಾ ಕೇಂದ್ರ"ವನ್ನು ಪ್ರಾರಂಭಿಸಿ ಆ ಮೂಲಕ ಪ್ರಾಚೀನ ಸಾಹಿತ್ಯ, ವೀರಶೈವ ಪುಣ್ಯ ಪುರುಷರ ಸಾಧನೆ, ಐತಿಹಾಸಿಕ ಕೃತಿಗಳನ್ನು ಪ್ರಕಟಿಸುತ್ತಾ ಬಂದಿದ್ದಾರೆ. ಹಂಪಿ ಶ್ರೀಮಠವನ್ನು ಜೀರ್ಣೋದ್ಧಾರ ಮಾಡಿಸಿದ್ದಾರೆ. ಹಂಪಿಯ ಜಾತ್ರೆಯ ಈ

ಸಂದರ್ಭದಲ್ಲಿ ಹಂಪಿಯ ಮಠದಲ್ಲಿ ಉಚಿತ ಸಾಮೂಹಿಕ ವಿವಾಹ, ಧಾರ್ಮಿಕ ಗೋಷ್ಠಿ ನಡೆಸುವುದರ ಮೂಲಕ ಅಭಿವೃದ್ಧಿಯತ್ತ ಸಾಗುತ್ತಾ ಅವಿಶ್ರಾಂತವಾಗಿ ಶ್ರಮಿಸುತ್ತಿದ್ದಾರೆ.

ಈ ಮಠದ ಕಟ್ಟಡ ಪುನರ್ರಚಿತವಾಗಿದ್ದು, ಇದು ಹಂಪಿಯ ರಥ ಬೀದಿಯಲ್ಲಿ ತುಂಗಭದ್ರನದಿಯ ಎಡ ದಂಡೆಯ ಮೇಲಿದೆ. ಮಠದ ಆವರಣ ವಿಶಾಲವಾಗಿದೆ.

೧೦. ಮಹಾಲಿಂಗದೇವರ ಗವಿ : ಏಕೋತ್ತರ ಶತಸ್ಥಲದ ಕರ್ತೃ ಮಹಾಲಿಂದೇವ ವಾಸವಾಗಿದ್ದ ಗವಿ ಇದಾಗಿದೆ. ಪ್ರಕೃತಿ ಸಹಜ ಗವಿಯಲ್ಲಿ ಈತ ವಾಸವಾಗಿದ್ದನೆಂಬುದರಲ್ಲಿ ಅನುಮಾನವಿಲ್ಲ. ಈ ಗವಿಯಲ್ಲಿ ಶಿವಲಿಂಗ, ಷಟ್‌ಸ್ಥಲ ಚಿಹ್ನೆ ಇರುತ್ತದೆ. ಇವುಗಳ ಮುಭಾಗದಲ್ಲಿ "ಶ್ರೀ ಮಹಾಲಿಂಗದೇವರು"[೫೩] ಎಂದು ಶಾಸನದ ಉಲ್ಲೇಖವಿದೆ. ಈ ಗವಿಯ ಎದುರುಗಡೆ ಗಣೇಶನ ದೇವಾಲಯವಿದೆ. ಇದು ಮಠದ ಲಕ್ಷಣ ಹೊಂದಿದ್ದು, ಮಹಾಲಿಂಗದೇವ ವಚನಗಳನ್ನು ಏಕೋತ್ತರ ಶತಸ್ಥಲಗಳಾಗಿ ಹೊಂದಿಸಿ ಸಂಕಲಿಸಿದ ಮೇಲೆ ಅದನ್ನು ಮೆಚ್ಚಿದ ಪ್ರೌಢದೇವರಾಯ ಮಹಾಲಿಂಗದೇವನಿಗೆ ಮಠ ಕಟ್ಟಿಸಿ ಕೊಟ್ಟಂತಿದೆ. ನಂತರದ ಅರಸರ ಕಾಲದಲ್ಲಿ ಮಹಾಲಿಂಗದೇವ ಐಕ್ಯ ಹೊಂದಿದ ಮೇಲೆ ಅಲ್ಲಿ ಗಣೇಶ ಶಿಲ್ಪವನ್ನು ಕೆತ್ತಿಸಿ ಗಣೇಶ ದೇವಾಲಯವಾಗಿ ಪರಿವರ್ತಿಸಿದಂತಿದೆ. ಈ ದೇವಾಲಯದ ಕಂಬಗಳಲ್ಲಿ ಕೈಯಲ್ಲಿ ರುದ್ರಾಕ್ಷಿ ಮಾಲೆ ಹಿಡಿದು ಲಿಂಗಪೂಜಾನುಷ್ಠಾನಗೊಂಡ ಸ್ವಾಮಿಗಳ ಶಿಲ್ಪಗಳಿವೆ. ಆದ್ದರಿಂದ ಇದು ಮೊದಲು ಮಹಾಲಿಂಗದೇವನ ಮಠವಾಗಿದ್ದಿರಬಹುದಾದ ಸಾಧ್ಯತೆ ಇದೆ. ಮಹಾಲಿಂಗದೇವರ ಗವಿ ಬಂಡೆಯ ದಕ್ಷಿಣ ದಿಕ್ಕಿಗೆ "ಶ್ರೀ ಪೂಜಾದನು ತೀರ್ಥವಿದೆ".[೫೪] ಈ ತೀರ್ಥದ ನೀರನ್ನೇ ಮಹಾಲಿಂಗ ದೇವ ಲಿಂಗಪೂಜೆಗೆ ಉಪಯೋಗಿಸುತ್ತಿದ್ದಂತೆ ತೋರುತ್ತದೆ. ಮಹಾಲಿಂಗದೇವರ ಗವಿ ಮತ್ತು ಮಠವು ರಜತಗಿರಿಯ ಪಶ್ಚಿಮ ಭಾಗದಲ್ಲಿದೆ. ಈಗ ಜೈನರು ಇಡೀ ರಜತಗಿರಿ ಪರ್ವತವನ್ನು ವಶಪಡಿಸಿಕೊಂಡಿದ್ದಾರೆ.

೧೧. ಹಿರೇಮಠ : ಹೆಸರೇ ಹೇಳುವಂತೆ ಹಂಪಿಯಲ್ಲಿರುವ ವೀರಶೈವ ಮಠಗಳಲ್ಲಿಯೇ ಅತ್ಯಂತ ದೊಡ್ಡದು, ವಿಶಾಲವೂ ಆದ ಮಠವೆಂದರೆ ಹಿರೇಮಠವೇ ಆಗಿದೆ. ಹಂಪಿಯ ಉದ್ದಾನ ವೀರಭದ್ರ ದೇವಾಲಯದ ಎಡಭಾಗದ ಹೊಲದಲ್ಲಿ(ಚಂಡಿಕೇಶ್ವರ ದೇವಾಲಯದ ಹಿಂಭಾಗದ ಹೊಲದಲ್ಲಿ) ೬೦೦ ಕಂಬಗಳನ್ನು ಹೊಂದಿದ ದೊಡ್ಡ ಮಂಟಪ ಕಂಡುಬರುತ್ತದೆ. ಇದುವೇ ಹಿರೇಮಠವೆಂದು ವಿದ್ವಾಂಸರು ಗುರುತಿಸಿದ್ದಾರೆ. ಇದು ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿರಬಹುದಾದರೂ, ಆ ಕುರಿತು ಯಾವುದೇ ಆಧಾರಗಳು ದೊರೆಯುವುದಿಲ್ಲ. ಕ್ರಿ.ಶ.೧೫೪೫ರ(ಚಂಡಿಕೇಶ್ವರ ದೇವಾಲಯದ) ಸದಾಶಿವರಾಯನ ಕಾಲದ ಶಾಸನಗಳು "ಕೃಷ್ಣಾಪುರದ ಪೇಟೆಯ ಹಿರಿಯಕಾಲುವೆಯ ಛತ್ರದ ಬಳಿಯಲು ಕಟಿಸ್ತಂಥಾ..."[೫೫] ಎಂದೂ "ಕೃಷ್ಣಾಪುರದ ಪೇಟೆಯ ಹಿರಿಯ ಕಾಲುವೆಯ ಛತ್ರದ ಬಳಿಯಲೂ ಕಟಿಸ್ತಂಥಾ ಮುಂದುವೀರಂಣನ ಪ್ರತಿಷ್ಟೆಯನೂ...."[೫೬] ಎಂದು ದಾಖಲಿಸುತ್ತವೆ. ಈ ಎರಡೂ

ಶಾಸನಗಳು ಮೊದಲು ಛತ್ರವೆಂದು ದಾಖಲಿಸುತ್ತವೆ. ಛತ್ರವೆಂದರೆ "ಉಚಿತವಾಗಿ ಊಟ, ವಸತಿಗಳನ್ನು ಒದಗಿಸುವ ಸ್ಥಳ, ಧರ್ಮಸತ್ರ"[೫೭] ಅಂದರೆ ಮಠವೆಂದು ಅರ್ಥ. ಛಾತ್ರಾದಿಗಳ ನಿಲಯವನ್ನು 'ಮಠ' ಎಂದು ಅಮರ ಸಿಂಹನ ಅಮರಕೋಶ ಹೇಳುತ್ತದೆ.[೫೮] 'ಛಾತ್ರ' ಶಿಷ್ಯ; ವಿದ್ಯಾರ್ಥಿ;[೫೯] ಎಂದರ್ಥ. ಅಮರ ಸಿಂಹನ ಪ್ರಕಾರ ಛಾತ್ರಾದಿಗಳು ವಾಸಿಸುವ ನಿಲಯಗಳೇ ಮಠಗಳು. ಹೀಗಾಗಿ ಸದಾಶಿವರಾಯನ ಶಾಸನಗಳು ದಾಖಲಿಸುವ ಛತ್ರ ಹಿರೇಮಠವೇ ಆಗಿದೆ. ಸದಶಿವರಾಯನ ದಳವಾಯಿ ಜಂಗಮಯ್ಯನು ಛತ್ರದ ಹತ್ತಿರ ದೇವಾಲಯ ಕಟ್ಟಿಸಿ ಅದಕ್ಕೆ ದಾನ ನೀಡಿದ್ದು ಮತ್ತು ಛತ್ರಕ್ಕೆ ವ್ಯಾಪಾರಿಗಳು ದಾನ ನೀಡಿದ್ದನ್ನು ಅಲ್ಲದೆ ಉದ್ದಾನ ವೀರಭದ್ರ ದೇವಾಲಯದ ಶಾಸನವು ಛತ್ರದ ಬಳಿಯಲ್ಲಿ ಮುದು ವೀರಣ್ಣನನ್ನು ಪ್ರತಿಷ್ಠಾಪಿಸಿ ಅದರ ನೈವೇದ್ಯಕ್ಕೆ ದಾನ ಮತ್ತು ಛತ್ರದ ದಿನದ ವೆಚ್ಚಕ್ಕಾಗಿ ನಾನಾ ಹೇರಿನ ವ್ಯಾಪಾರಿಗಳು ದಾನಬಿಟ್ಟಿರುವ ವಿಷಯವನ್ನು ಉಲ್ಲೇಖಿಸಿವೆ. ಬಹುಶಃ ಈ ಮಠ (ಛತ್ರ)ದಲ್ಲಿ ದಿನನಿತ್ಯ ದಾಸೋಹ ನಡೆಯುತ್ತಿರಬಹುದಾಗಿದೆ. ವೀರಭದ್ರ ದೇವಾಲಯವು ವೀರಶೈವ ಮಠದ ಸಂಕೀರ್ಣದಲ್ಲಿ ಒಂದು ವಿಶಿಷ್ಟವಾದ ಮತ್ತು ಅವಶ್ಯವಾದ ಸ್ಥಾನವನ್ನು ಹೊಂದಿರುತ್ತಿತ್ತು. ಈ ದೇವಾಲಯದ ಪಕ್ಕದಲ್ಲಿಯೇ ವೀರಶೈವ ಮಠ ನಿರ್ಮಾಣ ಆಗಿರುವ ಬಗ್ಗೆ ಅಲ್ಲಿ ಅಳಿದುಳಿದಿರುವ ಛಾವಣಿಯ ರಚನಾ ಕ್ರಮ ಅದನ್ನು ಸಮರ್ಥಿಸುತ್ತದೆ. ಆ ಕಟ್ಟಡವು ಮಠದ ಒಂದು ಭಾಗವಾಗಿದ್ದು ನೂರಾರು ಭಕ್ತರಿಗೆ ಅನ್ನದಾಸೋಹದ ಉದ್ದೇಶಕ್ಕೆ ಉಪಯೋಗವಾಗುತ್ತಿದ್ದಿರಬೇಕು[೬೦] ಎನಿಸುತ್ತದೆ.

ಹಿರಿಯ ಮಠದ ಧರ್ಮಾಧಿಕಾರಿ ಸಿದ್ಧವೀರೇಶ್ವರ ಶಿಷ್ಯನಾಗಿದ್ದ ವಿರೂಪಾಕ್ಷ ಪಂಡಿತನು ಆ ಮಠದಲ್ಲಿರುವಾಗಲೇ 'ಚನ್ನಬಸವ ಪುರಾಣ' ರಚಿಸಿ, ಕ್ರಿ.ಶ.೧೫೮೫ರಲ್ಲಿ ಅದನ್ನು ಪೂರ್ಣಗೊಳಿಸಿದಂತೆ ಹೇಳಿಕೊಂಡಿದ್ದಾನೆ. ಈತನು ತನ್ನ ಚನ್ನಬಸವ ಪುರಾಣದಲ್ಲಿ

"ಪರಮಶಾಂತಿಯ ಮನೆ; ಸದಯವೆ ಪರಿಕರ ಮಾಗ
ಲಿರದೆ ಸತಿಯೇ ಮೋಕ್ಷ ಲಕ್ಷ್ಮಿ ಮಕ್ಕಳೆ ಶಿಷ್ಯರಾಗಿ ಸಂಸಾರಿಯಂತೆ
ಧರೆಯೊಳಗೆಸೆವ ವಿದ್ಯಾನಗರಿಯೊಳ್ ಮೆರೆವ
ಹಿರಿಯ ಮಠದೊಳ್ ಮಹಾಚರಲಿಂಗ ಸಹಿತ ಸ
ದ್ಗುರುವರಂ ಸಿದ್ಧವೀರೇಶನೊಪ್ಪಿರ್ದನಾ ಯತಿಯದೇಂ ಸಾಮಾನ್ಯನೇ"[೬೧]

ಎಂದು ಉಲ್ಲೇಖಿಸಿದ್ದಾನೆ. ಕವಿಯ ಪ್ರಕಾರ ವಿದ್ಯಾನಗರವು ಪರಮ ಶಾಂತಿಯು ನೆಲೆಸುವ ಮನೆ. ದಯೆ ಪೂಜಾ ಸಾಮಾಗ್ರಿ. ಶಿವಲಿಂಗ ದ್ಯಾನವೇ ಮನೆ ಕೆಲಸ. ಮೋಕ್ಷ ಲಕ್ಷ್ಮಿ ಹೆಂಡತಿ, ಮಠದ ಶಿಷ್ಯರೇ ಮಕ್ಕಳು. ಇದು ಸಿದ್ಧವೀರೇಶಯತಿಯ ಸಂಸಾರವಾಗಿದೆ. ಈ ಸಿದ್ಧವೀರೇಶ್ವರನ ಶಿಷ್ಯನೇ ವಿರೂಪಾಕ್ಷ ಪಂಡಿತನಾಗಿದ್ದಾನೆ. ಹಿರಿಯ ಮಠ (ಹಿರೇಮಠ)ಕ್ಕೆ ವಿರೂಪಾಕ್ಷ ಪಂಡಿತ ಪೀಠಾಧ್ಯಕ್ಷನಾಗಿದ್ದನೆಂದು ತಿಳಿದುಬರುತ್ತದೆ.

೭೦೦ಕ್ಕೂ ಹೆಚ್ಚು ಕಂಬಗಳನ್ನು ಹೊಂದಿರುವ ಈ ಮಠವು ೬ ಅಂಕಣಗಳಲ್ಲಿ ವಿಸ್ತರಿಸಿ ೩ ಭಾಗ ಹೊಂದಿದೆ. ೨ ಅಂಕಣಗಳ ಮಧ್ಯೆ ಗಾಳಿ-ಬೆಳಕು ಬರಲು ೧ ಅಂಕಣದಷ್ಟು ಜಾಗಬಿಟ್ಟು ಈ ೨ ಅಂಕಣ ಜೋಡಿಸಲು ಮಹರಡಿ ರೀತಿಯಲ್ಲಿ ಒಂದು ಅಂಕಣವನ್ನು ಕಟ್ಟಲಾಗಿದೆ. ಮೇಲ್ಛಾವಣಿಗೆ ಕಲ್ಲು ಬಂಡೆ (ಹಾರೆ)ಗಳನ್ನು ಹಾಕಿ ಅದರ ಮೇಲೆ ಗಾರೆ ಹಾಕಲಾಗಿದೆ. ಹಿಂಭಾಗದ ಮೂರು ಅಂಕಣಗಳಿಗೆ ಮಹರಡಿ ತಗ್ಗಿಸಿ ಹೊಂದಿಸಲಾಗಿದೆ. ಪೂರ್ವಾಭಿಮುಖವಾಗಿರುವ ಈ ಮಠದ ಮುಂಭಾಗದಲ್ಲಿ ಅರ್ಧಕ್ಕೆ ನಿಂತಿರುವ ಕಲ್ಲು ಕಂಬಗಳನ್ನು ಗಮನಿಸಿದರೆ ಮಠದ ಮೇಲ್ಛಾವಣೆಯ ವಿಸ್ತೀರ್ಣ ಈ ಕಂಬಗಳ ತನಕ ಇದ್ದು ಬಹುಶಃ ಅದು ಕುಸಿದುಬಿದ್ದು ಹಾಳಾಗಿರುವಂತೆ ಕಂಡುಬರುತ್ತದೆ. ಇದರ ಮುಂಭಾಗದಲ್ಲಿ ಒಂದು ಗದ್ದುಗೆಯಿದ್ದು, ಅದು ಬಹುಶಃ ಮಠದ ಸ್ವಾಮಿಗಳದ್ದಾಗಿರಬಹುದು.

**ಸರ್ವಾಂಗ ಲಿಂಗ**

ಹಿರೇ (ಈ) ಮಠದ ಆವರಣದಲ್ಲಿಯೇ ಇದ್ದ ಉದ್ದಾನ ವೀರಭದ್ರ ದೇವಾಲಯದ ಗರ್ಭಗೃಹ ದ್ವಾರದ ಎಡಭಾಗದಲ್ಲಿ ವೈಶಿಷ್ಟ್ಯಪೂರ್ಣವಾದ ಒಂದು ಶಿಲಾಲಿಂಗವಿದೆ. ಇದು ವೀರಶೈವ ಧರ್ಮದ ಷಟ್ಚಕ್ರಸಿದ್ಧಾಂತವನ್ನು ನಿರೂಪಿಸುವ ತ್ರಿಕೋನಾಕೃತಿಯ ಮತ್ತು ಒಂಭತ್ತು ಚಿತ್ರವನ್ನೊಳಗೊಂಡಿರುವ ಲಿಂಗವಾಗಿದೆ. ಈ ಷಟ್ಚಕ್ರ ಸಿದ್ಧಾಂತದ ವಿಶ್ಲೇಷಣೆಗೆ ವಿರೂಪಾಕ್ಷ ಪಂಡಿತ ತನ್ನ ಚನ್ನಬಸವ ಪುರಾಣದಲ್ಲಿ ಒಂದು ಸಂಧಿಯನ್ನೇ ಮೀಸಲಿರಿಸಿದ್ದಾನೆ. ಇದು ವೀರಶೈವ ಧರ್ಮ ಪ್ರತಿಪಾದಿಸಿರುವ ಷಟ್ಚಕ್ರ-ಷಟ್‌ಸ್ಥಲ ಸಿದ್ಧಾಂತವನ್ನು ರೇಖಾರೂಹಗಳ ಮೂಲಕ ನಿರೂಪಿಸುವ ಸರ್ವಾಂಗ ಲಿಂಗವಾಗಿದೆ. ಕಪ್ಪನೆಯ ಶಿಲೆಯಲ್ಲಿ ನಿರ್ಮಿತವಾಗಿರುವ ಒಂದು ಸುಂದರ ಶಿಲ್ಪ ಕಲಾ ಕೃತಿಯಾಗಿದೆ.[೨]

ಇದರ ಬಾಣಭಾಗವು (ಪ್ರತಿಮಾಶಾಸ್ತ್ರದ ಪ್ರಕಾರ, ರುದ್ರಭಾಗವು) ಸಾಮಾನ್ಯವಾಗಿ ಎಲ್ಲೆಡೆ ಕಾಣಬರುವಂತೆ ದುಂಡಗೆ ವರ್ತುಲಾಕಾರದಲ್ಲಾಗಲೀ ಅಥವಾ ಚಪ್ಪಟೆಯಾದ ಪಟ್ಟಿಗಳ ಆಕಾರದಲ್ಲಾಗಲೀ ಇರುವುದಿಲ್ಲ. ಅದರ ತಳವಿನ್ಯಾಸವು ತ್ರಿಕೋಣಾಕಾರದಲ್ಲಿದ್ದು ಮೂರು ಚಪ್ಪಟೆಯಾದ ಮತ್ತು ಅಗಲವಾದ ಪಟ್ಟಿಗಳನ್ನು (ಮುಖಗಳನ್ನು) ಹೊಂದಿರುತ್ತದೆ. ಆ ಮೂರು ಚಪ್ಪಟೆಯಾದ ಪಟ್ಟಿಗಳ ಮೇಲೆ (ಮುಖಗಳ ಮೇಲೆ) ಚಕ್ರಗಳನ್ನು, ಒಂದೊಂದರ ಮೇಲೆ ಮೂರು ಚಕ್ರಗಳಂತೆ, ಒಟ್ಟು ಒಂಭತ್ತು ಚಕ್ರಗಳ ನಕ್ಷೆಗಳನ್ನು, ರೇಖಾಚಿತ್ರಗಳೋಪಾದಿಯಲ್ಲಿ ವಿನೂತನ ರೀತಿಯಲ್ಲಿ ಬಿಡಿಸಲಾಗಿದೆ. ಒಂದೊಂದು ಪಟ್ಟಿಯನ್ನು (ಮುಖ) ಎರಡು ಭಾಗಗಳೆಂದು ಭಾವಿಸಿ, ಕೆಳಗಿನ ಅರ್ಧಭಾಗದಲ್ಲಿ ಒಂದರ ಪಕ್ಕದಲ್ಲಿ ಒಂದರಂತೆ ಎರಡು ಚಕ್ರಗಳನ್ನು ಮತ್ತು ಮೇಲಿನ ಅರ್ಧಭಾಗದಲ್ಲಿ ಒಂದೇ ಒಂದು ದೊಡ್ಡದಾದ ಚಕ್ರಾಕಾರವನ್ನು ಬಿಡಿಸಿರುವರು.

ಆ ಮೂರು ಚಪ್ಪಟೆಯಾದ ಪಟ್ಟಿಗಳ(ಮುಖಗಳು)ನ್ನು ಒಂದರಲ್ಲಿ ೨ ಚಕ್ರಗಳನ್ನು ರಚಿಸಲಾಗಿದೆ. ಆ ಆರು ಚಕ್ರಗಳಲ್ಲಿ ವೀರಶೈವ ಸಿದ್ಧಾಂತವು ಪ್ರತಿಪಾದಿಸಿರುವ ಮೋಕ್ಷ ಸಾಧನೆಗೆ ಅನುಕೂಲವಾದ

ಆರು ಷಟ್ಚಗಳು ಅಥವಾ ಸೋಪಾನಗಳು ಚಿತ್ರಿತವಾಗಿವೆಯೆಂದು ಹೇಳಬಹುದು. ಆ ಲಿಂಗವು ಸರ್ವಾಂಗ ಲಿಂಗವಾಗಿದೆ. ಅಂದರೆ ಸರ್ವ ಅಂಗಸ್ಥಲ ಮತ್ತು ಸರ್ವಲಿಂಗಸ್ಥಲಗಳನ್ನು ಪ್ರತಿನಿಧಿಸುವ ಹಾಗೂ ನಿರೂಪಿಸುವ ಲಿಂಗವಾಗಿದೆ. ಆ ಚಕ್ರಗಳೆಲ್ಲವೂ ವಿವಿಧ ಗುಣ ವಿಶೇಷಗಳನ್ನು ಪ್ರತಿಪಾದಿಸುತ್ತಿರುವುದರಿಂದ ಅವುಗಳಲ್ಲಿ ವಿಭಿನ್ನತೆಗಳು ಕಾಣಬರುತ್ತವೆ.[೬೩]

ಸರ್ವಾಂಗ ಲಿಂಗದ ಶಿರೋಭಾಗಗಳು(ಮೂರು ಚಪ್ಪಟೆ ಪಟ್ಟಿಗಳ ಮೇಲಿನ ಭಾಗ) ಅರ್ಧವೃತ್ತಾಕಾರ ದಲ್ಲಿ ಕೊನೆಗೊಂಡಿವೆ. ಅವುಗಳ ಕಾರಣದಿಂದಾಗಿ, ಆ ಲಿಂಗದ ಶಿರೋಭಾಗವು ಒಂದು ಅಸಾಮಾನ್ಯ, ಅನುಪಮ ಆಕಾರವನ್ನು ಹೊಂದಿರುತ್ತದೆ. ಅಂದರೆ ಅದು ಕೂಡ ಬಾಗಿದ ಭುಜಗಳುಳ್ಳ ತ್ರಿಕೋಣಾಕಾರದಲ್ಲಿದೆ. ಆ ಶಿರೋಭಾಗದ ಮೇಲೆ ಅತಿ ಜಾಣ್ಮೆಯಿಂದ ೩೬ ಬುದ್ಬುದಾಕಾರಗಳನ್ನು ಕಂಡರಿಸಲಾಗಿದೆ.[೬೪] ಹೆಸರೇ ಹೇಳುವಂತೆ ಶಿಲಾಲಿಂಗ ತುಂಬೆಲ್ಲಾ ಸಣ್ಣಸಣ್ಣ ಲಿಂಗಗಳನ್ನು ಕಂಡರಿಸಲಾಗಿದೆ. ಆದ್ದರಿಂದ ಇದನ್ನು ಸರ್ವಾಂಗ ಲಿಂಗವೆಂದು ಕರೆಯಲಾಗುತ್ತದೆ.

ಈ ಸರ್ವಾಂಗ ಲಿಂಗದ ನಿರ್ಮಾಣ ಕಾಲವನ್ನು ಖಚಿತವಾಗಿ ಹೇಳಲು ನಿರ್ದಿಷ್ಟ ಆಧಾರಗಳಿಲ್ಲ. ಮಠದ ನಿರ್ಮಾಣದ ಸಂದರ್ಭದಲ್ಲಿ ಇದು ನಿರ್ಮಾಣವಾಗಿರದಿದ್ದರೂ ಖಚಿತವಾಗಿ ವಿರೂಪಾಕ್ಷ ಪಂಡಿತನ ಕಾಲದಲ್ಲಿ ಆಗಿರುವ ಸಾಧ್ಯತೆ ಇದೆ. ಸರ್ವಾಂಗ ಲಿಂಗದ ವಿಶ್ಲೇಷಣಾತ್ಮಕ ವಿವರಣೆ ಮೊದಲು ಬರುವುದು ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣದಲ್ಲಿ. ಆದ್ದರಿಂದ ವಿರೂಪಾಕ್ಷ ಪಂಡಿತನೇ ತನ್ನ ಶಿಷ್ಯರಿಗೆ ಮತ್ತು ಮಠದ ಭಕ್ತರಿಗೆ ಷಟ್ಚಕ್ರ ಮತ್ತು ಷಟ್‌ಸ್ಥಲ ಸಿದ್ಧಾಂತದ ಮಹತ್ವ ತಿಳಿಯಲು ಈ ಸರ್ವಾಂಗಲಿಂಗ ನಿರ್ಮಿಸಿ ಪ್ರತಿಷ್ಠಾಪಿಸಿರಬೇಕೆನಿಸುತ್ತದೆ. ಇದು ಷಟ್‌ಸ್ಥಲ ಸಿದ್ಧಾಂತವನ್ನು ಸರಳವಾಗಿ ತಿಳಿಸುವ ಸಾಧನವಾಗಿದೆ.

### ಯೋಗಾಂಗಲಿಂಗ

ಉದ್ದಾನ ವೀರಭದ್ರದೇವಾಲಯದ ಪಾಳಿಯ ದ್ವಾರಬಾಗಿಲು ದಾಟುತ್ತಿದ್ದಂತೆಯೇ ವೀರಭದ್ರ ಮೂರ್ತಿಗೆ ಎದುರಾಗಿ ಸ್ಥಾಪಿತವಾಗಿರುವ ಕಲ್ಲಿನ ದೀಪಸ್ತಂಭದ ದಕ್ಷಿಣ ಮುಖದ ಮೇಲೆ ಲಿಂಗಕ್ಕೆ ಲಿಂಗವೇ ಪೀಠವಾಗಿರುವ ಶಿಲ್ಪಾಕೃತಿಯನ್ನು ಕೆತ್ತಲಾಗಿದೆ. ದೇವಾಲಯ ನಿರ್ಮಾಣವಾದಾಗಲೇ ಈ ದೀಪಸ್ತಂಭವು ನಿರ್ಮಾಣವಾದಂತೆ ಕಂಡುಬರುತ್ತದೆ. ಲಿಂಗದ ಕೆಳಗಿನ ಭಾಗದಲ್ಲಿ ಆರುದಳಗುಳ್ಳ ಒಂದು ಕಮಲದ(?) ಹೂವನ್ನು ತೋರಿಸಲಾಗಿದೆ. ಆನಂತರ ಅದರ ಮೇಲ್ಭಾಗದಲ್ಲಿ ಒಂದು ಪೀಠಸ್ಥ ಶಿವಲಿಂಗವನ್ನು ಕಡೆಯಲಾಗಿದ್ದು, ಅದು ಇನ್ನೊಂದು ಪೀಠಸ್ಥ ಶಿವಲಿಂಗಕ್ಕೆ ಆಧಾರವಾಗಿರುವಂತೆ ಒಂದರ ಮೇಲೊಂದಾಗಿ ಕಾಣುವಂತೆ ನಿರ್ಮಿಸಲಾಗಿದೆ.

ಲಿಂಗದ ಮೇಲೆ ಲಿಂಗ ಸ್ಥಾಪಿತದ ಉದ್ದೇಶ ಕುರಿತು ರಾಘವಾಂಕನ ಸಿದ್ಧರಾಮ ಚರಿತೆಯಲ್ಲಿ ವಿಶ್ಲೇಷಿಸಲಾಗಿದೆ.

“ಕ್ಷೇಮತರವಾಗಿ ಲಿಂಗದ ಮೇಲೆ ಲಿಂಗಮಂ
ಪ್ರೇಮದಿಂದಂ ಪ್ರತಿಷ್ಠಿಸು ಮಗನೆಯೆಂದಡೆಲೆ
ಸೋಮಾವ ತಂಸನೆ ಪ್ರತಿಷ್ಠೆಗಾಚಾರ್ಯದಾರಾದಪರು ಹೇಳೆಂದನು”[೬೫]

ಸಿದ್ಧರಾಮನಿಗೆ ಶ್ರೀಶೈಲದ ಮಲ್ಲಿಕಾರ್ಜುನು ಲಿಂಗದ ಮೇಲೆ ಲಿಂಗ ಸ್ಥಾಪಿಸುವಂತೆ ನಿರ್ದೇಶಿಸಿದ ಮೇಲೆ ಸೊನ್ನಲಾಪುರದಲ್ಲಿ ಅದೇ ರೀತಿ ಮಾಡಿದನು. ರಾಘವಾಂಕನ ಪ್ರಕಾರ ‘ಯೋಗಲಿಂಗವೆಂಬುದು ಪೀಠ(ಪಾನಪೀಠ) ಮತ್ತು ಲಿಂದ (ಬಾಣ ಭಾಗ- ರುದ್ರಭಾಗ)ವೂ ಸೇರಿದಂತೆ ಒಂದೇ ಶಿಲೆಯಲ್ಲಿ ನಿರ್ಮಿಸಿರುವಂತಹುದು. ಎಂದರೆ ಪರಂಪರಾಗತವಾಗಿ ತಿಳಿದಿರುವ ಮತ್ತು ಕಾರ್ಯಾಚರಣೆಯಲ್ಲಿರುವ ಪದ್ಧತಿಯಂತೆ ಪೀಠವು ಒಂದು ಶಿಲೆಯಲ್ಲಿ ಮತ್ತು ಲಿಂಗವು ಇನ್ನೊಂದು ಶಿಲೆಯಲ್ಲಿ ನಿರ್ಮಾಣವಾಗಿರು ವಂತಹವುಗಳಿಂದ ಬೇರೆಯಾಗಿದ್ದು, ಏಕಶಿಲೆಯಲ್ಲಿಯೇ ಸಂಯೋಜಿತವಾಗಿರುವ ರೀತಿಯಲ್ಲಿ ನಿರ್ಮಾಣ ಗೊಂಡಿರಬೇಕು. ಇಲ್ಲಿ ವಿವರಿಸಲಾಗಿರುವ ‘ಲಿಂಗದ ಮೇಲೆ ಲಿಂಗವು’ ಒಂದು ಉಬ್ಬು ಶಿಲ್ಪ ಆಗಿರು ವುದರಿಂದ, ಖಚಿತವಾಗಿ ಯೋಗಲಿಂಗವೆಂದು ಹೇಳುವುದಕ್ಕಾಗುವುದಿಲ್ಲವಾದರೂ, ಅದು ಮೇಲೆ ಪ್ರತಿಪಾದಿತ ತತ್ವ, ಘಟನೆ ಹಾಗೂ ವ್ಯಾಖ್ಯಾನಗಳಿಗನುಗುಣವಾಗಿ ಕಡೆಯಲಾಗಿದೆಯೆಂದು ಪರಿಗಣಿಸಬೇಕಾಗುತ್ತದೆ.[೬೬]

೧೨ನೇ ಶತಮಾನದ ಶಿವಯೋಗಿ ಸಿದ್ಧರಾಮನ ಪ್ರಭಾವ ಹಂಪಿ ಪರಿಸರದಲ್ಲಿ ಇದ್ದಂತೆ ಕಂಡಬರುತ್ತದೆ. ಲಿಂಗದ ಮೇಲೆ ಲಿಂಗವೆಂದರೆ ಒಂದು ಇಷ್ಟಲಿಂಗ, ಮತ್ತೊಂದು ಇಷ್ಟದೈವ (ಸ್ಥಾವರಲಿಂಗ) ಅಂದರೆ ಸಿದ್ಧರಾಮ ಸ್ಥಾವರಲಿಂಗ ಪೂಜಕನೂ ಹೌದು ಇಷ್ಟಲಿಂಗ ಪೂಜಕನೂ ಹೌದು. ಆದ್ದರಿಂದ ಸ್ಥಾವರ ಲಿಂಗ + ಇಷ್ಟಲಿಂಗ ಪ್ರತಿಷ್ಠಾಪಿಸುವ ಪ್ರಕ್ರಿಯೆ ಸಿದ್ಧರಾಮನ ನಂತರ ಮತ್ತೆ ಹಂಪಿ ಪರಿಸರದಲ್ಲಿ ಆರಂಭಗೊಂಡಂತೆ ತಿಳಿದುಬರುತ್ತದೆ. ೧೪-೧೫ನೇ ಶತಮಾನದಲ್ಲಿ ಹಂಪಿಯಲ್ಲಿ ಸ್ಥಾವರಲಿಂಗ ಮತ್ತು ಇಷ್ಟಲಿಂಗ ಎರಡನ್ನೂ ಪೂಜಿಸುವ ಲಿಂಗಾಯತರು ಇದ್ದಂತೆ ತೋರುತ್ತದೆ. ಇದಕ್ಕೆ ಮನ್ನಣೆಯೂ ದೊರೆತಿರಬಹುದು.

ಹೀಗೆ ಹಿರೇಮಠವು ಸರ್ವಾಂಗಲಿಂಗ, ಯೋಗಾಂಗ ಲಿಂಗ, ವೀರಭದ್ರನ ಶಿಲ್ಪ, ಭದ್ರಕಾಳಿ ಶಿಲ್ಪ. ನಂದಿ ಶಿಲ್ಪ ಮತ್ತು ಮಂಟಪ. ವೀರಭದ್ರ ದೇವಾಲಯದ ಹಿಂಭಾಗದಲ್ಲಿ ಬಾವಿ, ಮೊದಲಾದ ವೈಶಿಷ್ಟ್ಯಗಳಿಂದ ಕೂಡಿತ್ತು. ತನ್ನ ಈ ವೈಶಿಷ್ಟ್ಯಗಳಿಂದ ಹಂಪಿಯಲ್ಲಿ ಬಹುದೊಡ್ಡ ವೀರಶೈವ ಮಠವಾಗಿ ವೀರಶೈವ ಧರ್ಮ ತತ್ತ್ವ ಸಿದ್ಧಾಂತ ಪ್ರಚಾರದಲ್ಲಿ ತೊಡಗಿತ್ತೆಂದು ಹೇಳಬಹುದಾಗಿದೆ.

೧೦. ಚಾಮರಸನ ಗವಿ/ಮಠ : ಹಂಪಿಯ ಉದ್ದಾನ ವೀರಭದ್ರ ದೇವಾಲಯದಿಂದ ಕಾಮಲಾಪುರಕ್ಕೆ ಹೋಗುವ ರಸ್ತೆಯ ಎಡಕ್ಕೆ ಹಂಪಾದೇವಿಯ ದಿಡ್ಡಿ ಬಳಿ ಒಂದು ಉತ್ತರಾಭಿಮುಖ ಗುಹೆ ಇದೆ. ಈ ಗುಹೆಯ ಬಲಭಾಗದ ದೊಡ್ಡ ಬಂಡೆಯ ಮೇಲ್ಭಾಗದ ಎಡ ಪಾರ್ಶ್ವದಲ್ಲಿ ಗುರುಗುಹೇಶ್ವರ ಆಶ್ರಮ

ಉಲ್ಲೇಖಿಸುವ ಶಾಸನ (ಎರಡು ಸಾಲಿನ ಶಾಸನ)ವಿದೆ. ಇದರ ಆಧಾರದ ಮೇಲೆ ಇದೇ ಪ್ರಭುಲಿಂಗಲೀಲೆಯ ಕರ್ತೃಚಾಮರಸನ ಗವಿ ಅಥವಾ ಮಠವೆಂದು ಡಾ.ಎಂ.ಚಿದಾನಂದಮೂರ್ತಿಯವರು ಗುರುತಿಸಿದ್ದಾರೆ.

ಗುರುಗುಹೇಶ್ವರಾಶ್ರಮವನ್ನು ಕುರಿತು ಶಾಸನವು

"ಶ್ರೀಗುರು ಗುಹೇಶ್ವರಾಶ್ರಮವೀ ಗುರುಗಿರಿ ಯಿದಜೊಳಿಷ್ಟದೈವ ಧ್ಯಾನೋ
ದ್ಯೋಗದೊಳಿರ್ಪರ್ಗ್ಗೆಯ್ದುವವಾಗಳ್ಧರ್ಮಾರ್ಥ ಕಾಮ ಮೋಕ್ಷ ಫಲಂಗಳ್"[೬೬]

ಈ ಶಾಸನವು ಗುಹೇಶ್ವರಾಶ್ರಮ ಇರುವ ಬೆಟ್ಟವನ್ನು ಗುರುಗಿರಿ ಎಂದು ಕರೆದು ಇಲ್ಲಿ ಇಷ್ಟದೈವದ ಪ್ರಾರ್ಥನೆ(ಧ್ಯಾನ) ಮಾಡಿದವನಿಗೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷದ ಫಲ ಲಭಿಸುತ್ತದೆ ಎಂದು ತಿಳಿಸುತ್ತದೆ. "ಗುರುಗುಹೇಶ್ವರ" ಎಂದ ತಕ್ಷಣ ಜ್ಞಾಪಕವಾಗುವುದು ಚಾಮರಸ ಮತ್ತು ಅವನ ಕೃತಿ ಪ್ರಭುಲಿಂಗ ಲೀಲೆ. ಕವಿ ಆ ಕೃತಿಯಲ್ಲಿ ಅಲ್ಲಮ ಪ್ರಭುವನ್ನು ಗುರುಗುಹೇಶ್ವರನೆಂದೇ ಉದ್ದಕ್ಕೂ ಕರೆದಿದ್ದಾನೆ. ಹಂಪಿಯ ನಿವಾಸಿಯಾಗಿದ್ದ ಚಾಮರಸನು(ಕ್ರಿ.ಶ.೧೪೩೦) ಆ ಗುಹೆಯಲ್ಲಿ ವಾಸವಾಗಿದ್ದನೆಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಆ ಗುಹೆಯ ಮುಂಭಾಗದ ಬಯಲೇ ಗುರುಗುಹೇಶ್ವರಾಶ್ರಮ.[೬೭]

ಇದೇ ಗುಹೇಶ್ವರ ಆಶ್ರಮದಲ್ಲಿದ್ದುಕೊಂಡು ಚಾಮರಸ ಪ್ರಭುಲಿಂಗಲೀಲೆ ಕಾವ್ಯ ರಚಿಸಿದಂತೆ ತೋರುತ್ತದೆ. ಎರಡು ಹೆಬ್ಬಂಡೆಗಳು ಸಂಧಿಸುವ ಸ್ಥಳದಲ್ಲಿ ಪ್ರಾಕೃತಿಕ ಸಹಜದಲ್ಲಿ ನಿರ್ಮಿಸಲ್ಪಟ್ಟ ಈ ಗುಹೆಯು ಸು.೨೫ ಅಡಿ ಉದ್ದ, ಸು.೬ ಅಡಿ ಅಗಲ, ಸು.೫ ಅಡಿ ಎತ್ತರ ಇದೆ. ಮುಂಭಾಗದಲ್ಲಿ ಬಂಡೆಗಳು ಕೂಡಿರದ ಕಾರಣ ಕಲ್ಲಿನ ಮೇಲ್ಹಾವಣೆ ಹಾಕಲಾಗಿದೆ. ಕಾಡು ಪ್ರಾಣಿಗಳಿಂದ ರಕ್ಷಣೆ ಪಡೆಯಲು ಚಿಕ್ಕದಾದ ಬಾಗಿಲು ನಿರ್ಮಿಸಲಾಗಿದೆ. ಒಳಗಡೆ ೮-೧೦ ಕಂಬಗಳಿವೆ. ಬಾಗಿಲ ಬಳಿ ಗಿಡ-ಮರ-ಬಳ್ಳಿ ಪೊದೆ ಬೆಳೆದು ಸಂರಕ್ಷಣೆ ಇಲ್ಲದೆ ಹಾಳುಬಿದ್ದಿದೆ. ಆ ಗುಹೆಯ ಒಳಗೆ ಹಾಸು ಬಂಡೆಯ ಮೇಲೆ ಕುಳಿತು ಪೂಜೆ ಮಾಡಿಕೊಳ್ಳಲು ಒಂದು ಚೌಕಾಕಾರದ ರೇಖಾವಿನ್ಯಾಸವನ್ನು ಕೆತ್ತಿ, ಅಲ್ಲಿ ಇಷ್ಟಲಿಂಗ ಪೂಜೆ ಮಾಡಿದ ನೀರು ಹರಿದು ಹೋಗಲು ಬೆರಳಗಲದ ಚಿಕ್ಕ ಕಾಲುವೆ ಕೆತ್ತಿದ್ದಾರೆ. ಚಾಮರಸ ಅಲ್ಲಿ ಕುಳಿತು ಪೂಜಧ್ಯಾನಾದಿಗಳನ್ನು ಮುಗಿಸಿ ತನ್ನ ಕಾವ್ಯರಚನೆ ಮಾಡಿರಬಹುದು. ಬಂಡೆಯ ಗುಹೆಯ ಕೆಳಗೆ ನೆಲದ ಮೇಲೆ ಹೊಲದ ಅಂಚಿನಲ್ಲಿರುವ ಇನ್ನೊಂದು ಬಂಡೆ ಮೇಲೆ ಲಿಂಗ, ಬಸವಗಳನ್ನು, 'ಸಂಗನಬಸವ' ಎಂಬ ಶಾಸನವನ್ನೂ ಕೆತ್ತಲಾಗಿದೆ.[೬೮] ಹೀಗಾಗಿ ಇದೇ ಚಾಮರಸ ವಾಸವಾಗಿದ್ದ ಸ್ಥಳ ಅಥವಾ ಮಠವೆಂದು ಖಚಿತವಾಗಿ ಹೇಳಬಹುದು.

ಚಾಮರಸ ಕವಿ ಪ್ರೌಢದೇವರಾಯನ ಕಾಲದಲ್ಲಿದ್ದ ನೂರೊಂದು ವಿರಕ್ತರಲ್ಲಿ ಒಬ್ಬ. ಅವನು ವೀರಶೈವ(ಲಿಂಗಾಯತ) ಧರ್ಮ ಕಟ್ಟುವಲ್ಲಿ ಪ್ರಮುಖ ಪಾತ್ರವಹಿಸಿದ್ದಾನೆ. ಚಾಮರಸ ತನ್ನ ವಿರಕ್ತಾಶ್ರಮ

ಪೂರ್ವ ಜೀವನ ವಿಷಯವನ್ನು ತನ್ನ ಕಾವ್ಯದಲ್ಲಿ ಎಲ್ಲಿಯೂ ಪ್ರಸ್ತಾಪಿಸಿಲ್ಲ. ಪ್ರಭುದೇವರ ಸಾಂಗತ್ಯದ ಪ್ರಕಾರ ಈತ ನಾಗಣಪುರದವನು (೨.೧೨) ಗುರುರಾಜ ಚಾರಿತ್ರದ ಪ್ರಕಾರ ಗದುಗಿನವರು (೧೩-೨೭-೩೩) ಪ್ರೌಢರಾಯನ ಕಾವ್ಯ ಮತ್ತು ಭೈರವೇಶ್ವರ ಕಾವ್ಯ ಕಥಾಮಣಿ ಸೂತ್ರರತ್ನಾಕರ ಕೃತಿಗಳಿಂದ ತಿಳಿದುಬರುವಂತೆ ಚಾಮರಸ ವಿಜಯನಗರದ ಪ್ರೌಢದೇವರಾಯನ ಆಸ್ಥಾನದಲ್ಲಿದ್ದವನು. ಚಾಮರಸ ಮತ್ತು ಕುಮಾರವ್ಯಾಸರಿಗೆ ಸಂಬಂಧಿಸಿದಂತೆ ಒಂದು ದಂತ ಕಥೆಯಿದೆ. ದೇವರಾಯನು ಭಾರತವನ್ನು ರಚಿಸುವಂತೆ ಚಾಮರಸ ಕುಮಾರವ್ಯಾಸರಿಗೆ ಅಪ್ಪಣೆ ಮಾಡಿದಂತೆಯೂ, ಕಾವ್ಯ ರಚನೆ ಮುಗಿದ ಮೇಲೆ ವಿದ್ವಾಂಸರು ಅದನ್ನು ಪರೀಕ್ಷಿಸಿ ಚಾಮರಸನ ಕೃತಿ ಹೆಚ್ಚು ರಸವತ್ತಾದುದೆಂದು ಅಭಿಪ್ರಾಯಪಟ್ಟಂತೆಯೂ ಕುಮಾರವ್ಯಾಸ ಖಿನ್ನನಾಗಿ ತನ್ನ ಹೆಂಡತಿಯ ಮೂಲಕ ಅವಳ ಅಣ್ಣನಾದ ಚಾಮರಸನ ಕೃತಿಯನ್ನು ಸುಡಿಸಿದಂತೆಯೂ, ಕುಮಾರವ್ಯಾಸನಿಗೆ ಸಲ್ಲುವುದರಲ್ಲಿದ್ದ ಕನಕಸ್ನಾನವನ್ನು ತಪ್ಪಿಸಲಿಕ್ಕಾಗಿ ಚಾಮರಸನಿಂದ ನೂರೊಂದು ವಿರಕ್ತರಲ್ಲಿ ಒಬ್ಬನಾದ ಜಕ್ಕಣಾರ್ಯನೇ ಮೊದಲಾದವರು ದಿನ ಒಂದಕ್ಕೆ ೧೦೧ ಪದ್ಯ ಗಳಂತೆ ಹನ್ನೊಂದು ದಿನಗಳಲ್ಲಿ ಸತ್ತವರಲ್ಲದವರ ಕಥೆಯನ್ನೊಳಗೊಂಡ ಪ್ರಭುಲಿಂಗಲೀಲೆಯನ್ನು ಬರೆಯಿಸಿ ಕವಿ ಹಾಗೂ ಕೃತಿಗೆ ಸಲ್ಲಬೇಕಾದ ರಾಜ ಮರ್ಯಾದೆಯನ್ನು ದೊರೆಕಿಸಿಕೊಟ್ಟಂತೆ ಪ್ರೌಢರಾಯನ ಕಾವ್ಯ(೨೧.೩೪) ಹೇಳುತ್ತದೆ.[೭೦]

ಚಾಮರಸನು ವಿರಕ್ತನಾಗುವ ಮೊದಲು ಪ್ರೌಢದೇವರಾಯನ ಸೈನ್ಯಾಧಿಕಾರಿಯಾಗಿದ್ದು, ಅನೇಕ ಸಮಾಜೋಪಯೋಗಿ ಕಾರ್ಯಗಳನ್ನು ಮಾಡಿರುವನೆಂದು ತರ್ಕಿಸಲು ಸಾಧ್ಯವಿದೆ. ಕ್ರಿ.ಶ.೧೪೨೪ರ ಹರಿಹರದ ಹರಿಹರೇಶ್ವರ ದೇವಾಲಯದ ಆವರಣದ ಶಿಲಾಶಾಸನವು

> ''ಶ್ರೀವೀರಪ್ರತಾಪ ದೇವರಾಯ ಮಹಾರಾಯರ ಸಮಸ್ತ ಸೈನ್ಯಾಧಪತಿಯಂ ಶ್ರೀಸೋ
> ಮೇಶ್ವರ ಲಿಂಗ ಪಾದಪಯೋಜಪರಾಗ ಪರಿಮಳಾಸಕ್ತ ಮಧುವ್ರತನಂ
> ಶುಭಗುಣಾನ್ವಿತನಂ ಬೊಪ್ಪದೇವ ತನೂಜಾತನಂ ವಂದಿಜನ ಪಾರಿಜಾತನಂ
> ಯುವತೀಜನ ಕುಸುಮಕೋದಂಡನಂ ಕದನ ಪ್ರಚಂಡನಂ ಸಾಮಭೇದಾದಿ
> ಚತುರುಪಾಯ ವಿಚಕ್ಷಣಂನಂ ಸದ್ಧರ್ಮ ರಕ್ಷಣನಂ ಸಂಗೀತಲೋಲನಂ
> ಚಾಮನೃಪಾಲನಂ ಕಂಡು ದೇವರಾಯ ಮಹಾರಾಯರ ನಿರೂಪದಿಂ''[೭೧]

ಎಂದು ಉಲ್ಲೇಖಿಸುತ್ತದೆ.

ಈ ಶಾಸನದ ಪ್ರಕಾರ ಚಾಮರಾಜ(ಚಾಮರಸ) ಪ್ರೌಢದೇವರಾಯನ ಸಮಸ್ತ ಸೈನ್ಯಾಧಿಕಾರಿಯಾಗಿದ್ದನು ಈತನನ್ನು ಶಾಸನವು ಸೋಮೇಶ್ವರ ದೇವರ ಪಾದಾರಾಧಕನೆಂದೂ, ಬೊಪ್ಪದೇವನ ಮಗನೆಂದು, ವಂದಿಜನ ಪಾರಿಜಾತ, ಯುವತೀಜನ ಕುಸುಮ ಕೋದಂಡ, ಕದನ ಪ್ರಚಂಡ, ಸಾಮಭೇದಾದಿ ಚತುರೋಪಾಯವಿಚಕ್ಷಣ, ಸದ್ಧರ್ಮರಕ್ಷಣ, ಸಂಗೀತಲೋಲನೆಂದು ವಿಶೇಷವಾಗಿ ಹೊಗಳುತ್ತದೆ.

ಗಂಡರಗೂಳಿ ಎಂಬ ಬಿರುದನ್ನು ನೀಡಿದ್ದಲ್ಲದೆ, ಈತ ಅನೇಕ ಕೆರೆಗಳನ್ನು ಕಟ್ಟಿಸಿದ್ದರ ಬಗ್ಗೆ ಶಾಸನವು ದಾಖಲಿಸುತ್ತದೆ.

ಈ ಶಾಸನವು ದಾಖಲಿಸಿರುವ ಚಾಮರಾಜನೇ ಪ್ರಭುಲಿಂಗಲೀಲೆಯ ಕರ್ತೃ ಚಾಮರಸನಾಗಿರುವ ಸಾಧ್ಯತೆ ಇದೆ. ಈತನನ್ನು ಶಾಸನವು ಸೋಮೇಶ್ವರದೇವರ ಪಾದಾರಾಧಕನೆಂದು ಕರೆದಿರುವುದರಿಂದ ಈತನು ಲಕ್ಷ್ಮೇಶ್ವರ ಪರಿಸರದವನೆಂದು ಹೇಳಬೇಕಾಗುತ್ತದೆ. ಪ್ರೌಢದೇವರಾಯನ ಸಮಸ್ತ ಸೇನಾಪತಿಯಾದ ಚಾಮರಸ ಯಾವುದೋ ಯುದ್ಧದಲ್ಲಿ ಸಂಭವಿಸಿದ ಅಪಾರ ಸಾವು-ನೋವನ್ನು ಕಂಡು ಮನ ಕರಗಿ ವಿರಕ್ತಿಹೊಂದಿ ಸೇನಾಪತಿ ಹುದ್ದೆ ತ್ಯಜಿಸಿ(೧೪೨೫) ಪ್ರೌಢದೇವರಾಯನ ಪ್ರೋತ್ಸಾಹದಿಂದ ವೀರಶೈವವು ಧರ್ಮವಾಗುವುದನ್ನು ಕಂಡು ಆ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡ. ಗುರುಗುಹೇಶ್ವರಾಶ್ರಮ ನಿರ್ಮಿಸಿಕೊಂಡು ಸತ್ತವರಲ್ಲದವರ ಕಥೆಯಾದ ಪ್ರಭುಲಿಂಗಲೀಲೆಯ ಕಾವ್ಯ(೧೪೩೦) ರಚಿಸಿ ವೀರಶೈವ ಧರ್ಮದ ತತ್ತ್ವ-ಸಿದ್ಧಾಂತ ಪ್ರಚಾರ ಮಾಡಿದ. ಅಲ್ಲಮ ಪ್ರಭುವಿನ ಜೀವನ ಕವಿ ಚಾಮರಸನ ಜೀವನ ಸಾಮ್ಯ(ವೈರಾಗ್ಯ ಜೀವನ)ತೆ ಹೊಂದಿರುವುದರಿಂದ ಚಾಮರಸ ಪ್ರಭುಲಿಂಗಲೀಲೆ ಕಾವ್ಯ ಬರೆದಂತೆ ತೋರುತ್ತದೆ. ಆದ್ದರಿಂದ ಹರಿಹರ ಶಾಸನದಲ್ಲಿ ಉಲ್ಲೇಖವಾಗಿರುವ ಚಾಮರಾಜನೇ ಚಾಮರಸನಾಗಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ.

೧೧. ನಿರಾಸಿ ಮಠ : ಅಹಮದ್ ಖಾನ್ ಧರ್ಮಶಾಲೆಯ ಪಶ್ಚಿಮಕ್ಕೆ ಬೆಟ್ಟದ ಮೇಲೆ ಬಾವಿಯ ಪಕ್ಕದ ಬಾಗಿಲ ಮೇಲೆ ಇರುವ ಕ್ರಿ.ಶ.೧೫೩೯ರ ಶಾಸನವು ನಿರಾಸಿ ಮಠವನ್ನು ಉಲ್ಲೇಖಿಸುತ್ತದೆ. ನಿರಾಸಿಮಠವು ಮೂಲತಃ ಓರಂಗಲ್ಲಿನ ಬಳಿ ಪಶ್ಚಿಮಕ್ಕೆ ಇರುವ ಮಠ. ಈ ಮಠವು ಗುಂಡಬೊಮ್ಮಯ್ಯರ ಕಾಲದಲ್ಲಿ ಸ್ಥಾಪಿತವಾದದ್ದೆಂದು ಪ್ರತೀತಿ ಇದೆ. ಕುಮಾರರಾಮನಾಥನು ದಿವ್ಯಾಶ್ವವನ್ನು ಪಡೆಯಲು ಓರಂಗಲ್ಲಿಗೆ ಹೋದ ಸಮಯದಲ್ಲಿ ಒಂದು ರಾತ್ರಿಯನ್ನು ಆಶೀರ್ವದಿಸಿದರೆಂದು ರಾಮನಾಥ ಚರಿತದಲ್ಲಿ ಉಲ್ಲೇಖಿಸಲ್ಪಟ್ಟಿದೆ.[೨] ವಿಜಯನಗರ ಕಾಲದಲ್ಲಿ ನಿರಾಸಿ ಮಠದ ಅಧ್ಯಕ್ಷರಾಗಿದ್ದ ತಮ್ಮಡಿ ನಂಜೆಯದೇವರಿಗೆ ದಾನದತ್ತಿಗಳನ್ನು ನೀಡಿದ ವಿಚಾರವನ್ನು ಅಚ್ಚುತರಾಯನ ಕಾಲದ ಶಾಸನವು

> "ವಿಕಾರಿ ಸಂವತ್ಸರ ಆಶ್ವೀಜ ಬ ೧೦ ಸೋಮವಾರನ ಶ್ರೀಮತು
> ದೇವರಲ್ಲಿ ಮುಮ್ಮಡಿ ಸೆಟಿಕಿ ಪುಣ್ಯಮುಗಾನು ಬಾವಿಸಿ ತೋಂಟನು
> ತಮಿಡಿ ನಂಜೆದೇವರ ನಿರಾಸಿಮಟ(ನಿ)ಕಿ ದಾರಪೋಸಿನ ಬುಮಿಬಾವಿ"[೭]

ಎಂದು ದಾಖಲಿಸುತ್ತದೆ. ಈ ಶಾಸನದ ಪ್ರಕಾರ ದೇವರಪಲ್ಲಿಯ ಮುಮ್ಮಡಿ ಶೆಟ್ಟಿ ಎಂಬುವವನಿಗೆ ಪುಣ್ಯವಾಗಲೆಂದು ಬಹುಶಃ ಅವನ ವಂಶಸ್ಥರು ಬಾವಿ ಮತ್ತು ತೋಟವನ್ನು ತಮ್ಮಡಿ ನಂಜೆದೇವರ ನಿರಾಸಿಮಠಕ್ಕೆ ದಾನ ನೀಡಿರುವ ಬಗ್ಗೆ ತಿಳಿದುಬರುತ್ತದೆ. ತಮ್ಮಡಿ ನಂಜೆದೇವರು ಈ ನಿರಾಸಿ ಮಠದ ಅಧ್ಯಕ್ಷರಾಗಿರಬೇಕು. ಮತ್ತು ಇವರು ಮುಮ್ಮಡಿ ಶೆಟ್ಟಿಯ ಮನೆಯ ಗುರುಗಳಾಗಿರುವ ಸಾಧ್ಯತೆ ಇದೆ.

ಈ ಮಠವನ್ನು ನಿರ್ದೇಶಿಸುವ ಶಾಸನದ ಪಕ್ಕಕ್ಕೆ ಇರುವ ಬಾವಿ ಮಠಕ್ಕೆ ಸೇರಿದ್ದಾಗಿದೆ. ಇದರ ಮುಂದಿರುವ ಪ್ರದೇಶ ಅಂದಿನ ತೋಟವಾಗಿರುವಂತೆ ತೋರುತ್ತದೆ. ಈ ಮಠವು ಸಹ ಪ್ರೌಢದೇವರಾಯನ ಕಾಲಕ್ಕೆ ಅಸ್ಥಿತ್ವಕ್ಕೆ ಬಂದಿರಬಹುದು.

೧೨. ಪರಮೇಶ್ವರನ ಮಠ : ರಾಣಿವಾಸದ ಆವರಣದ ಎತ್ತರಕ್ಕೆ ಬೆಟ್ಟದ ಮೇಲೆ ಮೂರು ಚಿಕ್ಕ ದೇವಾಲಯಗಳ ಹತ್ತಿರದ ಗುಂಡಿನ ಮೇಲಿನ ಶಾಸನವು ''ಪರಮೇಶ್ವರನ ಮಟವು''[೬೪] ಎಂದು ಉಲ್ಲೇಖಿಸುತ್ತದೆ. ಈ ಶಾಸನದ ಎದುರಿಗೆ ಪೂರ್ವಾಭಿಮುಖವಾಗಿರುವ ಸು.೨೫ಕ್ಕೂ ಹೆಚ್ಚು ಕಂಬ ಗಳನ್ನು ಹೊಂದಿರುವ ಮಂಟಪವೇ ಪರಮೇಶ್ವರನ ಮಠವಾಗಿದ್ದಂತೆ ಕಂಡುಬರುತ್ತದೆ. ಏಕೆಂದರೆ ಪ್ರಕೃತಿ ಸಹಜ ಗವಿಗೆ ಈ ಮಂಟಪ ನಿರ್ಮಿಸಲಾಗಿದೆ. ಇದು ದೇವಾಲಯದ ಲಕ್ಷಣ ಹೊಂದಿರದೆ, ಗವಿಗೆ ಕಟ್ಟಿರುವ ಮಂಟಪವಾಗಿರುವುದರಿಂದ ಇದನ್ನು ಮಠವೆಂದು ಕರೆಯಬಹುದಾಗಿದೆ. ಇದೇ ಪರಮೇಶ್ವರನ ಮಠವೆಂದು ಭಾವಿಸಬಹುದಾಗಿದೆ. ಈ ಮಂಟಪದ ತುಂಬೆಲ್ಲಾ ಗಿಡ-ಗಂಟೆ ಬೆಳೆದು ಸಂರಕ್ಷಣೆ ಇಲ್ಲದೆ ಹಾಳುಬಿದ್ದಿದೆ.

೧೩. ಬಸವರಾಜ ದೇವರ ಮಠ : ಹಂಪಿಯ ತಳವಾರ ಘಟ್ಟದ ತುಂಗಭದ್ರಾನದಿ ಬಲದಂಡೆಯ ಮೇಲೆ ತೂಗುಸೇತುವೆಯ ಸಮೀಪ ಪೂರ್ವಾಭಿಮುಖವಾಗಿರುವ ಸು.೪೦ಕ್ಕೂ ಹೆಚ್ಚು ಕಂಬಗಳುಳ್ಳ ಮಂಟಪವೇ ಬಸವರಾಜದೇವರ ಮಠ. ಇದನ್ನು ಸಾಕ್ಷೀಕರಿಸಲು ಇಲ್ಲಿರುವ (ನಂದಿ)ಸ್ತಂಭದ ಶಾಸನ. ಈ ಶಾಸನವು ಬಸವರಾಜದೇವರಿಗೆ ದಾನ ನೀಡಿದ್ದನ್ನು ದಾಖಲಿಸುತ್ತದೆ.

''ಶ್ರೀ ಬಸವಂರಾಜದೇವರ ಹರಿವಾ ೧ ಕೆ ಚೆಂಮುರಿಸೆಟಿಯ
ಮಗ ಮಾರಪಸೆಟಿಯರು ದಾರೆಯನು ಎರೆದು ಕೊಟ
ಪ್ರತಾಪ ಗ ೧೦೦ ವ್ರಿತಿಯಕೊಂಡು ಕೊಟನು''[೬೫]

ಈ ಶಾಸನವು ಚಿಮ್ಮುರಿಶೆಟ್ಟಿಯ ಮಗ ಮಾರಪಶೆಟ್ಟಿ ೧೦೦ ಪ್ರತಾಪ ಗದ್ಯಾಣವನ್ನು ನೀಡಿ ವ್ರಿತ್ತಿಯನ್ನು ಕೊಂಡು ಬಸವರಾಜದೇವರಿಗೆ ದಾನಮಾಡಿದ್ದನ್ನು ತಿಳಿಸುತ್ತದೆ. ಮಾರಪಶೆಟ್ಟಿ ಬಹುಶಃ ಬಸವರಾಜದೇವರ ಭಕ್ತನಾಗಿರಬಹುದು.

ಈ ಮಠದ ಬಲಭಾಗದ ಚಿಕ್ಕಮಂಟಪದಲ್ಲಿ ಪೂರ್ವಾಭಿಮುಖವಾಗಿರುವ ಸು.೫ ಅಡಿ ಎತ್ತರದ ನಂದಿಶಿಲ್ಪವಿದೆ. ಈ ಮಂಟಪದ ಮುಂಭಾಗದಲ್ಲಿ ನಂದಿ ಶಿಲ್ಪದ ಸ್ತಂಭವನ್ನು ನಿಲ್ಲಿಸಲಾಗಿದೆ. ಅಲ್ಲದೆ ಇದರ ಬಲಪಕ್ಕದಲ್ಲಿಯೂ ಸಹ ಶಾಸನವುಳ್ಳ ನಂದಿಸ್ತಂಭವಿದೆ. ಪ್ರೌಢದೇವರಾವರಾಯನ ಕಾಲಕ್ಕೆ ಸೇರಿದ ಪ್ರಸ್ತುತ ಮಠವು ಜೀರ್ಣೋದ್ಧಾರಗೊಳ್ಳುತ್ತಲಿದೆ.

೧೪. ಕರಸ್ಥಲದ ವೀರಣ್ಣೊಡೆಯನ ಮಠ : ಕಮಲಾಪುರ - ತಳವಾರಘಟ್ಟ ರಸ್ತೆಯ ದೊಡ್ಡ ಬೆಟ್ಟದ ಬುಡದಲ್ಲಿ ಅಪರೂಪದ ಕಟ್ಟಡವಿದೆ. ಇದು ತಳವಾರ ಘಟ್ಟಕ್ಕೆ ತೆರಳುವ ಹಳೆಯ ದಾರಿಯ

ಎಡಭಾಗದಲ್ಲಿರುವ ದೊಡ್ಡಕಲ್ಲು ಬೆಟ್ಟದ ತಳಭಾಗದಲ್ಲಿ ಕಂಡುಬರುತ್ತದೆ. ಈ ಕಟ್ಟಡದ ಅವಶೇಷಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಒಂದು ವೀರಶೈವ ಮಠದ ಅವಶೇಷವಾಗಿ ಕಂಡುಬರುತ್ತದೆ. ಈ ಮಠದ ಅವಶೇಷವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಇದನ್ನು- ವೀರಶೈವ ಅನುಭಾವಿ ಶರಣ ಕರಸ್ಥಲ ವೀರಣ್ಣೊಡೆಯನ ಮಠವೆಂದು ಗುರುತಿಸಿದ ಕೀರ್ತಿ ಡಾ.ಡಿ.ವಿ.ಪರಮಶಿವಮೂರ್ತಿಯವರಿಗೆ ಸಲ್ಲುತ್ತದೆ. ಸು.೫೦ ಅಡಿ ಉದ್ದ, ೨೦ ಅಡಿ ಅಗಲದ ನಿವೇಶನದಲ್ಲಿರುವ ಮಠದ ಕಟ್ಟಡವನ್ನು ೨ ಅಡಿ ಎತ್ತರದ ಬುನಾದಿಯ ಮೇಲೆ ಕಟ್ಟಲಾಗಿದ್ದು, ಪೂರ್ವಕ್ಕೆ ಪ್ರವೇಶದ್ವಾರವಿದೆ. ಕಟ್ಟಡಕ್ಕೆ ಗಾರೆ ಮತ್ತು ಇಟ್ಟಿಗೆಯಿಂದ ಚಾವಣಿ ಹಾಕಲಾಗಿದ್ದು, ಬಹುಭಾಗ ಇಂದಿಗೂ ಭದ್ರವಾಗಿದೆ. ಕಟ್ಟಡವು ಹಿಂಭಾಗದ ಗುಡ್ಡದ ಬಂಡೆಗಳಿಗೆ ಹೊಂದಿಕೊಂಡಿದೆ. ಅಂದಿನ ಕಾಲದ ಗೋಡೆ ಬಿದ್ದು ಹೋಗಿದ್ದು, ಕೇವಲ ಕಲ್ಲಿನ ಕಂಬಗಳೂ ಅಸ್ಥಿಪಂಜರದಂತೆ ನಿಂತಿವೆ.

ಈ ಕಟ್ಟಡದ ಸಮೀಪದಲ್ಲಿ ಇರುವ ಅಂದರೆ ಅಹಮ್ಮದ್ ಖಾನ್ ಧರ್ಮಶಾಲೆಯ ಹತ್ತಿರ ಹಳೆರಸ್ತೆಯ ಪಶ್ಚಿಮಕ್ಕೆ ನಿಲ್ಲಿಸಿದ ಲಿಂಗಮುದ್ರೆ ಶಾಸನವು

“ಕೊಳಕೊಂಡಯ ಯಿ ಯಿ ಮಡಿಸಿದ ವಿರಣೊಡ
ಡು ಪರಾರಹಾ ಬವಿ ..........”[೭೬]

ಎಂದು ದಾಖಲಿಸುತ್ತದೆ.

ಈ ಶಾಸನವು ಕೊಳಕೊಂಡಯ್ಯನೆಂಬುವನು ವೀರಣೊಡೆಯನಿಗೆ ಒಂದು ಬಾವಿಯನ್ನು ಕಟ್ಟಿಸಿಕೊಟ್ಟ ವಿಷಯ ತಿಳಿಸುತ್ತದೆ. ಈ ಬಾವಿಯನ್ನು ಈ ಇಂದಿಗೂ ಕಾಣಬಹುದು. ಹಾಗೆಯೇ ಇದೇ ಪ್ರದೇಶದಲ್ಲಿರುವ ಮತ್ತೊಂದು ಶಾಸನವು “ರಾಮಯ ನಾಗಯನು ನಾಗಯನು ಮಡಿ ಧರ್ಮ.....ವಿರಣವೊಡೆರಿಗೆ ದಾರೆಯರವರು....”[೭೭] ಎಂದು ಉಲ್ಲೇಖಿಸುತ್ತದೆ. ಈ ಶಾಸನವು ರಾಮಯ್ಯನಾಯಕನ ಮಗ ನಾಗಯ್ಯನು ವೀರಣೊಡೆಯರಿಗೆ ದಾನ ಮಾಡಿದ ವಿಷಯ ತಿಳಿಸುತ್ತದೆ. ಈ ಶಾಸನಗಳ ಆಧಾರದಿಂದ ಪಕ್ಕದಲ್ಲೇ ಇರುವ ಈ ಕಟ್ಟಡವು ಕರಸ್ಥಲದ ವೀರಣ್ಣೊಡೆಯನ ವಾಸಸ್ಥಾನ(ಮಠ)ವಾಗಿದೆಂದು ಗ್ರಹಿಸಬಹುದು.

ಪ್ರೌಢದೇವರಾಯನ ಕಾಲದ ಒಬ್ಬ ಪ್ರಭಾವಿ ವ್ಯಕ್ತಿ ಕರಸ್ಥಲ ವೀರಣ್ಣೊಡೆಯ. ರಾಜಕೀಯ, ಧಾರ್ಮಿಕ ಹಾಗೂ ಸಾಹಿತ್ಯ ಕ್ಷೇತ್ರಗಳಲ್ಲಿ ತನ್ನದೇ ಆದ ಸೇವೆಯನ್ನು ಸಲ್ಲಿಸಿದ ಈತನು ನೂರೊಂದು ವಿರಕ್ತರಲ್ಲಿ ಒಬ್ಬನಾಗಿದ್ದನೆಂದು ಅದೃಶ್ಯ ಕವಿ, ಶಾಂತಲಿಂಗ ದೇಶಿಕ ಕವಿಗಳು ತಮ್ಮ ಕಾವ್ಯಗಳಲ್ಲಿ ದಾಖಲಿಸಿದ್ದಾರೆ. ‘ವೀರಣ್ಣೊಡೆಯ’ ಎಂಬ ಹೆಸರೇ ಸೂಚಿಸುವಂತೆ ಈತನೂ ಪ್ರೌಢದೇವರಾಯನಲ್ಲಿದ್ದ ಲಕ್ಕಣ್ಣ, ಜಕ್ಕಣ್ಣ, ಮುದ್ದಣ್ಣ, ನಾಗಣ್ಣ ಮುಂತಾದ ಮಹಾಮಂತ್ರಿಗಳಲ್ಲಿ ಒಬ್ಬನಾಗಿದ್ದನೆಂದು ಹೇಳಬಹುದು.[೭೮]

ಶ್ರೀರಂಗಪಟ್ಟಣದ ಸಮೀಪವಿರುವ ಕಾವೇರಿ ನದಿ ತೀರದ ಬೊಮ್ಮೂರು ಈತನ ಜನ್ಮಗ್ರಾಮ. "ಹದಿನಾಡೊಳೆಸೆವ ಬೊಮ್ಮನಹಳ್ಳಿಯಲ್ಲಿರ್ಪ ಹರಶರಣ ವೀರಣಯ್ಯ"[೭೯] ಎಂದು ಶಿವತತ್ವ ಚಿಂತಾಮಣಿಯಲ್ಲಿ ಉಲ್ಲೇಖಿಸಲಾಗಿದೆ. ಬೊಮ್ಮೂರು, ಬೊಮ್ಮನಹಳ್ಳಿ ಇವೆರಡೂ ಒಂದೇ ಆಗಿವೆ. ವೀರಣ್ಣೊಡೆಯನ ಕಾಲವನ್ನು ವಿದ್ವಾಂಸರು ಕ್ರಿ.ಶ.ಸು.೧೪೩೦ ಎಂದು ಅಭಿಪ್ರಾಯಪಟ್ಟಿರುವುದರಿಂದ ಈತನು ಕ್ರಿ.ಶ.೧೩೮೦-೧೪೫೦ರವರೆಗೆ ಜೀವಿಸಿರುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ. ವೀರಣ್ಣೊಡೆಯನ ಜೀವನ ಮಾರ್ಗ ೨ ರೀತಿಯಾಗಿ ಹರಿದು ಬಂದಿರುವುದನ್ನು ಕಾಣಬಹುದು. ೧. ಪೂರ್ವಾರ್ಧ ಜೀವನವು ಪ್ರೌಢದೇವರಾಯನ ಆಸ್ಥಾನದಲ್ಲಿ ಮಹಾಮಂತ್ರಿಯಾಗಿ, ಆಪ್ತನಾಗಿ ಕಾಣಿಸಿಕೊಂಡದ್ದು, ೨. ಉತ್ತರಾರ್ಧ ಜೀವನವು ಕರಸ್ಥಲನಾಗಿದೇವನ ಗುರುವಾಗಿ, ಪ್ರೌಢದೇವರಾಯನ ಮಗಳನ್ನು ಮದುವೆಯಾಗಿ, ಆತನಿಗೆ ಅಳಿಯನಾಗಿದ್ದು, ವೀರಶೈವ ಕರಸ್ಥಲ ಸಾಹಿತ್ಯಕ್ಕೆ ತನ್ನದೇ ಆದ ಸೇವೆಯನ್ನು ಸಲ್ಲಿಸಿದ್ದು.[೮೦] ವೀರಣ್ಣೊಡೆಯರ ಕಂದ, ನಿಃಕಲಶತಕ, ಪರಮವಿರಕ್ತನ ಐಕ್ಯಸ್ಥಲ, ಅಷ್ಟವಿಧಾರ್ಚನೆ, ಮಂತ್ರೋತ್ಪತ್ತಿ ರಗಳೆ, ವೀರಣ್ಣೊಡೆಯರ ವಚನ ಮುಂತಾದ ಕೃತಿಗಳನ್ನು ರಚಿಸಿರುವ ಈತನ ಜೀವನ ಕುರಿತು ಶಿವತತ್ವ ಚಿಂತಾಮಣಿ, ಚೆನ್ನಬಸವ ಪುರಾಣ, ಕರಸ್ಥಲ ನಾಗಿದೇವನ ಚರಿತ್ರೆ, ನೂರೊಂದು ವಿರಕ್ತರ ಕಾವ್ಯ ಮುಂತಾದ ಕೃತಿಗಳು ವರ್ಣಿಸಿವೆ.

ಹಂಪಿಯ ತನ್ನ ಈ ಮಠದಲ್ಲಿ ವಾಸಿಸುತ್ತಾ ವೀರಶೈವಧರ್ಮಕಟ್ಟುವಲ್ಲಿ ಮತ್ತು ಅದನ್ನು ಪ್ರಚಾರ ಮಾಡುವಲ್ಲಿ ವೀರಶೈವ ತತ್ತ್ವ-ಸಿದ್ಧಾಂತ ಸಾರುವ ಕೃತಿಗಳನ್ನು ರಚಿಸುವ ಮೂಲಕ ಪ್ರಮುಖ ಪಾತ್ರ ವಹಿಸಿದ್ದಾನೆ. ವೀರಣ್ಣೊಡೆಯ ವೀರಶೈವಧರ್ಮ ಪ್ರಚಾರ ಮಾಡುತ್ತಾ ಬಹುಶಃ ಇಲ್ಲಿಯೇ ಐಕ್ಯ ಹೊಂದಿದಂತಿದೆ.

೧೫. ನಾಗಲಿಂಗಸಾಮಿ ಮಠ : ಹಂಪಿಯ ಶಿವರಾಮ ಅವಧೂತರ ಮಠದ ಮೇಲ್ಭಾಗದ ಗುಡ್ಡದಲ್ಲಿನ ಬಂಡೆಯ ಮೇಲಿರುವ ಶಾಸನವು "ಶಾ ೧೭೩೪ ಆಂಗೀರಸ ಸಂ|| ವೈಶಾಖ ಸು.೧೦ಯಲ್ಲು|| ನಾಗಲಿಂಗ ಸ್ವಾಮಿಮಠ ಜೀರ್ಣೋದ್ಧಾರ ಮಾಡಿ ಕಟಿದು ಪಟೆಭಯಿರಂಣನ ಮಗ ಯಿರುಪಾಕ್ಷಯನ ದಾಮ ಹಸ್ವ"[೮೧] ಎಂದು ದಾಖಲಿಸಿದೆ. ಈ ಶಾಸನವು ಬಹುಶಃ ಪ್ರೌಢದೇವರಾಯನ ಕಾಲದಲ್ಲಿ ಸ್ಥಾಪಿತವಾದ ಈ ಮಠವನ್ನು ಕ್ರಿ.ಶ.೧೮೧೨ರಲ್ಲಿ(ನಾಗಲಿಂಗಸ್ವಾಮಿ ಮಠ) ಪಚೆಭೈರಣ್ಣನ ಮಗ ವಿರೂಪಾಕ್ಷನು ಜೀರ್ಣೋದ್ಧಾರ ಮಾಡಿಸಿ ಕಟ್ಟಿಸಿದ ವಿಷಯ ತಿಳಿಸುತ್ತದೆ.

ಎರಡು ಬಂಡೆಗಳ ಮಧ್ಯೆ ಗವಿಯಂತಿರುವ ನಾಗಲಿಂಗಸ್ವಾಮಿ ಮಠವು ಈಗ ಸುಸ್ಥಿತಿಯಲ್ಲಿದೆ. ಸ್ವಲ್ಪ ಎತ್ತರದಲ್ಲಿರುವ ಈ ಮಠವನ್ನು ಏರಲು ಮೆಟ್ಟಿಲುಗಳಿವೆ. ದಕ್ಷಿಣಾಭಿಮುಖವಾಗಿರುವ ಈ ಮಠ ಪ್ರೌಢದೇವರಾಯನ ಕಾಲದಲ್ಲಿ ಹಂಪಿಯಲ್ಲಿದ್ದ ವೀರಶೈವ ಅನುಭಾವಿ ಶರಣ ಕರಸ್ಥಲ ವೀರಣ್ಣೊಡೆಯನ

ಶಿಷ್ಯ ಕರಸ್ಥಲದ ನಾಗಿದೇವನ ವಾಸಸ್ಥಾನವಾಗಿದೆ. ಈತ ನೂರೊಂದು ವಿರಕ್ತದಲ್ಲಿ ಆದ್ಯನೆನಿಸಿದ್ದಾನೆ. ಮೂಲತಃ ಅಕ್ಕಸಾಲಿಗನಾದ ನಾಗಿದೇವ ಒಬ್ಬ ಮಹಾಅನುಭಾವಿಯಾಗಿ ವೀರಶೈವ ಸಾಹಿತ್ಯ ಚರಿತ್ರೆಯಲ್ಲಿ ತನ್ನ ಹೆಸರನ್ನು ಸ್ಥಿರಗೊಳಿಸಿದ್ದಾನೆ. ನಾಗಿದೇವನೂ ಸಹ ಶ್ರೀರಂಗಪಟ್ಟಣದ ಸಮೀಪವಿರುವ ಬೊಮ್ಮೂರು ಗ್ರಾಮದವನು. ಈತನ ಕಾಲ ಕ್ರಿ.ಶ.೧೪೩೦. ಚೆನ್ನವೀರ ಜಂಗಮ ದೇವನ ಷಟ್ಸ್ಥಲ ವಲ್ಲಭ(೧೫೦೦), ಅದೃಶ್ಯ ಕವಿಯ ಪ್ರೌಢರಾಯನ ಕಾವ್ಯ(೧೫೮೦), ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ (೧೫೮೪), ಕಂಬಾಳು ಮಲ್ಲೇಶನ ಗಣವಚನ ರತ್ನಾವಳಿ (೧೬೦೦) ಸಿದ್ಧನಂಜೇಶನ ರಾಘವಾಂಕ ಚಾರಿತ್ರ, ಗುರುರಾಜ ಚಾರಿತ್ರ (೧೬೫೦) ರುದ್ರಕವಿಯ ಕರಸ್ಥಲ ನಾಗಲಿಂಗನ ಚಾರಿತ್ರ (೧೬೫೦) ಮೋದಿ ರುದ್ರನ ನೂರೊಂದು ವಿರಕ್ತರ ಕಾವ್ಯ (೧೭೩೭) ಮುಂತಾದ ಕಾವ್ಯಗಳಲ್ಲಿ ಕರಸ್ಥಲದ ನಾಗಿದೇವನ ಜೀವನ ಚರಿತ್ರೆ ನಿರೂಪಿತವಾಗಿದೆ.

ಮಹಾ ಅನುಭಾವಿಯಾದ ನಾಗಿದೇವನ ವ್ಯಕ್ತಿತ್ವವನ್ನು ವೈಭವೀಕರಿಸುವಲ್ಲಿ ಹಲವಾರು ಕವಿಗಳು ಕೆಲವು ಪ್ರಸಂಗಗಳನ್ನು ಸೃಷ್ಟಿಸಿದ್ದಾರೆ. ನಾಗಿದೇವನು ಹಾದರಕ್ಕೆ ಹೊಕ್ಕ ಪ್ರಸಂಗ, ವಿದ್ಯಾ(ವಿಜಯ)ನಗರದಲ್ಲಿ ಹುಚ್ಚರಾಹುತನ ಸತಿಯೊಡನೆ ನೆರೆದ ಪ್ರಸಂಗ, ಸಿಂಗಾರ ತೋಟದಲ್ಲಿನ ಕಾಯಿಗಳ ಎಳನೀರನ್ನು ಲಿಂಗಕ್ಕರ್ಪಿಸಿದ ಪ್ರಸಂಗವನ್ನು ಗಮನಿಸಿದಾಗ ಈತ ಯೋಗಸಿದ್ಧಿ ಪಡೆದ ಗಂಭೀರನೂ, ಪ್ರಾಣಲಿಂಗಿ, ಪ್ರಸಾದಿಸ್ಥಲವನ್ನು ಮೆಟ್ಟಿನಿಂತ ಶಿವಶರಣನೂ, ಬಯಲಸ್ವರೂಪಿಯಾದ ಶಿವಯೋಗಿಯೂ, ವೀರಶೈವ ತತ್ವಗಳನ್ನು ಪ್ರತ್ಯಕ್ಷವಾಗಿ ಅನುಷ್ಠಾನಕ್ಕೆ ತಂದ ಮಹಾವಿರಕ್ತನೂ ಆಗಿದ್ದುದು ಕಂಡುಬರುತ್ತದೆ. ವೀರಶೈವ ಸಾಹಿತ್ಯ ತತ್ವ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡ ನಾಗಿದೇವ ಪ್ರೌಢದೇವರಾಯನಿಂದ ಗೌರವಾದರಗಳನ್ನು ಪಡೆದುಕೊಂಡಿದ್ದಾನೆ.[೮೨]

ಹಂಪಿಯ ತನ್ನ ಮಠದಲ್ಲಿದ್ದುಕೊಂಡು ವೀರಶೈವ ಧರ್ಮ ಕಟ್ಟುವಲ್ಲಿ ಪ್ರಮುಖ ಪಾತ್ರವಹಿಸಿದ ನಾಗಿದೇವ, ಆ ಧರ್ಮಪ್ರಚಾರ ಮಾಡಲು ಅದರ ತತ್ತ್ವ ಸಿದ್ಧಾಂತಗಳನ್ನು ಸಾರುವ ೧. ಕರಸ್ಥಲ ನಾಗಿದೇವನ ತ್ರಿವಿಧಿ, ೨. ಅಕ್ಷರ ಚೌಪದನ, ೩. ಏಕವಿಂಶತಿ ದೀಕ್ಷಾ ವಿಧಾನ, ೪. ಮಡಿವಾಳ ಮಾಚಯ್ಯನ ತಾರಾವಳಿ, ೫. ಶಾಂತ ಶತಕ ೬. ಲಿಂಗನಿಜ ಸ್ಥಳದ ವಚನ, ೭. ಕಾಲಜ್ಞಾನ, ೮. ಪಂಚವಿಂಶತಿ ಲೀಲಾಂಕಿತ ಸ್ತೋತ್ರ, ೯. ವಚನ, ೧೦. ಸ್ವರವಚನ ಎಂಬ ಕೃತಿಗಳನ್ನು ರಚಿಸಿ ಆ ಮೂಲಕ ವೀರಶೈವ ಧರ್ಮದ ಬೆಳವಣಿಗೆಗೆ ಕಾರಣನಾಗಿದ್ದಾನೆ.

೧೬. ಶ್ರೀಡುರದೇವರ ಮಠ : ಮೀಸರ ಗಂಡನ ಕೊತ್ತಳಕ್ಕೆ ಈಶಾನ್ಯ ದಿಕ್ಕಿನಲ್ಲಿರುವ ಗುಡ್ಡದ ಮೇಲಿನ ಮಂಟಪದ ಮುಂಭಾಗದ ಬಂಡೆಯ ಮೇಲಿರುವ ಕ್ರಿ.ಶ.೧೫-೧೬ನೇ ಶತಮಾನದ ಶಾಸನವು ಶ್ರೀಡುರ ದೇವರ ಮಟ ಚಂದ್ರಸೇರ್ಕಮಂತ ದೇವರಿಗೆ ವಿಪ್ಪ್ರಪ ನಿದರ್ಪೆತೆ ತೀರದರಕ''....[೮೩] ಎಂದು ಉಲ್ಲೇಖಿಸುತ್ತದೆ.

ಈ ಶಾಸನವು ಶ್ರೀ ಡುರುದೇವರ ಮಠ ಮತ್ತು ಚಂದ್ರಶೇಖರ ಮಹಾಂತ ದೇವರನ್ನು ಕುರಿತು ವಿವರಿಸುತ್ತದೆ. ಚಂದ್ರಶೇಖರ ಮಹಾಂತದೇವರು ಈ ಮಠದ ಸ್ವಾಮಿಗಳಾಗಿರಬಹುದು. ಈ ಶಾಸನದ ಮೇಲ್ಭಾಗದಲ್ಲಿ ಚಂದ್ರ, ಸೂರ್ಯ, ನಂದಿ, ಶಿವಲಿಂಗ, ಇರುವುದನ್ನು ಗಮನಿಸಿದರೆ ಇದೊಂದು ವೀರಶೈವ ಮಠವೆಂದು ದೃಢವಾಗಿ ಹೇಳಬಹುದು. ಈ ಶಾಸನದ ಪಕ್ಕದಲ್ಲಿರುವ ಮಂಟಪವೇ ಡುರದೇವರ ಮಠವಾಗಿರುವ ಸಾಧ್ಯತೆ ಇದೆ.

೧೭. ತ್ರಯಂಬನಾಥಸ್ವಾಮಿ ಒಡೆಯರ ಮಠ : ಪ್ರಸನ್ನ ವಿರೂಪಾಕ್ಷ ದೇವಾಲಯದ ಉತ್ತರ ದಿಕ್ಕಿನಲ್ಲಿರುವ ಗಣ್ಯವ್ಯಕ್ತಿಗಳ ಅರಮನೆ ಸಂಖ್ಯೆ-೭ರ ಹತ್ತಿರದಲ್ಲಿರುವ ಬಂಡೆಯ ಮೇಲಿರುವ ಶಾಸನವು "ಶ್ರೀತ್ರಯ್ಯಮ್ಬನಾಥ ಸ್ವಾಮಿ ವಡೆಯರ ಮಠಶ್ರಿ"[೮೪] ಎಂದು ಉಲ್ಲೇಖಿಸುತ್ತದೆ. ಈ ಶಾಸನದ ದಕ್ಷಿಣ ಭಾಗದಲ್ಲಿ ಬಂಡೆಯ ಮೇಲೆ ಶಿವಲಿಂಗಗಳ ಚಿತ್ರಗಳಿದ್ದು, ಇವು ಮಠದ ನಿವೇಶನದ ಸರಹದ್ದನ್ನು ಸೂಚಿಸುತ್ತವೆ. ಶ್ರೀತ್ರಯಂಬ ನಾಥಸ್ವಾಮಿ ಒಡೆಯರು ಈ ಮಠದ ಸ್ವಾಮಿಗಳಾಗಿದ್ದಂತೆ ತೋರುತ್ತದೆ. ಈ ಶಾಸನದ ಸ್ವಲ್ಪ ಹತ್ತಿರ ಪಶ್ಚಿಮಾಭಿಮುಖವಾಗಿರುವ ಒಂದು ಕಲ್ಲು ಮಂಟಪವಿದೆ. ಇದು ೩ ಅಂಕಣ ಹೊಂದಿದ್ದು, ಮೇಲ್ಛಾವಣೆ ಬಿದ್ದು ಹೋಗಿದೆ. ಸು.೨೦ ಕಂಬಗಳಿದ್ದು ಮೂರು ಕಡೆ ಗೋಡೆ ಇದೆ. ಬಹುಶಃ ಈ ಮಂಟಪವೇ ತ್ರಯಂಬನಾಥ ಸ್ವಾಮಿ ಒಡೆಯರ ಮಠವಾಗಿರುವ ಸಾಧ್ಯತೆ ಇದೆ. ಈ ಮಂಟಪದ ಹಿಂಭಾಗದ ಸ್ವಲ್ಪ ದೂರದಲ್ಲಿ ದಕ್ಷಿಣಾಭಿಮುಖವಾಗಿರುವ ವೀರಭದ್ರ ದೇವಾಲಯವಿದೆ. ಈ ಹಿನ್ನೆಲೆಯಲ್ಲಿ ಈ ಮಂಟಪವೇ ತ್ರಯಂಬನಾಥ ಸ್ವಾಮಿ ಒಡೆಯರ ಮಠವಾಗಿದೆಂದು ಹೇಳಬಹುದಾಗಿದೆ.

೧೮. ಸದಾಶಿವಯೋಗಿ ಮಠ : ತಳವಾರಸಘಟ್ಟ-ಕಂಪ್ಲಿ-ಹೊಸಪೆಟೆ ರಸ್ತೆಗಳು ಕೂಡುವ ಸ್ಥಳದ ಹತ್ತಿರ ಬೆಟ್ಟದ ಮೇಲೆ ಕಲ್ಲಿನ ಆಸರೆಯ ಗುಂಡಿನ ಮೇಲೆ ಇರುವ ಶಾಸನವು "ಸೊ...ರಾಉತ.... ಮಾಡಿಸಿದ ಮಟಉ ಶ್ರೀ"[೮೫] ಎಂದು ಮಠವನ್ನು ಕಟ್ಟಿಸಿದ ವಿಷಯವನ್ನು ದಾಖಲಿಸುತ್ತದೆ. ಈ ಶಾಸನದ ಪಕ್ಕದಲ್ಲಿ ಎರಡು ದೊಡ್ಡ ಕಲ್ಲು ಗುಂಡುಗಳ ಮಧ್ಯ ಇರುವ ಜಾಗಕ್ಕೆ ಮಂಟಪವನ್ನು 'L'(ಎಲ್) ಆಕಾರದಲ್ಲಿ ಕಟ್ಟಲಾಗಿದ್ದು, ಕಲ್ಲಿನ ಮೇಲ್ಛಾವಣೆ ಹಾಕಲಾಗಿದೆ. ಈ ಮಂಟಪದ ಒಳಗಡೆ ನಂದಿಶಿಲ್ಪವಿದೆ. ಈ ಮಂಟಪದ ಪಶ್ಚಿಮಕ್ಕೆ ಸು.೩೦ ಅಡಿ ಅಂತರದಲ್ಲಿ ಬಾವಿ ಇದೆ. ಈ ಹಿನ್ನಲೆಯಲ್ಲಿ ಇದೊಂದು ವೀರಶೈವ ಮಠವಾಗಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಬಹುಶಃ ಇದೇ ಸದಾಶಿವಯೋಗಿ ಮಠವಾಗಿರಬೇಕೆನಿಸುತ್ತದೆ. ಕಾರಣ ಇದೇ ಬೆಟ್ಟದಲ್ಲಿ ಉತ್ತರಕ್ಕೆ ಅನತಿ ದೂರದಲ್ಲಿರುವ ದೇವಾಲಯದ ಗುಂಡಿನ ಮೇಲಿರುವ ಶಾಸನವು "ಸದಾಶಿವ ಮಹಾಯೋಗಿ ಸದ್ವಾಕ್ಯೆ ಭೋಗ ತೇಜಸೊಃ...... ಕರಿಯ ಬಸವಂಣೊಡೆಯರ ಮಗ ಸದಾಶಿವನು ಆತನ ಶಿಷ್ಯರು ಕಾಮ್ಮೆಯ್ಯ ಪೆದ್ದಿಗರು"[೮೬] ಎಂದು ದಾಖಲಿಸಿದೆ. ಈ ಶಾಸನವು ಸದಾಶಿವ ಮಹಾಯೋಗಿ, ಕರಿಯ ಬಸವಣ್ಣೊಡೆಯನ ಮಗ ಸದಾಶಿವ, ಆತನ ಶಿಷ್ಯ ಕಾಮಯ್ಯ ಪೆದ್ದಿಯನ್ನು ಉಲ್ಲೇಖಿಸಿದೆ. ಈ ಶಾಸನದಲ್ಲಿರುವ ಸದಾಶಿವ ಮಹಾಯೋಗಿ ಈ ಮಠದ

ಅಧ್ಯಕ್ಷನಾಗಿರಬಹುದು. ಆದ್ದರಿಂದ ಶಾಸನೋಕ್ತ ಮಠವನ್ನು ಸದಾಶಿವಯೋಗಿ ಮಠವೆಂದು ಕರೆದರೆ ತಪ್ಪಾಗಲಾರದು.

೧೯. ಸಿದ್ದಯೋಗಿ ದೇವರ ಗವಿ : ಭೀಮನ ಬಾಗಿಲಿನ ಈಶಾನ್ಯ ದಿಕ್ಕಿಗಿರುವ ಕಲ್ಲಿನ ಆಸರೆಯಲ್ಲಿಯ ಕಲ್ಲಿನ ಮೇಲೆ ಇರುವ ಶಾಸನವು "ಸಿದಯೋಗಿದೇವರ ಗವಿ"[೮೭] ಎಂದು ಉಲ್ಲೇಖಿಸುತ್ತದೆ. ಅಲ್ಲದೆ ಈ ಶಾಸನದ ಹತ್ತಿರದ ಬೆಟ್ಟದ ಮೇಲಿನ ಬಂಡೆಯ ಮೇಲೆ ಇರುವ ಶಾಸನವು "ರೇವಣಸಿದ್ಧನ ಪಾದದಕಿಯ ಗುಂಡು ಭೈರವ (ಮೂರ್ತಿ)ಯ"[೮೮] ಎಂದು ದಾಖಲಿಸುತ್ತದೆ. ಬಹುಶಃ ಸಿದ್ಧಯೋಗಿದೇವರ ಗವಿ ರೇವಣಸಿದ್ಧ ಪರಂಪರೆಯ ಗವಿಯಾಗಿರಬಹುದು. ೧೪ನೇ ಶತಮಾನದ ನಂತರ ರೇವಣಸಿದ್ಧನ ಪರಂಪರೆಯವರು ವೀರಶೈವರಾಗಿದ್ದಂತೆ ಕಂಡುಬರುತ್ತದೆ. ಸಿದ್ಧಯೋಗಿ ದೇವರ ಗವಿಯ ಈಶಾನ್ಯಕ್ಕೆ ಅದೇ ಬೆಟ್ಟದ ಬುಡದಲ್ಲಿರುವ ಗುಂಡಿನ ಮೇಲೆ ಇರುವ ಶಾಸನವು "ಸೋಮಯ್ಯ ದೇವರೂ"[೮೯]ಎಂದು ದಾಖಲಿಸಿರುವುದನ್ನು ಗಮನಿಸಿದರೆ ಇವನು ವೀರಶೈವನಾಗಿದ್ದು ಸಿದ್ದಯೋಗಿ ದೇವರ ಗವಿಯಲ್ಲಿ ವಾಸವಾಗಿದ್ದಂತೆ ತೋರುತ್ತದೆ.

ಸಿದ್ಧಯೋಗಿ ದೇವರ ಗವಿಯನ್ನು ದಾಖಲಿಸುವ ಶಾಸನದ ಎದುರಿಗೆ ಇರುವ ಒಂದು ಎತ್ತರದ (ದೊಡ್ಡ ಕಲ್ಲು ಬಂಡೆ(ಗಂಡು) ಇದ್ದು, ಅದರಲ್ಲಿ ಒಂದು ಗವಿ ಇದೆ, ಅದರ ಮುಂದೆ 'L'(ಎಲ್) ಆಕಾರದಲ್ಲಿ ಪೂರ್ವ-ಉತ್ತರಾಭಿಮುಖವಾಗಿ ಸು.೫೦ ಕಂಬಗಳ ಮಂಟಪ ನಿರ್ಮಿಸಲಾಗಿದೆ. ಇದಕ್ಕೆ ಪೂರ್ವದಿಕ್ಕಿನಲ್ಲಿ ಬಾವಿ ಇದೆ. ಈ ಮಂಟಪವು ಕಲ್ಲಿನ ಮೇಲ್ಛಾವಣೆ ಹೊಂದಿದೆ. ಇದರ ಮುಂದೆ ಗಿಡ-ಗಂಟೆ ಬೆಳೆದಿದ್ದು ಜೀರ್ಣೋದ್ದಾರ ಬಯಸುತ್ತಿದೆ. ಬಹುಶಃ ಇದೇ ಶಾಸನದಲ್ಲಿರುವ ಸಿದ್ಧಯೋಗಿ ದೇವರ ಗವಿಯಾಗಿರಬಹುದಾಗಿದೆ.

೨೦ ಅರಸರ ಗವಿ : ವಿರೂಪಾಕ್ಷ ದೇವಾಲಯದ ಹಿಂಬದಿಯಲ್ಲಿ ಅರ್ಧ ಕಿಲೋಮೀಟರ್ ದೂರದಲ್ಲಿ "ಅರಸರ ಗವಿ" ಎಂಬ ಗುಹೆ ಇದೆ. ಅದರಲ್ಲಿ ಭಗ್ನ ಶಿವಲಿಂಗ, ನಂದಿ ವಿಗ್ರಹಗಳಿವೆ. ಒಳಗೆ ಗೋಡೆ ಕಟ್ಟಿ ಎರಡು ವಾಸದ ಕೋಣೆಗಳನ್ನು ಕಲ್ಪಿಸಲಾಗಿದೆ. ಆ ಗೋಡೆಗಳ ಮೇಲೆ ವಿಜಯನಗರ ಕಾಲದ ಸುಂದರ ವರ್ಣಚಿತ್ರಗಳಿವೆ; ಈ ಗುಹೆ ಯಾವನೋ ಸುಪ್ರಸಿದ್ಧ ವೀರಶೈವ ಗುರುವಿನ ಮಠವಾಗಿದ್ದಿರ ಬಹುದು.[೯೦] ವೀರಶೈವಧರ್ಮ, ಸಾಹಿತ್ಯಕ್ಕೆ ಪ್ರೋತ್ಸಾಹಿಸಿ ತಾನೂ ವೀರಶೈವಧರ್ಮ ಸ್ವೀಕರಿಸಿದ ಪ್ರೌಢದೇವರಾಯ ವಿರೂಪಾಕ್ಷನ ಸನ್ನಿಧಿಯಲ್ಲಿ ದೀಕ್ಷೆ ಹೊಂದಿ, ಧ್ಯಾನಾಸಕ್ತನಾದ ಸ್ಥಳವಾಗಿರಬಹುದು. ಅದಕ್ಕಾಗಿ ಇದನ್ನು ಅರಸರ ಗವಿ ಎಂದು ಕರೆಯಲಾಗಿದೆ. ಗುಹೆಯ ಮುಂದೆ ಮುಖ ಮಂಟಪವಿದ್ದು, ಬಂಡೆಗಳ ಮೇಲೆ ಅಲ್ಲಲ್ಲಿ ಹಾವು, ಕಲಶ, ತ್ರಿಶೂಲ, ಕುದುರೆ, ಆನೆಗಳನ್ನು ಕೆತ್ತಲಾಗಿದೆ. ಆದ್ದರಿಂದ ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ಇದು ಪ್ರೌಢದೇವರಾಯನ ಧ್ಯಾನ ಮಂದಿರವೆನಿಸುತ್ತದೆ.

೨೧. ಕಲ್ಲುಮಠ : ಹಂಪಿಯಲ್ಲಿ ಅನೇಕ ಕಲ್ಲುಮಠಗಳಿವೆ. ಇವುಗಳು ಯಾವಾಗ, ಯಾರ ಆಳ್ವಿಕೆಯ ಕಾಲದಲ್ಲಿ ಸ್ಥಾಪನೆಯಾದವು? ಈ ಮಠಗಳ ಅಧಿಪತಿಗಳು ಯಾರಾಗಿದ್ದರು? ಇನ್ನು ಮುಂತಾದ ಅಂಶಗಳು ಸಮಕಾಲೀನ ಆಕರಗಳ ಕೊರತೆಯಿಂದ ಗುರುತಿಸುವುದು ಕಷ್ಟಕರವಾಗಿದೆ. ಇಂತಹ ಮಠಗಳಲ್ಲಿ ಶಾಸನೋಕ್ತ ಹಂಪಿಯ ಕಲ್ಲುಮಠವೂ ಒಂದಾಗಿದೆ. ಕ್ರಿ.ಶ.೧೪೩೦ರ ಅಂದವಳ್ಳಿ ಶಾಸನವು "ಅರಸಪ್ಪ ವೊಡೆಯರ ಕುಮಾರ ಹಂಪೆಯರಾಯರು ಗೋವಿಗುತ್ತಿಯ ರಾಜ್ಯವನಾಳುತ್ತಂಯಿದಲ್ಲಿ ದೇವರಾಯ ಮಹಾರಾಯವೊಡೆಯರು ಸೌಮ್ಯ ಸಂವತ್ಸರ ಮಾಘ ಬ ೧೩ ಪುಣ್ಯಕಾಲದಲ್ಲಿ ಹಂಪೆಯ ಕಲ್ಲು ಮಠದಲ್ಲಿಯಿಹ ವಿಶ್ವೇಶ್ವರಾರಣ್ಯ ಶ್ರೀಪಾದಂಗಳಿಗೂ ಅವರ ಮಠದಲ್ಲಿ ಯಿಹ ವಿದ್ಯಾಶಂಕರ ದೇವರ ಅಮೃತ ಪಡಿ ನಂದಾದೀಪ್ತಿ ಯತಿಗಳ ಭಿಕ್ಷಾಸ್ವಾಸ್ತಿಗೂ ಕೊಟ್ಟು ಧಾರೆನೆರೆದು....."[೧೧] ಎಂದು ದಾಖಲಿಸಿದೆ. ಈ ಶಾಸನದ ಪ್ರಕಾರ ಅರಸ ಪ್ರಭುವೊಡೆಯನ ಮಗನಾದ ಹಂಪಿಯರಾಯರು ಗೋವೆಗುತ್ತಿ ರಾಜ್ಯವನ್ನು ಆಳುತ್ತಿರುತ್ತಾನೆ. ದೇವರಾಯ ಇವನನ್ನು ಕರೆಯಿಸಿ ಹಂಪೆಯ ಕಲ್ಲುಮಠದಲ್ಲಿ ಇದ್ದ ವಿಶ್ವೇಶ್ವರಾರಣ್ಯರಿಗೂ ಮತ್ತು ಮಠದಲ್ಲಿದ್ದ ವಿದ್ಯಾಶಂಕರ ದೇವರ ಅಮೃತ ಪಡಿ, ನಂದಾದೀಪಕ್ಕಾಗಿ, ಯತಿಗಳ ಆಹಾರಕ್ಕಾಗಿ ಅಂದವಳ್ಳಿ ಗ್ರಾಮವನ್ನು ದಾನವಾಗಿ ನೀಡುತ್ತಾನೆ.

ಈ ಶಾಸನವು ದಾಖಲಿಸುವ ಹಂಪೆರಾಯ ಮೂಲತಃ ಹಂಪಿಯವನಿದ್ದು ಆತನ ಮೂಲಕ ಆತನ ಮನೆಗುರುಗಳಾದ(?) ಕಲ್ಲುಮಠದ ವಿಶ್ವೇಶ್ವರಾರಣ್ಯ ಯತಿಗಳಿಗೆ ದೇವರಾಯ ದಾನ ನೀಡಿದ್ದಾನೆ. ಪ್ರಭುದೇವರ ಕಲ್ಲುಮಠ ಮತ್ತು ವಿಶ್ವೇಶ್ವರಾರಣ್ಯರ ಕಲ್ಲುಮಠ ಏಕಕಾಲದಲ್ಲಿ ಅಸ್ತಿತ್ವದಲ್ಲಿದ್ದು ಒಂದಕ್ಕೊಂದು ಬೇರೆ ಬೇರೆಯಾಗಿವೆ. ಈ ಕಲ್ಲುಮಠವೂ ಸಹ ವೀರಶೈವ ಮಠವಾಗಿದೆ. ಇದನ್ನು ಹಂಪಿಯಲ್ಲಿ ಗುರುತಿಸುವುದು ಕಷ್ಟವಾಗಿದೆ.

೨೨. ಹೇಮಕೂಟ ಮಠ ಅಥವಾ ಜೇಡರ ದಾಸಿಮಯ್ಯನ ಮಠ : 'ಹಂಪಿಯ ಅತ್ಯಂತ ಪ್ರಾಚೀನ ಪ್ರದೇಶವೆಂದರೆ ಹೇಮಕೂಟ ಪರಿಸರ, ನಿಜವಾದ ಹಂಪಿಯೆಂದರೆ ಈ ಪ್ರದೇಶವೇ ಆಗಿದೆ. ಒಂದು ಕಾಲಕ್ಕೆ ಹಂಪಿಯೆಂದರೆ ಹೇಮಕೂಟ ಪರಿಸರ, ಹೇಮಕೂಟ ಪರಿಸರವೆಂದರೆ ಹಂಪಿ. ಇಷ್ಟು ಹಳೆಯದು ಈ ಪ್ರದೇಶ. ಇದು ಶಿವನ ವಾಸಸ್ಥಾನ, ಶಿವ ತಪಸ್ಸು ಮಾಡಿದ ಸ್ಥಳವೆಂಬ ಪ್ರತೀತಿ ಜನರಲ್ಲಿದೆ. ಈ ಕುರಿತು ಹರಿಹರನ ಗಿರಿಜಾ ಕಲ್ಯಾಣ ಕಾವ್ಯದಲ್ಲಿ ವಿವರವಿದೆ. ಇದೊಂದು ಹಂಪಿಯ ಬಹುದೊಡ್ಡ ಶೈವ ಕ್ಷೇತ್ರವಾಗಿದೆ. ಇಲ್ಲಿ ೧೦೦ಕ್ಕೆ ೮೫ ರಷ್ಟು ಶಿವದೇವಸ್ಥಾನಗಳು ನಿರ್ಮಾಣವಾಗಿವೆ. ಅಂಥವುಗಳಲ್ಲಿ ರಾಮಲಿಂಗೇಶ್ವರ ದೇವಾಲಯವೂ ಒಂದಾಗಿದೆ. ರಾಮಲಿಂಗೇಶ್ವರ ಎಂದ ತಕ್ಷಣ ನಮಗೆ ಆದ್ಯ ವಚನಕಾರ ಜೇಡ ದಾಸಿಮಯ್ಯನ ವಚನದ ಅಂಕಿತ 'ರಾಮನಾಥ' ಎಂಬ ಹೆಸರು ನೆನಪಾಗುತ್ತದೆ. ಜೇಡರ ದಾಸಿಮಯ್ಯನ ಇಷ್ಟದೈವ ರಾಮಲಿಂಗೇಶ್ವರವೇ ಆಗಿದೆ. ಆದ್ದರಿಂದ ಇದು ಲಿಂಗಾಯತ ನೇಕಾರ ಸಮುದಾಯಕ್ಕೆ ಸೇರಿದುದಾಗಿದೆ.

ವಿಜಯನಗರ ಕಾಲದ ಈ ದೇವಾಲಯದಲ್ಲಿ ೩೨ ಪ್ರಾಚೀನ ಹಸ್ತಪ್ರತಿಗಳು ದೊರೆತಿವೆ. ಇವುಗಳಲ್ಲಿ ಬಹಳಷ್ಟು ವೀರಶೈವ ಹಸ್ತಪ್ರತಿಗಳೇ (ಕಲಿಗಣನಾಥ, ಸಾಂಗತ್ಯ, ಕಲ್ಯಾಣೇಶ್ವರ, ಶರಣರ ಕಾಲಜ್ಞಾನ, ದೀಪದ ಕಲಿಯರ ಕಾವ್ಯ, ನಂಜುಂಡೇಶ್ವರ ತಾರಾವಳಿ, ನುಂಕಿಮಲೆ ಸಿದ್ದೇಶ್ವರ ಪುರಾಣ ಇತ್ಯಾದಿ) ಅಧಿಕ ಸಂಖ್ಯೆಯಲ್ಲಿವೆ. ವೀರಶೈವೇತರವೆನಿಸುವ ೩-೪ ಹಸ್ತಪ್ರತಿಗಳಲ್ಲಿ "ಶ್ರೀ ಗುರುಬಸವ ಲಿಂಗಾಯ ನಮಃ" ಎಂಬ ಆರಂಭದ ಸ್ತುತಿ ಇದೆ. "ದೇವಾಂಗ ಬೃಹಸ್ಪತ್ಯೋತ್ಪತ್ತಿ ಟೀಕೆ' ಹೆಸರಿನ ಹಸ್ತಪತ್ರಿಯಲ್ಲಿ ಶಂಕರದಾಸಿಮಯ್ಯ, ದೇವರದಾಸಿಮಯ್ಯ, ದಸರಸ್ಯ ಶರಣರ ಉಲ್ಲೇಖಗಳಿವೆ.[೨] ಈ ಹಿನ್ನೆಲೆಯಲ್ಲಿ ಇದೊಂದು ವೀರಶೈವ ಮಠವೆಂಬುದರಲ್ಲಿ ಯಾವುದೇ ಸಂಶಯವಿಲ್ಲ.

ಈ ರಾಮಲಿಂಗೇಶ್ವರ ದೇವಾಲಯದ ಮುಂಭಾಗದಲ್ಲಿ ಅಂದರೆ ಮೂಲ ವಿರೂಪಾಕ್ಷ ದೇವಾಲಯದ ಹಿಂಬದಿಯ ಬಂಡೆಯಲ್ಲಿನ ಕ್ರಿ.ಶ.೧೫೭೭ರ ಶಾಸನವು "ಜೆಡೆಯ ಶಂಕರದೇವರನ್ನು"[೩] ಉಲ್ಲೇಖಿಸುತ್ತದೆ. ಜೆಡೆಯ ಶಂಕರದೇವರು ವಚನಕಾರ ಶಂಕರ ದಾಸಿಮಯ್ಯನ ಇಷ್ಟದೈವವಾಗಿದೆ. ಶಂಕರ ದಾಸಿಮಯ್ಯ ಜೇಡರದಾಸಿಮಯ್ಯನ ಗುರುವಾಗಿದ್ದಾನೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಹೇಮಕೂಟದ ರಾಮಲಿಂಗೇಶ್ವರ ದೇವಾಲಯವು ಹಿಂದೊಮ್ಮೆ ವೀರಶೈವ ಮಠವಾಗಿದ್ದುದನ್ನು ಧ್ವನಿಸುತ್ತದೆ. ಆದ್ದರಿಂದ ಇದನ್ನು ಹೇಮಕೂಟ ಮಠ ಅಥವಾ ಜೇಡರ ದಾಸಿಮಯ್ಯನ ಮಠವೆಂದು ಕರೆಯಬಹುದಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಇಷ್ಟಲಿಂಗ ಧಾರಿಗಳಾದ ವೀರಶೈವ ನೇಕಾರ ಸಮಾಜದ ರಾಮಲಿಂಗ ದೇವಸ್ಥಾನವು ಜನ್ನಿವಾರಧಾರಿಗಳಾದ ದೇವಾಂಗ ನೇಕಾರರ ವಶವಾಗಿದೆ. ಇದು ಈ ದೇವಾಲಯದ ಇತಿಹಾಸದಲ್ಲಿ ಒಂದು ದೊಡ್ಡ ಬದಲಾವಣೆ. ಇನ್ನೊಂದು ಬದಲಾವಣೆಯೆಂದರೆ ಕೆಲವು ವರ್ಷಗಳ ಹಿಂದೆ ಈ ದೇವಾಲಯವನ್ನು "ಪುರಿ" ವಿಶೇಷಣದ ಗಾಯತ್ರಿ ಪೀಠದ ಜಗದ್ಗುರುಗಳು ವಶಪಡಿಸಿ ಕೊಂಡಿದ್ದಾರೆ.[೪] ಅಂದಿನ ವೀರಶೈವ ಮಠವು ಇಂದು ವೈದಿಕ ಪರಂಪರೆಯವರ ಅಧಿಕಾರಕ್ಕೆ ಒಳಗಾಗಿ ತನ್ನ ವೀರಶೈವತ್ವವನ್ನು ಕಳೆದುಕೊಂಡು ವೈದಿಕಮಯಗೊಂಡಿರುವುದು ಹಾಸ್ಯಾಸ್ಪದ ಸಂಗತಿಯಾಗಿದೆ.

### ಆ. ನೂರೊಂದು ವಿರಕ್ತರು

೧೨ನೇ ಶತಮಾನದಲ್ಲಿ ಬಸವಣ್ಣನ ನೇತೃತ್ವದಲ್ಲಿ ಹುಟ್ಟಿಕೊಂಡ ಅನುಭವ ಮಂಟಪ ಮತ್ತು ಅಲ್ಲಿ ಬಸವಣ್ಣನಿಂದ ರಚನೆಯಾದ ಶೂನ್ಯ ಸಿಂಹಾಸನವನ್ನೇರಿದ ಅಲ್ಲಮ ಪ್ರಭುದೇವರೇ ಮೊದಲ ವೀರಶೈವ (ಲಿಂಗಾಯತ) ವಿರಕ್ತ. ಇವನ ನಂತರ ಚನ್ನಬಸವಣ್ಣ ಸಿದ್ಧರಾಮ ಮುಂತಾದವರು ಈ ಶೂನ್ಯ ಸಿಂಹಾಸನ ಏರಿದ ವಿರಕ್ತರು. ವೀರಶೈವ ಇತಿಹಾಸದಲ್ಲಿ ಇದೇ ಪ್ರಥಮ ವಿರಕ್ತ ಪರಂಪರೆಯಾಗಿದೆ. ಈ ವಿರಕ್ತ ಪರಂಪರೆ ೧೪-೧೫ನೇ ಶತಮಾನದಲ್ಲಿ ಇದೇ ಪ್ರಥಮ ವಿರಕ್ತ ಪರಂಪರೆಯಾಗಿದೆ. ಈ ವಿರಕ್ತ ಪರಂಪರೆ ೧೪-೧೫ನೇ ಶತಮಾನದಲ್ಲಿ ಹಂಪಿಯಲ್ಲಿ ವ್ಯಾಪಕಗೊಂಡು ಬೆಳೆದಿರುವುದನ್ನು

ಚರಿತ್ರೆಯಿಂದ ತಿಳಿದುಬರುತ್ತದೆ. ವೀರಶೈವ ಗಣವರದಲ್ಲಿ ಪ್ರಮಥಗಣ, ರುದ್ರಗಣ, ವೃಷಭಗಣ, ತ್ರಿಷಷ್ಠಿ ಪುರಾತನಗಣ, ಷೋಡಶಗಣ, ತೇರಸಗಣ, ೭೭೦ ಅಮರಗಣ ಹಾಗೂ ನೂತನಗಣವರರ ಚರಿತ್ರೆ ಸಮ್ಮಿಳಿತವಾಗಿರುವಂತೆ, ನೂರೊಂದು ಗಣೇಶ್ವರರ ಚರಿತ್ರೆಯೂ ಸೇರಿದೆ. ೧೫ನೆಯ ಶತಮಾನದ ವಿಜಯನಗರದ ದೊರೆ ಪ್ರೌಢದೇವರಾಯನ ಮಹಾಮಂತ್ರಿ ಲಕ್ಕಣ್ಣದಂಡೇಶನು ಉಲ್ಲೇಖಿಸಿದ ೬೦೦ ಕ್ಕೂ ಮಿಕ್ಕಿನ ನೂತನ ಗಣಂಗಳ ಕಾಲ ಮುಗಿಯುತ್ತಿದ್ದಂತೆಯೇ ನೂರೊಂದ ವಿರಕ್ತರು ಉದಯರಾಗಿ ವೀರಶೈವವನ್ನುದ್ಧರಿಸಿದರೆಂಬ ಸಂಗತಿ ಅನೇಕ ಪುರಾಣಗಳಲ್ಲಿದೆ.[೯] ಈ ನೂರೊಂದು ವಿರಕ್ತರ ಜೀವನ ಸಾಧನೆ ಕುರಿತು ಮೋದಿರುದ್ರ ಕವಿ ನೂರೊಂದು ವಿರಕ್ತರ ಕಾವ್ಯ ಬರೆದಿದ್ದಾನೆ. ಇವರ ಬದುಕು ಕುರಿತು ಸಮಕಾಲೀನ ಆಕಾರಗಳು ಮೌನವಹಿಸಿವೆ.

ಪ್ರೌಢದೇವರಾಯನ ಕಾಲದಲ್ಲಿ ಬಹುಶಃ ನೂರೊಂದು ವಿರಕ್ತರ ಕಲ್ಪನೆ ಮೂಡಿರಲಿಲ್ಲವೆಂದು ಗ್ರಹಿಸಬಹುದಾಗಿದೆ. ನೂರೊಂದು ವಿರಕ್ತರ ಪರಿಕಲ್ಪನೆ ಪ್ರೌಢದೇವರಾಯನ ಅವಧಿ ಮುಗಿದು ಸು.೯೦ ವರ್ಷಗಳ ನಂತರ ಬಂದ ಕವಿಗಳಿಂದ ಸೃಷ್ಟಿಯಾಗಿರಬೇಕೆನಿಸುತ್ತದೆ. ಏಕೆಂದರೆ ಸಮಕಾಲೀನ ಯಾವುದೇ ಆಧಾರಗಳು (ಕಾವ್ಯಗಳು) ನೂರೊಂದು ವಿರಕ್ತರನ್ನು ದಾಖಲಿಸುವುದಿಲ್ಲ. ಆದರೆ ಶಿವತತ್ತ್ವ ಚಿಂತಾಮಣಿ ಕಾವ್ಯದಲ್ಲಿ ವಿರಕ್ತರ ಸ್ವರೂಪದ ಸುಳಿಹು ಸಿಗುತ್ತದೆ. ಜಕ್ಕಣಾರ್ಯ, ಮಗ್ಗೆಯ ಮಾಯಿದೇವ ಮತ್ತು ಮಹಾಲಿಂಗದೇವ ಎಂಬ(ಅನುಭಾವಿ) ವಚನ ಸಂಕಲನಕಾರರು ಬಸವಾದಿ ಶರಣ ಷಟ್‌ಸ್ಥಲಗಳನ್ನು ನೂರೊಂದು ಸ್ಥಳಗಳಾಗಿ ತತ್ತ್ವಬದ್ಧವಾಗಿ ವಿಂಗಡಿಸಿದ ಪರಿಣಾಮವಾಗಿ ಹಾಗೂ ಈ ತತ್ತ್ವಸಿದ್ಧಾಂತವನ್ನು ಪ್ರಚಾರ ಮಾಡುವ ಸಾಧಕರನ್ನು ೧೬-೧೭ನೇ ಶತಾಮಾನದ ಕವಿಗಳು ನೂರೊಂದು ವಿರಕ್ತರಾಗಿ ರೂಪಿಸಿದಂತೆ ಕಂಡುಬರುತ್ತದೆ.

ಫ.ಗು.ಹಳಕಟ್ಟಿಯವರು ಹೇಳುವಂತೆ ''ನೂರೊಂದು ಸ್ಥಲಗಳ ಆಚರಣೆಯಂತೆ ಮನುಷ್ಯನು ಆಚರಿಸುತ್ತ ಹೋದಲ್ಲಿ ಷಟ್ ಸ್ಥಲ ಜ್ಞಾನವು ಅವನಿಗೆ ಪ್ರಾಪ್ತವಾಗುತ್ತದೆ. ಸಾಧಕನೂ ಅದೇ ರೀತಿಯಿಂದ ಕ್ರಿಯೆಗಳನ್ನು ಮಾಡಬೇಕೆಂಬುದರ ಸೂಕ್ಷ್ಮ ವಿವರಣೆಗಾಗಿಯೇ ಏಕೋತ್ತರ ಶತಸ್ಥಲ ರಚಿತವಾಗಿದೆ.[೬] ಹೀಗೆ ಷಟ್ ಸ್ಥಲಾಂತರ್ಗತವಾದ 'ನೂರೊಂದು ಸ್ಥಳ'ಗಳನ್ನು ಅರಿತು ಆಚರಿಸಿ ನಿಜೈಕ್ಯರಾದ ಮಹಾತ್ಮರೇ ನೂರೊಂದು ವಿರತರು. ನೂರೊಂದು ಸ್ಥಲ ನೆಲೆಗೊಂಡ ಸಂದರ್ಭದಲ್ಲಿ ಈ ನೂರೊಂದು ವಿರತರು ತತ್ಕಾಲದಲ್ಲಿಯೇ ಬದುಕಿದ್ದರೂ ಸಹ, ಈ ಸ್ಥಲಕಟ್ಟಿಗೆ ಮಹತ್ವಕೊಟ್ಟ ನಂತರದ ಮಹನೀಯರು ನೂರೊಂದು ಸ್ಥಳದ ಸಂಖ್ಯಾ ಹಿನ್ನೆಲೆಯಲ್ಲಿ ನೂರೊಂದು ವಿರಕ್ತರ ವ್ಯಕ್ತಿ ಸಂಖ್ಯೆಯನ್ನೂ ವಿಯೋಜಿಸಿದಂತೆ ತೋರುತ್ತದೆ. ಆದರೆ ನೂರೊಂದು ಸ್ಥಲಗಳಿಗೆ ಮೂರ್ತ ರೂಪ ಕೊಡುವ ಕಾರ್ಯವೇನೋ ಲಕ್ಕಣ್ಣ ದಂಡೇಶನ ಕಾಲಕ್ಕೆ ನಡೆಯಿತು. ಆದರೆ ನೂರೊಂದು ವಿರತರ ಸಂಖ್ಯಾ ನಿರ್ಣಯವಾದುದು ಲಕ್ಕಣ್ಣದಂಡೇಶನ ಆನಂತರದಲ್ಲಿ.[೭] ಆದ್ದರಿಂದ ಲಕ್ಕಣ್ಣದಂಡೇಶ ಈ ನೂರೊಂದು ವಿರಕ್ತರನ್ನು ತನ್ನ ಕಾವ್ಯದಲ್ಲಿ

ಸಂಪೂರ್ಣವಾಗಿ ದಾಖಲಿಸಿಲ್ಲ ಎಂಬ ನಿರ್ಣಯಕ್ಕೆ ಬರಲಾಗುವುದಿಲ್ಲ. ಶಿವತತ್ವ ಚಿಂತಾಮಣಿಯನ್ನು ಗಂಭೀರವಾಗಿ ಅವಲೋಕಿಸಿದರೆ ೧೦೧ ವಿರಕ್ತರ ಸುಳುಹು ಸಿಗುತ್ತದೆ.

"ಮಿಸುಪ ಸರ್ವಾಂಗಭಸಿತದ ವಿಮಲರುದ್ರಾಕ್ಷಿ
ಯೆಸೆವ ತೊಡಿಗೆಯ ಭಾರಿ ಜಡೆಯ ಕಾಷಾಂಬರದೆ
ಮಸುಳಿಸದ ಸುಳಿಪಲ್ಲ...... ಜಪಮಾಲೆಗಳ"
ಬಿಟ್ಟ ಜಡೆಗಳ ದಿಗಂಬರದ ಶಿವಲಿಂಗದೊಳು
ನಟ್ಟ ದೃಷ್ಟಿಯ ಕರಣ ತತಿಯ ನಿಶ್ಚಲತೆಗಳ...."[೯೮]

ಕವಿ ಲಕ್ಕಣ್ಣದಂಡೇಶ ವಿರಕ್ತರು ದೇಹದ ಅಂಗಾಂಗಕ್ಕೆ ಭಸ್ಮಧರಿಸಿ, ರುದ್ರಾಕ್ಷಿ ಮಾಲೆ ಹಾಕಿಕೊಂಡು, ಭಾರಿ ಜಡೆಗಳನ್ನು, ಬಿಟ್ಟುಕೊಂಡು ಸದಾ ಶಿವಲಿಂಗ ಪೂಜೆಯಲ್ಲಿ ತಲ್ಲೀನರಾಗಿರುತ್ತಾರೆಂದು ಅವರ ಸ್ವರೂಪ ಲಕ್ಷಣ ಹೇಳಿದ್ದಾನೆ. "ಹದಿನಾಡೊಳೆಸೆವ ಬೊಮ್ಮನ ಹಳ್ಳಿಯಲ್ಲಿರ್ಪ ಮದನ ಹರಶರಣ ವೀರಣಯ್ಯನೆಂದು[೯೯] ನೂರೊಂದು ವಿರಕ್ತರಲ್ಲಿ ಒಬ್ಬನಾದ ಕರಸ್ಥಲದ ವೀರಣ್ಣೊಡೆಯನನ್ನು ಉಲ್ಲೇಖಿಸಿದ್ದಾನೆ. ಲಕ್ಕಣ್ಣ ದಂಡೇಶ ಹೇಳುವ ಚರಲಿಂಗ ಮೂರ್ತಿಗಳೇ ನೂರೊಂದು ವಿರಕ್ತರೆಂದು ಭಾವಿಸಬಹುದಾಗಿದೆ. ಇವರು ವಿಜಯಕಲ್ಯಾಣದ 'ಶಿವ ಸಿಂಹಾಸನ'[೧೦೦] 'ನಿರಪೇಕ್ಷ ಸಿಂಹಾಸನ'[೧೦೧] 'ಸಮ ಸಿಂಹಾಸನ'[೧೦೨] 'ವಿಕ್ರಮೋದಾತ್ತ ಸಿಂಹಾಸನ'[೧೦೩] ಮತ್ತು 'ಸಂಪದದ ಸಿಂಹಾಸನ'[೧೦೪] ಎಂಬ ಐದು ಶೂನ್ಯ ಸಿಂಹಾಸನಗಳಿಗೆ ಅಧಿಪತಿಗಳಾಗಿದ್ದರೆಂಬ ಅಂಶ ತಿಳಿದುಬರುತ್ತದೆ. ಇವುಗಳ ಪರಿಷ್ಕೃತ ರೂಪವೇ ಕೆಂಪಿನ ಸಮಯ ಪೀಠ ಚೀಲಾಳ ಸಮಯಪೀಠ, ಕುಮಾರ ಸಮಯಪೀಠ, ಮುರುಘಾ ಸಮಯಪೀಠ ಮತ್ತು ಸಂಪಾದನಾ ಸಮಯ ಪೀಠಗಳಾಗಿ[೧೦೫] ರೂಪಗೊಂಡಂತೆ ಕಂಡುಬರುತ್ತದೆ. ೧೭ನೇ ಶತಮಾನದ ಶೂನ್ಯ ಸಿಂಹಾಸನವು ೫ ಕವಲಾಗಿ ಹೊಡೆದದ್ದು ಹಂಪಿಯಲ್ಲಿ ನೂರೊಂದು ವಿರಕ್ತರ ಕಾಲದಲ್ಲಿ ಎಂದು ಹೇಳಬಹುದು.

ಚರಲಿಂಗ ಮೂರ್ತಿ(ವಿರಕ್ತರು)ಗಳು ದೇಶದ ನಾನಾ ಭಾಗಗಳಿಂದ ಆಗಮಿಸಿ ಹಂಪಿ ವಿವಿಧೆಡೆಗಳಲ್ಲಿ ವಾಸ ಮಾಡುತ್ತಾ, ವೀರಶೈವಧರ್ಮ ಪ್ರಚಾರ ಮಾಡುತ್ತಾ, ಬದುಕನ್ನು ಸವೆಸತೊಡಗಿದವರು. ಇವರುಗಳು ಹಂಪಿಯ ಮಾಲ್ಯವಂತೆ, ಮಾತಂಗ, ಅಂಜನಾದ್ರಿ ಇನ್ನು ಮುಂತಾದ ಬೆಟ್ಟ(ಪರ್ವತ) ಗುಡ್ಡಗಳ ಗವಿಗಳಲ್ಲಿ ವಾಸಮಾಡುತ್ತಿದುದ್ದನ್ನು ಶಿವತತ್ವಚಿಂತಾಮಣಿ ದಾಖಲಿಸುತ್ತದೆ.

"....ನಿಸ್ಸಂಶಯಾತ್ಮಕರಾಗಿ ಸರ್ವೇಂದ್ರಿಯದ ಭೋಗದೊಳು ವಿರಾಗಿಗಳಾಗುತ
ಹಂಸನ ಗತಿಯನಜಿಪು ತೂರ್ಧ್ವ ಮುಖದೊಳು ಚರಿಸು
ತಂ ಸಹಜದಿಂದಿರ್ಪ ಮಾಲ್ಯವಂತಾಚಲೋ
ತ್ತಂಸ ಸಿಂಹಾಸನದ ಚರಲಿಂಗ ಮೂರ್ತಿಗಳ ಚರಣಾಂಬುಜಕ್ಕೆ ಶರಣು

ಅಂಜಿಸುವ ಕಾಲ ಕಾಮಾದಿಗಳ ಭೀತಿಯಂ
ಭಂಜಿಸಿ ಬಹಿರ್ವಿಷಯ ಸಂಗತಿಯ ಸುಖದುಃಖ
ಮಂ ಜಯಿಸಿ ನಿಸ್ಪೃಹತೆಯ ......
..............ನಿತ್ಯ ರಾಗಂಜ
ನಾದ್ರಿಯೊಳೆಸವ.........''೧೦೭

''ಅಂಗದ ವಿಮೋಹಮಂ ಮಱೆದು ಪಂಚೇಂದ್ರಿಯ ಸು
ಖಂಗಳಂ ಜಱಿದು ಲಿಂಗದ ನಿರೂಪದಿ ಬಂದ
ಮಂಗಳ ಪದಾರ್ಥಮಂ ಶಿವಭಾವದಿಂ ಸವಿದು ಲೌಕಿಕದ ಹಂಗನುಳಿದು
ತುಂಗ ವಿಕ್ರಮ ವೀರಭದ್ರೇಶನೊಲಿದಿಹ ಮ
ತಂಗಾಚಲದ ಗುಹಾಂತರದೊಳವಿರಳರಾಗಿ...''೧೦೭

ನೂರೊಂದು ವಿರಕ್ತರೆಂದು ಕರೆಯಬಹುದಾದ ಚರಲಿಂಗ ಮೂರ್ತಿಗಳು ಸರ್ವೇಂದ್ರಿಯ ಭೋಗಗಳನ್ನು ತ್ಯಜಿಸಿ ವೈರಾಗ್ಯರಾಗಿ ಊರ್ಧ್ವಮುಖದಲ್ಲಿ ಚಲಿಸುತ್ತಾ ಮಾಲ್ಯವಂತ ಪರ್ವತದ ಗುಹೆಗಳಲ್ಲಿ ಕೆಲವರು ವಾಸಿಸಿದರೆ, ಮತ್ತೆ ಕೆಲವರು ಕಾಲಕಾಮಾದಿಗಳನ್ನು ಸುಟ್ಟು ಹಾಕಿ ಬಹಿರ್ವಿಷಯಗಳಾದ ಸುಖದುಃಖಗಳನ್ನು ಜಯಿಸಿ, ನಿಸ್ಪೃಹತೆಯಿಂದ ಅಂಜನಾದ್ರಿ ಪರ್ವತದಲ್ಲಿ ವಾಸಿಸುತ್ತಾರೆ. ಇನ್ನೂ ಕೆಲವು ಚರಲಿಂಗ ಮೂರ್ತಿಗಳು(ವಿರಕ್ತರು) ದೇಹದ ಮೇಲಿನ ಮೋಹವನ್ನು ಕಳೆದುಕೊಂಡು ಪಂಚೇಂದ್ರಿಯಗಳ ಸುಖಃಗಳನ್ನು ತೊರೆದು, ಮಂಗಳ ಮೋಹವನ್ನು ಕಳೆದುಕೊಂಡು ಪಂಚೇಂದ್ರಿಯಗಳ ಸುಃಖಗಳನ್ನು ತೊರೆದು, ಮಂಗಳ ಪದಾರ್ಥಗಳನ್ನು ಶಿವಭಾವದಿಂದ ಸವಿದು ಇಹದ ಬದುಕಿನ ಹಂಗನ್ನು ಹರಿದು ಮತಂಗ ಪರ್ವತದ ಗುಹೆಗಳಲ್ಲಿ ವಿರಾಗಿಗಳಾಗಿ ವಾಸಿಸುತ್ತಿದ್ದರೆಂದು ಈ ಕಾವ್ಯ ಬಣ್ಣಿಸುತ್ತದೆ. ಅಂದರೆ ವಿರಕ್ತರು ವಾಸಿಸುವ ಸ್ಥಳಗಳು ಮಾನವ ನಿರ್ಮಿಸಿದ ಭೌತಿಕ ಕಟ್ಟಡ ಮಠಗಳಲ್ಲ. ಪ್ರಕೃತಿಯೇ ನಿರ್ಮಿಸಿದ ಗುಹೆಗಳಲ್ಲಿ ವಾಸಿಸುತ್ತಿದ್ದರೆಂಬ ಅಂಶ ತಿಳಿದುಬರುತ್ತದೆ. ಈ ವಿರಕ್ತರು ಯೋಗ ಸಾಧಕರಾಗಿದ್ದರಿಂದ ನಿರ್ಜನ ಪ್ರದೇಶಗಳಲ್ಲಿ ವಾಸಿಸುತ್ತಿದ್ದಂತೆ ಕಂಡುಬರುತ್ತದೆ. ಇವರು ಕೇವಲ ಯೋಗ ಸಾಧಕರಾಗಿ ಬಾಳುತ್ತಿದ್ದವರಲ್ಲ, ವೀರಶೈವ ಧರ್ಮಪ್ರಚಾರಕರೂ ಹೌದು. ಲಕ್ಕಣ್ಣದಂಡೇಶ ತನ್ನ ಶಿವತತ್ತ್ವ ಚಿಂತಾಮಣಿ ಕಾವ್ಯದಲ್ಲಿ ವಿರಕ್ತರ ಕರ್ತವ್ಯ ಕುರಿತು

''ಸಕಲ ತೀರ್ಥಗಳೊಳು ಚರಿಸಿ ಶಿವಧರ್ಮಮಂ
ಪ್ರಕಟಿಸುವ ಸರ್ವಸಿದ್ಧಿಗಳ ಬೀಜುತ ಸಾದು
ನಿಕರಕ್ಕೆ ಶಾಂತಿಯಿಾವುತ ಸಮಾಧಾನ ಪದದೊಳು ನಿಂದು ನಿಜಸುಖದೊಳು''೧೦೮

ಎಂದು ಹೇಳಿದ್ದಾನೆ. ಕವಿಯ ಪ್ರಕಾರ ವಿರಕ್ತರಾದ ಚರಲಿಂಗ ಮೂರ್ತಿಗಳು ಹಂಪಿಯ ಮತ್ತು ದೇಶದ ನಾನಾ ಭಾಗದ ತೀರ್ಥಗಳಿಗೆ ಭೇಟಿ ನೀಡಿ, ಯೋಗ ಸಾಧನೆಯಿಂದ ಎಲ್ಲಾ ಸಿದ್ದಿಗಳನ್ನು ಪಡೆದು

ವೀರಶೈವ ಧರ್ಮವನ್ನು ಪ್ರಚಾರ ಮಾಡುತ್ತಾ, ಸಾಧುಗಳ ಸಮೂಹಕ್ಕೆ (ಜನ ಸಮೂಹಕ್ಕೆ) ಶಾಂತಿ ಸಮಾಧಾನದ ಮಾರ್ಗ ತೋರುವುದಾಗಿತ್ತು ಇವರುಗಳ ನಿತ್ಯ ಬದುಕು. ವೀರಶೈವ ಧರ್ಮ ಪ್ರಚಾರವೇ ಪ್ರಧಾನಗುರಿ ಮತ್ತು ನಿತ್ಯದ ಬದುಕಾಗಿತ್ತೆಂದು ತಿಳಿದುಬರುತ್ತದೆ. ಹಂಪಿಗೆ ಧರ್ಮಪ್ರಚಾರಕ್ಕಾಗಿ ಬಂದ ನೂರೊಂದು ವಿರಕ್ತರು ಮಾಲ್ಯವಂತ, ಅಂಜನಾದ್ರಿ, ಮತಂಗ ಪರ್ವತಗಳಷ್ಟೇ ಅಲ್ಲದೆ ಹಂಪಿಯ ನಾನಾ ಕಡೆಗಳಲ್ಲಿ ಇರುವ ಗವಿಗಳಲ್ಲಿ ವಾಸಿಸುತ್ತಿದ್ದಿರಬಹುದಾದ ಸಾಧ್ಯತೆಗಳಿವೆ.

ಮೋದಿ ರುದ್ರನು ದಾಖಲಿಸಿದ ೧೦೧ ವಿರಕ್ತರ ಹೆಸರುಗಳು ಇಂತಿವೆ.

"೧. ಕರಸ್ಥಲದ ನಾಗಿದೇವ, ೨. ಗುರುಬಸವ, ೩. ಹೊನ್ನಿದೇವ, ೪. ಹೇಚೆಯ ಮರುಳ, ೫. ಟಗರ ಕಾಳಗದ ಪ್ರಭು, ೬. ಬಾಲಲಿಂಗಣ್ಣ, ೭. ಬತ್ತಲೇಶ, ೮. ಮಿಡಿಬಿಲ್ಲ ಶಾಂತೇಶ, ೯. ಆಯುಧ ಶಾಂತೇಶ, ೧೦. ಕುದುರೆಯ ಶಾಂತ ೧೧. ಮಂಚದ ಶಾಂತೇಶ ೧೨. ಮದ್ದಳೆ ಶಾಂತ ೧೩. ಬುಡುಬುಡುಕೆಯ ಶಾಂತ ೧೪. ಡಂಗುರ ಶಾಂತ ೧೫. ಖಂಡಣಿ ಶಾಂತ ೧೬. ಸಾಣಿ ಬಂಡೆಯ ಶಾಂತ ೧೭. ಮದ್ದಾನಿಶಾಂತ ೧೮. ಸಿಂಗಾಡಿಯ ಶಾಂತ ೧೯. ಚಕ್ರದ ಶಾಂತ ೨೦. ಬೊಂಬೆಕಟ್ಟಿ ಮೆರೆಸುವ ಶಾಂತ ೨೧. ಜಟ್ಟಿಶಾಂತ ೨೨. ವೀರಶಾಂತ ೨೩. ಡೊಂಬರ ಶಾಂತ ೨೪. ವರ್ಧೇಂದ್ರಿಯ ಶಾಂತ ೨೫. ಗುರುಬಸವೇಶ್ವರ ೨೬. ನಿಬ್ಬೆರಗಿನ ಶಾಂತ ೨೭. ಸರಕೀಲ ಶಾಂತೇಶ್ವರ ೨೮. ರುದ್ರಭೂಮಿಯ ಶಾಂತ ೨೯. ಬಣ್ಣಗದ್ದುಗೆ ಶಾಂತ ೩೦. ರುದ್ರಮೂರ್ತಿ ಶಾಂತ ೩೧. ಭದ್ರಕಾಳಿ ಶಾಂತ ೩೨. ಇದ್ದಲಿ ಶಾಂತೇಶ ೩೩. ಬಯಲ ಶಾಂತ ೩೪. ಮಡಿವಾಳ ಶಾಂತ ೩೫. ಹಿಡಿಗಡಲಿಯ ಶಾಂತ ೩೬. ಶಿವಮೂರ್ತಿ ಮುನಿರಾದಿ ಶಾಂತ ೩೭. ಪೆಟಲಿನ ಶಾಂತ ೩೮. ಕಾಳಿ ಶಾಂತ ೩೯. ಪಾವನಗುಂಡಶಾಂತ ೪೦. ಲಂಡರಾಹುತನೆಂಬ ಶಾಂತ ೪೧. ಚಂಡಿನಾಟದ ಶಾಂತ ೪೨. ಶಿಶುಗಳೊಡನೆ ಆಟವಾಡುವ ಶಾಂತ ೪೩. ಬಿಸಿನೀರಿನ ಶಾಂತ ೪೪. ಚಂದ ಕುಸುರಿನ ಚದುರ ಶಾಂತ ೪೫. ಬೇಟೆಯ ಶಾಂತ ೪೬. ಶಿವಮೂರ್ತಿಯ ಧೂಪದ ಶಾಂತ ೪೭. ಸುವಿವೇಕಿ ಶಾಂತ ೪೮. ಮಜ್ಜನ ಶಾಂತೇಶ ೪೯. ವಿಭೂತಿಯ ಶಾಂತ ೫೦. ವಸುಗೆಲಸದ ಶಾಂತ ೫೧. ಜೂಜಿನ ಶಾಂತ ೫೨. ಕಿನ್ನರಿ ಶಾಂತ ೫೩. ಎಗ್ಗದ ಶಾಂತ ೫೪. ಎಚ್ಚರ ನಿಯಮದ ಶಾಂತ ೫೫. ಗಿರಗಟೆಯ ಶಾಂತ ೫೬. ಕಸ್ತೂರಿ ತಿಲಕದ ಶಾಂತ ೫೭. ಇಂದ್ರಜಾಲದ ಶಾಂತ ೫೮. ಗಿಂಡಿಯ ಶಾಂತ ೫೯. ಮಚ್ಚರ ಶಾಂತ ೬೦. ಬೊಂಬೆಯ ಮಾಳ್ಪ ಶಾಂತ ೬೧. ನಿಧಾನದ ಶಾಂತ ೬೨. ಚಂಡವಿಕ್ರಮ ಶಾಂತ ೬೩. ಚಂದ್ರವಂಕಿ ಶಾಂತ ೬೪. ತೃಣದ ಶಾಂತ ೬೫. ನಾಟ್ಯಶಾಂತ ೬೬. ಮಹೇಂದ್ರಜಾಲಗುಣದ ಶಾಂತ ೬೭. ಕವಿ ಶಾಂತ ೬೮. ಗಂಗಿಯ ಶಾಂತ ೬೯. ಭಟ್ಟಶಾಂತ ೭೦. ಹೆಸರನು ಇಟ್ಟಶಾಂತ ೭೧. ಬೆಟ್ಟದ ಮೇಲಿರ್ಪಶಾಂತ ೭೨. ಅಂಘಟ್ಟಿಗೋಲಿನ ಶಾಂತ ೭೩. ನಿಷ್ಠೆ ನಿಜನೇಮದ ಶಾಂತ ೭೪. ಶರಭ ಶಾಂತೇಶ ೭೫. ಉಗ್ಗಡಿಪ ಶಾಂತ ೭೬. ಅಟ್ಟಿ ಹೊಯ್ವಡ ಮಾಯೆ ಶಾಂತ ೭೭. ಕಟ್ಟುಗ್ರನಾಯಕ ಶಾಂತ ೭೮. ಮರವಿಕ್ರಯ ಶಾಂತ ೭೯. ಚೆಕ್ಕಿ

ಶಾಂತ ೮೦. ಬೊಗರಿಗೆಯ ಶಾಂತಲಿಂಗ ೮೧. ಉರುತರದ ಶರಪಿ ಶಾಂತ ೮೨. ಸ್ವಸ್ಥಿರದ ಸಮಾಧಿಯ ಮೇಲಿರುವ ಶಾಂತ ೮೩. ಸೂಜಿಯ ಪರಮ ಶಾಂತ ೮೪. ಒಕ್ಕಲಿಗನೆನಿಸುವ ಗುರುಶಾಂತ ೮೫. ಕೆಲಸಿ ಶಾಂತ ೮೬. ಶಂಕರನ ಒಲುಮೆಯ ಶಾಂತ ೮೭. ನಿಂಬೆಶಾಂತ ೮೮. ಸೊಡ್ಡಿನ ಶಾಂತ ೮೯. ಚೆಲುವಶಾಂತ ೯೦. ಸಾಧನೆಯ ಶಾಂತನು ೯೧. ಒಡ್ಡಶಾಂತ ೯೨. ನಿರ್ವಚನೆಯ ಶಾಂತ ೯೩. ಪಂಚಂಗವಿಡಿದೋದುವ ಶಾಂತ ೯೪. ಶೂಲದ ಶಾಂತಲಿಂಗ ೯೫. ಕಂಚಿನಾದ್ರಿಯ ಶಾಂತ ೯೬. ರತ್ನದ ಶಾಂತ ೯೭. ಕೋಲ ಶಾಂತ ೯೮. ಬಾಲಗಾಸಿಯ ಶಾಂತಮೂರ್ತಿ ೯೯. ಹಾಲಶಾಂತ ೧೦೦. ಗಾನ ಶಾಂತ ೧೦೧. ಬಾಣಬತ್ತಿ ಶಾಂತಲಿಂಗ''[೧೦೯]

ಈ ಮೇಲಿನ ಎಲ್ಲಾ ಹೆಸರುಗಳು 'ಶಾಂತ' ಹೆಸರಿನಿಂದ ಕೊನೆಗೊಳ್ಳುತ್ತವೆ. ಬಹುಶಃ ಈ ಹೆಸರುಗಳು ನೂರೊಂದು ವಿರಕ್ತರ ಅಂಕಿತನಾಮಗಳಾಗಿದ್ದಂತೆ ತೋರುತ್ತದೆ. ಕಲ್ಲುಮಠದ ಪ್ರಭುದೇವ, ಚಾಮರಸ, ಕರಸ್ಥಲ ವೀರಣ್ಣೊಡೆಯರು ೧೬-೧೭ನೇ ಶತಮಾನದ ಕಾವ್ಯಗಳಲ್ಲಿ ನೂರೊಂದು ವಿರಕ್ತರ ಸಾಲಿನಲ್ಲಿ ಸೇರಿಸಿರುವುದನ್ನು ಕಾಣುತ್ತೇವೆ. ೧೮ನೇ ಶತಮಾನದಲ್ಲಿ ಮೋದಿರುದ್ರನಿಂದ ರಚಿತವಾದ ನೂರೊಂದು ವಿರಕ್ತರ ಕಾವ್ಯದಲ್ಲಿ ಇವರುಗಳ ಹೆಸರುಗಳು ಬಿಟ್ಟಿವೆ. ಇವರ ಅಂಕಿತಗಳು ಇದರಲ್ಲಿ ದಾಖಲಾಗಿರಬಹುದಾಗಿದೆ. ಆದರೆ ಇವೇ ಇವರುಗಳ ಅಂಕಿತಗಳೆಂದು ಗುರುತಿಸಲು ಸಾಧ್ಯವಿಲ್ಲ.

'ಜಂಗಮಸ್ಥಲವಾಂತು ಪರಮ ಷಟ್ಸ್ಥಲವನುದ್ಧರಿಸಿದ' ನೂರೊಂದು ವಿರಕ್ತರ ಧರ್ಮರಕ್ಷಣೆ, ಅತಿಧರ್ಮದಿಂದ ರಾಜ್ಯವನ್ನಾಳುತ್ತಿದ್ದ ಪ್ರೌಢದೇವರಾಯನ ರಾಜರಕ್ಷೆ, ಮಂತ್ರಿವರ್ಗದ ಲಕ್ಕಣ್ಣ, ಜಕ್ಕಣ್ಣರ ಮಂತ್ರಿರಕ್ಷೆಗಳ ಬಲದಿಂದ ವಿಜಯ ಕಲ್ಯಾಣವಾದುದೀ ಧರೆ ಎಂಬಂತೆ ಹಂಪಿಯಲ್ಲಿ ಬಸವ ಯುಗದ ಕಲ್ಯಾಣದ ಶರಣರ ವಾತಾವರಣವು ರೂಪುಗೊಂಡು ವೀರಶೈವ ಧರ್ಮ ಮತ್ತೆ ಪ್ರಸಾರಗೊಳ್ಳಲು ಸಾಧ್ಯವಾಯಿತು.[೧೧೦] ಈ ನೂರೊಂದು ವಿರಕ್ತರಲ್ಲಿ ಕೆಲವರು ಕವಿಗಳು ದಾರ್ಶನಿಕರಿದ್ದರೆ, ಮತ್ತೆ ಕೆಲವರು ವಚನಕಾರರು, ತ್ರಿಪದಿಕಾರರು, ಅನುಭಾವಿಗಳು, ವೇದಾಂತ ಬೋಧಕರಿದ್ದಾರೆ. ಇವರು ತಮ್ಮ ಕಾವ್ಯ ಕೃತಿಗಳ ಮೂಲಕ ವೀರಶೈವ ತತ್ತ್ವ, ಸಿದ್ಧಾಂತಗಳನ್ನು ಪ್ರಚಾರ ಮಾಡಿದ್ದಾರೆ.

ಹೀಗೆ ನೂರೊಂದು ವಿರಕ್ತರು ತಮ್ಮ ಇಡೀ ಬದುಕನ್ನು ವೀರಶೈವಧರ್ಮ ಪ್ರಚಾರಕ್ಕಾಗಿ ತೊಡಗಿಸಿಕೊಂಡಿದ್ದಲ್ಲದೆ, ಅದರ ಸರ್ವತೋಮುಖ ಬೆಳವಣಿಗೆಗೆ ಕಾರಣರಾಗಿದ್ದಾರೆ. ಹಂಪಿಯಿಂದ ಹೊರಟ ಇವರು ನಾನಾ ಊರುಗಳಲ್ಲಿ ಸಂಚರಿಸಿ ವೀರಶೈವ ಧರ್ಮಪ್ರಚಾರ ಮಾಡಿದಂತೆ ತೋರುತ್ತದೆ. ಇವರುಗಳು ಎಲ್ಲಿ ಐಕ್ಯರಾದರೆಂಬ ವಿಷಯದ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ಷಟ್ ಸ್ಥಲ ಸಿದ್ಧಾಂತ ಪ್ರಚಾರ ಕಾರ್ಯದಲ್ಲಿ ಇವರು ವಹಿಸಿದ ಪಾತ್ರ ಅಪಾರವಾದದ್ದೆಂದು ಹೇಳಬಹುದು.

## ೯. ಶಾಸನೋಕ್ತ ಶಿವಶರಣರು

ಕಲ್ಯಾಣದ ಶರಣರ ಪ್ರಭಾವ ಹಂಪಿಯೆಂಬ ವಿಜಯಕಲ್ಯಾಣದ ಮೇಲೆ ಆಗಿರುವುದು ಕಂಡುಬರುತ್ತದೆ. ಎಲ್ಲಾ ವರ್ಗದ ಜನರು ಸಮಾನತೆ ಮತ್ತು ಬದುಕಿನ ಮೌಲ್ಯ ಪ್ರತಿಪಾದಿಸಲು ಅನುಭವ ಮಂಟಪದಲ್ಲಿ ಸಭೆ ಸೇರಿ ಶರಣ ಸಿದ್ಧಾಂತ ಎತ್ತಿ ಹಿಡಿದಂತೆ, ಹಂಪಿ ವಿಜಯ ಕಲ್ಯಾಣದಲ್ಲೂ ಶಿವಶರಣರು ಬಂದು ಕಲ್ಯಾಣದ ಶರಣರ ಬದುಕಿನ ಮೌಲ್ಯವನ್ನು ಆದರ್ಶವಾಗಿಟ್ಟುಕೊಂಡರು. ಅವರ ಹೆಸರುಗಳನ್ನೇ ತಮ್ಮ ವಾಸಸ್ಥಾನಗಳಿಗೆ ಇಟ್ಟುಕೊಂಡು ಅವರ ಬದುಕಿನ ಸಿದ್ಧಾಂತವನ್ನು ಪ್ರಚಾರ ಮಾಡಿದಂತೆ ಕಂಡುಬರುತ್ತದೆ. ವಿಜಯ ಕಲ್ಯಾಣದಲ್ಲೂ ಅನೇಕ ಶಿವಶರಣರು ಆಗಿ ಹೋಗಿದ್ದಾರೆ. ಅಂಥಹ ಕೆಲವು ಶಿವಶರಣರನ್ನು ಹಂಪಿ ಶಾಸನಗಳು ದಾಖಲಿಸಿವೆ.

೧. ಶ್ರೀ ಸಂಗನಬಸವ : ಗುರುಗುಹೇಶ್ವರ ಆಶ್ರಮದ ಉತ್ತರಕ್ಕೆ ಸ್ವಲ್ಪ ಕೆಳಭಾಗದಲ್ಲಿ ಹುಟ್ಟು ಗುಂಡಿನ ಮೇಲೆ, ಅಂದರೆ ಮತಂಗದೇವರ ಕೊತ್ತಳದ ಪೂರ್ವಕ್ಕೆ ವೀರಭದ್ರ ದೇವಾಲಯದ ಎದುರು ಬಂಡೆಯ ಮೇಲೆ "ಶ್ರೀಸಂಗನ ಬಸವ"[೧೧೧] ಎಂದು ಉಲ್ಲೇಖಿಸುತ್ತದೆ. ಈ ಶಾಸನದ ಬಳಿ ಲಿಂಗ ಮತ್ತು ನಂದಿ ಶಿಲ್ಪಗಳಿರುವವು. ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿಯ ನೂತನ ಗಣಂಗಳ ಭಾಗದಲ್ಲಿ ಇರುವ ೨೦ಕ್ಕೂ ಅಧಿಕ 'ಬಸವಣ್ಣ' ಎಂಬ ಹೆಸರಿನ ಶರಣರು ಈ ಭಾಗದಲ್ಲಿ ನೆಲೆಸಿ ಹೋಗಿರಬಹುದಾಗಿದೆ.

೨. ಶ್ರೀ ಸಂಗಮೇಶ್ವರ ದೇವರು : ಗುರುಗುಹೇಶ್ವರ ಆಶ್ರಮ ಪರಿಸರದಲ್ಲಿ ಕ್ರಿ.ಶ.೧೨-೧೩ನೇ ಶತಮಾನಕ್ಕೆ ಸೇರಿದ ಶಾಸನವು "ಶ್ರೀ ಸಂಗಮೇಶ್ವರ ದೇವರು" ಎಂದು ಉಲ್ಲೇಖಿಸುತ್ತದೆ. ಎಡಭಾಗದಲ್ಲಿ ಎರಡು ಗೆರೆಗಳುಳ್ಳ ಚೌಕದಲ್ಲಿ ಲಿಂಗವಿದ್ದು, ಲಿಂಗದ ಮೇಲ್ಭಾಗದಲ್ಲಿ ಮತ್ತೊಂದು ಲಿಂಗವಿದ್ದು ಎರಡೂ ಬದಿಯಲ್ಲಿ ಮಲಗಿರುವ ನಂದಿಯ ರೇಖಾ ಚಿತ್ರಗಳಿರುವುದು ವಿಶೇಷವಾಗಿದೆ.[೧೧೨] ಇದನ್ನು ಸಿ.ಟಿ.ಎಂ. ಕೊಟ್ರಯ್ಯನವರು ಯೋಗಾಂಗ ಲಿಂಗವೆಂದು ಕರೆದಿದ್ದಾರೆ. ಹೇಮಕೂಟದ ಉತ್ತರಕ್ಕಿರುವ ದೇವಾಲಯದ ಕಂಬದ ಮೇಲಿರುವ ಕ್ರಿ.ಶ.೧೪ನೇ ಶತಮಾನದ ಆರಂಭದ ಕಾಲಕ್ಕೆ ಸೇರಿದ ಶಾಸನವು "ಶ್ರೀ ಸಂಗಮೇಶ್ವರ ದೇವರ ದಿಬ್ಯ ಶ್ರೀಪಾದಪದ್ಮಾರಾಧಕರುಮಪ್ಪ ಮುಂಮುಡಿ ಸಿಂಗೆಯನಯಕನ"[೧೧೩] ಎಂದು ದಾಖಲಿಸಿದೆ. ಈ ಎರಡೂ ಶಾಸನಗಳಲ್ಲಿ ಬರುವ ಶ್ರೀ ಸಂಗಮೇಶ್ವರ ದೇವರು ಒಬ್ಬರೇ ಎಂದು ಹೇಳಬಹುದು. ಇವರೊಬ್ಬ ಶಿವಶರಣರೆಂದು ಗುರುತಿಸಬಹುದಾಗಿದೆ.

೩. ಸಂಗಮದೇವ : ಸಿಂಗಾರದ ಹೆಬ್ಬಾಗಿಲ ಪೂರ್ವದಿಕ್ಕಿಗೆ ಹೊಲದಲ್ಲಿರುವ ಗುಂಡಿನ ಮೇಲೆ ಇರುವ ಶಾಸನವು "ಸಂಗಮ ದೇವನು.....ಶ್ರೀ"[೧೧೪] ಎಂದು ಉಲ್ಲೇಖಿಸುತ್ತದೆ. ಈ ಶರಣ ಶಿವತತ್ತ್ವ ಚಿಂತಾಮಣಿಯಲ್ಲಿ ಬರುವ "ಬೂಕನಕೆರೆ ಸಂಗಯ್ಯ"[೧೧೫]ನಾಗಿರಬಹುದಾಗಿದೆ. ಇವನು ಹಂಪಿಗೆ ಭೇಟಿ ಕೊಟ್ಟು ಕೆಲ ದಿನಗಳವರೆಗೆ ಇಲ್ಲೇ ತಂಗಿರಬಹುದಾದ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ.

೪. ಶ್ರೀ ಸಿದ್ಧರಾಮ ವೊಡೆಯ : ಮತಂಗ ಪರ್ವತದ ದಕ್ಷಿಣ ದಿಕ್ಕಿನಲ್ಲಿರುವ ತುರ್ತು ಕಾಲುವೆಯ ಸೇತುವೆ ಹತ್ತಿರ ದಂಡೆಯ ಮೇಲಿರುವ ಗುಂಡಿನ ಮೇಲಿನ ಶಾಸನವು "ಕೋಲ ರಾ(ಮೈ)ನ ಮಗ ಚಿಕರಾಮೈಯನೂ ದೇವರಿಗೆ.... ಸಿದರಾಮೆ ವೊಡೆಯರಿಗೆ ಕೊಟೆಲು"[೧೧೬] ಎಂದೂ ಹಾಗೆಯೇ ಇದೇ ದಿಕ್ಕಿನ ದಾರಿಯ ಬಳಿ ಮಲ್ಲಿಕಾರ್ಜುನ ದೇವಾಲಯದಲ್ಲಿರುವ ಶಾಸನದಲ್ಲಿ ಶ್ರೀ ಸಿದ್ಧರಾಮ ವೊಡೆಯರ ಉಲ್ಲೇಖವಿದೆ.[೧೧೭]

೫. ಶ್ರೀ ಮರುಳ ಸಿದ್ಧ ದೇವರು : ಹಂಪಿಯ ತೇರುಬೀದಿಯ ಪೂರ್ವದಲ್ಲಿರುವ ಎದುರು ಬಸವಣ್ಣ ಮಂಟಪದ ಹಿಂಬದಿಯಲ್ಲಿರುವ ಗುಹೆಯ ಬಂಡೆಯ ಪಾರ್ಶ್ವಭಾಗದಲ್ಲಿ "ಶ್ರೀ ಕರುಲಿವಿನ ಮರುಳ ಸಿಧತ ದೇವಾರು ಓಂ ನಮಃ ಶಿವಾಯ"[೧೧೮] ಎಂದು ಕೆಂಪು ಬಣ್ಣದಲ್ಲಿ(ಕೆಮ್ಮಣ್ಣಿ) ಶಾಸನ ಬರೆಯಲಾಗಿದೆ. ೧೨ನೇ ಶತಮಾನದ ವಚನಕಾರ ರೇವಣಸಿದ್ದರ ಶಿಷ್ಯ ಮರುಳಸಿದ್ದರನ್ನು ನೆನಪಿಸುತ್ತದೆ. ಉಜ್ಜಯನಿಯ ಮರುಳಸಿದ್ದರು ಬಹುಶಃ ಈ ಗವಿಯಲ್ಲಿ ಕೆಲವು ಕಾಲ ತಂಗಿರಬಹುದಾದ ಸಾಧ್ಯತೆ ಇದೆ.

೬. ಶ್ರೀ ರೇವಣಸಿದ್ಧ ದೇವರ ಪಾದ ಮತ್ತು ಸೋಮಯ ದೇವರು : ಭೀಮನ ಬಾಗಿಲಿನ ಈಶಾನ್ಯಕ್ಕೆ ಬೆಟ್ಟದ ಮೇಲಿನ ಬಂಡೆಯ ಮೇಲೆ ಇರುವ ಶಾಸನವು "ರೇವಣಸಿದ್ಧನ ಪಾದದರೆ"[೧೧೯] ಎಂದೂ ಈ ಶಾಸನದ ಈಶಾನ್ಯ ದಿಕ್ಕಿನಲ್ಲಿ "ಸೋಮಯ್ಯ ದೇವರು"[೧೨೦] ಎಂಬ ಶಾಸನ ಹಾಗೂ ಲಿಂಗಗಳಿವೆ. ಈ ಸ್ಥಳದ ಬಳಿ ಪಶ್ಚಿಮಕ್ಕೆ ಇರುವ ದೇವಾಲಯದ ಗರ್ಭಗುಡಿಯಲ್ಲಿ ವೀರಭದ್ರದೇವರ ಶಿಲ್ಪವಿದ್ದು ಶಿಲ್ಪದ ಕೆಳಭಾಗದಲ್ಲಿ ಗಡ್ಡದಾರಿಯಾದ ವ್ಯಕ್ತಿ ಹಾಗೂ ಪುತ್ರನ ಶಿಲ್ಪವೂ ಇರುವುದು.[೧೨೧] ಇದು ಬಸವಣ್ಣನ ಸಮಕಾಲೀನ ಶರಣ ರೇವಣಸಿದ್ದ ಮತ್ತು ಅವನ ಮಗ ರುದ್ರಮುನಿಯನ್ನು ನೆನಪಿಸುತ್ತದೆ. ಶಾಸನ ಉಲ್ಲೇಖಿಸುವ ಸೋಮಯ್ಯ ದೇವರು ರೇವಣ್ಣ ಸಿದ್ಧರ ಶಿಷ್ಯ ಪರಂಪರೆಯಲ್ಲಿ ಬಂದ ಶರಣನಾಗಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

೭. ಪಂಡಿತಾರಾಧ್ಯರಸರು : ಮಾಲ್ಯವಂತ ರಘುವನಾಥ ದೇವಾಲಯ ದಕ್ಷಿಣಕ್ಕೆ ಬೇಟೆಕಾರರ ಹೆಬ್ಬಾಗಿಲ ಉತ್ತರಕ್ಕೆ ಸದಾಶಿವ ಮಹಾಯೋಗಿ ಗವಿಯ ಮಂಟಪದ ಬಂಡೆಯಲ್ಲಿ ರಾಮಲಕ್ಷ್ಮಣರ ಶಿಲ್ಪದ ಕೆಳಭಾಗದಲ್ಲಿರುವ ಶಾಸನವು "ಪಾಪಂಡಿತಾರಾಧರಸಂ" ಎಂದು ಉಲ್ಲೇಖಿಸಿದೆ. ಈ ಸ್ಥಳದ ಮುಂದಿನ ಬಂಡೆಯ ಮೇಲೆ ಶಿವಲಿಂಗಗಳು, ಎಡಬದಿಯಲ್ಲಿ ಶ್ರೀವೀರಭದ್ರ ದೇವರ ಶಿಲ್ಪವಿರುವ ಗುಡಿಯೂ ಇದ್ದು, ಪೂರ್ವಾಭಿಮುಖವಾಗಿರುವುದು.[೧೨೨] ಈ ಶಾಸನಕ್ಕೆ ಹೊಂದಿಕೊಂಡಂತೆ ಇರುವ ಮತ್ತೊಂದು ಶಾಸನವು ಸದಾಶಿವ ಮಹಾಯೋಗಿಯನ್ನು ಉಲ್ಲೇಖಿಸುತ್ತದೆ. ಈ ಸದಾಶಿವ ಮಹಾಯೋಗಿ ಪಂಡಿತಾರಾಧ್ಯರ ಶಿಷ್ಯ ಪರಂಪರೆಯಲ್ಲಿ ಬಂದಿರುವ ಸಾಧ್ಯತೆ ಇದೆ. ಪಂಡಿತಾರಾಧ್ಯರು ಬಸವಣ್ಣನ ಸಮಕಾಲೀನ ವಚನಕಾರರಾಗಿದ್ದಾರೆ.

೮. ಗುರುಬಸವ : ಕಮಲಮಹಲಿನ ಉತ್ತರದಿಕ್ಕಿನಲ್ಲಿರುವ ಮದನ ಕೊತ್ತಳ ಮಂಟಪದ ಕೆಳಭಾಗದಲ್ಲಿ "ಶ್ರೀ ಗುರುಬಸವರು"[೧೨೩] ಎಂದು ಉಲ್ಲೇಖಿಸಲಾಗಿದೆ. ನೂರೊಂದು ವಿರಕ್ತರಲ್ಲಿ ಒಬ್ಬರಾದ ಸಪ್ತ ಕಾವ್ಯದ ಗುರುಬಸವನನ್ನು ಈ ಶಾಸನ ಉಲ್ಲೇಖಿಸಿದಂತೆ ತೋರುತ್ತದೆ. ಅಲ್ಲಿರುವ ಮಂಟಪ ಗುರುಬಸವನ ವಾಸಸ್ಥಾನವಾಗಿರಬಹುದು.

೯. ಚೆನ್ನಮಲ್ಲಮ್ಮ : ಮಾಲ್ಯವಂತ ಪರ್ವತದ ಪೂರ್ವಕ್ಕೆ ಕಣಿವೆಯಲ್ಲಿನ ಗುಂಡಿನ ಮೇಲೆ ಇರುವ ಶಾಸನ "ಚೆನಮಲಂಮ"[೧೨೪] ಎಂದು ಉಲ್ಲೇಖಿಸಿದೆ. ಈ ಶಾಸನ ಬದಿಗಳಲ್ಲಿ ಶಿವಲಿಂಗ ಹಾಗೂ ನಂದಿಶಿಲ್ಪಗಳಿವೆ. ಈಕೆಯೂ ಒಬ್ಬ ಶಿವಶರಣೆಯಾಗಿರಬಹುದು.

೧೦. ಹರವಿನ ಮಲ್ಲಯ್ಯ : ಮಾಲ್ಯವಂತ ಪರ್ವತದ ಪೂರ್ವಕ್ಕೆ ರಸ್ತೆಯ ದಕ್ಷಿಣಕ್ಕಿರುವ ಗುಂಡಿನ ಮೇಲೆ ಇರುವ ಶಾಸನ "ಶ್ರೀ ಹರವಿನ ಮಲ್ಲಯ್ಯ...."[೧೨೫] ಎಂದು ಉಲ್ಲೇಖಿಸಿದೆ. ಈತನೂ ಸಹ ಒಬ್ಬ ಶಿವಶರಣನಾಗಿರಬಹುದಾಗಿದೆ.

೧೧. ಮಡಿವಾಳ ಮಾಚಯ್ಯ : ಶಿವಶರಣ ಮಡಿವಾಳ ಮಾಚಯ್ಯನ ಹೆಸರನ್ನು ಉಲ್ಲೇಖಿಸುವ ಶಾಸನ ಹೇಮಕೂಟ ಪರ್ವತದಲ್ಲಿದ್ದು, ಈತನನ್ನು ಹಂಪೆಯ ಅಗಸದ ಮಾಚಯ್ಯನೆಂಬ ಹೆಸರಿನಿಂದ ಕರೆಯಲಾಗಿದೆ."[೧೨೬]

೧೨. ವೀರಯ್ಯ ಮತ್ತು ಪ್ರಾತವಾಟಿ ಬಸವಯ್ಯ : ಕೋಟಿಲಿಂಗದ ಬಳಿಯ ಬಂಡೆಯ ಮೇಲೆ "ವೀರಯ"ನೆಂದೂ ಅದೇ ಬಂಡೆಯ ಮತ್ತೊಂದು ಬದಿಯಲ್ಲಿ "ಪ್ರಾತವಾಟಿ ಬಸವಯ್ಯ"[೧೨೭] ಎಂದು ಉಲ್ಲೇಖಿಸಿದೆ. ಈ ಶಾಸನಗಳ ಹತ್ತಿರದಲ್ಲಿಯೇ ಶಾಸನೋಕ್ತ ಕೋಟಿಲಿಂಗಗಳಿವೆ. ಈ ಇಬ್ಬರೂ ವ್ಯಕ್ತಿಗಳು ಶಿವಶರಣರಾಗಿರುವ ಸಾಧ್ಯತೆ ಇದೆ.

೧೩. ಶಿವರಾತ್ರಿ ವೀರಪ್ಪಯ್ಯ : ಕಡಿರಾಮಪುರದ ದಕ್ಷಿಣಕ್ಕೆ ಮುಖ್ಯರಸ್ತೆಯ ಪಶ್ಚಿಮಕ್ಕೆ ವಾಸಪ್ಪನವರ ಕಬ್ಬಿನ ಗದ್ದೆಯಲ್ಲಿ ನಂದಿ ಉಬ್ಬುಶಿಲ್ಪದ ಕಲ್ಲಿನ ಮೇಲೆ ಇರುವ ಶಾಸನವು "ಹರಿಹರಾಯಯರು ಶಿವರಾತ್ರಿ ವೀರ್ಪಯ್ಯಗಳಿಗೆ ಮಾನ್ಯವಾಗಿ ಕೊಟವೃತಿ"[೧೨೮]ಎಂದು ಉಲ್ಲೇಖಿಸಿದೆ. ಶಿವರಾತ್ರಿ ವೀರಪ್ಪಯ್ಯ ಸುತ್ತೂರು ಗುರುಪರಂಪರೆಗೆ ಸೇರಿದ ಶರಣನಾಗಿರಬಹುದು.

೧೪. ಮಲ್ಲಯ್ಯ : ಮತಂಗ ಪರ್ವತದ ಪೂರ್ವಕ್ಕೆ ತುರ್ತು ಕಾಲುವೆ ಮೇಲಿನ ಗುಂಡಿನ ಮೇಲೆ ಇರುವ ಶಾಸನವು "ಕಟ್ಟೆ ನಾಗಯನ ಮಗನೂ ಮಲ್ಲಯನೂ"[೧೨೯] ಎಂದು ಉಲ್ಲೇಖಿಸಿದೆ. ಈ ಮಲ್ಲಯ್ಯನೂ ಸಹ ಶಿವಶರಣನಾಗಿರುವ ಸಾಧ್ಯತೆ ಇದೆ.

**೧೪. ಲಿಂಗಬಾವಿ ಬಸವಣ್ಣೊಡೆಯ :** ಹೆಸರೇ ಸೂಚಿಸುವಂತೆ ಈತ ಲಿಂಗಪೂಜಾ ನಿಷ್ಠನಾಗಿರುವಂತೆ ತೋರುತ್ತದೆ. ಬೇಟೆಕಾರರ ಹೆಬ್ಬಾಗಿಲಿನ ಈಶಾನ್ಯಕ್ಕೆ ಶಿಥಿಲವಾದ ದೇವಸ್ಥಾನದ ಉತ್ತರಗೋಡೆಯಲ್ಲಿರುವ ಗುಂಡಿನ ಮೇಲಿನ ಶಾಸನವು "ಲಿಂಗ್ಗಬಾವಿ ಬಸವಂಣೊಡೆಯರ ಸ್ಥಲಂ"[೧೩೦] ಎಂದು ಬಸವಣ್ಣೊಡೆಯನ ಸ್ಥಳವನ್ನು ಹೇಳುತ್ತದೆ. ಈ ಶಾಸನದ ಹತ್ತಿರ ಬಾವಿಗೆ ಕಟ್ಟಿದ ಕಲ್ಲಿನ ಮೇಲಿರುವ ಶಾಸನವು "(ಲಿ)ಂಗ್ಗಬಾವಿ..."[೧೩೧] ಎಂದು ಉಲ್ಲೇಖಿಸುತ್ತದೆ. ಲಿಂಗಬಾವಿ ಬಸವಣ್ಣೊಡೆಯ ಈ ಸ್ಥಳದಲ್ಲಿ ವಾಸವಾಗಿದ್ದು ಕೊಂಡು ಧರ್ಮಪ್ರಚಾರ ಕಾರ್ಯದಲ್ಲಿ ತೊಡಗಿಕೊಂಡ ಒಬ್ಬ ಶಿವಶರಣನಾಗಿರುವ ಸಾಧ್ಯತೆ ಇದೆ.

**೧೬. ಚೆನ್ನಸೋಮೇದೇವ :** ಮಾಲ್ಯವಂತ ಪರ್ವತದ ಈಶಾನ್ಯಕ್ಕೆ ಕಾಲುವೆಯ ಉತ್ತರಕ್ಕೆ ಗುಂಡಿನ ಮೇಲೆ ಇರುವ ಶಾಸನವು "ಶುಭಮಸ್ತು ಚೆಂನಸೋಮೆದೇವರ ಮಾಂನ್ಯ ಯಿದಕ್ಕೆ ಅಳ್ಪಿದರೆ..."[೧೩೨] ಎಂದು ಉಲ್ಲೇಖಿಸುತ್ತದೆ. ಚೆನ್ನಸೋಮೇದೇವ ಒಬ್ಬ ಶಿವಶರಣನಿದ್ದು ಆತನಿಗೆ ದಾನ ನೀಡಿರುವ ವಿಷಯ ತಿಳಿಸುತ್ತದೆ.

ಹೀಗೆ ಅನೇಕ ದಾರ್ಶನಿಕರು ಶರಣರು ಹಂಪಿ ಪರಿಸರದ ಗುಡ್ಡ ಪರ್ವತ, ಗುಹೆ, ಪೊಟರೆ ಇತ್ಯಾದಿಗಳ ಕಡೆ ವಾಸಿಸಿ ಧರ್ಮ ಪ್ರಚಾರ ಕಾರ್ಯದಲ್ಲಿ ತೊಡಗಿದ್ದರು ಎಂಬ ಅಂಶ ತಿಳಿದುಬರುತ್ತದೆ. ಇದರಲ್ಲಿ ಕೆಲವರು ಇಲ್ಲಿಯೇ ಐಕ್ಯವಾಗಿರುವ ಬಗ್ಗೆ ಆಧಾರಗಳು ದೊರಕುತ್ತವೆ. ಮತ್ತೆ ಕೆಲವರು ಹಂಪಿಯಿಂದ ಯಾವ ಕಡೆಗೆ ಹೋದರು ಏನು ಮಾಡಿದರು ಎಂಬ ಅಂಶ ತಿಳಿದು ಬರುವುದಿಲ್ಲ. ಹಂಪಿ ಶಾಸನಗಳು ದಾಖಲಿಸುವ ಶಿವಶರಣರ ಮೂಲ ನೆಲೆಗಳು ಯಾವುವು ಎಂಬುದರ ಬಗ್ಗೆ ಇನ್ನೂ ಹೆಚ್ಚಿನ ಶೋಧನೆಯಾಗಬೇಕಾಗಿದೆ.

**ಈ. ಹಂಪಿಯ ಶಾಸನೋಕ್ತ ಶಿವಲಿಂಗಗಳು**

ಹಂಪಿ ಪರಿಸರದಲ್ಲಿ ಹತ್ತಾರು ಕಡೆ ಶಿವಲಿಂಗಗಳು ಸ್ಥಾಪನೆಯಾಗಿದ್ದರಬಗ್ಗೆ ಶಾಸನಗಳು ದಾಖಲಿಸಿವೆ. ವಿಜಯನಗರ ಪೂರ್ವ, ವಿಜಯನಗರ ಕಾಲದಲ್ಲಿ ಈ ಶಿವಲಿಂಗಗಳು ಸ್ಥಾಪನೆಯಾಗಿರುವುದನ್ನು ಕಾಣಬಹುದಾಗಿದೆ. ವೀರಶೈವವು ಧರ್ಮವಾಗಿ ರೂಪುಗೊಂಡು ಸ್ಥಾವರವಾಗಿದ್ದನ್ನು ಈ ಸ್ಥಾವರಲಿಂಗ ಪ್ರತಿಸ್ಥಾಪನೆ ಧ್ವನಿಸುತ್ತದೆ. ಹಂಪಿಯಲ್ಲಿ ಧರ್ಮವಾಗಿ ರೂಪುಗೊಂಡ ವೀರಶೈವವು ಸ್ಥಾವರಲಿಂಗ ಪೂಜೆಯ ಕಡೆ ವಾಲಿರುವುದನ್ನು ಕಾಣಬಹುದಾಗಿದೆ. ಕಾಳಾಮುಖ ಶೈವರು ವೀರಶೈವರಾದ ಮೇಲೆ ತಮ್ಮ ಮೂಲ ಸಿದ್ಧಾಂತವಾದ ಸ್ಥಾವರಲಿಂಗಪೂಜೆಯನ್ನು ಮುಂದುವರೆಸಿದಂತೆ ತೋರುತ್ತದೆ.

೧. ವಿರೂಪಾಕ್ಷ ದೇವಾಲಯದ ಹಿಂಬದಿ ಮಾವಿನ ತೋಪಿನಬಳಿ ಹಾಳು ದೇವಸ್ಥಾನದ ದ್ವಾರಬಂಧದಲ್ಲಿರುವ ಕ್ರಿ.ಶ.೧೫೫೨ರ ಶಾಸನವು "ವಿಶ್ವನಾಥ ರಾಉತರ ಮಕಳು ರಾಮಪರಾಉತರು ಗೋಪಂಮನು

ಮಣತಾಯಂಮನು ತಿಯರಾಜಯಂಮನು ಅಂಣಂಮನವರು ಸಹ ಪುಣ್ಯಲೋಕವನ್ನೆದಿದ..... ...ರಾಮಪರಾಹುತ ಗೋಪಂಮನವರ ಪುತ್ರರಾಧ ಹರಿದಾಸರಾಉತರೂ ಕಲ್ಲಗುಡಿಯನು ಕಟ್ಟಿಸಿ ರಾಮಲಿಂಗದೇವರ ಲಿಂಗ ಪ್ರತಿಷ್ಠೆಯ ಮಾಡಿಸ್ತೆಊ..''[೧೩೩] ಎಂದು ದಾಖಲಿಸಿದೆ. ಈಶಾಸನದ ಪ್ರಕಾರ ವಿಶ್ವನಾಥರಾಹುತರ ಮಕ್ಕಳಾದ ರಾಮಪರಾಹುತ, ಮಣತಾಯಮ್ಮ, ತಿಮ್ಮಾಜಯಮ್ಮ ಮತ್ತು ಅಂಣಮನು ತುಂಗಭದ್ರಾ ನದಿಯ ದಂಡೆಯ ಮೇಲೆ ಭಾಷ್ಕರ ಕ್ಷೇತ್ರದಲ್ಲಿ ಮರಣ ಹೊಂದಿದರು ರಾಮಪರಾಹುತ ಮತ್ತು ಗೋಪಮನ ಮಗನಾದ ಹರಿದಾಸರಾಹುತನು ಕಲ್ಲಗುಡಿಯನ್ನು ಕಟ್ಟಿಸಿ ರಾಮಲಿಂಗದೇವರ ಪ್ರತಿಷ್ಠೆ ಮಾಡಿಸಿದ ವಿವರ ತಿಳಿಯುತ್ತದೆ.

೨. ವಿರೂಪಾಕ್ಷ ದೇವಾಲಯದ ವಾಯುವ್ಯಕ್ಕೆ ನದಿದಂಡೆಯ ಹಳೆಯ ಸ್ನಾನ ಘಟ್ಟದ ಬಳಿ ಇರುವ ಬಂಡೆಯ ಮೇಲಿನ ಕ್ರಿ.ಶ.೧೫ ೧೬ನೇ ಶತಮಾನದ ಶಾಸನವು ''ಶ್ರೀ ಚಾಮುಂಡೇಶ್ವರ ಲಿಂಗಂ''[೧೩೪] ಎಂದು ಉಲ್ಲೇಖಿಸುತ್ತದೆ. ಹಾಗೆಯೇ ಇಲ್ಲಿಯೇ ಇರುವ ಲಿಂಗ ಮತ್ತು ನಂದಿ ಶಿಲ್ಪಗಳ ಮೇಲೆ ಇರುವ ಶಾಸನವು ''ವಿರೂಪಾಕ್ಷದೇವರ ಸಂನಿಧಿ ಗಂಗಧರಲಿಂಗ''[೧೩೫] ಎಂದೂ, ಮತ್ತೊಂದು ಶಾಸನವು ''ಶ್ರೀ ವೀರಭದ್ರುಡ ಲಿಂಗಂ''[೧೩೬]ಎಂದೂ ದಾಖಲಿಸುತ್ತವೆ. ಚಾಮುಂಡೇಶ್ವರ ಲಿಂಗ, ಗಂಗಾಧರ ಲಿಂಗ, ವೀರಭದ್ರಲಿಂಗಗಳನ್ನು ದಾಖಲಿಸಿವೆ.

೩. ಅದೇ ಸ್ನಾನಘಟ್ಟದ ಬಳಿ ಇರುವ ಮತ್ತೊಂದು ಬಂಡೆಯ ಮೆಲೆ ಇರುವ ಕ್ರಿ.ಶ.೧೫೩೩ರ ಶಾಸನವು ''ಬ್ರಾಂಹ್ಮಣಪಲ್ಲಿಯ...ತಿಂಮ್ಮಯನು ಮಾಡಿಸಿದ ನಾಗಭೂಷಣಲಿಂಗಉ ಶ್ರೀ''[೧೩೭] ಎಂದು ಬ್ರಾಹ್ಮಣಪಲ್ಲಿಯ ತಿಮ್ಮಯ್ಯನು ನಾಗಭೂಷಣ ಲಿಂಗವನ್ನು ಪ್ರತಿಷ್ಠಾಪಿಸಿದ ವಿಚಾರ ತಿಳಿಸುತ್ತದೆ.

೪. ಹೇಮಕೂಟದ ಉತ್ತರಕ್ಕಿರುವ ದೇವಾಲಯದ ಕಂಬದಮೇಲೆ ಕ್ರಿ.ಶ.೧೪ನೆಯ ಶತಮಾನದ ಶಾಸನವು ''ಶ್ರೀ ಸಂಗಮೇಶ್ವರ ದೇವರ ದಿಬ್ಬಶ್ರೀಪಾದ ಪದ್ಮಾರಾಧಕರುಮಪ್ಪ ಮುಂಮಡಿ ಸಿಂಗೆಯನಯಕನ ಕೊಮರ ವೀರಕಂಪಿಲದೇವನು ತಂಮತಯ ಮಾರೊನಾಕಿತಿ ಸಿಂಗೆಯನಯಕ ಪೆರುಡಿನಯಕ ಇಂತು ಮೂವರ ಲಿಂಗ ಪ್ರತಿಷ್ಠೆಯ ಮಡಿಸಿದ ಸಿವಾಲ್ಯ''[೧೩೮] ಎಂದು ದಾಖಲಿಸುತ್ತದೆ. ಈ ಶಾಸನದಿಂದ ಸಂಗಮೇಶ್ವರ ದೇವರ ಪಾದಾರಾಧಕನಾದ ಮುಮ್ಮಡಿ ಸಿಂಗೆಯ ನಾಯಕನ ಮಗನಾದ ವೀರಕಂಪಿಲ ದೇವನು ತಮ್ಮ ತಾಯಿ ಮಾರನಾಕಿತಿ, ತಂದೆ ಸಿಂಗೆಯನಾಯಕ ಮತ್ತು ಪೆರುಡಿನಾಯಕನ ಹೆಸರಿನಲ್ಲಿ ಮೂರು ಶಿವಲಿಂಗಗಳನ್ನು ಪ್ರತಿಷ್ಠಾಪಿಸಿ ಶಿವಾಲಯ ಕಟ್ಟಿಸಿದ ವಿಷಯ ತಿಳಿದುಬರುತ್ತದೆ.

೫. ಕೋದಂಡರಾಮ ದೇವಾಲಯದ ಹತ್ತಿರ ಹರಿಯುವ ನದಿಯ ದಂಡೆಯ ೧೦೮ ಲಿಂಗಗಳ್ಳಳ ಬಂಡೆಯ ಪಶ್ಚಿಮಕ್ಕಿರುವ ಬಂಡೆಯ ಮೇಲಿರುವ ಶಾಸನವು ''ಶ್ರೀಕೋಟಿ ಶಂಕರ ಅಷ್ಟೋತ್ತರ ಶತಲಿಂಗಾಯನಮ'' ಎಂದೂ ಅದೇ ಸ್ಥಳದ ಇನ್ನೊಂದು ಬಂಡೆಯ ಮೇಲಿರುವ ಶಾಸನವು ''ಶ್ರೀ ಕೋಟಿ ಶಂಕರ ಸಹಸ್ರ

ಲಿಂಗಾಯನಮಃ''[೧೫]ಎಂದು ದಾಖಲಿಸುತ್ತವೆ. ಈ ಶಾಸನಗಳು ಕೋಟಿ ಶಂಕರಲಿಂಗವನ್ನು ಉಲ್ಲೇಖಿಸುತ್ತವೆ. ಇವು ವಿಸ್ತಾರವಾದ ಬಂಡೆಯ ಮೇಲೆ ಚಿಕ್ಕ ಚಿಕ್ಕ ಲಿಂಗಗಳ ಉಬ್ಬುಶಿಲ್ಪಗಳ ಮಧ್ಯ ಚೌಕಾಕಾರದ ಪಾಣಿಪೀಠವನ್ನು ರಚಿಸಿ ಅದಕ್ಕೊಪ್ಪುವಂತೆ ಲಿಂಗವನ್ನು ಸ್ಥಾಪಿಸಲಾಗಿದೆ. ಇವು ೧೦೮ ಇದ್ದು 'ಅಷ್ಟೋತ್ತರ ಲಿಂಗ' ಎಂಬ ಶಾಸನೋಕ್ತ ಹೇಳಿಕೆಗೆ ನಿದರ್ಶನಗಳಾಗಿವೆ.[೧೦] ಈ ಭಾಗದಲ್ಲಿ ನದಿ ದಂಡೆಯ ಬಂಡೆಗಲ್ಲುಗಳ ಮೇಲೆ ಅನೇಕ ಶಿವಲಿಂಗಗಳು ಕಾಣಿಸುತ್ತವೆ. ವಿರೂಪಾಕ್ಷ ದೇವಾಲಯದಿಂದ ಹಿಡಿದು ಹಳೆಯ ಸೇತುವೆಯ ತನಕ ನದಿ ದಂಡೆಯ ಬಂಡೆಗಳ ಮೇಲೆ ನೂರಾರು ಶಿವಲಿಂಗಗಳು ಕಂಡುಬರುತ್ತವೆ.

ಹೀಗೆ ಹಂಪಿಯ ಹೇಮಕೂಟ, ಮಾಲ್ಯವಂತ ಪರ್ವತ, ನದಿದಂಡೆ ಇನ್ನೂ ಮುಂತಾದ ಕಡೆಗಳಲ್ಲಿ ಶಿವಲಿಂಗಗಳು ಅಧಿಕ ಪ್ರಮಾಣದಲ್ಲಿ ಕಂಡುಬರುತ್ತವೆ. ಶೈವರು ವೀರಶೈವರಾದ ಮೇಲೆ ಸ್ಥಾವರ ಲಿಂಗ ಪೂಜೆಯನ್ನು ಮುಂದುವರೆಸಿದಂತೆ ಕಂಡುಬರುತ್ತದೆ.

ಅಡಿಟಿಪ್ಪಣಿಗಳು

೧. ಬಸವರಾಧ್ಯ ಎನ್.(ಪ್ರ.ಸಂ), ಸಂಕ್ಷಿಪ್ತ ಕನ್ನಡ ನಿಘಂಟು, ಪು.೯೬೪

೨. ರವೀಂದ್ರನಾಥ ಕೆ., ಕರ್ನಾಟಕದ ಮಠಗಳು ಮತ್ತು ಕನ್ನಡ ಸಾಹಿತ್ಯ, ಪು.೯೩.

೪. ಭೂಸನೂರಮಠ ಸಂ.ಶಿ.(ಸಂ), ಮಹಾಲಿಂಗದೇವರು ನಿರೂಪಿಸಿದ ಏಕೋತ್ತರಶತಸ್ಥಲ, ಪು.೪೬

೫. ಹಿರೇಮಠ ಆರ್.ಸಿ.(ಸಂ), ಗುಮ್ಮಳಾಪುರದ ಸಿದ್ಧಲಿಂಗ ದೇವರ ಶೂನ್ಯಸಂಪಾದನೆ, ಪು.೧೧೭

೬. ಅದೇ, ಪು.೩೦೧

೭. ಕಲಬುರ್ಗಿ ಎಂ.ಎಂ.(ಸಂ) ಹರಿಹರನ ರಗಳೆಗಳು, ಪು.೩೨೨

೮. ಅದೇ, ಪು.೪೧೦

೯. ವಿದ್ಯಾಶಂಕರ ಎಸ್., ಚಾಮರಸನ ಪ್ರಭುಲಿಂಗಲೀಲೆ(ಗ. ಅನುವಾದ), ಪು.೧೯೪

೧೦. ದೇವರಕೊಂಡಾರೆಡ್ಡಿ, ಭಟ್‌ಸೂರಿ ಕೆ.ಜಿ., ಕಲವೀರ ಮನ್ವಾಚಾರ, ಡಿ.ವಿ.ಪರಮಶಿವಮೂರ್ತಿ(ಸಂ) ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿಶಾಸನಗಳು, ಪು.೧೯೬, ಶಾ.ಸಂ.೨೫೫

೧೧. ಬಸವರಾಜ ಮಲಶೆಟ್ಟಿ(ಸಂ), ಎನಗಿಂತ ಕಿರಿಯರಿಲ್ಲ (ಅಭಿನಂದನಗ್ರಂಥ), ಪು.೨೭೭

೧೨. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿ ಶಾಸನಗಳು, ಪು.೧೯೬, ಶಾ.ಸಂ.೨೫೫

೧೩. ನಂಜುಂಡಾರಾಧ್ಯ ಎಂ.ಜಿ., ಹರಿಹರ ಕವಿಯ ಗಿರಿಜಾ ಕಲ್ಯಾಣ ಮಹಾಪ್ರಬಂಧಂ(ಗದ್ಯಾನುವಾದ), ಪು.೨೭

೧೪. ಅದೇ, ಪು.೨೮

೧೫. ಪೂರ್ವೋಕ್ತ, ಹರಿಹರನ ರಗಳೆಗಳು, ಪೀಠಿಕೆ, ಪು.VIII

೧೬. ಅದೇ, ಪು.IX(ಪೀಠಿಕೆ)

೧೭. ಅದೇ ಪೀಠಿಕೆ, ಪು.V!II

೧೮. ವಿವೇಕರೈ ಬಿ.ಎ.(ಸಂ), ರಾಘವಾಂಕನ ಸಮಗ್ರ ಕಾವ್ಯ, ಪು.೨೮೬-೨೮೭

೧೯. ಅದೇ, ಪು.೩೯೭

೨೦. ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ(ಪಿಎಚ್.ಡಿ. ಪ್ರಬಂಧ), ಪು.೨೨

೨೧. ಪೂರ್ವೋಕ್ತ, ಕನ್ನಡ ವಿ.ವಿ. ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಪು.೨೧೯-೨೨೦, ಶಾ.ಸಂ.೪೮

೨೨. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿ ಶಾಸನಗಳು, ಪು.೫೨, ಶಾ.ಸಂ.೬೧

೨೩. ಅದೇ, ಶಾ.ಸಂ.೬೨

೨೪. Epigraphia carnatica vol.VIII.No.೩೭೫, soraba

೨೫. ದೀಕ್ಷಿತ್ ಜಿ.ಎಸ್.(ಸಂ), ಸಂಗಮರ ಕಾಲದ ವಿಜಯನಗರ, ಪು.೫೮

೨೬. ಅದೇ, ಪು.೫೯

೨೭. ಪೂರ್ವೋಕ್ತ, ಕನ್ನಡ ವಿ.ವಿ. ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಪು.೨೧೯-೨೨೦, ಶಾ.ಸಮ.೪೮

೨೮. ಪೂರ್ವೋಕ್ತ (ಸಂ), ಸಂಗಮರ ಕಾಲದ ವಿಜಯನಗರ, ಪು.೬೦

೨೯. ಅದೇ, ಪು.೫೯

೩೦. Epigraphia carnatica vol.XI.N.೨೩

೩೧. ಅದೇ, Vol.IX. No.೧೨9

೩೨. ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ(ಪಿಎಚ್.ಡಿ. ಪ್ರಬಂಧ), ಪು.೨೩

೩೩. ಪರಮಶಿವಮೂರ್ತಿ ಡಿ.ವಿ.(ಸಂ) ಪ್ರೌಢದೇವರಾಯನ ಶಾಸನಗಳು, ಪು.೯೦, ಶಾ.ಸಂ.೪೫

೩೪. ಅದೇ, ಪು.೧೩೮, ಶಾ.ಸಂ.೮೦

೩೫. ಅದೇ, ಪು.೩೪೧, ಶಾ.ಸಂ.೧೬೫

೩೬. ದೇವೀರಪ್ಪ ಎಚ್.(ಪ್ರ.ಸಂ) ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೩೮-೪೩೯

೩೭. ದೇವೀರಪ್ಪ ಎಚ್., ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ(ವಿಮರ್ಶೆ), ಪು.೧

೩೮. ಅದೇ, ಪು.೩೮೬

೩೯. ಕಲಬುರ್ಗಿ ಎಂ.ಎಂ., ಮಾರ್ಗ-೪, ಪು.೧೯೧

೪೦. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾ.ಸಂ.೧೧೩, ಪು.೯೨

೪೧. ಅದೇ ಪು.೯೦, ಶಾ.ಸಂ.೯೯

೪೨. ಪೂರ್ವೋಕ್ತ, ಎನಗಿಂತ ಕಿರಿಯರಿಲ್ಲ(ಅಭಿನಂದನಗ್ರಂಥ), ಪು.೨೯೫

೪೩. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿಶಾಸನಗಳು, ಶಾ.ಸಂ.೩೯೬, ಪು.೨೮೦

೪೪. ರವೀಂದ್ರನಾಥ ಕೆ., ಅಗ್ನಿದಿವ್ಯ, ಪು.೪೫

೪೫. ದೇವಿರಪ್ಪ ಎಚ್.(ಪ್ರ.ಸಂ), ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೩೪

೪೬. ಪೂರ್ವೋಕ್ತ, ಎನಗಿಂತ ಕಿರಿಯರಿಲ್ಲ, ಪು.೨೯೩

೪೭. ಅದೇ, ಪು.೨೯೪

೪೮. ಜಯಾರಾಜಶೇಖರ ಜಿ.ವಿ.(ಸಂ), ಲಿಂಗಲೀಲಾ ವಿಲಾಸ ಚಾರಿತ್ರ ಸಂಗ್ರಹ, ಪು.೨

೪೯. ಕಲಬುರ್ಗಿ ಎಂ.ಎಂ., ಮಾರ್ಗ ೨, ಪು.೫೫

೫೦. ಮಹಾದೇವಪ್ಪ ಎನ್.ಜಿ.(ಸಂ), ಲಿಂಗಾಯತ(ಮಾಸಿಕ), ಪು.೩೩

೫೧. ಗೌಮ, ಉಮಾಪತಿಶಾಸ್ತ್ರಿ, ಶ್ರೀಕೊಟ್ಟೂರುಸ್ವಾಮಿಗಳ ಗುರುಪರಂಪರೆ, ಪು.XV

೫೨. ಅದೇ, ಪು.XIX

೫೩. ಪೂರ್ವೋಕ್ತ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೩, ಹಂಪಿ ಶಾಸನಗಳು, ಶಾ.ಸಂ.೯೩, ಪು.೮೮

೫೪. ಅದೇ, ಶಾ.ಸಂ.೯೬, ಪು.೮೯

೫೫. ಅದೇ, ಶಾ.ಸಂ.೮೩, ಪು.೮೩

೫೬. ಅದೇ, ಶಾ.ಸಂ.೮೪, ಪು.೮೫

೫೭. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೪೫೪

೫೮. ಲೂಯಿರೈಸ್(ಸಂ) ಬಾಲಸುಬ್ರಹ್ಮಣ್ಯ(ಪರಿಷ್ಕೃತ),ಅಮರಸಿಂಹನ ಅಮರಕೋಶ ಎಂಬ ನಾಮಲಿಂಗಾನು ಶಾಸನ, ಪು.೧೦೨

೫೯. ಪೂರ್ವೋಕ್ತ, ಸಂಕ್ಷಿಪ್ತ ಕನ್ನಡ ನಿಘಂಟು, ಪು.೪೫೫

೬೦. ಪೂರ್ವೋಕ್ತ, ಎನಗಿಂತ ಕಿರಿಯರಿಲ್ಲ(ಅಭಿನಂದನಾಗ್ರಂಥ), ಪು.೨೯೭

೬೧. ಕೊಪ್ಪಳ ವಿ.ಆರ್.(ಸಂ), ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣ, ಪು

೬೨. ಪೂರ್ವೋಕ್ತ, ಎನಗಿಂತ ಕಿರಿಯರಿಲ್ಲ, (ಅಭಿನಂದನಗ್ರಂಥ), ಪು.೨೯೯

೬೩. ಅದೇ, ಪು.೩೦೦-೩೦೧

೬೪. ಅದೇ, ಪು.೩೦೩

೬೫. ವಿವೇಕ ರೈ ಬಿ.ಎ.(ಸಂ), ರಾಘವಾಂಕನ ಸಮಗ್ರಕಾವ್ಯ, ಪು.೧೯೯

೬೬. ಪೂರ್ವೋಕ್ತ, ಎನಗಿಂತ ಕಿರಿಯರಿಲ್ಲ, ಪು.೩೧೧-೩೧೨

೬೭. ಪೂರ್ವೋಕ್ತ, ಕನ್ನಡ ವಿ.ವಿ. ಶಾಸನ ಸಂಪುಟ-೨, ಹಂಪಿ ಶಾಸನಗಳು, ಶಾ.ಸಂ.೨೩೬, ಪು.೧೮೫

೬೮. ಚಿದಾನಂದಮೂರ್ತಿ ಎಂ., ಪಾಂಡಿತ್ಯರಸ, ಪು.೨೮

೬೯. ಅದೇ, ಪು.೨೮

೭೦. ವಿದ್ಯಾಶಂಕರ ಎಸ್., ಚಾಮರಸನ ಪ್ರಭುಲಿಂಗ ಲೀಲೆ(ಗದ್ಯಾನುವಾದ), ಪು.೧(ಪೀಠಿಕೆ)

೭೧. ಪೂರ್ವೋಕ್ತ, ಪ್ರೌಢದೇವರಾಯನ ಶಾಸನಗಳು, ಪು.೧೪-೧೫, ಶಾ.ಸಂ.೭

೭೨. ಗೋಪಾಲ ಆರ್. ಮತ್ತು ಇತರು(ಸಂ), ವಿಜಯನಗರ ಅಧ್ಯಯನ ಸಂಪುಟ-೧೦, ಪು್.೯೨

೭೩. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿಶಾಸನಗಳು, ಪು.೨೪೯, ಶಾ.ಸಂ.೩೪೨

೭೪. ಅದೇ, ಪು.೨೪೫, ಶಾ.ಸಂ.೩೩೨

೭೫. ಅದೇ, ಪು.೧೭೬, ಶಾ.ಸಂ.೨೨೪

೭೬. ಅದೇ, ಪು.೨೨೬, ಶಾ.ಸಂ.೩೧೩

೭೭. ಅದೇ, ಪು.೨೨೮, ಶಾ.ಸಂ.೩೧೭

೭೮. ಹಳ್ಳಿಕೇರಿ ಎಫ್.ಟಿ.(ಸಂ), ಕರಸ್ಥಲ ಸಾಹಿತ್ಯ, ಪು.೩(ಪ್ರಸ್ತಾವನೆ)

೭೯. ದೇವೀರಪ್ಪ ಎಚ್.(ಪ್ರ.ಸಂ) ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ ಪು.೪೯೦

೮೦. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೪ (ಪ್ರಸ್ತಾವನೆ)

೮೧. ಕೃಷ್ಣಪ್ಪ ಎಂ.ವಿ. ಮತ್ತು ತಳವಾರ ಎಚ್.ಟಿ.(ಸಂ), ವಿಜಯನಗರ ಅಧ್ಯಯನ ಸಂ.೬, ಪು.೧೩೧

೮೨. ಪೂರ್ವೋಕ್ತ, ಕರಸ್ಥಲ ಸಾಹಿತ್ಯ, ಪು.೧೧ (ಪ್ರಸ್ತಾವನೆ)

೮೩. ಪೂರ್ವೋಕ್ತ, ವಿಜಯನಗರ ಅಧ್ಯಯನ ಸಂ.೬, ಪು.೧೩೫

೮೪. ಅದೇ, ಪು.೧೩೭

೮೫. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿಶಾಸನಗಳು, ಪು.೨೬೦, ಶಾ.ಸಂ.೩೬೦

೮೬. ಅದೇ, ಪು.೨೬೧, ಶಾ.ಸಂ.೩೬೩

೮೭. ಅದೇ, ಪು.೨೫೭, ಶಾ.ಸಂ.೩೫೩

೮೮. ಅದೇ, ಪು.೨೫೭, ಶಾ.ಸಂ.೩೮೨

೮೯. ಅದೇ, ಪು.೨೫೮, ಶಾ.ಸಂ.೩೫೪

೯೦. ಚಿದಾನಂದಮೂರ್ತಿ ಎಂ., ಹೊಸತು-ಹೊಸತು, ಪುಟ.೨೯೧

೯೧. ಪೂರ್ವೋಕ್ತ, ಪ್ರೌಢದೇವರಾಯನ ಶಾಸನಗಳು, ಪುಟ.೧೧೪, ಶಾ.ಸಂ.೫೪

೯೨. ಕಲಬುರ್ಗಿ ಎಂ.ಎಂ., ಮಾರ್ಗ-೪, ಪು.೧೪೪

೯೩. ಪೂರ್ವೋಕ್ತ, ಕನ್ನಡ ವಿ.ವಿ.ಶಾಸನ ಸಂಪುಟ-೩, ಹಂಪಿ ಶಾಸನಗಳು, ಪು.೪೯, ಶಾ.ಸಂ.೫೭

೯೪. ಪೂರ್ವೋಕ್ತ, ಮಾರ್ಗ-೪, ಪು.೧೪೪

೯೫. ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪು.೮೬

೯೬. ಹಳಕಟ್ಟಿ ಫ.ಗು.(ಸಂ), ವಚನಶಾಸ್ತ್ರಸಾರ ಭಾಗ-೨, ಪು.೫೯೦?

೯೭. ಪೂರ್ವೋಕ್ತ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪು.೮೮

೯೮. ಪೂರ್ವೋಕ್ತ(ಸಂ), ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಪು.೪೩೨

೯೯. ಅದೇ, ಪು.೪೦೯

೧೦೦. ಅದೇ, ಪು.೪೩೧

೧೦೧. ಅದೇ, ಪು.೪೩೨

೧೦೨. ಅದೇ, ಪು.೪೩೨

೧೦೩. ಅದೇ, ಪು.೪೩೩

೧೦೪. ಅದೇ, ಪು.೪೩೩

೧೦೫. ಕಲಬುರ್ಗಿ ಎಂ.ಎಂ., ಮಾರ್ಗ ೩, ಪು.

೧೦೬. ಪೂರ್ವೋಕ್ತ(ಸಂ), ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಪು.೪೩೩

೧೦೭. ಅದೇ, ಪು.೪೩೪

೧೦೮. ಅದೇ, ಪು.೪೩೩

೧೦೯. ಪೂರ್ವೋಕ್ತ, ಪ್ರೌಢದೇವರಾಯನ ಕಾಲದ ಕನ್ನಡಸಾಹಿತ್ಯ, ಪು.೧೦೨-೧೦೩

೧೧೦. ವಿಜಯಕುಮಾರ ಎಸ್.ಕಟಗಿಹಳ್ಳಿಮಠ, ಬಸವೋತ್ತರ ಯುಗದ ವಚನ ಸಾಹಿತ್ಯ ಒಂದು ಅಧ್ಯಯನ(ಪಿಎಚ್.ಡಿ.ಪ್ರಬಂಧ), ಪು.೨೨

೧೧೧. ಪೂರ್ವೋಕ್ತ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೩, ಹಂಪಿ ಶಾಸನಗಳು, ಪು.೧೮೬, ಶಾಸನ ಸಂಖ್ಯೆ ೨೩೯

೧೧೨. ಪೂರ್ವೋಕ್ತ, ವಿಜಯನಗರ ಅಧ್ಯಯನ, ಸಂಪುಟ ೭, ಪು.೧೩೬

೧೧೩. ಪೂರ್ವೋಕ್ತ, ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಹಂಪಿ ಶಾಸನಗಳು, ಪು.೫೦, ಶಾಸನ ಸಂಖ್ಯೆ ೫೯

೧೧೪. ಪೂರ್ವೋಕ್ತ, ವಿಜಯನಗರ ಅಧ್ಯಯನ, ಸಂಪುಟ ೭, ಪು.೧೩೬

೧೧೫. ಪೂರ್ವೋಕ್ತ, ಲಕ್ಕಣದಂಡೇಶನ ಶಿವತತ್ತ್ವ ಚಿಂತಾಮಣಿ, ಪು.೪೧೦

೧೧೬. ಪೂರ್ವೋಕ್ತ, ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಹಂಪಿ ಶಾಸನಗಳು, ಪು.೨೧೮, ಶಾ.ಸಂ.೨೯೯

೧೧೭. ಪೂರ್ವೋಕ್ತ, ವಿಜಯನಗರ ಅಧ್ಯಯನ, ಸಂಪುಟ ೬, ಪು.೮೮

೧೧೮. ಅದೇ, ಪು.೧೩೦

೧೧೯. ಪೂರ್ವೋಕ್ತ, ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಹಂಪಿ ಶಾಸನಗಳು, ಪು.೨೫೭, ಶಾ.ಸಂ. ೨೫೨

೧೨೦. ಅದೇ, ಪು.೨೫೮, ಶಾ.ಸಂ.೩೫೪

೧೨೧. ಪೂರ್ವೋಕ್ತ, ವಿಜಯನಗರ ಅಧ್ಯಯನ, ಸಂಪುಟ ೧೦, ಪು.೮೯

೧೨೨. ಅದೇ, ಸಂ.೬, ಪು.೧೩೪

೧೨೩. ಪೂರ್ವೋಕ್ತ, ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಹಂಪಿ ಶಾಸನಗಳು, ಪು.೨೪೬, ಶಾ.ಸಂ.೩೩೫

೧೨೪. ಅದೇ, ಪು.೨೬೧, ಶಾ.ಸಂ.೩೬೪

೧೨೫. ಅದೇ, ಪು.೨೬೧, ಶಾ.ಸಂ.೩೬೨

೧೨೬. ಪೂರ್ವೋಕ್ತ, ವಿಜಯನಗರ ಅಧ್ಯಯನ, ಸಂಪುಟ ೧೦, ಪು.೯೦

೧೨೭. ಪೂರ್ವೋಕ್ತ, ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಹಂಪಿ ಶಾಸನಗಳು, ಪು.೧೨೪, ಶಾಸನ ಸಂಖ್ಯೆ ೧೬೦-೧೬೧

೧೨೮. ಅದೇ, ಪು.೧೮೩, ಶಾ.ಸಂ.೨೩೪

೧೨೯. ಅದೇ, ಪು.೨೨೨, ಶಾ.ಸಂ.೩೦೬

೧೩೦. ಅದೇ, ಪು.೨೬೩, ಶಾ.ಸಂ.೩೬೬

೧೩೧. ಅದೇ, ಪು.೨೬೩, ಶಾ.ಸಂ.೩೬೭

೧೩೨. ಅದೇ, ಪು.೨೬೬, ಶಾ.ಸಂ.೩೭೫

೧೩೩. ಅದೇ, ಪು.೪, ಶಾ.ಸಂ.೬

೧೩೪. ಅದೇ, ಪು.೭, ಶಾ.ಸಂ.೧೩

೧೩೫. ಅದೇ, ಪು.೮, ಶಾ.ಸಂ.೧೬

೧೩೬. ಅದೇ, ಪು.೯, ಶಾ.ಸಂ.೧೮

೧೩೭. ಅದೇ, ಪು.೧೦, ಶಾ.ಸಂ.೨೧

೧೩೮. ಅದೇ, ಪು.೫೦, ಶಾ.ಸಂ.೫೯

೧೩೯. ಅದೇ, ಪು.೧೨೫, ಶಾ.ಸಂ.೧೬೪-೧೬೫

೧೪೦. ರಾಮಕೃಷ್ಣ ಕೆ.ಆರ್., ಮತ್ತು ಇತರರು(ಸಂ), ವಿಜಯನಗರ ಅಧ್ಯಯನ, ಸಂಪುಟ ೯, ಪು.೧೬೮

೬

# ಸಮಾರೋಪ

ಆದಿಮಾನವನ ಕಾಲದಿಂದಲೂ ಮನುಷ್ಯನ ಬೌದ್ಧಿಕ ಸಾಮರ್ಥ್ಯ ವಿಕಾಸ ಹೊಂದಿದಂತೆ, ಅವನ ಬದುಕಿನ ವಿಧಾನವೂ ಬದಲಾಗುತ್ತಾ ಸಾಗಿ, ಅನೇಕ ರೂಪಾಂತರ ಪಡೆಯುತ್ತಾ ಹೋಗಿದೆ. ಮನುಷ್ಯನ ಬದುಕು ಬೆಳವಣಿಗೆ ಹಾಗೂ ವಿಕಾಸ ಹೊಂದಿದಂತೆಲ್ಲಾ ಅವನು ಅನೇಕ ನಿಯಮಗಳಲ್ಲಿ ಬಂಧಿಯಾಗಿದ್ದಾನೆ. ಅಂದರೆ ಮನುಷ್ಯ ಅನೇಕ ಕಟ್ಟುಪಾಡುಗಳಿಗೆ ಸಿಲುಕಿ ಬದುಕನ್ನು ಸೀಮಿತಗೊಳಿಸಿ ಕೊಂಡಿದ್ದಾನೆ. ಹೇಗೇಗೋ ಬದುಕುವುದಕ್ಕಿಂತ ಕೆಲವು ನಿಯಮಗಳ ಅಡಿಯಲ್ಲಿ ಬದುಕುವುದು ಒಂದು ರೀತಿಯಲ್ಲಿ ಒಳ್ಳೆಯದು. ಮನುಷ್ಯ ಬದುಕುವ ರೀತಿ-ನೀತಿ ನಿಯಮ, ಕಟ್ಟುಪಾಡು, ಕ್ರಮ ಇವುಗಳೇ ಮುಂದೆ ಧರ್ಮದ ತತ್ತ್ವ-ಸಿದ್ಧಾಂತಗಳಾಗಿ ರೂಪುಗೊಂಡವು. ಮನುಷ್ಯನಿಗೆ ಇಂದು ಧರ್ಮ ಅತ್ಯವಶ್ಯವಾಗಿ ಬೇಕಾಗಿದೆ. ಮನುಷ್ಯನ ಬೌದ್ಧಿಕ ಸಾಮರ್ಥ್ಯದಿಂದ ಧರ್ಮದ ತತ್ತ್ವ ಸಿದ್ಧಾಂತಗಳು ಸೃಷ್ಟಿಯಾಗಿದ್ದರೂ ಇವುಗಳ ಪಾಲನೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಈ ಭಿನ್ನತೆಯ ಕಾರಣವಾಗಿ ಹತ್ತಾರು ಧರ್ಮಗಳು ತತ್ತ್ವ-ಸಿದ್ಧಾಂತಗಳು ರೂಪುಗೊಂಡವು ಎಂಬುದು ಗಮನಾರ್ಹ ಅಂಶವಾಗಿದೆ. ಅಂಥ ಧರ್ಮಗಳಲ್ಲಿ ವೀರಶೈವವು ತನ್ನದೇ ಆದ ತತ್ತ್ವ ಸಿದ್ಧಾಂತಗಳನ್ನು ಹೊಂದಿದ್ದು ಜನಮುಖಿಯಾಗಿರುವುದನ್ನು ಕಾಣಬಹುದು. ಇದರ ತತ್ತ್ವ-ಸಿದ್ಧಾಂತಗಳ ಸ್ವರೂಪವನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

'ಹಂಪಿ' ಆದಿ ಮಾನವನ ಕಾಲದಿಂದಲೂ ಪ್ರತಿ ಹಂತದಲ್ಲಿ ಮಾನವನನ್ನು ಅನಾಗರಿಕತೆಯಿಂದ ನಾಗರಿಕತೆಯೆಡೆಗೆ ಕೊಂಡೊಯ್ಯುವಲ್ಲಿ ಪ್ರಮುಖ ಪಾತ್ರವಹಿಸಿದೆ. ಗುಹೆಯಲ್ಲಿ ವಾಸವಾಗಿದ್ದ ಮನುಷ್ಯನಿಗೆ ಗುಡಿಸಲು ಕಟ್ಟುವ, ಕಲ್ಲಿನ ಮನೆಕಟ್ಟುವ, ದೇವಾಲಯ ಕಟ್ಟುವ ಸಾಮರ್ಥ್ಯ ನೀಡಿದ್ದಲ್ಲದೆ, ತಾನು ನಂಬಿದ ಧಾರ್ಮಿಕ ತತ್ತ್ವ-ಸಿದ್ಧಾಂತಗಳ ನೆಲೆಯಲ್ಲಿ ಇತರರು ಬೇರೆ ಧರ್ಮೀಯರ ದೌರ್ಜನ್ಯಕ್ಕೆ ಒಳಗಾಗಿ ಅವರ ಧರ್ಮಕ್ಕೆ ಮತಾಂತರ ಹೊಂದುವರೆಂದು, ರಾಜ್ಯಕಟ್ಟಿ ಧರ್ಮ ರಕ್ಷಣೆಗೆ ಹೋರಾಡಿ ಮಡಿದದ್ದು ಹಂಪಿಯ ಈ ಚರಿತ್ರೆ ಕಾಲಗರ್ಭದಲ್ಲಿ ಅಡಗಿದ್ದು, ಎಲ್ಲರಿಗೂ ತಿಳಿದಿರುವ ವಿಷಯವಾಗಿದೆ.

ಬೌದ್ಧ, ಶೈವ, ವೀರಶೈವ, ಶ್ರೀವೈಷ್ಣವ ಮುಂತಾದ ಧಾರ್ಮಿಕ ಪಂಥಗಳು ಹಂಪಿಯಲ್ಲಿ ನೆಲೆಯೂರಿ ಅದನ್ನು ತಮ್ಮ ಧಾರ್ಮಿಕ ಕೇಂದ್ರವಾಗಿ ರೂಪಿಸಿಕೊಂಡಿದ್ದಕ್ಕೆ ಅನೇಕ ಆಧಾರಗಳಿವೆ. ಜೈನ ಮತ್ತು ಇಸ್ಲಾಂ ಧರ್ಮಗಳು ಸಹ ಇಲ್ಲಿ ನೆಲೆಯೂರಿ ಮಾನ್ಯತೆ ಪಡೆದಿರುವುದಕ್ಕೆ ಶಾಸನಗಳ ಆಧಾರವಿದೆ. ಒಂದು ಧಾರ್ಮಿಕ ಸಿದ್ಧಾಂತ ಹಂಪಿಯಲ್ಲಿ ಧರ್ಮವಾಗಿ ರೂಪುಗೊಂಡು, ಆ ಧರ್ಮ ಸಿದ್ಧಾಂತವನ್ನು ನಾಡಿನೆಲ್ಲೆಡೆಗೆ ವಿಸ್ತರಿಸಿದ್ದು ಮಾತ್ರ ವೀರಶೈವಧರ್ಮವಾಗಿದೆ.

'ಹಂಪಿ' ಕನ್ನಡ ಸಾಹಿತ್ಯದ ವಿಷಯದಲ್ಲೂ ಸಹ ಹೊಸತನವನ್ನು ತೋರಿದೆ. ಅಂದರೆ ಕನ್ನಡ ಸಾಹಿತ್ಯದ ವಿವಿಧ ಮಜಲುಗಳಾದ ರಗಳೆ, ಷಟ್ಪದಿ, ಸಾಂಗತ್ಯ, ಮುಂತಾದ ಪ್ರಕಾರಗಳ ಸೃಷ್ಟಿಯ ನೆಲೆಯಾಗಿದೆ ಎಂಬುದು ಗಮನಾರ್ಹ ಅಂಶವಾಗಿದೆ. ಹಂಪಿ ಪರಿಸರದ ಬಹುತೇಕ ಕನ್ನಡ ಸಾಹಿತ್ಯವು ವೀರಶೈವ ಧರ್ಮವನ್ನು ಪ್ರತಿನಿಧಿಸುತ್ತದೆ. ಹಂಪಿ ಪರಿಸರದ ಕವಿಗಳು ವೀರಶೈವ ಧರ್ಮ ತತ್ತ್ವ-ಸಿದ್ಧಾಂತವನ್ನು ಸಾಹಿತ್ಯದ ಮೂಲಕ ಪ್ರತಿಬಿಂಬಿಸಿದ್ದಾರೆಂದು ಹೇಳಬಹುದಾಗಿದೆ. ೧೨ನೇ ಶತಮಾನದ ಕಲ್ಯಾಣದ ಕಾರ್ಗತ್ತಲಲ್ಲಿ ಉದಿಸಿದ ವೀರಶೈವ ಸಿದ್ಧಾಂತ ಧರ್ಮದ ರೂಪ ಪಡೆದು ಬೆಳಕು ಕಂಡದ್ದು ಹಂಪಿಯಲ್ಲಿ ಎಂದು ಹೇಳಬೇಕಾಗುತ್ತದೆ. ಕಲ್ಯಾಣದ ಕ್ರಾಂತಿಯ ನಂತರ ಕಲ್ಯಾಣದಿಂದ ಚದುರಿ ಹೋದ ಶಿವಶರಣರು ಮತ್ತೆ ಒಂದಾದದ್ದು ಹಂಪಿಯಲ್ಲಿಯೇ. ಈ ಶರಣ ಪರಂಪರೆಯವರು ದೇಶದ ನಾನಾ ಭಾಗಗಳಿಂದ ಹಂಪಿಗೆ ಬಂದು ಇಲ್ಲಿಯೇ ನೆಲಸಿ ಸಿದ್ಧಾಂತ ರೂಪದಲ್ಲಿದ್ದ ವೀರಶೈವಕ್ಕೆ ಧರ್ಮದ ಆಯಾಮ ನೀಡಿ ವ್ಯಾಪಕ ಪ್ರಚಾರ ಮಾಡಿದರು. ಇದಕ್ಕೆ ಕಾರಣ ಇಂದಿನ ಸಾಮಾಜಿಕ ವ್ಯವಸ್ಥೆ ಮತ್ತು ವೀರಶೈವವು ತನ್ನ ಅಸ್ತಿತ್ವ ಉಳಿಸಿಕೊಳ್ಳಲು ತನ್ನ ಸಿದ್ಧಾಂತಕ್ಕೆ ಚೌಕಟ್ಟು ಹಾಕಿಕೊಂಡು ಬೆಳೆಯಲು ಪ್ರಯತ್ನಿಸಿತು. ಅದು ಅಂದು ಹಂಪಿಯಲ್ಲಿದ್ದ ಶೈವ ಶಾಖೆಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡಂತೆ ತೋರುತ್ತದೆ. ಕಾರಣ ಇಷ್ಟಲಿಂಗ ಪೂರಕವಾದ ವೀರಶೈವರು ಸ್ಥಾವರ ಲಿಂಗಪೂಜೆಗೂ ಆದ್ಯತೆ ನೀಡಿದ್ದನ್ನು ಕಾಣಬಹುದು. ವೀರಶೈವ ದಾರ್ಶನಿಕರು ವೀರಶೈವ ಸಿದ್ಧಾಂತಕ್ಕೆ ಟೀಕು, ವ್ಯಾಖ್ಯಾನ ಬರೆದು ವೀರಶೈವ ಸಿದ್ಧಾಂತವನ್ನು ಧರ್ಮವಾಗಿ ರೂಪಿಸಿರುವುದನ್ನು ಹಂಪಿ ಪರಿಸರದ ಕನ್ನಡ ಸಾಹಿತ್ಯ ಕೃತಿಗಳಿಂದ ತಿಳಿದು ಬರುತ್ತದೆ.

೧೩ನೇ ಶತಮಾನದಲ್ಲಿದ್ದ ಹಂಪಿ ನಿವಾಸಿಗಳಾದ ಹರಿಹರ-ರಾಘವಾಂಕ ಕವಿಗಳು ತಮ್ಮ ಕೆಲವೊಂದು ಕಾವ್ಯಗಳಲ್ಲಿ ವೀರಶೈವ ತತ್ತ್ವ-ಸಿದ್ಧಾಂತಗಳನ್ನು ಅಳವಡಿಸಿದ್ದಾರೆ. ಅಂದರೆ ಶೈವದ ಹಿನ್ನಲೆಯಲ್ಲಿ ವೀರಶೈವವನ್ನು ಪ್ರತಿಬಿಂಬಿಸಲು ಪ್ರಯತ್ನಿಸಿದ್ದಾರೆ. ಇವರ ಕಾವ್ಯಗಳಲ್ಲಿ ಕೆಲವು ಕಡೆಗಳಲ್ಲಿ ಮಾತ್ರ ವೀರಶೈವ ತತ್ತ್ವಸಿದ್ಧಾಂತದ ಎಳೆಗಳು ಕಂಡುಬರುವುದನ್ನು ಕಾಣಬಹುದಾಗಿದೆ. ೧೫ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿ ಪ್ರೌಢದೇವರಾಯನ ಪ್ರೋತ್ಸಾಹದಿಂದ ನಾಡಿನ ಮೂಲೆ ಮೂಲೆಗಳಿಂದ ಆಗಮಿಸಿದ ವೀರಶೈವ ದಾರ್ಶನಿಕರು, ಅಂದರೆ ಚಾಮರಸ, ಲಕ್ಕಣ್ಣದಂಡೇಶ, ಜಕ್ಕಣಾರ್ಯ, ಮಹಾಲಿಂಗ ದೇವ, ಕುಮಾರಬಂಕನಾಥ, ಕರಸ್ಥಲದ ನಾಗಿದೇವ, ಕರಸ್ಥಲದ ವೀರಣ್ಣೊಡೆಯ,

ಕರಸ್ಥಲ ಮಲ್ಲಿಕಾರ್ಜುನೊಡೆಯ, ಚಂದ್ರಶೇಖರ ಕವಿ, ಸಪ್ತಕಾವ್ಯದ ಗುರುಬಸವ, ಮೊಗ್ಗೆಯ ಮಾಯಿದೇವ ಮೊದಲಾದ ದಾರ್ಶನಿಕರು, ಕವಿಗಳು ನೂರೊಂದು ವಿರಕ್ತರು ಸೇರಿ ಹಂಪಿಯಲ್ಲಿಯೇ ನೆಲಸಿ ೧೨ನೇ ಶತಮಾನದ ಶಿವಶರಣರ ವಚನಗಳನ್ನು ಸಂಗ್ರಹಿಸುವ, ಸಂಕಲಿಸುವ, ಆ ವಚನಗಳಿಗೆ ಟೀಕು ವ್ಯಾಖ್ಯಾನ ಬರೆಯುವ, ಅಲ್ಲಮ, ಬಸವಣ್ಣ ಮೊದಲಾದ ಶರಣರ ಜೀವನ ಸಾಧನೆ ಕುರಿತು ಕಾವ್ಯ ಬರೆಯುವ ಪ್ರಕ್ರಿಯೆ ಹಾಗೂ ವೀರಶೈವ ತತ್ತ್ವ-ಸಿದ್ಧಾಂತವನ್ನು ಕಾವ್ಯದ ಮೂಲಕ ಅಭಿವ್ಯಕ್ತಿಸುವ ಕ್ರಮವನ್ನು ಗಮನಿಸಿದರೆ ಮೊಗ್ಗಾಗಿದ್ದ ವೀರಶೈವ ಸಿದ್ಧಾಂತವನ್ನು ಹೂವಾಗಿ ಅರಳುವಂತೆ ಮಾಡಿರುವುದನ್ನು ಕಾಣಬಹುದು. ಅಂದರೆ ಪ್ರೌಢದೇವರಾಯನ ಕಾಲದಲ್ಲಿ ಆತನ ಪ್ರೋತ್ಸಾಹದಿಂದ ವೀರಶೈವ ಸಿದ್ಧಾಂತವು ಧರ್ಮವಾಗಿ ರೂಪುಗೊಂಡಿತ್ತೆಂದು ಹೇಳಬಹುದಾಗಿದೆ.

ಪ್ರಸ್ತುತ ಅಧ್ಯಾಯವು ಅಧ್ಯಯನದ ಒಟ್ಟು ಫಲಿತಗಳನ್ನು ಒಳಗೊಂಡಿರುತ್ತದೆ. ಈ ಮಹಾ ಪ್ರಬಂಧದಲ್ಲಿ ಹಂಪಿ ಪರಿಸರದ ಕನ್ನಡ ಸಾಹಿತ್ಯ ಕೃತಿಗಳು ಮತ್ತು ಶಾಸನಗಳನ್ನು ಆಧರಿಸಿ ಮತ್ತು ಅದಕ್ಕೆ ಸೀಮಿತಗೊಳಿಸಿಕೊಂಡು ವೀರಶೈವ ತತ್ತ್ವ-ಸಿದ್ಧಾಂತವನ್ನು ವಿಶ್ಲೇಷಿಸಲಾಗಿದೆ. ಹಿಂದೂ, ಬೌದ್ಧ, ಜೈನ, ಕ್ರೈಸ್ತ, ಇಸ್ಲಾಂ, ಸಿಖ್ ಮುಂತಾದ ಧಾರ್ಮಿಕ ಪಂಥಗಳಂತೆ, ವೀರಶೈವ(ಲಿಂಗಾಯತ)ವೂ ಒಂದು. ಇದು ಒಂದು ಸ್ವತಂತ್ರ ಧರ್ಮ ಎಂಬುದನ್ನು ಅದರ ತತ್ತ್ವ-ಸಿದ್ಧಾಂತಗಳ ಹಿನ್ನಲೆಯಲ್ಲಿ ವಿಶ್ಲೇಷಿಸಲಾಗಿದೆ. ವೀರಶೈವ (ಲಿಂಗಾಯತ) ಧರ್ಮವು ಹಿಂದೂ ಬೌದ್ಧಾಧಿ ಧರ್ಮಗಳಂತೆ ಧಾರ್ಮಿಕ ಗ್ರಂಥ, ತನ್ನದೇ ಆದ ತತ್ತ್ವ ಸಿದ್ಧಾಂತಗಳನ್ನು ಹೊಂದಿದ್ದು, ಅವುಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ. ಆದರೆ ಇತರ ಧರ್ಮ-ಸಿದ್ಧಾಂತಗಳಿಗೆ, ವೀರಶೈವ(ಲಿಂಗಾಯತ) ಧರ್ಮ ತತ್ತ್ವಸಿದ್ಧಾಂತಗಳಿಗೆ ಇರುವ ಸಾಮ್ಯ ಅಥವಾ ಭಿನ್ನತೆ ಗುರುತಿಸಲು ತೌಲನಿಕ ಅಧ್ಯಯನಕ್ಕೆ ಒಳಪಡಿಸಿಲ್ಲ. ವೀರಶೈವ-ಲಿಂಗಾಯತ ಪದಗಳು (ಪರಸ್ಪರ) ಒಂದೇ ಅರ್ಥದಲ್ಲಿ ಇಂದು ಬಳಕೆಯಾಗುತ್ತಿದ್ದರೂ ಸಹ, ಅವುಗಳಿಗಿರುವ ಕೆಲಭಿನ್ನತೆಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಹಂಪಿ ಪರಿಸರದ ಕನ್ನಡ ಸಾಹಿತ್ಯದಲ್ಲಿ ಮೊದಲು 'ಲಿಂಗವಂತ' (ಲಿಂಗಾಯತ) ಪದ ಬಳಕೆಯಾಗಿದ್ದರೂ (ಹರಿಹರ-ರಾಘವಾಂಕರ ಕೃತಿಗಳಲ್ಲಿ) ಸಹ ಶೈವದ ಹಿನ್ನೆಲೆ ಇರುವ 'ವೀರಶೈವ' ಪದವನ್ನೇ ಶೀರ್ಷಿಕೆಗೆ ಬಳಸಲಾಗಿದೆ. ಈ ಪದ (ವೀರಶೈವ) ಹಂಪಿ ಪರಿಸರದ ಕನ್ನಡ ಸಾಹಿತ್ಯದಲ್ಲಿ ಮೊದಲು ಬಳಕೆಯಾಗವುದು ೧೫ನೇ ಶತಮಾನದ ಚಾಮರಸಾದಿ ಕವಿಗಳ ಕಾವ್ಯಗಳಲ್ಲಿ. ಆದರೆ ಶೈವಧರ್ಮ ಭಾರತದ ಮೊದಲ ಪ್ರಾಚೀನ ಧರ್ಮ. ಅದರ ಒಂದು ಭಾಗವಾಗಿರುವ ವೀರಶೈವವು ೧೨ನೇ ಶತಮಾನದ ನಂತರ ಬಹುತೇಕ ಶೈವ ಶಾಖೆಗಳನ್ನು ತನ್ನೊಳಗೆ ಬರ ಮಾಡಿಕೊಂಡು ಸ್ವತಂತ್ರ ಧರ್ಮವಾಗಿ ರೂಪಗೊಂಡಿದ್ದನ್ನು ಹಂಪಿ ಪರಿಸರದ ಕೃತಿಗಳಿಂದ ತಿಳಿದುಬರುತ್ತದೆ. 'ಲಿಂಗಾಯತ' ಸಿದ್ಧಾಂತ ಸೃಷ್ಟಿಯಾಗುವುದಕ್ಕೆ ಶೈವವು ಪ್ರೇರಣೆ ನೀಡಿದಂತೆ ತೋರುತ್ತದೆ. ಆ ಕಾರಣಕ್ಕಾಗಿ ವೀರಶೈವ ಪದ ಬಳಸಲಾಗಿದೆ. ಆದರೆ ಲಿಂಗಾಯತ ಪದ ಬಳಕೆಯೇ ಹೆಚ್ಚು ಸೂಕ್ತವೆನಿಸುತ್ತದೆ(ಕಾರಣ ಹಂಪಿ ಪರಿಸರದ ಕಾವ್ಯಗಳಲ್ಲಿ ಲಿಂಗಾಯತ ಪದವೇ ಮೊದಲು ಬಳಕೆಯಾಗುವುದು).

ಪ್ರಸ್ತುತ ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ೬ ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳನ್ನು ಸೀಮಿತ ಪರಿಧಿಯಲ್ಲಿ ಅಧ್ಯಯನಕ್ಕೆ ಒಳಪಡಿಸಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನ ಉದ್ದೇಶ, ಸ್ವರೂಪ, ಈವರೆಗಿನ ಅಧ್ಯಯನದ ಸಮೀಕ್ಷೆ, ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ ಕುರಿತು ವಿವರಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಹಂಪಿಯ ಐತಿಹಾಸಿಕತೆ ಕುರಿತು ವಿವೇಚಿಸಲಾಗಿದೆ. ಇದರಲ್ಲಿ ಹಂಪಿಯ ಪೂರ್ವ ಇತಿಹಾಸ, ಭೌದ್ಧರ ಕಾಲ, ಜೈನರ ಕಾಲ, ಕದಂಬರು, ಬಾದಾಮಿ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ರಾಷ್ಟ್ರಕೂಟರ ಹಂಪಿಯಲ್ಲಿನ ಕುರುಹುಗಳು ಸ್ಮಾರಕಗಳನ್ನು ಕುರಿತು ಚರ್ಚಿಸಲಾಗಿದೆ. ಅಲ್ಲದೆ ಹಂಪಿಯ ಪ್ರಾಚೀನತೆಯನ್ನು ಶಾಸನಗಳ ಹಿನ್ನಲೆಯಲ್ಲಿ ವಿಶ್ಲೇಷಿಸಲಾಗಿದೆ. ಹೊಯ್ಸಳರ ಕೊನೆಯ ರಾಜಧಾನಿಯಾಗಿ ಹಂಪಿ ರೂಪುಗೊಂಡ ಬಗೆ, ಕುಮ್ಮಟ ದುರ್ಗಪಾಳೆಗಾರರು, ಕುರುಗೋಡು ಸಿಂಧರ ಆಳ್ವಿಕೆ, ವಿಜಯನಗರ ಸ್ಥಾಪನೆ, ಅದರ ಪ್ರೇರಣಾ ಕರ್ತೃ, ಸಂಗಮ ವಂಶ, ಸಾಳುವ ವಂಶ, ತುಳುವವಂಶದ ಅರಸರ ಆಳ್ವಿಕೆಯನ್ನು ಶಾಸನಗಳ ಹಿನ್ನಲೆಯಲ್ಲಿ ವಿಶ್ಲೇಷಿಸಲಾಗಿದೆ. ಆ ಮೂಲಕ ಹಂಪಿ ಚರಿತ್ರೆಯನ್ನು ಕಟ್ಟಲು ಪ್ರಯತ್ನಿಸಲಾಗಿದೆ. ಈ ಅಧ್ಯಾಯದ ಆರಂಭದಲ್ಲಿಯೇ ಹಂಪಿಯ ಪದ ನಿಷ್ಪತ್ತಿ, ವಿವಿಧ ಹೆಸರುಗಳನ್ನು ಸಂಗ್ರಹಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಹಂಪಿ ಪರಿಸರದಲ್ಲಿ ಶೈವವು ವೀರಶೈವಕ್ಕೆ ತಿರುಗಿದ ಬಗೆ, ಅಂದರೆ ಶೈವದ ಮೂಲ ಹಂಪಿ ಪರಿಸರದಲ್ಲಿ ಕಂಡುಬರುವ ಶೈವ ಶಾಖೆಗಳಾದ ಕಾಳಾಮುಖ, ಕಾಪಾಲಿಕ, ಶುದ್ಧಶೈವ ಮುಂತಾದವುಗಳ ನೆಲೆ-ಹಿನ್ನೆಲೆ, ಅವುಗಳ ಸ್ವರೂಪ ಕುರಿತು ಚರ್ಚಿಸಲಾಗಿದೆ. ಕಾಪಾಲಿಕರು ಹಂಪಿಯಲ್ಲಿದ್ದ ಬಗ್ಗೆ ಅನೇಕ ಭೈರವನ ಶಿಲ್ಪವನ್ನು ಪತ್ತೆ ಹಚ್ಚಲಾಗಿದೆ. ಬಸವಣ್ಣನೇ ಲಿಂಗಾಯತ ಧರ್ಮದ ಸ್ಥಾಪಕನೆಂದು ಇಲ್ಲಿನ ಕಾವ್ಯಗಳ ಹಿನ್ನೆಲೆಯಲ್ಲಿ ನಿರೂಪಿಸಲಾಗಿದೆ. ಅಲ್ಲದೆ ವಿರೂಪಾಕ್ಷ ರೂಪುಗೊಂಡ ಬಗೆ, ಅವನನ್ನು ಹರಿಹರ ಕವಿ ಪಂಪಾಪುರದರಸನನ್ನಾಗಿ ಮಾಡಿದ ರೀತಿ, ವಿರೂಪಾಕ್ಷನ ಹುಟ್ಟು ಬೆಳವಣಿಗೆ, ಈತನನ್ನೇ ವಿಜಯನಗರದ ಅರಸರು ವಿಜಯನಗರದ ಅಧಿದೈವ ಹಾಗೂ ವಿರೂಪಾಕ್ಷ ಮತ್ತು ವೀರಶೈವ ಧರ್ಮಕ್ಕಿರುವ ಸಂಬಂಧ ಕುರಿತು ವಿಶ್ಲೇಷಿಸಲಾಗಿದೆ. ಇದರ ಜೊತೆಗೆ ವಿರೂಪಾಕ್ಷನ ಮತ್ತೊಂದು ರೂಪವಾದ ವೀರಭದ್ರನ ಹುಟ್ಟು-ಬೆಳವಣಿಗೆ, ಸ್ವರೂಪ ಕುರಿತು ಚರ್ಚಿಸಲಾಗಿದ್ದು, ವೀರಭದ್ರ ವೀರಶೈವ ಮತ್ತು ಶೌರ್ಯದ ಕುಲದೈವವೆಂದು ಅನೇಕ ಆಧಾರಗಳಿಂದ ಚರ್ಚಿಸಿ ನಿರೂಪಿಸಲಾಗಿದೆ. ಅಲ್ಲದೆ ವೀರಭದ್ರನಿಂದಲೇ ವೀರಶೈವ ಪದ ಬಂದಿದೆ ಎಂದು ವಿಶ್ಲೇಷಿಸಲಾಗಿದೆ. ವೀರಶೈವ- ಲಿಂಗಾಯತ ಪದಗಳ 'ಪದನಿಷ್ಪತ್ತಿ' ಅವುಗಳಿಗಿರುವ ಭಿನ್ನತೆಗಳನ್ನು ಗುರುತಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ವೀರಶೈವವು ಧರ್ಮವಾಗಲು ಪ್ರೇರಣೆ ಮತ್ತು ಕಾರಣಗಳನ್ನು ಗುರುತಿಸಿದೆ. ವೀರಶೈವ-ಲಿಂಗಾಯತ ಪದಗಳ (ಕಾವ್ಯಗಳಲ್ಲಿ) ಬಳಕೆ, ವೀರಶೈವಕ್ಕೆ ಮೂಲನೆಲೆ ಹುಟ್ಟು, ಬೆಳವಣಿಗೆ

ಹಾಗೂ ತತ್ತ್ವ-ಸಿದ್ಧಾಂತಗಳನ್ನು ಕುರಿತು ಚರ್ಚಿಸಲಾಗಿದೆ. ಅಂದರೆ ಅಷ್ಟಾವರಣ, ಪಂಚಾಚಾರ, ಷಟ್ ಸ್ಥಲಗಳ ಪರಿಕಲ್ಪನೆ, ಸ್ವರೂಪ ಮತ್ತು ಮಹತ್ವ ಕುರಿತು ವಿಶ್ಲೇಷಿಸಲಾಗಿದೆ. ಅಲ್ಲದೆ ಷಟ್ ಸ್ಥಲವು ಷೋಡಶ, ಏಕೋತ್ತರ ಶತಸ್ಥಲಗಳಾಗಿ ವಿಭಜನೆ ಹೊಂದಿದ ಬಗೆ, ಅದರ ಸ್ವರೂಪ ಮಹತ್ವ, ಕುರಿತು ಚರ್ಚಿಸುತ್ತಾ, ಏಕೋತ್ತರ ಶತಸ್ಥಲದ ಕಲ್ಪನೆ ೧೨ನೇ ಶತಮಾನದ ಶರಣರ ಪರಿಕಲ್ಪನೆಯಾದರೂ ಅದಕ್ಕೆ ಸ್ವರೂಪ ಸಿದ್ಧಾಂತ ರೂಪಿಸಿದ್ದು ಮತ್ತು ಕಾವ್ಯಾತ್ಮಕ ವ್ಯಾಖ್ಯಾನ ನೀಡಿದ್ದು ಮಾತ್ರ ಹಂಪಿ ಪರಿಸರದ ದಾರ್ಶನಿಕರು, ಕವಿಗಳೆಂದು ನಿರೂಪಿಸಲಾಗಿದೆ. ಈ ಎಲ್ಲಾ ಧಾರ್ಮಿಕ ತತ್ತ್ವ-ಸಿದ್ಧಾಂತಗಳನ್ನು ಹಂಪಿ ಪರಿಸರದ ಕಾವ್ಯ, ಸಂಕಲನ ಕೃತಿಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದೆ. ಅಲ್ಲದೆ ವೀರಶೈವ ಲಿಂಗಾಯತ ಧರ್ಮ ಬೆಳವಣಿಗೆ ಹೊಂದಲು ರಾಜಕೀಯ ಬೆಂಬಲ ಅವಶ್ಯಕ. ಹಾಗಾಗಿ ಇದನ್ನು ಪ್ರೋತ್ಸಾಹಿಸಿದ ಪ್ರೌಢದೇವರಾಯ, ಲಕ್ಕಣದಂಡೇಶ, ಜಕ್ಕಣಾರ್ಯ ಮೊದಲಾದವರ ಪಾತ್ರವನ್ನು ಸಹ ವಿಶ್ಲೇಷಿಸಿದೆ.

ಅಧ್ಯಾಯ ಐದರಲ್ಲಿ ವೀರಶೈವವು ಸಾಂಸ್ಥೀಕರಣಗೊಂಡ ಬಗೆಯನ್ನು ವಿವರಿಸಲಾಗಿದೆ. ಒಂದು ಧರ್ಮ ಸಾಂಸ್ಥಿಕ ರೂಪ ಪಡೆದು ಪ್ರಚಾರವಾಗಲು, ಆ ಧರ್ಮದ ತತ್ತ್ವ-ಸಿದ್ಧಾಂತಗಳನ್ನು ಪ್ರತಿನಿಧಿಸಬಲ್ಲ ದೇವಾಲಯ, ಮಠ ಅತ್ಯವಶ್ಯಕ. ಹಾಗೆಯೇ ವೀರಶೈವ ಧರ್ಮವನ್ನು ಪ್ರತಿನಿಧಿಸಲು ಹಂಪಿಯಲ್ಲಿ ಸ್ಥಾಪನೆಯಾದ ಮಠಗಳು, ಆಶ್ರಮ, ಗುಹೆ ಮುಂತಾದವುಗಳ ಸ್ವರೂಪ ಮತ್ತು ಮಹತ್ವವನ್ನು ಶೋಧಿಸಿ ಚರ್ಚಿಸಲಾಗಿದೆ. ಕೇವಲ ಮಠಗಳು ನಿರ್ಮಾಣವಾದರೆ ಸಾಲದು ಅವುಗಳಲ್ಲಿ ವಾಸವಿದ್ದು ಮಠಗಳಿಗೆ ಬರುವ ಜನರಿಗೆ ಧರ್ಮ ಸಿದ್ಧಾಂತಗಳನ್ನು ಅದರ ಮಹತ್ವ ತಿಳಿಸುವುದರ ಮೂಲಕ ಧರ್ಮ ಪ್ರಚಾರ ಮಾಡುವ ಮಠಾಧಿಪತಿಗಳ ಬಗ್ಗೆ ಅವರ ಮೂಲ ನೆಲೆಗಳ ಬಗ್ಗೆ ಅವರು ರಚಿಸಿದ ಧಾರ್ಮಿಕ ಕೃತಿಗಳ ಬಗ್ಗೆ ವಿಶ್ಲೇಷಿಸಲಾಗಿದೆ. ಅಲ್ಲದೆ ವಿಜಯನಗರ ಸಂಗಮವಂಶದ ಸಾಮ್ರಾಟರ ರಾಜಗುರುಗಳಾದ ಕ್ರಿಯಾಶಕ್ತಿ ಗುರು ಪರಂಪರೆಯವರು ಬಹುತೇಕ ವೀರಶೈವ ಧರ್ಮಿಯರು, ಅವರು ಮೂಲತಃ ಶ್ರೀಶೈಲ ಪರಿಸರದ ವೀರಭಿಕ್ಷಾವೃತ್ತಿ ಮಠದ ಪರಂಪರೆಗೆ ಸೇರಿದವರೆಂದು ಕೆಲವು ಆಧಾರಗಳಿಂದ ನಿರೂಪಿಸಲಾಗಿದೆ.

ಒಂದು ಧಾರ್ಮಿಕ ಪಂಥ ಧರ್ಮವಾಗಿ ರೂಪುಗೊಳ್ಳಲು ರಾಜಕೀಯ ಪ್ರೇರಣೆ ಮತ್ತು ಪ್ರೋತ್ಸಾಹ ಅತ್ಯವಶ್ಯವಾಗಿದೆ. ಕಲ್ಯಾಣದಿಂದ ಹಂಪಿಗೆ ಸ್ಥಳಾಂತರಗೊಂಡ ವೀರಶೈವ(ಲಿಂಗಾಯತ) ಧಾರ್ಮಿಕ ಚಟುವಟಿಕೆಗೆ ಸಂಗಮವಂಶದ ಅರಸರು ಪ್ರೋತ್ಸಾಹಿಸಿದ್ದು, ಅದರಲ್ಲೂ ಚಕ್ರವರ್ತಿ ಪ್ರೌಢದೇವರಾಯ ವೀರಶೈವ ಧರ್ಮಸ್ವೀಕರಿಸಿ ಅದನ್ನು ರಾಜಧರ್ಮವಾಗಿ ಮಾಡಿದ್ದನ್ನು ಸಾಹಿತ್ಯ ಕೃತಿಗಳಿಂದ ಕಂಡುಕೊಳ್ಳ ಲಾಗಿದೆ. ಪ್ರೌಢದೇವರಾಯನ ಕಾಲದಲ್ಲಿ ನಿರ್ಮಾಣವಾದ ಮಠಗಳು, ಗುಹೆ ಆಶ್ರಮಗಳನ್ನು ಶಾಸನಗಳ ಆಧಾರದಿಂದ ವಿಶ್ಲೇಷಿಸಲಾಗಿದೆ. ಕೆಲವು ಮಠಾಧಿಪತಿಗಳಿಗೆ ಅರಸರು ದಾನ ದತ್ತಿ ನೀಡಿದ್ದನ್ನು ಹಂಪಿಯಲ್ಲಿ ದೊರೆತ ಶಾಸನಗಳಿಂದ ಚರ್ಚಿಸಲಾಗಿದೆ. ವೀರಶೈವ (ಲಿಂಗಾಯತ) ಧರ್ಮವನ್ನು ಕಟ್ಟುವಲ್ಲಿ ಪ್ರಮುಖ ಪಾತ್ರವಹಿಸಿದ ನೂರೊಂದು ವಿರಕ್ತರ ವಾಸಸ್ಥಾನಗಳನ್ನು ಹಂಪಿಯಲ್ಲಿ ಪತ್ತೆ ಹಚ್ಚಲು

ಪ್ರಯತ್ನಿಸಲಾಗಿದೆ. ಚಕ್ರವರ್ತಿಯಲ್ಲದೆ ಪ್ರಧಾನಿ, ದಂಡನಾಯಕರು, ಸಾಮಂತರು, ದಳವಾಯಿಗಳು ವೀರಶೈವ ಧರ್ಮವನ್ನು ಪ್ರೋತ್ಸಾಹಿಸಿದನ್ನು ಕೆಲವು ಅಧಿಕಾರಿಗಳ (ಆಡಳಿತಗಾರರ) ಕಾವ್ಯಗಳಿಂದ ವಿಶ್ಲೇಷಿಸಿದೆ. ಬದಲಾದ ಪರಿಸ್ಥಿತಿಯಲ್ಲಿ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಎಂದ ವೀರಶೈವ (ಲಿಂಗಾಯತ) ಧರ್ಮವು ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಸ್ಥಾವರಲಿಂಗ ಪೂಜೆಯ ಕಡೆ ವಾಲಿದ್ದನ್ನು ಪತ್ತೆ ಹಚ್ಚಿ ಗುರುತಿಸಲಾಗಿದೆ. ಅಂದರೆ ಇಷ್ಟಲಿಂಗ ಮತ್ತು ಸ್ಥಾವರಲಿಂಗ ಪೂಜೆಯನ್ನು ಮಾಡುವ ಪ್ರಕ್ರಿಯೆ ಹಂಪಿಯಿಂದ ಆರಂಭವಾಯಿತೆಂಬುದನ್ನು ನಿರೂಪಿಸಲು ಪ್ರಯತ್ನಿಸಲಾಗಿದೆ.

ಅಧ್ಯಾಯ ಆರು ಸಮಾರೋಪವಾಗಿದೆ. ಈ ಅಧ್ಯಯನದ ಒಟ್ಟು ಫಲಿತಗಳನ್ನು ಕುರಿತು ವಿಶ್ಲೇಷಿಸುವ ಅಧ್ಯಾಯ ಇದಾಗಿರುತ್ತದೆ. ಇದರಲ್ಲಿ ಅಧ್ಯಯನ ಉದ್ದೇಶ ಈಡೇರಿಕೆ, ಮಹತ್ವ, ಕಂಡುಕೊಂಡ ಸತ್ಯಗಳು, ಹೊಸ ಶೋಧನೆ ಮುಂತಾದ ಅಂಶಗಳನ್ನು ಕುರಿತು ಚರ್ಚಿಸಿ ವಿಶ್ಲೇಷಿಸಲಾಗಿದೆ. ಅಲ್ಲದೆ ಅಧ್ಯಯನಕ್ಕೆ ಪೂರಕವಾದ ಛಾಯಾಚಿತ್ರಗಳು, ಆಕರ ಗ್ರಂಥಗಳ ಪಟ್ಟಿ ನೀಡಲಾಗಿದೆ.

ಹಂಪಿಯ ಶೈವಧರ್ಮದ ಪ್ರಕಾರಗಳು ಮತ್ತು ಅವುಗಳ ಬೆಳವಣಿಗೆ, ವಿರೂಪಾಕ್ಷನ ಹುಟ್ಟು ಮತ್ತು ಬೆಳವಣಿಗೆ, ವೀರಭದ್ರನ ಆರಾಧನೆ ಮತ್ತು ಹಂಪಿ, ವೀರಶೈವ ದಾರ್ಶನಿಕರು ಮತ್ತು ಹಂಪಿ, ವೀರಶೈವ ಧಾರ್ಮಿಕ ಕೃತಿಗಳು ಮತ್ತು ಹಂಪಿ, ಹಂಪಿಯ ವೀರಶೈವ ಮಠಗಳ ಹುಟ್ಟು ಮತ್ತು ಬೆಳವಣಿಗೆ, ವೀರಶೈವ ಶಿವಶರಣರು ಮತ್ತು ಹಂಪಿ, ಹಂಪಿಯ ವೀರಶೈವ ಧರ್ಮ ಮತ್ತು ಆಡಳಿತ ವರ್ಗ ಇನ್ನು ಮುಂತಾದ ಅಂಶಗಳನ್ನು ಆಧರಿಸಿ ಮುಂದಿನ ಅಧ್ಯಯನಕಾರರು ಅಧ್ಯಯನ ಕೈಗೊಳ್ಳಬಹುದಾಗಿದೆ.

ಆದಿ ಮಾನವನ ಕಾಲದಿಂದಲೂ ಹಂಪಿ ಮನುಷ್ಯನ ಬದುಕನ್ನು ನಾನಾ ಆಯಾಮಗಳಲ್ಲಿ ರೂಪಿಸುತ್ತಾ ಅವನನ್ನು ನಾಗರೀಕನನ್ನಾಗಿ ಬಾಳಲು ಸಂಸ್ಕಾರ ನೀಡಿ ಧರ್ಮವಂತನಾಗಿ ಬೆಳೆಯಲು ಪ್ರೋತ್ಸಾಹಿಸಿದ ರೀತಿ ಅನನ್ಯವಾದದ್ದು. ಹಾಗೆಯೇ ಕಲ್ಯಾಣದಲ್ಲಿ ಮೊಳಕೆಯೊಡೆದ ವೀರಶೈವ ಸಿದ್ಧಾಂತ ಪಕ್ವಗೊಂಡು ಧರ್ಮವಾಗಿ ರೂಪಗೊಂಡು ಅರಳಿದ್ದು ಹಂಪಿಯಲ್ಲಿ. ಹಂಪಿಯ ರಾಜಕೀಯ, ಸಾಮಾಜಿಕ, ಧಾರ್ಮಿಕ ಪ್ರೇರಣೆ ಪ್ರೋತ್ಸಾಹದಿಂದ ಪ್ರೌಢದೇವರಾಯ ಮೊದಲಾದ ಆಡಳಿತಗಾರರು, ಚಾಮರಸಾದಿ ಕವಿಗಳೂ, ಮಹಾಲಿಂಗದೇವ, ಕಲ್ಮಠದ ಪ್ರಭುದೇವ, ಜಕ್ಕಣಾರ್ಯ ಮೊದಲಾದ ದಾರ್ಶನಿಕರ ಸತತ ಪರಿಶ್ರಮ ಪ್ರೋತ್ಸಾಹದಿಂದ ವೀರಶೈವ (ಲಿಂಗಾಯತ)ವು ಧರ್ಮವಾಗಿ ರೂಪಗೊಂಡು ಪ್ರಚಾರವಾದದ್ದನ್ನು ಕಾಣಬಹುದಾಗಿದೆ. ಆದರೆ ಅಷ್ಟೇ ಶರವೇಗದಲ್ಲಿ ಅದು ಸ್ಥಾವರಲಿಂಗ ಪೂಜೆಯ ಕಡೆ ವಾಲಿದ್ದನ್ನು ನೋಡಿದರೆ ಅದು ವೀರಶೈವ ಧರ್ಮದ ವಿಪರ್ಯಾಸ ಅಥವಾ ದುರಂತವೆಂದು ಭಾವಿಸಬೇಕಾಗುತ್ತದೆ. ಹಂಪಿಯ ನೆಲೆ ವೀರಶೈವ(ಲಿಂಗಾಯತ)ವು ಧರ್ಮವಾಗಿ ರೂಪುಗೊಳ್ಳಲು ಹಂಪಿ ವಹಿಸಿದ ಪಾತ್ರ ಮಹತ್ತರವಾದದ್ದು ಎಂಬುದರಲ್ಲಿ ಸತ್ಯಾಂಶವಿದೆ.

# ಪರಾಮರ್ಶನ ಗ್ರಂಥಗಳು

೧. ಅಮರೇಶ ನುಗಡೋಣಿ(ಸಂ), ಬಸವಣ್ಣ ವಚನಗಳು ಸಾಂಸ್ಕೃತಿಕ ಮುಖಾ ಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೫

೨. ಅಂಜನಪ್ಪ ಯಳನಾಡು(ಸಂ), ಧರ್ಮ ಮತ್ತು ಮುಕ್ತ ವಿಚಾರ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ

೩. ಉಮಾಪತಿ ಶಾಸ್ತ್ರಿ ಗೌ.ಮ., ಶ್ರೀ ಕೊಟ್ಟೂರು ಸ್ವಾಮಿಗಳ ಗುರುಪರಂಪರೆ, ಶ್ರೀಜಗದ್ಗುರು ಕೊಟ್ಟೂರುಸ್ವಾಮಿ ಮಠ, ಹೊಸಪೇಟೆ-೧೯೮೩

೪. ಕಲಬುರ್ಗಿ ಎಂ.ಎಂ., ಮಾರ್ಗ-೨, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೫

೫. ಕಲಬುರ್ಗಿ ಎಂ.ಎಂ., ಮಾರ್ಗ-೩, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೫

೬. ಕಲಬುರ್ಗಿ ಎಂ.ಎಂ., ಮಾರ್ಗ-೪, ಸಪ್ನಬುಕ್ ಹೌಸ್ ಬೆಂಗಳೂರು, ೨೦೦೪

೭. ಕಲಬುರ್ಗಿ ಎಂ.ಎಂ., ಶಾಸನಗಳ ಶಿವಶರಣರು, ಸಿರಿಗನ್ನಡ ಪ್ರಕಾಶನ, ಕನ್ನಡ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೦

೮. ಕಲಬುರ್ಗಿ ಎಂ.ಎಂ.(ಸಂ), ಹರಿಹರನ ರಗಳೆಗಳು, ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೧೯೯೮

೯. ಕಲಬುರ್ಗಿ ಎಂ.ಎಂ.(ಸಂ), ಶುದ್ಧ ಶೈವ ಮತ್ತು ಗೋಳಕಿಮಠ ಸಂಪ್ರದಾಯ, ಲಿಂಗಾಯತ ಅಧ್ಯಯನ ಸಂಸ್ಥೆ ಶ್ರೀಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ, ೨೦೦೪

೧೦. ಕಲಬುರ್ಗಿ ಎಂ.ಎಂ.(ಸಂ), ಬಸವಣ್ಣನವರ ವಚನ ಸಂಪುಟ-೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೩

೧೧. ಕಲಬುರ್ಗಿ ಎಂ.ಎಂ., ಸಂಸ್ಕೃತಿ-ವಿಕೃತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು, ೨೦೦೬

೧೨. ಕೊಟ್ರಯ್ಯ ಸಿ.ಟಿ.ಎಂ., ಹಂಪೆ, ಶ್ರೀಶರಣರ ಸುವಾಸಿನಿ ಬಳಗ, ಹೊಸಪೇಟೆ, ೧೯೯೭

೧೩. ಕೊಪ್ಪಳ ವಿ.ಆರ್.(ಪ್ರ), ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆ, ಧಾರವಾಡ, ೧೯೩೪

೧೪. ಚಂದ್ರಶೇಖರ ಶಿವಾಚಾರ್ಯಸ್ವಾಮಿಗಳು, ವೀರಶೈವ ಪಂಚಪೀಠ ಪರಂಪರೆ, ಶ್ರೀಸಧರ್ಮ ಸಿಂಹಾಸನ, ಜ್ಞಾನಗುರು ವಿದ್ಯಾಪೀಠ ಉಜ್ಜಯನಿ, ೨೦೦೧

೧೫. ಚಂದ್ರಶೇಖರ ಟಿ.ಆರ್.(ಸಂ), ವಚನವಾಹಿನಿ-೩, ಚನ್ನಬಸವರಾಜದೇವರ ವಚನಗಳು, ವೀರಶೈವ ಅಧ್ಯಯನ ಸಂಸ್ಥೆ, ಶ್ರೀಜ.ತೋ.ಸಂಸ್ಥಾನ ಮಠ, ಗದಗ, ೧೯೯೯

೧೬. ಚಿದಾನಂದಮೂರ್ತಿ ಎಂ., ವೀರಶೈವ ಧರ್ಮ, ಭಾರತೀಯ ಸಂಸ್ಕೃತಿ, ಮಿಂಚು ಪ್ರಕಾಶನ ಬೆಂಗಳೂರು, ೨೦೦೦

೧೭. ಚಿದಾನಂದಮೂರ್ತಿ ಎಂ., ಪಾಂಡಿತ್ಯರಸ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦

೧೮. ಚಿದಾನಂದಮೂರ್ತಿ ಎಂ., ವಚನ ಶೋಧ II, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೮

೧೯. ಚಿದಾನಂದಮೂರ್ತಿ ಎಂ., ಬಸವಣ್ಣ : ಕರ್ನಾಟಕ : ಭಾರತ, ಸಪ್ನಬುಕ್ ಹೌಸ್ ಬೆಂಗಳೂರು, ೨೦೦೫

೨೦. ಚಿದಾನಂದಮೂರ್ತಿ ಎಂ., ಸ್ಥಾವರ-ಜಂಗಮ, ಸಪ್ನಬುಕ್ ಹೌಸ್ ಬೆಂಗಳೂರು, ೨೦೦೫

೨೧. ಚಿದಾನಂದಮೂರ್ತಿ ಎಂ., ಹೊಸತು-ಹೊಸತು, ಹೇಮಂತ ಸಾಹಿತ್ಯ, ಬೆಂಗಳೂರು, ೨೦೦೭

೨೨. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನಬುಕ್ ಹೌಸ್ ಬೆಂಗಳೂರು, ೨೦೦೮

೨೩. ಜವಳಿ ಬಿ.ಸಿ ಮತ್ತು ದೇವೇಂದ್ರ ಕುಮಾರ ಹಕಾರಿ(ಸಂ), ಹರಿಹರದೇವನ ಬಸವರಾಜ ದೇವರ ರಗಳೆ, ಶ್ರೀಜಗದ್ಗುರು ಕೊಟ್ಟೂರು ಸ್ವಾಮಿಮಠ, ಹೊಸಪೇಟೆ, ೧೯೮೦

೨೪. ಜವಳಿ ಬಿ.ಸಿ.(ಸಂ), ಹರಿಹರದೇವ ರಕ್ಷಾಶತಕ ಮತ್ತು ಪಂಪಾಶತಕ, ಶ್ರೀಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಹೊಸಪೇಟೆ, ೧೯೮೨

೨೫. ಜಯಾರಾಜಶೇಖರ(ಸಂ), ಲಿಂಗಲೀಲಾ ವಿಲಾಸ ಚಾರಿತ್ರ ಸಂಗ್ರಹ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀಜ.ತೋಂಟದಾರ್ಯ ಸಂಸ್ಥಾನ ಮಠ, ೧೯೯೯

೨೬. ಜಾಡಗೌಡರ ಎನ್.ಜಿ., ಶ್ರೀನೀಲಕಂಠೇಶ್ವರ ಪುರಾಣ, ಪಟ್ಟಾಭಿಷೇಕ ಮಹೋತ್ಸವ ಸಮಿತಿ ಜಗದ್ಗುರು ವೀರಭಿಕ್ಷಾವೃತ್ತಿ (ನೀಲಕಂಠ) ಮಠ, ಬೆಟಗೇರಿ, ಗದಗ-೧೯೯೮

೨೭. ದೀಕ್ಷಿತ್ ಜಿ.ಎಸ್.(ಸಂ), ಸಂಗಮರ ಕಾಲದ ವಿಜಯನಗರ, ಬಿ.ಎಂ.ಶ್ರೀಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೧

೨೮. ದೇಜಗೌ, ಶ್ರೀ ಬಸವೇಶ್ವರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೫

೨೯. ದೇವೀರಪ್ಪ ಎಚ್.(ಪ್ರ.ಸಂ)., ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾಲಯ ಮೈಸೂರು, ೧೯೬೦

೩೦. ದೇವೀರಪ್ಪ ಎಚ್., ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ(ವಿಮರ್ಶೆ), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೪

೩೧. ದೇವೀರಪ್ಪ ಎಚ್.(ಸಂ), ಹರಿಹರ ವಿರಚಿತ ಬಸವರಾಜದೇವರ ರಗಳೆ, ಬಸವ ಸಮಿತಿ, ಬೆಂಗಳೂರು, ೧೯೯೫

೩೨. ನರಸಿಂಹಾಚಾರ್ ಆರ್., ಕರ್ನಾಟಕ ಕವಿ ಚರಿತೆ, ಕನ್ನಡ ಸಾಹಿತ್ಯ ಪರಿಷತ್ , ಬೆಂಗಳೂರು, ೧೯೭೨

೩೩. ನಾಗರಾಜ್ ಎಂ.ಜಿ., ಸಾಂಸ್ಕೃತಿಕ ವೀರಭದ್ರಸ್ವಾಮಿ, ಶ್ರೀಮದ್ವೀರಶೈವ ಸದ್ಬೋಧನಾ ಸಂಸ್ಥೆ ಶ್ರೀಮದ್ರಂಭಾಪುರಿ ವೀರಸಿಂಹಾಸನ ಮಹಾಪೀಠ, ಬಾಳೆಹೊನ್ನೂರು

೩೪. ನಂಜುಂಡಾರಾಧ್ಯ ಎಂ.ಜಿ.(ಗದ್ಯಾನುವಾದ), ಹರಿಹರ ಕವಿಯ ಗಿರಿಜಾ ಕಲ್ಯಾಣ ಮಹಾಪ್ರಬಂಧಂ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೩೫. ಪಾಟೀಲ ಬಿ.ಎಸ್., ವೀರಶೈವ ದರ್ಶನಸಾರ, ಶ್ರೀಜ.ಗಂಗಾಧರ ಧರ್ಮಪ್ರಚಾರಕ ಮಂಡಳ ಮೂರು ಸಾವಿರಮಠ ಹುಬ್ಬಳ್ಳಿ, ೧೯೮೭

೩೬. ಪ್ರೇಮಾದೇವಿ ಮಳಿಮಠ(ಅನುವಾದ), ವೀರಶೈವ ಧರ್ಮದ ಕೈಪಿಡಿ, ಶ್ರೀಬಸವೇಶ್ವರ ಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೯೦

೩೭. ಬಸವನಾಳ ಶಿ.ಶಿ., ವೀರಶೈವದ ಹುಟ್ಟು, ಬೆಳವಣಿಗೆ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೯೦

೩೮. ಬಸವರಾಜ ಮಲಶೆಟ್ಟಿ, ಹಂಪೆ ಒಂದು ಪರಿಚಯ, ಮಹಾಕವಿ ಹರಿಹರ ಸ್ಮಾರಕ ಸಂಶೋಧನಾ ಕೇಂದ್ರ, ಕೊಟ್ಟೂರು ಸ್ವಾಮಿಮಠ ಹಂಪಿ, ೧೯೮೧

೩೯. ಬಸವರಾಜು ಎಲ್., ರಾಘವಾಂಕನ ಸರಳ ಹರಿಶ್ಚಂದ್ರ ಚಾರಿತ್ರ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೧

೪೦. ಭೂಸನೂರಮಠ ಸಂ.ಶಿ.(ಸಂ), ಮಹಾಲಿಂಗ ದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಶ್ರೀಮ.ನಿ.ಪ್ರ.ಶಿವಬಸವ ಸ್ವಾಮಿಗಳು, ನಾಗನೂರು ರುದ್ರಾಕ್ಷಿ ಮಠ ಬೆಳಗಾವಿ, ೧೯೩೪

೪೧. ಭೂಸನೂರಮಠ ಸಂ.ಶಿ.(ಸಂ), ಕಲ್ಮಠದ ಪ್ರಭುದೇವರು ವಿರಚಿಸಿದ ಲಿಂಗಲೀಲಾ ವಿಲಾಸ ಚಾರಿತ್ರ, ಮುರುಘಾಮಠ, ಧಾರವಾಡ, ೧೯೭೬

೪೨. ಭೂಸನೂರಮಠ ಸಂ.ಶಿ.(ಸಂ), ಅದೃಶ್ಯ ಕವಿ ವಿರಚಿಸಿದ ಪ್ರೌಢರಾಯನ ಕಾವ್ಯ, ಮುರುಘಾಮಠ, ಧಾರವಾಡ, ೧೯೫೭

೪೩. ಭೂಸನೂರಮಠ ಸಂ.ಶಿ.(ಸಂ), ವಿಜಯಕಲ್ಯಾಣ, ಮಹಾಕವಿ ಹರಿಹರ ಸ್ಮಾರಕ ಸಂಶೋಧನಾ ಕೇಂದ್ರ, ಶ್ರೀ.ಜ.ಕೊಟ್ಟೂರುಸ್ವಾಮಿ ಮಠ, ಹಂಪೆ, ೧೯೮೮

೪೪. ಭೂಸನೂರಮಠ ಸಂ.ಶಿ.(ಸಂ), ವಚನ ಸಾಹಿತ್ಯ ಸಂಗ್ರಹ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೪೫. ಮಲ್ಲಪ್ಪ ಟಿ.ಎನ್., ವೀರಶೈವದ ಪ್ರಾಚೀನತೆ, ಪಿ.ಮಹಾದೇವಯ್ಯ ಪ್ರಕಾಶನ, ಬೆಂಗಳೂರು, ೧೯೬೮

೪೬. ಮಲ್ಲಾಪುರ ಬಿ.ವಿ., ಚೆನ್ನಬಸವಣ್ಣನವರ ವಚನಗಳು, ಸಂಪುಟ.೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೩

೪೭. ಮಲ್ಲೇಪುರಂ ಜಿ. ವೆಂಕಟೇಶ(ಸಂ), ಶಂಬಾ ಕೃತಿ ಸಂಪುಟ-೧, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೪೮. ಮಹಾದೇವ ಬಣಕಾರ, ವಿಶ್ವಬಂಧು ಮರುಳಸಿದ್ಧ ಕಾವ್ಯ, ಶ್ರೀತರಳ ಬಾಳು ಪ್ರಕಾಶನ, ಸಿರಿಗೆರೆ, ೧೯೮೯

೪೯. ರವೀಂದ್ರನಾಥ ಕೆ., ಅಗ್ನಿದಿನ, ಸುರಚಿರ ಪ್ರಕಾಶನ, ಗುಲಬರ್ಗಾ, ೨೦೦೬

೫೦. ರವೀಂದ್ರನಾಥ ಕೆ., ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ ವಿವೇಚನೆ, ಪ್ರ.ದೇ.ಸಂ.ಮಠ, ಸೊಂಡೂರು, ೨೦೦೫

೫೧. ರಹಮತ್ ತರಿಕೆರೆ, ಕರ್ನಾಟಕದ ನಾಥಪಂಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫

೫೨. ರಾಮಯ್ಯಂಗಾರ್ ಎಚ್.ಜೆ., ಶೈವಧರ್ಮ ದರ್ಶನ, ಟಿ.ಎನ್.ಕೃಷ್ಣಯ್ಯ ಶೆಟ್ಟಿ ಅಂಡ್ ಸನ್, ಬೆಂಗಳೂರು, ೧೯೮೧

೫೩. ಲೂಯಿರೈಸ್ (ಸಂ), ಬಾಲಸುಬ್ರಹ್ಮಣ್ಯ(ಪರಿಸ್ಕೃತ), ಅಮರಸಿಂಹನ ಅಮರಕೋಶ ಎಂಬ ನಾಮ ಲಿಂಗಾನುಶಾಸನ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೯

೫೪. ವಿರೂಪಾಕ್ಷ ಕುಲಕರ್ಣಿ(ಅನುವಾದ), ಕಾಪಾಲಿಕರು ಮತ್ತು ಕಾಳಾಮುಖರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೫

೫೫. ವಿದ್ಯಾಶಂಕರ ಎಸ್.(ಗದ್ಯಾನುವಾದ), ಚಾಮರಸನ ಪ್ರಭುಲಿಂಗಲೀಲೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೨

೫೭. ವಿವೇಕ ರೈ(ಸಂ), ರಾಘವಾಂಕನ ಸಮಗ್ರ ಕಾವ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪

೫೭. ಶಿವಮೂರ್ತಿಶಾಸ್ತ್ರಿ ಬಿ.(ಸಂ), ಚಂದ್ರಕವಿಯ ಪಂಪಾಸ್ಥಾನ ವರ್ಣನಂ, ಶರಣಸಾಹಿತ್ಯ ಕಾರ್ಯಾಲಯ, ಬೆಂಗಳೂರು, ೧೯೫೫

೫೮. ಶಿವಮೂರ್ತಿ ಬಿ.(ಸಂ), ವೀರೇಶ ಚರಿತೆ, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, ೧೯೯೯

೫೯. ಶೇಷಶಾಸ್ತ್ರಿ ಆರ್., ಶಾಸನ ಪರಿಚಯ, ಪ್ರಸಾರಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೨

೬೦. ಶ್ರೀಗುರು ಓಂ ಸಿದ್ದಲಿಂಗೇಶ್ವರ ಸ್ವಾಮಿಗಳು, ಪಂಪಾಮಹಾತ್ಮೆ, ಶ್ರೀಗುರುವೃಷಭಾಶ್ರಮ ಹೊಳಗುಂದಿ, ೧೯೮೩

೬೧. ಶ್ರೀ ಚನ್ನಮಲ್ಲಿಕಾರ್ಜುನ, ಮಾಯಿದೇವ ಪ್ರಭುವಾಣಿ, ಮುರುಘಾಮಠ, ಧಾರವಾಡ, ೧೯೬೨

೬೨. ಶ್ರೀ ಚನ್ನಮಲ್ಲಿಕಾರ್ಜುನ, ಮಾಯಿದೇವ ಪ್ರಭುವಾಣಿ(ಮೊಗ್ಗೆಯ ಮಾಯಿದೇವಯ್ಯಗಳು ನಿರೂಪಿಸಿದ ಏಕೋತ್ತರ ಶತಸ್ಥಲ), ಮುರುಘಾಮಠ, ಧಾರವಾಡ, ೧೯೬೨

೬೩. ಷಣ್ಮುಖಯ್ಯ ಅಕ್ಕೂರಮಠ, ಶಿವಾಗಮಗಳಲ್ಲಿ ವೀರಶೈವ ಧರ್ಮ ಮತ್ತು ಸಂಸ್ಕೃತಿ, ಶ್ರೀಮದ್ವೀರ ಶೈವ ಸದ್ಬೋಧನಾ ಸಂಸ್ಥೆ, ಬಾಳೆ ಹೊನ್ನೂರು, ೨೦೦೨

೬೪. ಸುಂಕಾಪುರ ಎಂ.ಎಸ್.(ಸಂ), ನೂತನ ಪುರಾತನದ ರಗಳೆಗಳು, ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೬೫. ಸುಂಕಾಪುರ ಎಂ.ಎಸ್.(ಪ್ರ.ಸಂ), ವೀರಶೈವಧರ್ಮ, ತತ್ತ್ವ-ಸಿದ್ಧಾಂತ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೭

೬೬. ಹಳಕಟ್ಟಿ ಫ.ಗು.(ಸಂ), ವಚನ ಶಾಸ್ತ್ರಸಾರ ಭಾಗ-೨, ವೀರಶೈವ ಅಧ್ಯಯನ ಸಂಸ್ಥೆ, ಶ್ರೀಜ. ತೋಂಟದಾರ್ಯ ಸಂಸ್ಥಾನ ಮಠ, ಗದಗ, ೧೯೯೯

೬೭. ಹಳ್ಳಿಕೇರಿ ಎಫ್.ಟಿ.(ಸಂ), ಕರಸ್ಥಲ ಸಾಹಿತ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪

೬೮. ಹಿರೇಮಠ ಆರ್.ಸಿ.(ಸಂ), ವೀರಶೈವಾಮೃತ ಪುರಾಣ, ಭಾಗ-೨, ಎನ್.ಎಸ್.ಎಸ್.ಕಲ್ಯಾಣಕೇಂದ್ರ, ಬೆಂಗಳೂರು, ೧೯೭೦

೬೯. ಹಿರೇಮಠ ಆರ್.ಸಿ., ಮಹಾಯಾತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೭೦. ಹಿರೇಮಠ ಆರ್.ಸಿ.(ಸಂ), ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯ ಸಂಪಾದನೆ, ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೨

## ಪಿಎಚ್.ಡಿ. ಮಹಾಪ್ರಬಂಧಗಳು

೧. ಉಮಾದೇವಿ ಎಚ್.ಟಿ., ಶಿವತತ್ತ್ವ ಚಿಂತಾಮಣಿ : ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೦

೨. ಕಟಗಿಹಳ್ಳಿ ಮಠ ವಿ.ಎಸ್., ಬಸವೋತ್ತರ ಯುಗದ ವಚನ ಸಾಹಿತ್ಯ : ಒಂದು ಅಧ್ಯಯನ (ಪ್ರಕಟಿತ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೪

೩. ಕಲವೀರ ಮನ್ವಾಚಾರ, ಮಾತೃದೇವತಾ ಆರಾಧನೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೪. ಕುಮಾರ ಜೆ., ನೂರೊಂದು ವಿರಕ್ತರು : ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೯

೫. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ(ಪ್ರಕಟಿತ), ಸಪ್ನಬುಕ್ ಹೌಸ್, ಬೆಂಗಳೂರು, ೨೦೦೮

೬. ತಿಪ್ಪೇಸ್ವಾಮಿ ಡಿ.ಎನ್., ಹರಿಹರನ ರಗಳೆಗಳಲ್ಲಿ ಸಂಘರ್ಷದ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭

೭. ನೇತ್ರಾವತಿ ಮೆಳಗೇರಿ, ಹರಿಹರನ ರಗಳೆಗಳಲ್ಲಿ ಶಿವತತ್ತ್ವ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೪

೮. ನಂದಿಕೋಲಮಠ ಜಿ.ಐ., ಕರಸ್ಥಳ ಪರಂಪರೆ : ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೬

೯. ಪುರಾಣಿಕ ಡಿ.ವಿ., ಮೊಗ್ಗೆಯ ಮಾಯಿದೇವ : ಒಂದು ಅಧ್ಯಯನ(ಪ್ರಕಟ), ದುರದುಂಡೇಶ್ವರ, ಸಿದ್ಧಸಂಸ್ಥಾನಮಠ, ನಿಡಸೋಸಿ, ೧೯೯೫

೧೦. ಬಾಗಲಕೋಟ ಡಿ.ಎ., ಪ್ರಭುಲಿಂಗಲೀಲೆ : ಒಂದು ದಾರ್ಶನಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨

೧೧. ಭಗವತಿ ಎಸ್.ಎಸ್., ಹಂಪೆ ಶಾಸನಗಳು : ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೫

೧೨. ರವೀಂದ್ರನಾಥ ಕೆ., ಕರ್ನಾಟಕದ ಮಠಗಳು ಮತ್ತು ಕನ್ನಡ ಸಾಹಿತ್ಯ (ಪ್ರಕಟಿತ), ಶ್ರೀಪ್ರಭುದೇವರ ಜನಕಲ್ಯಾಣ ಸಂಸ್ಥೆ, ಶ್ರೀಪ್ರ.ದೇ.ಸಂಸ್ಥಾನಮಠ ಸೊಂಡೂರು, ೨೦೦೭

೧೩. ರಾಥೋಡ ಎಸ್.ಬಿ., ಚಾಮರಸನ ಪ್ರಭುಲಿಂಗಲೀಲೆ : ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೨೦೦೭

೧೪. ಶಂಕರ ಲಮಾಣಿ, ಸಪ್ತಕಾವ್ಯದ ಗುರುಬಸವ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೦

೧೫. ಶಕುಂತಲ ಗೋಪಶೆಟ್ಟಿ, ರೇವಣಸಿದ್ಧರು ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೪

೧೬. ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ(ಪ್ರಕಟಿತ), ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

೧೭. ಶ್ರೀಕಂಠಯ್ಯ ಕೆ., ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನ ಜೀವನ ಚಿತ್ರಣ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೪

೧೮. ಸತೀಶ ಕೆ., ವಿಜಯನಗರ ಕಾಲದ ಶೈವ ದೇವಾಲಯಗಳು (ಪ್ರಕಟಿತ), ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೬

೧೯. ಸದಾನಂದ ಪಾಟೀಲ, ಹರಿಹರನ ರಗಳೆಗಳು : ಒಂದು ಸಾಂಸ್ಕೃತಿಕ ಅಧ್ಯಯನ(ಪ್ರಕಟಿತ) ವೀರಶೈವ ಅಧ್ಯಯನ ಸಂಸ್ಥೆ, ಶ್ರೀಜ.ತೋಂಟದಾರ್ಯ ಸಂಸ್ಥಾನ ಮಠ, ಗದಗ-೧೯೯೯

೨೦. ಸೂರ್ಯನಾರಾಯಣ, ರಾಘವಾಂಕ : ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೮೫

೨೧. ಹದರಗಟ್ಟಿ ಎಸ್.ಎಂ., ಕವಿ ರಾಘವಾಂಕ ಹಾಗೂ ಅವನ ಕೃತಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೮೬

೨೨. ಹಿರೇಮಠ ವಿ.ಜಿ., ವೀರಭದ್ರದೇವರು : ಒಂದು ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪

**ಶಾಸನ ಸಂಪುಟಗಳು**

೧. ಗೋಪಾಲ ಬಾ.ರಾ. ಮತ್ತು ಇತರರು(ಸಂ), ಎಫಿಗ್ರಾಫಿಯಾ ಕರ್ನಾಟಿಕ (ಪರಿಷ್ಕೃತ), ಸಂಪುಟ-V, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ ಮೈಸೂರು, ೧೯೭೬

೨. ಗೋಪಾಲ ಬಾ.ರಾ. ಮತ್ತು ಇತರರು(ಸಂ), ಎಫಿಗ್ರಾಫಿಯಾ ಕರ್ನಾಟಿಕ (ಪರಿಷ್ಕೃತ), ಸಂಪುಟ-VIII, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೪

೩. ಗೋಪಾಲ ಬಾ.ರಾ ಮತ್ತು ಇತರರು(ಸಂ), ಎಫಿಗ್ರಾಫಿಯಾ ಕರ್ನಾಟಿಕ(ಪರಿಷ್ಕೃತ) ಸಂಪುಟ-IX, ಕನ್ನಡ ಅಧ್ಯಯನ ಸಂಸ್ಥೆ. ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೦

೪. ದೇವರಕೊಂಡಾರೆಡ್ಡಿ, ಕೆ.ಜಿ.ಭಟಸೂರಿ, ಕಲವೀರ ಮನ್ವಾಚಾರ, ಡಿ.ವಿ.ಪರಮ ಶಿವಮೂರ್ತಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಪ್ರಸಾರಾಂಗ ಕನ್ನಡ ವಿ.ವಿ.ಹಂಪಿ, ೨೦೦೦